ವೀರಶೈವ ಪುರಾತನ ಸಾಹಿತ್ಯರತ್ನಮಾಲೆ : ನಾಲ್ಕು

ಚೆನ್ನವೀರ ಜಂಗಮದೇವ ವಿರಚಿತ

# ಷಟ್ಸ್ಥಲ ವಲ್ಲಭ

ಸಂಪಾದಕರು :
ಎಚ್. ದೇವೀರಪ್ಪ
ಚೆನ್ನಪ್ಪ ಎರೇಸೀಮೆ

ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ–ಗದಗ

೧೯೮೦

ವೀರಶೈವ ಪುರಾತನ ಸಾಹಿತ್ಯರತ್ನಮಾಲೆ : ನಾಲ್ಕು

ಚೆನ್ನವೀರ ಜಂಗಮದೇವ ವಿರಚಿತ

# ಷಟ್ಸ್ಥಲ ವಲ್ಲಭ

ಸಂಪಾದಕರು :

ಎಚ್. ದೇವೀರಪ್ಪ
ಚೆನ್ನಪ್ಪ ಎರೇಸೀಮೆ



ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ–ಗದಗ

೧೯೮೦

Chennaveera Jangamadeva Virachita

'SHATSTHALA VALLABHA' ; Edited by Sree H. Deveerappa & Yaresime Channappa ; Published by Veerashaiva Adhyayana Samsthe, Shri Jagadguru Tontadarya Samsthanamath Gadag ; Karnataka ; First Edition ; March 1980, 1500 Copies, Price : Rs. 35-00. Pages—390+lxxxviii

---

ಗ್ರಂಥದಾನಿಗಳು :

ಲಿಂ. ಶ್ರೀ ಈಶ್ವರಪ್ಪ ಗುರುಸಿದ್ದಪ್ಪ ಬೆಂಡಿಗೇರಿ ಹಾಗೂ ಶ್ರೀ ಗಂಗಮ್ಮ ಈಶ್ವರಪ್ಪ ಬೆಂಡಿಗೇರಿ

ಅವರ ಸ್ಮರಣಾರ್ಥ ಅವರ ಮಕ್ಕಳಾದ

ಶ್ರೀ ಮಲ್ಲೇಶಪ್ಪ ಹಾಗೂ ಮಹಾರುದ್ರಪ್ಪ ಬೆಂಡಿಗೇರಿ, ಹುಬ್ಬಳ್ಳಿ

ಇವರ ಭಕ್ತಿಸೇವೆ

---



ಪ್ರಥಮ ಮುದ್ರಣ : ೧೯೮೦
ಪ್ರತಿಗಳು : ೧೫೦೦

**ಬೆಲೆ :** ರೂ. ೩೫-೦೦

ಪ್ರಕಾಶಕರು :

ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ-ಗದಗ

ಮುದ್ರಕರು :

ಲೋಟಸ್ ಪ್ರಿಂಟರ್ಸ್,
ರಾಜಾಜಿನಗರ, ಬೆಂಗಳೂರು-10

# ಪ ರಿ ವಿ ಡಿ

ವೀರಶೈವ ಷಟ್ಸ್ಥಲಜ್ಞಾನ ಪ್ರಭಾಪುಂಜರಂಜಿತರೂ
ವಚನಸಾಹಿತ್ಯದ ದ್ವಿತೀಯಘಟ್ಟದ ಅದ್ವಿತೀಯ ಅನುಭಾವಿಗಳೂ
ಶಿವಯೋಗಿಸಾರ್ವಭೌಮರೂ ಆದ

**ಶ್ರೀಮದನಾದಿ ನಿರಂಜನ ಜಗದ್ಗುರು**
**ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳವರ**

ದಿವ್ಯ ಪಾದಾರವಿಂದಗಳಲ್ಲಿ

ಅರ್ಪಿತ

ಶ್ರೀಮದನಾದಿ ನಿರಂಜನ ಜಗದ್ಗುರು
ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು



ಶ್ರೀಮದನಾದಿ ನಿರಂಜನ ಜಗದ್ಗುರು
ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು

# ಪ್ರಕಾಶಕರ ನುಡಿ

ಹದಿನೈದನೆಯ ಶತಮಾನದಲ್ಲಿ ವೀರಶೈವ ಧರ್ಮ, ಸಮಾಜ, ಸಾಹಿತ್ಯ, ಸಂಸ್ಕೃತಿಗಳ ಪುನರುದ್ಧಾರಕರಾಗಿ ಅವತಾರವೆತ್ತಿದ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳಿಗೂ ಅವರ ಶಿಷ್ಯ-ಪ್ರಶಿಷ್ಯ ಪರಂಪರೆಗೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅತ್ಯಂತ ಗೌರವಾನ್ವಿತವಾದ ಸ್ಥಾನ ದೊರಕುತ್ತದೆ. ವಚನ, ಕಾವ್ಯರೂಪದ ಸೃಜನಸಾಹಿತ್ಯ ನಿರ್ಮಾಣದೊಂದಿಗೆ ಸಮಗ್ರ ವಚನಸಾಹಿತ್ಯದ ಅಕ್ಷಯ ನಿಧಿಯನ್ನು ಹೊರತೆಗೆದು ಶೋಧಿಸಿ, ಸಂಸ್ಕರಿಸಿ, ಸಂಪಾದಿಸಿ, ವಚಿಸಿ, ವ್ಯಾಖ್ಯಾನಿಸಿ ಕನ್ನಡ ಸಾಹಿತ್ಯದಲ್ಲಿ 'ಸಂಪಾದನ ಸಮಯ' ವೆಂಬ ಮಾರ್ಗಕ್ಕೆ ಕಾರಣಕರ್ತರಾದ ಹಿರಿಮೆ ಅವರದಾಗಿದೆ.

ತೋಂಟದ ಸಿದ್ದಲಿಂಗಯತಿಗಳ ಪ್ರಭಾವಲಯದಲ್ಲಿ ಬೆಳಗುವ ಸಾಹಿತ್ಯ ಜ್ಯೋತಿಗಳು ಅನಂತ. ಜಾಗತಿಕ ತತ್ತ್ವಮಹಾಂತವೆನ್ನಿಸಿದ ಫ್ಲೇಟೋನ ಸಂಭಾಷಣೆಗೂ ಮಿಗಿಲೆನ್ನಿಸುವ "ಶೂನ್ಯಸಂಪಾದನೆ" ಶಿಲ್ಪದ ಮಹಾರೂವಾರಿಗಳಾದ ಹಲಗೆಯಾರ್ಯ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧವೀರಣ್ಣೊಡೆಯ, ವಚನ ಸಂಕಲನಕಾರರೆಂದು ಪ್ರಸಿದ್ಧರಾದ ಸಂಪಾದನೆಯ ಚೆನ್ನಂಜೆದೇವ, ಸಂಪಾದನೆಯ ಸಿದ್ಧವೀರಣಾರ್ಯ, ಸಂಪಾದನೆಯ ಗುರುಶಾಂತದೇವ, ಸ್ವತಂತ್ರ ವಚನಕಾರರಾಗಿ ಖ್ಯಾತಿವೆತ್ತ ಸ್ವತಂತ್ರ ಸಿದ್ಧಲಿಂಗ, ಘನಲಿಂಗಿದೇವ, ಯಜುರ್ವೇದ ಭಾಷ್ಯಕ್ಕೆ ಕನ್ನಡ ಟೀಕೆ ಬರೆದ ಗುರುನಂಜ, ವಚನಗಳ ಟೀಕಾಕಾರನಾದ ಸೋಮಶೇಖರ ಶಿವಯೋಗಿ, ಶ್ರೇಷ್ಠ ಪುರಾಣಗಳನ್ನು ರಚಿಸಿದ ಗುಬ್ಬಿಯ ಮಲ್ಲಣಾರ್ಯ, ಮಲ್ಲಿಕಾರ್ಜುನ, ಚೇರಮಾಂಕ, ಸಂಪಾದನೆಯ ಪರ್ವತೇಶ- ಹೀಗೆ ನೂರಾರು ಕವಿಗಳ, ಸಾವಿರಾರು ಸಾಹಿತ್ಯ ಕೃತಿಗಳನ್ನು ಸಂಗ್ರಹಿಸುವದು, ಶೋಧಿಸುವುದು, ಪ್ರಕಟಿಸುವುದು, ಪ್ರಚುರಿಸುವುದು ತೋಂಟದ ಸಿದ್ಧಲಿಂಗ ಪರಂಪರೆಯವರ ಕರ್ತವ್ಯವಾಗಿದೆ.

ಈ ಕರ್ತವ್ಯಪ್ರಜ್ಞೆಗೆ ಬದ್ಧವಾಗಿ ಶ್ರೀಮಠದಲ್ಲಿ 'ವೀರಶೈವ ಅಧ್ಯಯನಸಂಸ್ಥೆ' ಅಸ್ತಿತ್ವಕ್ಕೆ ಬಂದಿದ್ದು, ಅದರ ಇಂದಿನ ಧ್ಯೇಯಗಳು ಇಂತಿವೆ :

೧. ವೀರಶೈವ ಹಸ್ತಪ್ರತಿ, ಪ್ರಾಚ್ಯವಸ್ತುಗಳ ಸಂಗ್ರಹ ಮತ್ತು ಸಂರಕ್ಷಣೆ.

೨. ವೀರಶೈವ ಪುರಾತನ, ನೂತನ ಕೃತಿಗಳ ಗ್ರಂಥಭಾಂಡಾರ ಸ್ಥಾಪನೆ.

೩. "ವೀರಶೈವ ಪುರಾತನ ಸಾಹಿತ್ಯ ರತ್ನಮಾಲೆ" ಹೆಸರಿನಲ್ಲಿ ಪ್ರಾಚೀನ ಕೃತಿಗಳ ಪ್ರಕಟನೆ.

೪. "ವೀರಶೈವ ನೂತನ ಸಾಹಿತ್ಯ ರತ್ನಮಾಲೆ" ಹೆಸರಿನಲ್ಲಿ ಧರ್ಮ, ಸಂಸ್ಕೃತಿ, ಸಾಹಿತ್ಯ, ಸಮಾಜಗಳಿಗೆ ಸಂಬಂಧಪಟ್ಟ ಕೃತಿಗಳನ್ನು ಪ್ರಕಟಿಸುವುದು.

೫. "ವೀರಶೈವ ಪುಣ್ಯಪುರುಷ ಸಾಹಿತ್ಯ ರತ್ನಮಾಲೆ" ಹೆಸರಿನಲ್ಲಿ ವೀರಶೈವ ಗಣ್ಯಪುರುಷರ ಚರಿತ್ರೆಗಳನ್ನು ಪ್ರಕಟಿಸುವುದು.

೬. "ವೀರಶೈವ ಅನುವಾದ ಸಾಹಿತ್ಯ ರತ್ನಮಾಲೆ" ಹೆಸರಿನಲ್ಲಿ ವೀರಶೈವ ಉತ್ತಮೋತ್ತಮ ಗ್ರಂಥಗಳನ್ನು ಅನ್ಯಭಾಷೆಗಳಿಗೆ ಅನುವಾದಿಸಿ ಪ್ರಕಟಿಸುವುದು.

೭. ವಿದ್ವಾಂಸರಿಂದ 'ವೀರಶೈವಗೋಷ್ಠಿ' ನಡೆಸುವುದು.

ಈಗ "ವೀರಶೈವ ಪುರಾತನ ಸಾಹಿತ್ಯ ರತ್ನಮಾಲೆ" ಯ ಅಂಗವಾಗಿ ಚೆನ್ನವೀರ ಜಂಗಮದೇವ ವಿರಚಿತ "ಷಟ್‌ಸ್ಥಲ ವಲ್ಲಭ" ಪ್ರಕಟವಾಗುತ್ತಲಿದೆ. ವೀರಶೈವ ಪುರಾಣ ಪರಂಪರೆಯಲ್ಲಿ ಈ ಗ್ರಂಥಕ್ಕೆ ವಿಶೇಷಗೌರವ ಸಲ್ಲುತ್ತದೆ. ಶ್ರೀ ಜಗದ್ಗುರು ತೋಂಟದಾರ್ಯ ಯತಿಗಳನ್ನು ಕುರಿತು ಹುಟ್ಟಿದ ಹಲವು ಪ್ರಾಚೀನ ಗ್ರಂಥಗಳ ಸಾಲಿನಲ್ಲಿ ಇದೊಂದು ಕಲಶಕೃತಿ. ಇಂಥ ಗ್ರಂಥಗಳನ್ನು ಪ್ರಕಟಿಸುವುದು ವೀರಶೈವ ಅಧ್ಯಯನ ಸಂಸ್ಥೆಯ, ಧ್ಯೇಯಗಳಲ್ಲಿ ಒಂದು. "ಷಟ್‌ಸ್ಥಲ ವಲ್ಲಭ" ಕೃತಿಯನ್ನು ಪರಿಷ್ಕರಿಸಿ ನಮ್ಮ ಮಾಲಿಕೆಯಲ್ಲಿ ಪ್ರಕಟಿಸಲು ಒಪ್ಪಿಗೆ ನೀಡಿದ ಸಂಪಾದಕರಾದ ಎಚ್. ದೇವೀರಪ್ಪನವರು ಮತ್ತು ಎರೇಸೀಮೆ ಚನ್ನಪ್ಪನವರು ಬೆಂಗಳೂರು, ಅವರಿಗೆ, ಶ್ರೀಸ್ವಾಮಿಯ ಮೀಸಲು ಭಕ್ತರಾದ ಗ್ರಂಥದಾನಿ ಹುಬ್ಬಳ್ಳಿಯ ಶ್ರೀ ಮಲ್ಲೇಶಪ್ಪ ಈಶ್ವರಪ್ಪ ಬೆಂಡಿಗೇರಿ ಸಹೋದರರಿಗೆ ಅನಾದಿ ತೋಂಟದ ಸಿದ್ಧಲಿಂಗ ಶಿವಯೋಗೀಶ್ವರನು ಸಕಲ ಸನ್ಮಂಗಳವನ್ನೀಯಲಿ.

ಅಚ್ಚಿನ ಕಾರ್ಯವನ್ನು ಅಂದವಾಗಿ ಅಲ್ಪಾವಧಿಯಲ್ಲಿ ಪೂರೈಸಿಕೊಟ್ಟ ಬೆಂಗಳೂರಿನ "ಲೋಟಸ್ ಪ್ರಿಂಟರ್ಸ್" ಅಚ್ಚುಕೂಟವ ಒಡೆಯರಾದ ಶ್ರೀ ಡಿ. ಎಸ್. ಪಾಟೀಲ, (ಕುಕನೂರ) ಇಟಗಿ ಅವರಿಗೂ ಅವರ ಸಿಬ್ಬಂದಿ ವರ್ಗಕ್ಕೂ ಶುಭಾಶೀರ್ವಾದಗಳು.

ಗದಗ
೧೭–೩–೧೯೮೦

ಪ್ರಕಾಶಕರು
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ–ಗದಗ

# ಸಂಪಾದಕರ ಬಿನ್ನಹ

ಈ ಗ್ರಂಥವನ್ನು ಎರಡು ಹಸ್ತಪ್ರತಿಗಳ ಆಧಾರದಿಂದ ಸಂಪ್ರತಿಸಿ ಸಂಪಾದಿಸಿ ಸಂಸ್ಕರಿಸಲಾಗಿದೆ. ಅವುಗಳಲ್ಲಿ,

'ಅ' ಎಂಬುದು ಈಗ ಮೈಸೂರು ವಿಶ್ವವಿದ್ಯಾನಿಲಯದ ಅಂಚೆ ತೆರಪಿನ ಶಿಕ್ಷಣ ವಿಭಾಗದಲ್ಲಿ ಉಪನಿರ್ದೇಶಕರಾಗಿರುವ ಶ್ರೀ ಜೆ. ಎಸ್. ಪರಶಿವಮೂರ್ತಿ ಅವರು ಅಭಿಮಾನವಿಟ್ಟು ಕೊಟ್ಟುದು. ಓಲೆಯ ಪ್ರತಿ; ೨ ರಿಂದ ೭೬ ಪತ್ರಗಳಿವೆ; ಮೊದಲನೆಯ ಪತ್ರ ಇಲ್ಲ; ೨೮ನೆಯ ಪತ್ರ ಅರ್ಧ ಮಾತ್ರ ಇದೆ; ಅಸಮಗ್ರ. ಏಳನೆಯ ಆಶ್ವಾಸದ ೧೦೦ನೆಯ ಪದ್ಯದಿಂದ ಮುಂದಿನ ಭಾಗ ಇಲ್ಲ. ಪ್ರತಿ ಅಶುದ್ಧವಾಗಿದೆ.

'ಇ' ಪ್ರತಿಯು ಮೈಸೂರು ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ಕೆ. ೪೮೬ನೆಯ ತಾಳೆಯೋಲೆ ಪ್ರತಿಯ ಯಥಾ ನಕಲು. ಮೂಲ ಮಾತೃಕೆಯಲ್ಲಿ ೫೫ ಪತ್ರಗಳಿವೆ. ಸಮಗ್ರ; ಅಲ್ಲಲ್ಲಿ ಗ್ರಂಥಲೋಪವಿದೆ. ಇದೂ ಅಶುದ್ಧವೆ.

ಈ ಎರಡು ಪ್ರತಿಗಳೂ ಪ್ರತಿಕಾರರ ಅಜ್ಞತೆ ಅನವಧಾನಗಳ ಪರಿಣಾಮವಾಗಿ ಸಾಕಷ್ಟು ವಿರೂಪಗೊಂಡಿವೆ. ಈ ವಿರೂಪಗಳನ್ನು ಸುರೂಪಗೊಳಿಸಬಹುದು. ಆದರೆ ಕವಿಯೇ ಪ್ರಯೋಗಿಸಿರುವ ಅನೇಕ ದೋಷಪೂರ್ಣವಾದ ಶಬ್ದಜೋಡಣೆಗಳ ಬಗೆಗೆ ಏನೂ ಮಾಡುವಂತಿರಲಿಲ್ಲ. ಪತ್ರಗಳು ತ್ರುಟಿತವಾದ ಕಡೆಯಲ್ಲಿಯೂ ಗ್ರಂಥಲೋಪವಿರುವೆಡೆಯಲ್ಲಿಯೂ ಸಾಧ್ಯವಾದಷ್ಟು ಮಟ್ಟಿಗೆ ಅಲ್ಲಲ್ಲಿಗೆ ತಕ್ಕಂತಹ ಶಬ್ದಗಳನ್ನೋ ವಾಕ್ಯಗಳನ್ನೋ ಛಂದೋನುಗುಣವಾಗಿ ಜೋಡಿಸಿ ಕಂಸದಲ್ಲಿ ಕೊಟ್ಟಿದ್ದೇವೆ. ಕೆಲವು ಪದ್ಯಗಳು ಅಸ್ತವ್ಯಸ್ತವಾಗಿದ್ದುವು. ಆ ಪದ್ಯಗಳು ಮೊದಲು ಹೀಗಿದ್ದಿರಬಹುದೆಂಬುದನ್ನು ಸಾಕಷ್ಟು ಯೋಜಿಸಿ ಊಹಿಸಿ ಅವುಗಳನ್ನು ಮೂಲಪಾಠದೊಂದಿಗೆ ಜೋಡಿಸಿಕೊಟ್ಟು ಹಸ್ತಪ್ರತಿಯ ಪಾಠಗಳನ್ನೇ ಅಡಿಟಿಪ್ಪಣಿಯಲ್ಲಿ ಕೊಟ್ಟಿದ್ದೇವೆ.

ಸಂಸ್ಕೃತ ಶ್ಲೋಕಗಳ ಉಲ್ಲೇಖಗಳನ್ನು ತೃತೀಯಾಧ್ಯಾಯದಲ್ಲಿ ವಿಶೇಷವಾಗಿಯೂ ಇತರ ಕೆಲವೆಡೆಗಳಲ್ಲಿ ಕ್ವಚಿತ್ತಾಗಿಯೂ ಕಾಣಬಹುದು. ಅವುಗಳಲ್ಲಿ ಅಲ್ಲಲ್ಲಿ ದೋಷಗಳಿರುವುದನ್ನೂ ನಾವು ಗಮನಿಸಿದ್ದೇವೆ. ಅವುಗಳ ಆಕರಗಳು ನಮಗೆ ಲಭ್ಯವಾಗಲಿಲ್ಲ. ಕವಿಯೇ ಹಾಗೆ ತಪ್ಪಾಗಿ ಉಲ್ಲೇಖಿಸಿರುವನೋ ಏನೋ ಎಂದೆನ್ನಿಸಿತು. ಆದುದರಿಂದ ನಾವು ಅವನ್ನು ತಿದ್ದುವ ಗೊಡವೆಗೆ ಹೋಗದೆ ಇದ್ದುದಿದ್ದಂತೆ ಕೊಟ್ಟಿದ್ದೇವೆ.

ಕೆಲವುಕಡೆ, ಇಂದಿನ ವಿಚಾರಗಳಿಗೆ ಹೊಂದಿಕೆಯಾಗದ ಅಂಶಗಳಿದ್ದವು. ಅವು ಗಳನ್ನು ಕೊಂಚಮಟ್ಟಿಗೆ ಸಂಗ್ರಹಿಸಿ ಕೊಟ್ಟಿದ್ದೇವೆ. ಇದರಿಂದ ಗ್ರಂಥನಾಯಕನ ವ್ಯಕ್ತಿತ್ವಚಿತ್ರಣಕ್ಕೂ ಗ್ರಂಥಕರ್ತೃವಿನ ಉದ್ದೇಶಕ್ಕೂ ಭಂಗವಾಗಲಾರದೆಂದು ಭಾವಿಸುತ್ತೇವೆ.

ಕವಿಯ ಕಾಲದಲ್ಲಿ ಱಕಾರವು ಬಳಕೆಯಲ್ಲಿತ್ತು. ಆದರೆ ಸರಿಯಲ್ಲದ ಕಡೆಯೂ ಅದನ್ನು ಬಳಸಲಾಗುತ್ತಿತ್ತು. ನಾವು ನೋಡಿದ ಹಸ್ತಪ್ರತಿಗಳಲ್ಲಿಯೂ ಱಕಾರದ ಬಳಕೆ ಆಗಿರಲಿಲ್ಲ. ಇದನ್ನು ನಾವು ಈಗ ಬಳಸಿದರೆ ಓದುಗರಿಗೆ ಅನನುಕೂಲವಾಗಬಹು ದೆಂದು ಕೈಬಿಟ್ಟಿದ್ದೇವೆ.

ಕವಿಯು ಪದ್ಯಗಳ ಜೊತೆಗೆ 'ವಚನ'ಗಳಿಗೂ ಕ್ರಮಾಂಕಗಳನ್ನು ಕೊಟ್ಟಿದ್ದಾನೆ. ಅನೇಕ ಕಡೆ, ಚಿಕ್ಕ ಚಿಕ್ಕ, ಮೂರು ನಾಲ್ಕು ಶಬ್ದಗಳು ಮಾತ್ರ ಇರುವ ಗದ್ಯಕ್ಕೆ ಕವಿಯೇ ಕ್ರಮಾಂಕವನ್ನು ಕೊಟ್ಟಿಲ್ಲ. ನಾವೂ ಅವುಗಳಿಗೆ ಕ್ರಮಾಂಕ ಹಾಕಿರುವುದಿಲ್ಲ.

ನಾವು ಈ ಗ್ರಂಥವನ್ನು ಶಾಸ್ತ್ರಬದ್ಧವಾಗಿ ಸಂಪಾದಿಸಿದ್ದೇವೆಂದು ಹೇಳಲಾರೆವು. ಅಶುದ್ಧ ಹಸ್ತಪ್ರತಿ, ಗ್ರಂಥಲೋಪ, ಶಬ್ದದೋಷಾದಿಗಳು ಹೆಚ್ಚಾಗಿದ್ದ ಇದರಲ್ಲಿ ಮೇಲೆಯೇ ಅರಿಕೆ ಮಾಡಿಕೊಂಡಿರುವಂತೆ ಹಲವು ಲೋಪದೋಷಗಳಿರಬಹುದು ಮುದ್ರಣದೋಷಗಳೂ ನಮ್ಮ ಹತೋಟಿಗೆ ಮೀರಿದ ಕಾರಣಗಳಿಂದ, ಉಳಿದಿರ ಬಹುದು. ಮುಂದೆ ಬರುವವರು ಮತ್ತೊಂದು ಒಳ್ಳೆಯ ಹಸ್ತಪ್ರತಿಯನ್ನು ಆಧರಿಸಿ ಇವನ್ನು ಸರಿಪಡಿಸಲೆಂದು ಆಶಿಸುತ್ತೇವೆ. ಅಜ್ಞಾತಲೋಕದಲ್ಲಿ ಇದುವರೆಗೆ ಕುಳಿತಿದ್ದ ಈ ಗ್ರಂಥವನ್ನು ಈ ರೂಪಕ್ಕೆ ತಂದು ಪ್ರಕಟಣೆಗೆ ಅಣಿಗೊಳಿಸಿರುವುದಕ್ಕೆ ನಮಗಾಗಿರುವ ಸಂತೋಷ ಅಷ್ಟಿಷ್ಟಲ್ಲ.

## ಕೃತಜ್ಞತೆ

ಹಸ್ತಪ್ರತಿಗಳನ್ನು ಒದಗಿಸಿದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ॥ ಹಾ. ಮಾ. ನಾಯಕರಿಗೂ ಶ್ರೀ ಜೆ. ಎಸ್. ಪರಶಿವಮೂರ್ತಿ ಅವರಿಗೂ ನಾವು ಆಭಾರಿಯಾಗಿದ್ದೇವೆ.

ಲಿಂಗೈಕ್ಯರಾಗಿರುವ ಎಸ್. ಆರ್. ಮಹಾಂತಯ್ಯ ಅವರು ಶ್ರೀ ಸಿದ್ಧಲಿಂಗೇಶ್ವರರ ಮತ್ತು ಅವರ ಶಿಷ್ಯರ ರಚನೆಗಳನ್ನು ಬೆಳಕಿಗೆ ತರುವವರಿಗೆ ಹಲವು ರೀತಿಗಳಲ್ಲಿ ನೆರವೀಯುತ್ತಿದ್ದರು. ಸಪ್ಪೆಯ ಯತಿಯ 'ಅಮೃತೇಶ್ವರಭಾಷ್ಯ'ವನ್ನು ಪ್ರಕಟಿಸ ಲೆಂದು ಆ ಗ್ರಂಥದ ಹಸ್ತಪ್ರತಿಯೊಂದನ್ನು ಮೈಸೂರಿನ ಪ್ರಾಚ್ಯವಿದ್ಯಾಸಂಶೋಧ ನಾಲಯಕ್ಕೆ ಕಳಿಸಿದ್ದರು. ಈ ಗ್ರಂಥದ ಅಚ್ಚಿನ ಪ್ರತಿಯನ್ನು ಸಿದ್ಧಪಡಿಸುತ್ತಿದ್ದ ನಮಗೆ ಹಲವು ಬಗೆಯಲ್ಲಿ ನೆರವಾಗಿರುವರು. ಈಗ ಗದಗು ಡಂಬಳ ಮಠಗಳಲ್ಲಿ ಸೇವೆ

ಸಲ್ಲಿಸುತ್ತಿರುವ ಶ್ರೀ ಆರ್. ಎಂ. ಬಸವಲಿಂಗಯ್ಯನವರು ಈ ಬಗೆಗೆ ಅತಿಶಯವಾದ ಆಸ್ಥೆವಹಿಸಿ ಸಹಕರಿಸುತ್ತಿರುವರು. ಇವರಿಬ್ಬರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಗದುಗಿನ ಶ್ರೀ ತೋಂಟದಾರ್ಯ ಜಗದ್ಗುರುಗಳ ಅಭಿಮಾನ, ಆಶೀರ್ವಾದ ಅನುದಾನಗಳಿಲ್ಲದಿದ್ದರೆ ಈ ಗ್ರಂಥವು ಬೆಳಕಿಗೆ ಬರುತ್ತಿದ್ದಿತೇ? ಕೃತಿಕರ್ತನಾದ ಚೆನ್ನವೀರೇಶ್ವರನ ಶ್ರಮ ಸಾರ್ಥಕವಾಗುತ್ತಿದ್ದಿತೆ? ಸಂಸ್ಕೃತಿ, ಸಾಹಿತ್ಯಗಳು ಉಳಿಯುವುದು ಬೆಳೆಯುವುದು ಇಂತಹ ಜಗದ್ಗುರುಗಳ ಕ್ರಿಯಾಶಕ್ತಿಯಿಂದಲೆ. ಶ್ರೀ ಶ್ರೀಗಳವರಿಗೆ ಚೆನ್ನವೀರೇಶ್ವರನ ಪರವಾಗಿಯೂ ನಮ್ಮ ಪರವಾಗಿಯೂ ಸಾಷ್ಟಾಂಗ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ಅತ್ಯಲ್ಪಕಾಲದಲ್ಲಿ ಈ ಉದ್‌ಗ್ರಂಥವನ್ನು ಇಷ್ಟು ಅಂದವಾಗಿ ಮುದ್ರಿಸಿಕೊಟ್ಟಿರುವ ಲೋಟಸ್ ಮುದ್ರಣಾಲಯುದ ಒಡೆಯರಾವ ಶ್ರೀ ಡಿ. ಎಸ್. ಪಾಟೀಲರಿಗೆ ನಮ್ಮ ನೆನಪುಗಳು.

ಬೆಂಗಳೂರು
೨೫-೩-೮೦

ಎಚ್. ದೇವೀರಪ್ಪ,
ಪಂಡಿತ ಚನ್ನಪ್ಪ ಎರೇಸೀಮೆ

# ಪೀಠಿಕೆ

## ೧. ಕವಿಯ ಕಾಲ, ದೇಶ

'ಷಟ್ಸ್ಥಲ ವಲ್ಲಭ' ಎಂಬ ಈ ಗ್ರಂಥವನ್ನು ಚೆನ್ನವೀರೇಶ್ವರ ಎಂಬುವನು ರಚಿಸಿದ್ದಾನೆ. ಈ ಸಂಗತಿಯು ಗ್ರಂಥದ ಆಶ್ವಾಸಾಂತ್ಯದ ಗದ್ಯಗಳಿಂದ ಗೊತ್ತಾಗುತ್ತದೆ. ಆದರೆ ಪ್ರಸ್ತುತ ಗ್ರಂಥದಿಂದಲಾಗಲಿ, ಇತರ ಮೂಲಗಳಿಂದಾಗಲಿ ಈ ಕವಿಯ ಕಾಲದೇಶಾದಿಗಳ ವಿಚಾರವಾಗಿ ಹೆಚ್ಚಿನ ಮಾಹಿತಿಗಳು ದೊರೆಯುವುದಿಲ್ಲ.

ಗ್ರಂಥಾರಂಭದಲ್ಲಿ ಬಸವಣ್ಣ, ರೇವಣಸಿದ್ಧ, ಅಲ್ಲಮ, ಸಿದ್ಧರಾಮ, ಮುಸುಟಿಯ ಚೌಡಯ್ಯ ಮುಂತಾದ ಶರಣರ ಸ್ತೋತ್ರವಿದೆ; ಮಾಯಿದೇವ, ಶಂಕರದೇವ, ಕೆರೆಯ ಪದ್ಮರಸ, ಕೇಶಿರಾಜ, ಪಾಲ್ಕುರಿಕೆ ಸೋಮನಾಥ, ಹರಿಹರದೇವ, ಕಲ್ಮಠದ ಪ್ರಭು, ಜಕ್ಕಣಯ್ಯ, ಸಮಾಧಿಯ ಸೋಮ-ಇವರ ಹೆಸರುಗಳಿವೆ. ಇವರಲ್ಲಿ ಯಾರೂ ಕ್ರಿ ಶ. ೧೫೦೦ ರಿಂದ ಈಚೆಗೆ ಬಾಳಿದವರಲ್ಲವೆಂಬುದು ನಿಶ್ಚಿತ. ಇಷ್ಟೇ ಪ್ರಸ್ತುತ ಕೃತಿಯಿಂದ ಕವಿಯ ಕಾಲದ ಬಗೆಗೆ ದೊರೆಯುವ ಸೂಚನೆ.

ಆದುದರಿಂದ ಈಗ ಈ ಕೃತಿಯ ನಾಯಕನ ಕಾಲಮಾನವನ್ನು ಮೊದಲು ಖಚಿತಪಡಿಸಿಕೊಳ್ಳುವುದೊಂದೇ ಉಳಿದಿರುವ ಮಾರ್ಗ.

"ಈತನು (ತೋಂಟದ ಸಿದ್ಧಲಿಂಗಯತಿಯು) ವಿಜಯನಗರದ ರಾಜನಾದ ವಿರೂಪಾಕ್ಷನ (೧೪೬೭-೧೪೭೮) ಕಾಲದಲ್ಲಿದ್ದಂತೆ ವಿರೂಪಾಕ್ಷಪಂಡಿತನ (೧೫೮೪) ಚೆನ್ನಬಸವ ಪುರಾಣದಿಂದ ಊಹಿಸಬಹುದಾಗಿದೆ. ಇವನ ಕಾಲವು ಸುಮಾರು ೧೪೭೦ ಆಗಬಹುದು" ಎಂದಿರುವ ಕವಿಚರಿತೆಕಾರರು ಎಡೆಯೂರು ದೇವಸ್ಥಾನದ ಪ್ರಾಕಾರದಲ್ಲಿರುವ ಒಂದು ಶಿಲಾಶಾಸನ (ಕುಣಿಗಲ್ ೪೯)ವನ್ನೂ ಉಲ್ಲೇಖಿಸುತ್ತಾರೆ.

ಪ್ರೊ|| ಎಲ್. ಬಸವರಾಜು,[1] ಡಾ|| ಎಂ. ಎಂ. ಕಲಬುರ್ಗಿ ಮತ್ತು ಪ್ರೊ|| ಬಿ. ಆರ್. ಹಿರೇಮಠ[2] ಶ್ರೀ ಎಸ್. ಶಿವಣ್ಣ[3] – ಇವರುಗಳು ಶಾಂತೇಶಕೃತ ಸಿದ್ಧೇಶ್ವರ ಪುರಾಣವು ಪರಿಸಮಾಪ್ತಿಯಾದ ಕಾಲ (ಕ್ರಿ.ಶ. ೧೫೬೧)ದಲ್ಲಿ ತೋಂಟದಾರ್ಯರು ಇನ್ನೂ ಜೀವಂತರಾಗಿದ್ದರೆಂದು ನಿರ್ಣಯಿಸಿದ್ದಾರೆ. ಅವರು. ಈ ನಿರ್ಣಯಕ್ಕೆ ಬರಲು, ಕೊಟ್ಟಿರುವ ಆಧಾರಗಳನ್ನು ಹೀಗೆ ಸಂಗ್ರಹಿಸಬಹುದು.

೧. ಶಾಂತೇಶಕೃತ ಸಿದ್ಧೇಶ್ವರ ಪುರಾಣದ ಆರಂಭದಲ್ಲಿ ಬರುವ ಎರಡು ಪದ್ಯಗಳಲ್ಲಿ ಶ್ರೀ ಸಿದ್ಧಲಿಂಗನು ಇನ್ನೂ ಬದುಕಿರುವನೆಂಬ ಅಭಿಪ್ರಾಯವಿರುವುದು.

೨. ಆತನು ಲಿಂಗದೊಳಗೆ ಒಂದಾದ ಸಂಗತಿಯು ಪುರಾಣದಲ್ಲಿಲ್ಲದಿರುವುದು.

೩. ಗುಬ್ಬಿಯ ಮಲ್ಲಣಾರ್ಯನು ಭಾವಚಿಂತಾರತ್ನದಲ್ಲಾಗಲಿ ವೀರಶೈವಾಮೃತ ಮಹಾ ಪುರಾಣದಲ್ಲಾಗಲಿ ತೋಂಟದ ಸಿದ್ಧೇಶ್ವರನ ಹೆಸರನ್ನೇ ಎತ್ತದಿರುವುದು.

೪. ಆತನ ಶಿಷ್ಯರು ಅಥವಾ ಪ್ರಶಿಷ್ಯರು ೧೬ನೆಯ ಶತಮಾನದ ಉತ್ತರಾರ್ಧದಲ್ಲಿಯೂ ಜೀವಿಸಿದ್ದರೆಂಬುದಕ್ಕೆ ಪ್ರಬಲವಾದ ಪ್ರಮಾಣಗಳಿರುವುದು.

೫. ಸುಮಾರು ಕ್ರಿ.ಶ. ೧೬೫೦ರಲ್ಲಿದ್ದ ಸಿದ್ಧನಂಜೇಶನು ತನ್ನ 'ಭಾವರತ್ನಾಭರಣ ಸ್ತೋತ್ರ'ದಲ್ಲಿ ಶ್ರೀ ತೋಂಟದಾರ್ಯರನ್ನು ಸ್ಮರಿಸುತ್ತ,

ಮಲ್ಲಣಾರ್ಯಜ ತ್ವತ್ಪ್ರಬಂಧಮಂ ರಚಿಯಿಸಿರ
ಲೊಲ್ದೆ ನಿರ್ವಂಶಮಂ ಮಾಡೆನಲ್ಕಿತ್ತೆ........ (ಪ ೭೯)

ಎಂದು ಹೇಳಿ, ಮಲ್ಲಣಾರ್ಯನ ಮಗ ಶಾಂತೇಶನು ಸಿದ್ಧೇಶ್ವರ ಪುರಾಣವನ್ನು ಬರೆದು ಆದಮೇಲೆ ಅದೇ ಸಿದ್ಧೇಶ್ವರನನ್ನು ಬೇಡಿಕೊಂಡು ಹುಟ್ಟು-ಸಾವುಗಳ ಗೋಲೆಯಿಂದ ಪಾರಾದನು ಎಂಬ ಅಭಿಪ್ರಾಯಕ್ಕೆ ಎಡೆಗೊಟ್ಟಿರುವುದು.

ಈ ಆಧಾರಗಳು ಪ್ರಬಲವಾದುವಲ್ಲವೆಂದು ತೋರುವುದು. ಶಾಂತೇಶನು ತನ್ನ ಗುರುವಾದ ಚಂದ್ರಶೇಖರನು "ಸಾಂಗವಾಗಿಯೆ ಪೇಳ್ದ ಬೋಧೆಯ"ಷ್ಟನ್ನೇ ಕಾವ್ಯರೂಪದಲ್ಲಿ ಬರೆದಿದ್ದಾನೆ. ತೋಂಟದಾರ್ಯನು ಎಡೆಯೂರಿನಲ್ಲಿ "ನೆಲಸಿದ" ಸಂಗತಿ ಪುರಾಣದಲ್ಲಿ ಬರದಿರಲು ಕಾರಣ, ಪುರಾಣವು ಬರೆಯಲ್ಪಟ್ಟ ಕಾಲದಲ್ಲಿ ಆ ಯತಿವರನು ಇನ್ನೂ ಬದುಕಿದ್ದನೆಂಬುದಲ್ಲ; ಶಿವಯೋಗ ಸಮಾಧಿಯಲ್ಲಿರುವವರು ಜ್ಯೋತಿಃಸ್ವರೂಪವಾಗಿ 'ಜಾಗೃತಸ್ಥಾನ'ಗಳಲ್ಲಿ ನೆಲಸಿರುವರೆಂಬ ನಂಬಿಕೆ.

ಸಂಬಂಧಪಟ್ಟ ಮಹಾನುಭಾವರ ಕಾಲಮಾನವನ್ನು ಅವರ ಶಿಷ್ಯರ ಇಲ್ಲವೆ ಪ್ರಶಿಷ್ಯರ ಸುನಿಶ್ಚಿತ ಕಾಲದ ಆಧಾರಗಳಷ್ಟನ್ನೇ ನೆಮ್ಮಿಕೊಂಡು ನಿರ್ಣಯಿಸಬಾರದು. ಇವರಲ್ಲೊಬ್ಬರು (ಅಥವಾ ಇಬ್ಬರೂ) ದೀರ್ಘಾಯುವಾಗಿದ್ದರೆ ನಮ್ಮ ಲೆಕ್ಕಾಚಾರಗಳು ತಲೆಕೆಳಗಾಗುತ್ತವೆ. ವಿರಕ್ತರಲ್ಲಿ ಕೆಲವರು ತಾವು ತೋಂಟದಾರ್ಯರ ಶಿಷ್ಯರೆಂದು ಹೇಳಿಕೊಂಡಿರುವುದೇನೋ ದಿಟ. ಆದರೆ ಅವರಲ್ಲಿ ಕೆಲವರಾದರೂ ತೋಂಟದಾರ್ಯರ ಖಾಸಾ ಶಿಷ್ಯರಲ್ಲ. ಉದಾಹರಣೆಗೆ ಗುಮ್ಮಳಾಪುರದ ಸಿದ್ಧಲಿಂಗಯತಿ. ಆತನು ತನಗೆ ತನ್ನ ವಿದ್ಯಾಗುರುವಾದ ಬೋಳಬಸವನ ಮೂಲಕ ತೋಂಟದ ಸಿದ್ಧೇಶ್ವರನ ಅನುಗ್ರಹವಾಯಿತೆಂದು ಹೇಳಿಕೊಂಡಿದ್ದಾನೆ. ಬೋಳಬಸವನು ಶ್ರೀ ತೋಂಟದಾರ್ಯರ ಪ್ರಥಮ ಶಿಷ್ಯನೆಂದು ಬೇರೆ ಹೇಳಬೇಕಾಗಿಲ್ಲ. ಭಾವಚಿಂತಾರತ್ನವನ್ನೂ ವೀರಶೈವಾಮೃತ ಮಹಾ ಪುರಾಣವನ್ನೂ ರಚಿಸಿರುವ ಮಲ್ಲಣಾರ್ಯನು ತೋಂಟದಾರ್ಯನನ್ನು ಹೆಸರಿಸಿಲ್ಲವಾದುದರಿಂದ ಆ ಯತಿವರನು ಮಲ್ಲಣಾರ್ಯನು ಕಾವ್ಯರಚನೆ ಮಾಡಿದಾಗ ಇನ್ನೂ ಅಪ್ರಸಿದ್ಧನಾಗಿದ್ದನೆಂದು ಪ್ರೊ|| ಎಲ್. ಬಸವರಾಜು ಅವರ

ಅಭಿಪ್ರಾಯ. ಭೀಮಕವಿಯ ಬಸವ ಪುರಾಣದಲ್ಲಿ ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿಯಲ್ಲಿ ಉಡುತಡಿಯ ಮಹಾದೇವಿಯರ ಹೆಸರೇ ಇಲ್ಲ!

ಈಗ ಕವಿಚರಿತಕಾರರ ನಿರ್ಣಯವನ್ನು ಬೆಂಬಲಿಸುವ ಕೆಲವು ಆಧಾರಗಳನ್ನು ಉಲ್ಲೇಖಿಸಬಹುದು.

೧ ಗುಬ್ಬಿಯ ಮಲ್ಲಣಾರ್ಯನು 'ಭಾವಚಿಂತಾರತ್ನ' (ಕ್ರಿ.ಶ. ೧೫೬೩)ದ ಆರಂಭದಲ್ಲಿ ಶಿವಪೂಜೆಯಾರ್ಯ ಎಂದು ಪ್ರಸಿದ್ಧನಾಗಿದ್ದ ಬೋಳಬಸವನನ್ನು ಬಲು ಭಕ್ತಿಯಿಂದ ನೆನೆದಿದ್ದಾನೆ. ಈ ಬೋಳಬಸವನು ತೋಂಟದಾರ್ಯನ ಕರಕಮಲ ಸಂಜಾತ. ಆದುದರಿಂದ ತೋಂಟದ ಸಿದ್ಧಲಿಂಗನು ಕ್ರಿ.ಶ. ೧೫೧೩ರಲ್ಲಿ ಜೀವಿಸಿದ್ದನು; ಇಲ್ಲ, ಆ ಕಾಲಕ್ಕೇ ಸಮಾಧಿಸ್ಥನಾಗಿದ್ದನು–ಎಂದು ಅನುಮಾನ.

೨. ಶಾಂತೇಶನು ತನ್ನ ಕೃತಿಯ ಪ್ರತಿಸಂಧಿಯ ಅಂತ್ಯದಲ್ಲಿಯೂ ತಾನು

"ಇದು ವಿಮಲ ತೋಂಟದಾರ್ಯನ
ಪದಕಮಲ ಷಟ್ಚರಣನೆನಿಸುವ
ಸದಮಲ ಸನ್ಮಲ್ಲಣಾರ್ಯನ ಕುಲಶರಧಿ ಚಂದ್ರ"

ಎಂದು ಹೇಳಿಕೊಂಡಿದ್ದಾನೆ. ಈ ಮಲ್ಲಣಾರ್ಯ ಶಾಂತೇಶನ ಮುತ್ತಾತ; ತಂದೆ ಯಲ್ಲ. ಶಾಂತೇಶನ ಕಾಲ ನಾವೆಲ್ಲ ಬಲ್ಲಂತೆ ಕ್ರಿ. ಶ. ೧೫೬೧. ಆತನ ಮುತ್ತಾತನು ಕ್ರಿ. ಶ. ೧೪೬೦ರಲ್ಲಿಯಾದರೂ ಜೀವಿಸಿದ್ದಿರಬೇಕಲ್ಲವೆ? ಮಲ್ಲಣಾರ್ಯನ ಗುರು ತೋಂಟದಾರ್ಯನು ಅವನಿಗಿಂತ ಹಿರಿಯನಲ್ಲದಿದ್ದರೂ ಅವನಷ್ಟೇ ವಯಸ್ಸಿನವನಾಗಿರ ಬೇಕಲ್ಲವೆ?

೩. ಶುದ್ಧಾಖ್ಯತಂತ್ರದ ಕನ್ನಡ ವ್ಯಾಖ್ಯಾನದ ಹಸ್ತಪ್ರತಿಯನ್ನು ಪರೀಕ್ಷಿಸಿರುವ ಪ್ರೊ|| ಸಿ. ಮಹಾದೇವಪ್ಪ ಅವರು "ನಮಗೆ ದೊರೆತಿದ್ದ ಒಂದು ಓಲೆಯ ಪ್ರತಿಯ ಪ್ರಕಾರ ಕ್ರಿ. ಶ. ೧೪೮೭ನೆಯ ಇಸವಿ ಮಾರ್ಚ್ ೮ನೆಯ ತಾರೀಖು ಗುರುವಾರ (ಪರಾಭವ ಸಂವತ್ಸರದಲ್ಲಿ) ಆ ವ್ಯಾಖ್ಯಾನಪಟಲ ಸಮಾಪ್ತಿಯಾಯಿತೆಂದೂ ಅದನ್ನು ಬರೆದಾತನು ಶ್ರೀ ಗುರು ತೋಂಟದಾರ್ಯರ ಶಿಷ್ಯನಾದ ಮಹಂತಯ್ಯನೆಂದೂ ತಿಳಿದುಬರುತ್ತದೆ[4]" ಎಂದಿದ್ದಾರೆ. ಈ ಮಹಂತಯ್ಯನ ಗುರುವು ಕ್ರಿ. ಶ. ೧೪೫೦ರಲ್ಲಿ ಇದ್ದಿರಲೇಬೇಕು.

ಆದುದರಿಂದ ಕವಿಚರಿತಕಾರರ ನಿರ್ಣಯವನ್ನೆ ಕೊಂಚಮಟ್ಟಿಗೆ ಮಾರ್ಪಡಿಸಿ ಶ್ರೀ ಸಿದ್ಧಲಿಂಗೇಶ್ವರರ ಜೀವಮಾನಾವಧಿಯು ಕ್ರಿ. ಶ. ೧೪೦೦ ಮತ್ತು ೧೫೦೦ರ ನಡುವೆ ಎಂದು ತೀರ್ಮಾನಿಸುವುದು ಸೂಕ್ತ. ಆ ತಪೋಮೂರ್ತಿಯು ಎಡೆಯೂರಿನಲ್ಲಿ ಜ್ಯೋತಿಸ್ವರೂಪವಾಗಿ ನೆಲಸಿರುವುದು ಎಲ್ಲರೂ ಬಲ್ಲ ಸಂಗತಿ.

ಈಗ 'ಷಟ್ಸ್ಥಲ ವಲ್ಲಭ'ದ ಕರ್ತೃವಾದ ಚೆನ್ನವೀರ ಜಂಗಮದೇವನ ಕಾಲದ ವಿಚಾರವಾಗಿ. ಈತನು ಹೇಳುವ ಕೆಲವು ಪವಾಡ ಕತೆಗಳು ವಿರಕ್ತ ತೋಂಟದಾರ್ಯನ 'ಪುರಾಣ'ದಲ್ಲಿಲ್ಲ. ಅಲ್ಲಿರುವ ಕೆಲವು ಇಲ್ಲಿಲ್ಲ – ಆದರೂ ಒಂದೇ ಪ್ರಸಂಗವನ್ನು ಚಿತ್ರಿಸುವಾಗ ಇವರಲ್ಲೊಬ್ಬನು ಮತ್ತೊಬ್ಬನಿಂದ ವಿಷಯ ಸಂಗ್ರಹಮಾಡಿರಬೇಕೆಂದು ತೋರುತ್ತದೆ. ಹಾಗಿಲ್ಲವೋ, ಇಬ್ಬರೂ ಒಂದೇ ಮೂಲದಿಂದ ವಸ್ತು ಸಂಗ್ರಹಮಾಡಿ ಕೊಂಡಿರಬಹುದು. ಆದರೆ ಕಥಾಸರಣಿಯಲ್ಲಿಯೂ ಪದಜೋಡಣೆಯಲ್ಲಿಯೂ ತುಂಬ ಸಾಮ್ಯವಿದ್ದರೆ ಎರಡನೆಯ ಅನುಮಾನ ನಿಲ್ಲುವುದಿಲ್ಲ. ಒಂದು ಉದಾಹರಣೆಯನ್ನು ನೋಡಿ.

ರೋಹಿಣೀಖೇಡವೆಂಬ ಪಟ್ಟಣದ ಕುಂಬಳೇಶ್ವರನು ತೋಂಟದಾರ್ಯನಿಗೆ ಊಟಮಾಡಿಸಿದ ಸನ್ನಿವೇಶವು 'ಷಟ್ಸ್ಥಲ ವಲ್ಲಭ'ದಲ್ಲಿ ಬಹು ಸ್ವಾರಸ್ಯವಾಗಿದೆ.

ಗಿರಿಶಂ ಜಂಗಮರೂಪಂ
ಪರಿದೆಯ್ದುವುಮಾವೂರ ಗೌಡನ ಸ್ವಪ್ನದಿ
ಕರಹಸಿದೆ ನೆನಗೆಯನ್ನವ
ತ್ವರಿತದಿ ನೀಡೆಂದು ಪೇಳ್ವನಾರಾತ್ರಿಯೊಳುಂ (iii–೧೯)

ಎಚ್ಚೆತ್ತು ಗೌಡನಾಗಳೆ
ಬೆಚ್ಚುತ್ತಂ ತನ್ನ ಮಡದಿಯಂ ಬಿಡದೆಬ್ಬಿಸಿ
ಇಚ್ಛೈಸಿದೆನೂಟಕ್ಕೆಂ
ದುಚ್ಚರಿಸಿದನೊರ್ವ ಚರಸ್ವಪ್ನದೊಳೆಂದಂ (iii–೨೦)

ಇದೇ ಘಟನೆಯು 'ಸಿದ್ಧೇಶ್ವರ ಪುರಾಣ'ದಲ್ಲಿ ಹೀಗೆ ವರ್ಣಿತವಾಗಿದೆ:

.....................................
ಅನಘನೆನಿಸುವ ಕುಂಬಳೇಶನಾಲಯದಲ್ಲಿ
ದಿನಕರಂ ಪಶ್ಚಿಮಾದ್ರಿಯನೆಯ್ದೆ (ಸಿದ್ಧೇಶ) ಕುಳ್ಳಿರ್ದ
ನನಿತರೊಳಗಾ ಲಿಂಗವಾವೂರೊಳೋರ್ವ ಭಕ್ತನ ಕನಸಿನಲ್ಲಿ ಪೋಗಿ
(iii–೧೫)

ಹಸಿದೆನೇಳೇಳೂಟಮಂ ಮಾಳ್ಪೆ ನೀಡೆನು
ತ್ತೊಸೆದುಸಿರಲೆಚ್ಚತ್ತು ತನ್ನವೊಗ್ಗುಲೊಳಿರ್ಪ
ಶಶಿವದನೆಯೊಡನೆ ಸರ್ವಾಂಗದೊಳ್ ಲೇಪಿಸಿದ ಸಿತಭಸಿತದೆಸಕದಿಂದೆ
ಮಿಸುಪ ತೇಜೋಮಯದಿನೊರ್ವ ಜಂಗಮಮೂರ್ತಿ
ಹಸಿದೆನೆಂದನೆನಲ್ಕೆ.......................................... (iii–೧೬)

ಹೀಗೆ ಹಲವು ಪವಾಡ ಕಥೆಗಳು ಒಂದನ್ನೊಂದು ಸಂಪೂರ್ಣವಾಗಿ ಹೋಲುತ್ತವೆ.

ಆದರೆ ಪುರಾಣದಲ್ಲಿ ತೋಂಟದಾರ್ಯರಿಗಿಂತ ಹಿಂದಿನವರೆಂದು, ಅನಾದಿ ಗಣೇಶ, ಆದಿಗಣನಾಥ, ನಿರ್ವಾಣಯುಗಣವರ, ನಿರಂಜನಗಣೇಶ್ವರ, ಜ್ಞಾನಾನಂದ, ಆತ್ಮಗಣನಾಥ, ಅಧ್ಯಾತ್ಮಗಣನಾಥ, ರುದ್ರದೇವ, ಬಸವಪ್ರಭು, ಆದಿಲಿಂಗೇಶ, ಚನ್ನವೀರೇಶ, ಗೋಸಲಯತೀಶ, ಶಂಕರೇಶ, ದಿವ್ಯಲಿಂಗೇಶ, ಚೆನ್ನಬಸವ–ಇಷ್ಟು ಜನ ಚರಮೂರ್ತಿಗಳ ಹೆಸರುಗಳಿವೆ. 'ಷಟ್ಸ್ಥಲವಲ್ಲಭ'ದಲ್ಲಿ ಗೋಸಲದೇವರು, ಚನ್ನಬಸವೇಶ್ವರ – ಈ ಎರಡೇ ಹೆಸರುಗಳಿವೆ. ಪುರಾಣಕರ್ತನು 'ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ' ಎಂಬ ಅಂಕಿತವುಳ್ಳ ವಚನವೊಂದನ್ನು ಆಧರಿಸಿ ಈ ಪಟ್ಟಿಯನ್ನು ಸೇರಿಸಿರುವನು. ಚೆನ್ನವೀರೇಶ್ವರನಿಗೆ ಬಹುಶಃ ಜನವಾಣಿಯೇ ಆಧಾರ. ಆದುದರಿಂದ ಇವನ ಕಾಲದಲ್ಲಿ ಈ ವಚನವು ಹೆಚ್ಚು ಪ್ರಚಾರಕ್ಕೆ ಬಂದಿರಲಿಲ್ಲವೋ ಎಂದು ಅನುಮಾನಿಸುವುದಕ್ಕೂ ಎಡೆಯುಂಟು.

ಶ್ರೀ ಸಿದ್ಧೇಶ್ವರನ ಶಿಷ್ಯರಲ್ಲೊಬ್ಬನಾದ ಹಿರಣ್ಯದೇವರು ಅವರ ಅಂಕಿತವನ್ನಿಟ್ಟು 'ಐನೂರು ಪದ'ಗಳನ್ನು ರಚಿಸಿದನೆಂದು 'ಷಟ್ಸ್ಥಲ ವಲ್ಲಭ'ದಲ್ಲಿ ಹೇಳಿದೆ (vi-೨೧ ೨೨). ಈಗ 'ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ' ಎಂಬ ಮುದ್ರೆಯಲ್ಲಿ ಅಚ್ಚಾಗಿರುವ ವಚನಗಳು ಶ್ರೀ ಸಿದ್ಧೇಶ್ವರನು ಅಪ್ಪಣೆ ಕೊಡಿಸಿದಂತೆ ಹಿರಣ್ಯದೇವನಿಂದ ಲೇಖಿಸಲ್ಪಟ್ಟಿರಬಹುದು. ಈ ಬಗೆಗೆ ಇನ್ನೂ ಸಂಶೋಧನೆ ಆಗಬೇಕಾಗಿದೆ. ಸಿದ್ಧೇಶ್ವರನು ತನ್ನನ್ನು ತಾನೇ ಸಂಬೋಧಿಕೊಳ್ಳುವುದು ಅನುಚಿತ ಮತ್ತು ಅಸಂಭವ. ಇದು ಹೇಗೇ ಇರಲಿ, ಗುರು ಪರಂಪರೆಯನ್ನು ವಿಸ್ತಾರವಾಗಿ ಹೇಳಿರುವ ವಿರಕ್ತ ತೋಂಟದಾರ್ಯನು (ಕ್ರಿ. ಶ. ೧೬೧೬) ಗುರುಗಳಿಬ್ಬರ ಹೆಸರನ್ನು ಹೇಳಿರುವ ಚೆನ್ನವೀರೇಶ್ವರನಿಗಿಂತ ಈಚೆಯವನಿರಬೇಕೆಂಬ ಅನುಮಾನವುಂಟಾಗುತ್ತದೆ.

ಚೆನ್ನವೀರನು 'ಸಿದ್ಧಮಲ್ಲೇಶ' ಎಂಬ ಗುರುವನ್ನು ಕಾವ್ಯದ ಆರಂಭದಲ್ಲಿಯೇ ಸ್ಮರಿಸಿದ್ದಾನೆ (I–೫). ಸಿದ್ಧೇಶ್ವರನ ಶಿಷ್ಯರಲ್ಲಿ ಸಿದ್ಧಮಲ್ಲೇಶನೆಂಬುವನೊಬ್ಬನಿದ್ದಾನೆ. ಈತನ ಹೆಸರು ಷಟ್ಸ್ಥಲವಲ್ಲಭ, ಚೆನ್ನಬಸವಪುರಾಣ, ಸಿದ್ಧೇಶ್ವರಪುರಾಣ— ಮೂರು ಗ್ರಂಥಗಳಲ್ಲಿಯೂ ಇದೆ. ಈತನೇ ಚೆನ್ನವೀರ ಜಂಗಮದೇವನ ಗುರುವಾಗಿದ್ದಿರಬಹುದು. ಇದು ನಿಜವೇ ಆಗಿದ್ದರೆ ಈತನು ತುಮಕೂರು ಪ್ರಾಂತದವನೇ ಎಂದು ನಿರ್ಧರಿಸಬಹುದು. ಇದಕ್ಕೆ ಪೋಷಕವಾಗಿ ಚೇರಮ ಕಾವ್ಯವನ್ನು ಬರೆದಿರುವ ಚೇರಮಾಂಕನು–

ಕಂಗಳೀಕ್ಷ್ಗಿಯ ಕಾಣ್ಬತನಮಂ ತಮಂ ಕವಿದು
ಸುಂಗಿಕೊಂಡಿರ್ಪಂತೆಯಾತ್ಮಪ್ರಭಾವಮಂ
ಪೊಂಗಲೀಯದೆ ಮುಸುಂಕಿರ್ದ ವಿದ್ಯಾಂಧತೆಯ ನೆಬ್ಬಟ್ಟ ತನ್ನ ಕರುಣಾ
ಪಾಂಗರುಚಿಯಂ ಕರ್ಣದೊಳಗೆ ಶಿವಮಂತ್ರಮಂ
ಸಂಗೊಳಿಸುತೆನ್ನ ಮಸ್ತಕದ ಕಲೆಯಂ ಕರದ
ಲಿಂಗದೊಳ್ ಕಾಣಿಸಿ ಚಿದಂಗನೆನಿಸಿದ ಚೆನ್ನವೀರೇಶನಡಿಗೆಱಗುವೆಂ (I–೧೦)

ಎಂದು ಒಬ್ಬ ದೀಕ್ಷಾಗುರುವನ್ನು ನೆನೆದು ಆತನಿಗೆ ವಂದಿಸಿದ್ದಾನೆ. 'ಷಟ್ಸ್ಥಲ ವಲ್ಲಭ' ಆಶ್ವಾಸಾಂತ್ಯದ ಗದ್ಯದಲ್ಲಿ "ಚೆನ್ನವೀರೇಶ್ವರಾಭಿಧೇಯಂ ವರಜಂಗಮದೇವಂ" ಎಂಬ ಪದಗಳಿವೆ. ಚೆನ್ನವೀರೇಶ್ವರ ಅಥವಾ ಚೆನ್ನವೀರೇಶ ಎಂಬುದು ಕವಿಯ ನಿಜನಾಮ; ವರಜಂಗಮದೇವ ಎಂಬುದು ವಿಶೇಷಣ. ಚೇರಮನ ಗುರುವು ಈ ಗ್ರಂಥದ ಕರ್ತೃ ಇರಬೇಕೆಂದು ತೋರುತ್ತದೆ.

ಚೇರಮನು ಕ್ರಿ. ಶ. ೧೫೩೭ರಲ್ಲಿ ತನ್ನ ಕಾವ್ಯವನ್ನು ರಚಿಸಿರುವನು. ಈತನು ತುಮಕೂರು ಪ್ರಾಂತವೇ ಆಗಿದ್ದಾನೆ. ಇವನಗುರು ಚನ್ನವೀರೇಶನು ಕ್ರಿ.ಶ. ೧೫೦೦ರಲ್ಲಿ ಜೀವಿಸಿದ್ದನೆಂದು ಸದ್ಯಕ್ಕೆ ತೀರ್ಮಾನಿಸಬಹುದು ತೋಂಟದಾರ್ಯ ಚಾರಿತ್ರವನ್ನು ಬರೆದವರಲ್ಲಿ ಈತನೇ ಮೊದಲಿಗನೆಂದು ತೋರುತ್ತದೆ.

**ಟಿಪ್ಪಣಿ**

1. ವಚನಕಾರ ಸಿದ್ಧಲಿಂಗಯತಿ. ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು. (೧೯೭೩) ಪು. ೧೭–೧೯; 2. ಭಾವರತ್ನಾಭರಣ ಸ್ತೋತ್ರ, ವೀರಶೈವ ಅಧ್ಯಯನ ಸಂಸ್ಥೆ, ಗದಗ (೧೯೭೯), ಪ್ರಸ್ತಾವನೆ, ಪು. ii; 3. ಶ್ರೀಕಂಠತೀರ್ಥ (ತೀ. ನಂ. ಶ್ರೀ. ಸ್ಮಾರಕ ಗ್ರಂಥ), ಪು. ೩೦೮; 4. ಭಾವಚಿಂತಾರತ್ನ ಸಂಗ್ರಹ, (೧೯೫೪), ಪೀಠಿಕೆ, ಪು. x

## ೨. ಕಥಾಸಾರ

ಶ್ರೀ ವಿರೂಪಾಕ್ಷನ ಸ್ತೋತ್ರದಿಂದ ಕಾವ್ಯಾರಂಭಮಾಡಿದ ಕವಿಯು ಮುಂದೆ ಸಿದ್ಧಲಿಂಗ ಘನಮೂರ್ತಿಯನ್ನೂ ಸಿದ್ಧಮಲ್ಲೇಶನೆಂಬ ಗುರುವರನನ್ನೂ ನುತಿಸಿರುವನು. ಅನಂತರ ಬಸವಾದಿ ಪ್ರಮಥರನ್ನು ಹೊಗಳಿ, ಪೂರ್ವಕವಿಗಳನ್ನು ನೆನೆದಿದ್ದಾನೆ. ತನ್ನ ಕಾವ್ಯದ ಹೆಚ್ಚುಗಾರಿಕೆಯನ್ನು ಹೇಳಿಕೊಂಡು ಕುಕವಿನಿಂದೆ ಮಾಡಿ 'ಷಟ್‌ಸ್ಥಲ ವಲ್ಲಭ'ದ ಕಥೆಯನ್ನು ಹೇಳತೊಡಗುತ್ತಾನೆ.

ಧರಾರಮಣಿಯ ನಾಭಿಕಮಲದ ಕರ್ಣಿಕೆಯೋ ಎಂಬಂತೆ ಪರಿಶೋಭಿಸುತ್ತಿರುವ ಮೇರುಪರ್ವತದ ಮೂಡಣ ದಿಕ್ಕಿನಲ್ಲಿ ಆದೇ ಭೂನಾರಿಯ ನೀಲಮೇಖಲೆಯಂತೆ ಕಂಗೊಳಿಸುತ್ತಿದೆ ರತ್ನಪೂರವಾದ ಮಹಾಸಾಗರ. ಈ ಸಾಗರದಿಂದ ಪಶ್ಚಿಮ ಸಾಗರದ ವರೆಗೆ ಹಬ್ಬಿರುವ ಹಿಮಾಲಯ ಪರ್ವತ. ಅದಕ್ಕೆ ದಕ್ಷಿಣದ ಒಂದು ಅರಣ್ಯಮಧ್ಯದಲ್ಲಿ ಒಂದು ಶಿವಲಿಂಗವಿದ್ದಿತು. ಅದಕ್ಕೆ ಗುಡಿಗೋಪುರಗಳಿರಲಿಲ್ಲ. ಅದು ಶಿವಲಿಂಗವೆಂಬುದು ಕೂಡ ಯಾರಿಗೂ ಗೊತ್ತಿರಲಿಲ್ಲ. ಮೇಘಗಳೇ ದೇವಗಂಗೆಯನ್ನು ತಂದು ಅದಕ್ಕೆ ಅಭಿಷೇಕ ಮಾಡುವುವು. ಇಬ್ಬನಿಯಿಂದ ತುಂಬಿದ ಹೂವುಗಳನ್ನು ಗಿಡಮರಗಳು ಸುರಿಸಿದುವು. ಶೈತ್ಯಸೌರಭ್ಯಮಾಂದ್ಯಪೂರ್ಣವಾದ ಗಾಳಿಯು ವ್ಯಜನದ ಕೆಲಸವನ್ನು ಮಾಡುತ್ತಿದ್ದಿತು. ಬ್ರಹ್ಮಾಂಡಗಳನ್ನು ಬೆಳಗುವ ಸೂರ್ಯಚಂದ್ರರುಗಳು

ನಂದಾದೀಪಗಳು. ಹೀಗೆ ನಾನಾತೆರನಾದ ಪೂಜೆಗಳನ್ನು ಒಪ್ಪಿಸಿಕೊಳ್ಳುತ್ತ ಆ ಶಿವಲಿಂಗವಿದ್ದಿತು.

ಒಮ್ಮೆ ಪಥಿಕರಾದ ಅಡಕೆಯ ವ್ಯಾಪಾರಿಗಳು ಆ ಅರಣ್ಯಕ್ಕೆ ಬಂದು ಅಲ್ಲಿ ಬೀಡುಬಿಟ್ಟಿದ್ದರು. ತಮ್ಮ ಹೇರುಗಳನ್ನು ಈ ಶಿವಲಿಂಗದ ಬಳಿಯಲ್ಲಿಯೆ ಇಳುಹಿ ಅಡಿಗೆ ಮಾಡಲೆಂದು ಎರಡು ಒಲೆ ಗುಂಡುಗಳನ್ನು ತಂದಿಟ್ಟು ಈ ಶಿವಲಿಂಗವನ್ನೇ ಹಿಂಬದಿಯ ಗುಂಡನ್ನಾಗಿ ಮಾಡಿಕೊಂಡು ಅಡಿಗೆ ಮಾಡತೊಡಗಿದರು. ಒಲೆಯಲ್ಲಿ ಒಟ್ಟಿದ ಸೌದೆಗಳು ಉರಿಯುತ್ತಿದ್ದಾಗ ಲಿಂಗವ ನೆತ್ತಿಯಿಂದ ಅಮೃತ ಒಸರುತ್ತಿದ್ದಿತು. ಅದನ್ನು ನೋಡಿದ ಅಡಿಗೆಯವನು ಎಲ್ಲಾ ಹರವರನ್ನೂ ಕರೆದು ತೋರಿಸಿದನು. ಎಲ್ಲರೂ ಆಶ್ಚರ್ಯಗೊಂಡರು. ಅದು ಶಿಲೆಯಲ್ಲ, ಶಿವಲಿಂಗ ಎಂದು ತಿಳಿದರು. ಅದಕ್ಕೆ ಅಮೃತೇಶ್ವರನೆಂದು ಕರೆದರು.

ಹರದರ ಊಟ ಆಯಿತು. ತಾಂಬೂಲ ಹಾಕಿಕೊಳ್ಳಲೆಂದು ತಮ್ಮ ಹಡಪಗಳಲ್ಲಿ ಕೈಯಿಟ್ಟರು. ಅವುಗಳಲ್ಲಿದ್ದ ಅಡಕೆಗಳು ಅಳಿಲೆಯಕಾಯಿಗಳಾದ್ದುವು. ಅಡಕೆಯ ಹೇರುಗಳನ್ನು ಬಿಚ್ಚಿ ನೋಡಿದರು. ಅವುಗಳಲ್ಲಿದ್ದ ಅಡಕೆಗಳೂ ಅಳಿಲೆಯಕಾಯಿ ಗಳಾಗಿದ್ದವು. ಬೆಕ್ಕಸಬೆರಗಾದ ಹರವರು, ತಾವು ಮಾಡಿದ ಅಪರಾಧವನ್ನು ಅರಿತು, ಈ ಅಳಿಲೆಯ ಕಾಯಿಗಳೆಲ್ಲಾ ಮತ್ತೆ ಅಡಕೆಗಳಾದರೆ ಅವನ್ನು ಮಾರಿ ಗಳಿಸಿದ ಲಾಭ ದಿಂದ ನಿನಗೆ ಗುಡಿಗೋಪುರ ಮಾಡಿಸುತ್ತೇವೆ, ನಿನ್ನ ತೇರನ್ನೆಳೆಸುತ್ತೇವೆ, ನಿನ್ನ ಪರ್ಷೆ ಯನ್ನು ನಡೆಸುತ್ತೇವೆ ಎಂದು ಶಿವಲಿಂಗಕ್ಕೆ ಹೇಳಿಕೊಂಡರು.

ಹೇರುಗಳಲ್ಲಿದ್ದ ಅಡಕೆಗಳು ಮತ್ತೆ ಮೊದಲಿನಂತಾದುವು. ಹರದರು ಹರುಷ ಪಟ್ಟು ಅಲ್ಲಿಂದ ಹೊರಟು, ಅಡಕೆಯ ಹೇರುಗಳನ್ನು ಮಾರಿದರು. ಅವರಿಗೆ ಒಂದಕ್ಕೆ ಹದಿನಾರು ಪಟ್ಟು ಲಾಭವಾಗಿತ್ತು. ಅನಂತರ ಈ ಪರವರೇ ಅಮೃತೇಶ್ವರನಿಗೆ ಗುಡಿ ಗೋಪುರ ಮಾಡಿಸಿದರು. ಅಲ್ಲಿಯೇ ಕೆರೆ ಕಟ್ಟಿಸಿ ತಮ್ಮೆಲ್ಲರ ಹೆಸರಿನಿಂದ ಹರದರಹಳ್ಳಿ ಎಂಬ ಗ್ರಾಮವನ್ನೂ ನಿರ್ಮಿಸಿದರು. ಪರಿಷೆಯನ್ನು ನಡೆಯಿಸಿದರು. ಅಮೃತೇಶ್ವರನಿಗೆ 'ಅಳಿಲೇಶ್ವರ' ಎಂದು ಕರೆದರು. ದಿವ್ಯೇಶ್ವರನೆಂಬ ಮೊದಲ ಹೆಸರೂ ಸಹಜವಾಗಿ ಅದಕ್ಕೆ ಇತ್ತು. ಆಮೇಲೆ ಆ ಹರದರ ಹಳ್ಳಿಯಲ್ಲೇ ನೆಲಸಿದರು. ಸಾಲುಮೂಲೆ ಸೆಟ್ಟಿ. ಪಟ್ಟಣಸ್ವಾಮಿ—ಮೊದಲಾದವರೆಲ್ಲ ಅಲ್ಲಿ ಪೇಟೆಯನ್ನು ಕಟ್ಟಿಕೊಂಡು ವ್ಯಾಪಾರಮಾಡುತ್ತ ಉಳಿದರು.

ಆ ಕನ್ನಡ ದೇಶವು ಹೇಗಿತ್ತೆಂದರೆ—ಅದು ಕಲ್ಪವೃಕ್ಷವಿರುವ ದೇಶ, ಮನದ ಇಚ್ಛೆಯನ್ನು ಪೂರೈಸುವ ದೇಶ, ಭಕ್ತಿಯುಕ್ತರ ದೇಶವೆನಿಸಿತ್ತು. ಲಿಂಗವಂತರೂ, ನಿಃಪ್ರಪಂಚಿಗಳೂ, ಪುಣ್ಯವಂತರೂ, ಮುನಿಜನರೂ ಮೊದಲಾದವರಿಂದ ತುಂಬಿ ಘನ ಸೌಖ್ಯದಿಂದ ಕೂಡಿದ ದೇಶವಾಗಿತ್ತು. ಅಗಣಿತವಾದ ಖೇಡ, ಖರ್ವಡ, ಮಡಂಬ, ಪುರ, ನಗರಗಳ ಸಮೂಹದಿಂದ, ಕೆರೆಕಾಲುವೆಗಳ ಸಮೂಹದಿಂದ ಕೂಡಿತ್ತು. ಅಲ್ಲಿನ ನದಿ

ಗಳೆಲ್ಲ ಸುರನದಿಗಳು; ಗುಡ್ಡಗಳೆಲ್ಲ ಕಾಂಚನಪರ್ವತಗಳು; ವನವೆಲ್ಲ ಔಷಧಿಗಳಾಗಿದ್ದವು. ಹೀಗೆ ರಾಜಿಸುತ್ತಿರ್ದ ದೇಶಮಧ್ಯದಲ್ಲಿ ಹರನ ವಿಲಾಸವೋ ಎಂಬಂತೆ ಹರದನಹಳ್ಳಿಯೆಂಬ ಪಟ್ಟಣ ಶೋಭಿಸುತ್ತಿತ್ತು. ಅದು ಶ್ರೀಗಿರಿಯಿಂದ ನಾಲ್ವಡಿ, ಕಕುದ್ಗಿರಿ (ಶಿವಗಂಗೆ)ಯಿಂದ ಐವಡಿ, ಸಿತಂಬರ (ಚಿದಂಬರ), ಗಯೆ, ಕಾಶಿ, ದಿವಾಕರ ಶೈಲಕಿಂತಲೂ ಅಗ್ಗಳವೆನಿಸಿ, ಸೊನ್ನಲಿಗೆ ಮಂಗಳವಾಡಗಳಿಗೆ "ಸಮಾನಂಗಡ" ! ಎನ್ನುವ ಹಾಗಿತ್ತು. ಭಕ್ತರು, ಗುಣಾನ್ವಿತರು, ಲಿಂಗನಿಷ್ಠರುಗಳಿಂದ ಕೂಡಿದ ಆ ಪಟ್ಟಣವು ಅನುಭವ ಮಂಟಪಗಳ ಸಮೂಹದಿಂದ ಜ್ಞಾನಿಗಳ ಮನೆಗಳಿಂದ ತುಂಬಿತ್ತು. ಆ ಪುರದ ಬಹಿರುದ್ಯಾನವು ಅನೇಕ ವೃಕ್ಷ ಸಮೂಹಗಳಿಂದ ಮನೋಹರವಾಗಿತ್ತು. ನೀರಿನಿಂದ ತುಂಬಿದ ಆಳವಾದ ಅಗಳು ಆ ಪಟ್ಟಣದ ಕೋಟೆಯ ಸುತ್ತಲೂ ಶೋಭಿಸುತ್ತಿತ್ತು. ಹೀಗೆ ಕೋಟೆಕೊತ್ತಳಗಳಿಂದ ಶೋಭಾಯಮಾನವಾಗಿದ್ದ ಆ ಪಟ್ಟಣದಲ್ಲಿ ವಿಸ್ತಾರವಾದ ಚಂದ್ರವೀಥಿಯಿತ್ತು. ಅದರಲ್ಲಿ ಅನೇಕ ಬಗೆಯ ಹರದರ ಅಂಗಡಿಗಳ ಸಾಲು ಶೋಭಿಸುತ್ತಿತ್ತು. ಇಂಥ ಪಟ್ಟಣದಲ್ಲಿ ಶ್ರುತಿಘೋಷ, ಮಂತ್ರಘೋಷ, ಯತಿಗಳ ಜಯಘೋಷಗಳಿಂದ ತುಂಬಿದ ರಾಜವೀಥಿಯಿತ್ತು. ಪುರದ ಮಧ್ಯದಲ್ಲಿ ಅಖಿಲೇಶ್ವರನ ಅಥವಾ ದಿವ್ಯೇಶ್ವರನ ದೇವಾಲಯವಿದ್ದು ನಾನಾವಿಧವಾದ ಭಕ್ತಸಂತತಿ ಆ ಶಿವಲಿಂಗವನ್ನು ಓಲೈಸಲು ಬರುತ್ತಿದ್ದರು. ಆ ಅಖಿಲೇಶ್ವರನ ಸಭಾಸ್ಥಾನವು ತಮ್ಮ ತಮ್ಮ ಕರಸ್ಥಳದ ಲಿಂಗಗಳನ್ನು ಜಾನಿಸುತ್ತಿದ್ದ ಯೋಗೀಶ್ವರರಿಂದಲೂ ಅನೇಕ ದೇಶವಿದೇಶಗಳ ರಾಜಪುತ್ರ, ಮಂತ್ರಿ, ದಂಡನಾಥರಿಂದಲೂ, ಗದ್ಯ ಪದ್ಯ ಕಾವ್ಯ ಕಲಾ ಪರಿಣತರಾದ ಕವಿಗಳಿಂದಲೂ. ಕರಮುಗಿದು ಸಾಲ್ವಿಡಿದು ನಿಂತಿದ್ದ ವಾರಾಂಗನೆಯರಿಂದಲೂ, ಚಾಮರಗ್ರಾಹಿಣಿಯರಾದ ಕನ್ನಿಕೆಯರಿಂದಲೂ, ಮುತ್ತಿನ ಸೀಗುರಿಯನ್ನು ಹಿಡಿದುನಿಂತಿದ್ದ ವಾಮಲೋಚನೆಯರ ಸಮೂಹದಿಂದಲೂ ಕೂಡಿತ್ತು (ಪ್ರಥಮಾಶ್ವಾಸ)

ಹರದರಹಳ್ಳಿಯ ಮಧ್ಯದಲ್ಲಿ ನೆಲೆಸಿದ ದಿವ್ಯಲಿಂಗೇಶ್ವನು ತನ್ನಲ್ಲಿತಾನು ಚರಲಿಂಗೌಘವನ್ನು ಭಕ್ತಿಯಿಂದ ಪೂಜಿಸದಿದ್ದರೆ ಧರೆಯಲ್ಲಿ ಜೀವರುಗಳಿಗೆ ಭಕ್ತಿಯುಂಟಾಗದೆಂದು ನೆನೆದು ಹರದನಹಳ್ಳಿಯ ಬಣಂಜುಗಳ ಕನಸಿನಲ್ಲಿ ಕಾಣಿಸಿಕೊಂಡು ಮಠಕಟ್ಟಿಸಿ ಗೋಸಲೇಶ್ವರಮೂರ್ತಿಗೆ ಬಿನ್ನಹಮಾಡಿರೆಂದು ಸೂಚಿಸಿದನು. ಅದರಂತೆ ಹರದರು ಒಂದು ಮಠ ಕಟ್ಟಿಸಿ, ಅಲ್ಲಿ ಸ್ಥಾನಾಚಾರ್ಯರನ್ನಾಗಿ ಗೋಸಲೇಶ್ವರ ಜಂಗಮ ಮೂರ್ತಿಯನ್ನು ಸಿಂಹಾಸನದಮೇಲೆ ಕುಳ್ಳಿರಿಸಿದರು. ಈ ಗೋಸಲೇಶ್ವರನು ಆ ಸಿಂಹಪೀಠದ ಪ್ರಭುವಾಗಿ ಲಿಂಗಾಂಗಸಂಗದ ಆಚರಣೆಯನ್ನು ತನ್ನ ಶಿಷ್ಯರಿಗೆ ಬೋಧಿಸುತ್ತ ಇದ್ದನು. ಅವನ ಆಶ್ರಯದಲ್ಲಿ ಅನೇಕ ಚರಸಂತತಿಯಿತ್ತು. ಈತನ ಶಿಷ್ಯ ಚೆನ್ನಬಸವೇಶ್ವರನು ಮಹಾ ಮಹಿಮಾಶಾಲಿಯೆನಿಸಿ ಷಟ್‌ಸ್ಥಲ ಕಾರ್ಯಕಾರಣನಾಗಿ, ಲಿಂಗಾಂಗಸಂಗ ಸುಭಗನಾಗಿ ಧರೆಯಮೇಲಿನ ದೋಷವನ್ನು ಪರಿಹರಿಸುವವನಾಗಿ ಶೋಭಿಸುತ್ತಿದ್ದನು. ಈತನು ಅರೂಪು-ಪರತತ್ತ್ವವನ್ನು ರೂಪುಗೊಳಿಸಿ ತನ್ನ

ಕರಕಮಲದಲ್ಲಿ ಚಿತ್ಕಲೆಯ ರೂಪಿನ ಶಿಶುವನ್ನು ಹಿಂದೆ ಭೂಗರ್ಭದಿಂದ ಶಿಶುವನ್ನು ಪಡೆದು ಶಿಷ್ಯನನ್ನಾಗಿ ಮಾಡಿಕೊಂಡ ರೇವಣನಂತೆ ತಾನೂ ಪಡೆಯಬೇಕೆಂದು ಚಿಂತಿಸುತ್ತ ಧ್ಯಾನಮುಖನಾಗಿ ಕುಳಿತನು. ಈ ನಿರಹಂಕಾರ ಯತೀಶ್ವರನ ಧ್ಯಾನಕ್ಕೊಲಿದು ಅಮ್ಮವ್ವೆಗೆ ಪರಶಿವನು ಶಿಶುವಾಗಿ ಒಲಿದುಬಂದಂತೆ ಶಿಶುರೂಪಧರಿಸಿ ಶಿವನು ಉದಯಾದ್ರಿಯಿಂದ ಸೂರ್ಯನು ಮೂಡುವಂತೆ ಕಾಣಿಸಿಕೊಂಡನು. ಅವನು ಕೊರಳಲಿಂಗ, ನೊಸಲವಿಭೂತಿ, ರುದ್ರಾಕ್ಷಮಾಲಾಂಕೃತನಾಗಿದ್ದನು. ಹೀಗೆ ಕಾಣಿಸಿಕೊಂಡ ಶಿಶುವು ಗುರುಚರಣಕ್ಕೆ ಶಿರಬಾಗಿ ತನ್ನನ್ನು ರಕ್ಷಿಸಬೇಕೆಂದು ಕರಕಮಲಗಳನ್ನು ಮುಗಿದನು. ಆಗ ಚೆನ್ನಬಸವೇಶ್ವರನು ಕೃಪೆದೋರಿ ಶಿವಭಕ್ತ ವೇಷಂಗೊಂಡು ನಿಂತಿದ್ದ ಬಾಲಕನಿಗೆ ಜಂಗಮವೇಷವನ್ನು ವಿಧ್ಯುಕ್ತವಾಗಿ ಕೊಟ್ಟು, ಸಿದ್ಧಲಿಂಗನೆಂಬ ನಾಮಕರಣಮಾಡಿ ಷಣ್ಮುಖನನ್ನು ಶಶಿಧರನು ಸಲಹುವಂತೆ, ಚೆನ್ನಬಸವೇಶ್ವರನನ್ನು ನಾಗಲಾಂಬಿಕೆ ಸಲಹುವಂತೆ ಸಲಹುತ್ತಿದ್ದನು. ಗುರುವಿನ ಸನ್ನಿಧಿಯಲ್ಲಿ ಸಿದ್ಧಲಿಂಗನು ಒಂಬತ್ತು ವರ್ಷ ಕುಮಾರನಾಗಿ ಬೆಳೆಯುತ್ತಿರುವುದರೊಳಗೆ ವೇದಶಾಸ್ತ್ರಾಗಮ ಪುರಾಣಾದಿಗಳನ್ನು ಕಲಿತನು. ದಿನದಿನಕ್ಕೆ ಮಾಸಮಾಸಕ್ಕೆ ವರುಷವರುಷಕ್ಕೆ ಸಿದ್ಧಲಿಂಗನು ಬೆಳೆಯುತ್ತಿದ್ದಂತೆ ಮಹಾಜ್ಞಾನಿಯೂ ಅನುಭಾವಿಯೂ ಆಗುತ್ತಿದ್ದನು. ಅವನು ಗುರು ನಿಂದ ನೆಳಲನ್ನ ಮೆಟ್ಟುತ್ತಿರಲಿಲ್ಲ. ಗುರುಪಂಕ್ತಿಯಲ್ಲಿರುತ್ತಿರಲಿಲ್ಲ. ಅವರು ಹೋದಮಾರ್ಗದಲ್ಲಿ ಅಡಿಯಿಡುತ್ತಿರಲಿಲ್ಲ, ಹೀಗೆ ಗುರುಭಕ್ತಿಯ ಅತಿಶಯದಲ್ಲಿ ಬೆಳೆಯುತ್ತ ಗುರುಕೃಪಾವಿಶೇಷವನ್ನು ಪಡೆದನು.

ಹೀಗಿರುತ್ತಲೊಂದು ದಿವಸ ಗುರುಪಾದಪೂಜೆಗೆ ಹೂವನ್ನು ತರಬೇಕೆಂದು ಕೋಳಿ ಕೂಗದ ಮುನ್ನ ಎದ್ದು ಹೂದೋಟಕ್ಕೆ ಹೋಗಿ ಅಲ್ಲಿನ ಅನೇಕ ವಿಧವಾದ ಹೂವುಗಳನ್ನೂ ಬಿಲ್ವ, ದೂರ್ವಾಂಕುರ, ಕೇತಕಿಗಳನ್ನೂ ತಿರಿದು ತಂದು ಅವನ್ನೆಲ್ಲ ಶೋಧಿಸಿ ಶುದ್ಧಗೊಳಿಸಿ ಅನೇಕ ವಿಧವಾದ ದಂಡೆಗಳನ್ನು ಹೆಣೆದನು. ಈ ಎಲ್ಲ ಪುಷ್ಪಬಂಧಗಳಿಂದ ಗುರುವನ್ನು ಅಲಂಕರಿಸಿ ಪೂಜಿಸುವೆನೆಂಬ ಉತ್ಕಟಬಯಕೆಯಿಂದ ಅಷ್ಟವಿಧಾರ್ಚನೆ ಮಾಡುತ್ತ ಗುರುಪೂಜಾಕಾರ್ಯದಲ್ಲಿ ನಿರತನಾದನು.

ಹೀಗೆ ಅನೇಕ ಕಾಲ ಗುರುಭಕ್ತಿಯಲ್ಲಿ ನಿರತನಾದ ಸಿದ್ಧಲಿಂಗನನ್ನು ಚೆನ್ನಬಸವೇಶ್ವರನು ಕರುಣದಿಂದ ನೋಡುತ್ತ ಷಟ್‌ಸ್ಥಲ ಜ್ಞಾನವು ಇವನಿಂದ ಲೋಕದಲ್ಲಿ ಉದ್ಧಾರವಾಗಲು ಇವನನ್ನು ಕಳುಹಿದಲ್ಲದೆ ಆಗದೆಂದು ಚಿತ್ತದಲ್ಲಿ ಬಗೆದು, 'ಶಾಂತನೇ, ಗುಣಾನ್ವಿತನೇ, ಗುರುಭಕ್ತ ನಿಧಾನನೇ ಬಾ' ಎಂದು ಉಕ್ಕುವಾನಂದಾಶ್ರುಗಳಿಂದ ಕೂಡಿದವನಾಗಿ ಹತ್ತಿರಕ್ಕೆ ಕರೆದನು. ಆಗ ಸಿದ್ಧಲಿಂಗನು ಪರಮೇಶ್ವರನ ಹತ್ತಿರಕ್ಕೆ ಷಣ್ಮುಖನು ಬರುವಂತೆ, ರೇಣುಕರ ಸಮೀಪಕ್ಕೆ ರುದ್ರಮುನಿಯು ಬರುವಂತೆ ಬಂದು ಕೈಮುಗಿದು ನಿಂತನು. ಆಗ ಗುರುವು 'ಮಗನೇ, ಭೂಮಿಯಲ್ಲಿ ಈಶ್ವರ ಭಕ್ತಿಯು ನಾಶವಾಗಿದೆ. ಪರಸಮಯಿಗಳು ಸೊಕ್ಕಿದ್ದಾರೆ. ಆದ ಕಾರಣ ನೀನು ದೇಶಾಂತ್ರ

ಸಂಚಾರ ಕೈಕೊಂಡು ಶಿವಸಮಯವನ್ನುದ್ಧರಿಸಬೇಕು. ನೀನಲ್ಲದೆ ಅದನ್ನು ಉದ್ಧರಿಸುವವರನ್ನು ಕಾಣೆನು ಎನ್ನಲು, ಸಿದ್ಧಲಿಂಗೇಶ್ವರನು ಷಟ್‌ಸ್ಥಲವನ್ನುದ್ಧರಿಸಲು ಶಿವನಿಂದ ಕಳುಹಿಸಲ್ಪಟ್ಟ ರೇಣುಕ ಗಣೇಶ್ವರನಂತೆ, ಬಸವಾದಿ ಪ್ರಮಥರಿಗೆ ಬೋಧಿಸಲೆಂದು ಹರನು ಕಳುಹಿಸಲ್ಪಟ್ಟ ಅಲ್ಲಮಪ್ರಭುವಿನಂತೆ, ಅನೇಕ ಜಂಗಮರೊಡನೆ, ಶಿವಸಹೋದರರೊಡನೆ ಭೂಮಿಯಲ್ಲಿ ಷಟ್‌ಸ್ಥಲ ಧರ್ಮೋದ್ಧಾರ ಕಾರ್ಯಕ್ಕೆ ಪ್ರವಾಸ ಕೈಗೊಂಡನು. ರಜತಕಂಥೆ, ಕಬ್ಬಿಣಕಂಥೆ, ತಾಮ್ರಕಂಥೆ, ಮುತ್ತಿನ ಕಂಥೆಯೇ ಮೊದಲಾದುವನ್ನು ಧರಿಸಿದ ಜಂಗಮ ಸಮೂಹ ಅವನನ್ನು ಹಿಂಬಾಲಿಸಿತು. ಅನೇಕ ವಾದ್ಯಧ್ವನಿಗಳಿಂದ ಸಂಭ್ರಮಗೊಂಡು ಬಲಪ್ರದಕ್ಷಿಣವಾಗಿ ದಕ್ಷಿಣ ಸಮುದ್ರದಿಂದ ಪಡುವಣ, ಉತ್ತರ, ಪೂರ್ವಾದಿ ಸಮುದ್ರತೀರಗಳಲ್ಲಿರುವ ನಾನಾ ದೇಶಗಳನ್ನು ಹೊಕ್ಕು ದೇಶಸಂಚಾರ ಕೈಕೊಂಡ ಸಿದ್ಧಲಿಂಗೇಶ್ವರರಿಗೆ ಭಕ್ತರು ತಮ್ಮ ತಮ್ಮ ಭಕ್ತಿಯನ್ನು ಸಮರ್ಪಿಸಿದರು. ಅಂಗ, ವರಾಟ, ಹೊಯ್ಸಳ, ತುರುಷ್ಕ, ತೆಲುಂಗ, ಕಳಿಂಗ, ಬರ್ಬರ, ಕೊಂಗ, ಪುಳಿಂದ, ಚೋಳ, ಸೌರಾಷ್ಟ್ರ, ಆವಂತಿ, ಸೂರಸೇನ, ವಂಗ, ಲಲಾಟ, ಬೋಟ, ಮಗಧ, ಜಿನ, ಕುಂತಳ, ಕೊಂಕಣವೇ ಮೊದಲಾದ ದೇಶಗಳನ್ನೆಲ್ಲ ಸಂಚರಿಸಿ ಚರಲಿಂಗಕ್ಕೆ ತೃಪ್ತಿಯನ್ನು ಮಾಡಿದನು. ಕಾಂಭೋಜ, ಪುಂಡ್ರ, ಪಾಂಡ್ಯ ಮಲೆಯಾಳ, ಸಿಂಧು, ಕನೋಜ, ಖರ್ಜರ, ಪಾಂಚಾಲ, ಬಾಹ್ಲೀಕ, ಕಾಶಿ, ತ್ರಿಗರ್ತ, ಗುರ್ಜರ, ಘೋಟಕ, ಕೇರಳ, ಕುರು, ಪಾಂಚಾಳ, ಚೇರ, ನೇಪಾಳಾದಿ ದೇಶಗಳಲ್ಲಿ ರೇವಣರು ಹಿಂದೆ ಈ ಧರೆಯಲ್ಲಿ ಸಂಚರಿಸಿದಂತೆ ಸಂಚರಿಸಿ ಶಿವಾಚಾರವನ್ನು ಸ್ಥಾಪನೆ ಮಾಡಿದನು. ಅಲ್ಲಲ್ಲಿ ತನ್ನ ಶಿಷ್ಯರುಗಳನ್ನು ನಿಯಮಿಸಿದನು. ತಾನು ಚರಪತಿತನವನ್ನು ಬಿಟ್ಟು ಅತಿಥಿ ವೇಷ ಧರಿಸಿ ಸಂಚರಿದನು. ಹೋದಹೋದಲ್ಲೆಲ್ಲಾ ಲಿಂಗ ಮಹತ್ವ, ಚರಮಹತ್ವ, ಭಕ್ತಮಹತ್ವಗಳನ್ನು ಪ್ರಕಟಿಸುತ್ತ ಶಿವಾಚರಣೆಗಳನ್ನು ನಿರೂಪಿಸುತ್ತ, ಪರಸಮಯದವರನ್ನು ಗೆಲ್ಲುತ್ತ, ಶಂಕರಭಕ್ತಿಯನ್ನು ಲೋಕದಲ್ಲಿ ಸುಸ್ಥಿರಗೊಳಿಸತೊಡಗಿದನು. ಹಿಂದೆ ರೇಣುಕನು ಲೋಕದ ಮರ್ತ್ಯರನ್ನು ನೋಡಿ ಮೋಹದಿಂದ ಅವರಿಗೆ ಶರಣಪದಂಗಳನ್ನು ಅರುಹುವ ರೀತಿಯಲ್ಲಿ ಶಿವಾನ್ವಿತ ಸಿದ್ಧಲಿಂಗನು ಭಕ್ತರಿಗೆ ಬೋಧಿಸಿ, ಶಿಕ್ಷಿಸಿ ಮುಕ್ತಿಮಾರ್ಗವನ್ನು ಅರುಹಿದನು. ಅಲ್ಲಲ್ಲಿ ಚರಜಂಗಮರನ್ನು ನಿಯಮಿಸಿ ಅವರಿಗೆ ಷಟ್‌ಸ್ಥಲಾಚರಣೆಯನ್ನು ಪ್ರತಿಷ್ಠಾಪಿಸುತ್ತ ಇರಿ, ಎಂದು ತಿಳಿಸಿ ಉದಾಸೀನ ವೇಷತಾಳುತ್ತ ಮುಂದೆ ಮುಂದೆ ಸಂಚಾರ ಕೈಕೊಳ್ಳುತ್ತಿದ್ದನು.

ಬೆಟ್ಟಗಳಲ್ಲಿ, ಬಂಡೆಗಳ ಸಂಚಯಗಳಲ್ಲಿ, ಗುಹೆಗಳ ಸಮೂಹಗಳಲ್ಲಿ, ಘಟ್ಟಗಳಲ್ಲಿ ನೀಳರೆಗಳ ಬಿಲಗಳ ಮೊತ್ತದಲ್ಲಿ, ಕೊಟ್ಟಗಳಲ್ಲಿ ಸಂಚರಿಸಿ ಸರ್ವಕ್ಕೂ ಮೋಕ್ಷಮಾರ್ಗವನ್ನು ತೋರಿಸುತ್ತ ಆ ಉಮೆಯಾಣ್ಮನ ಶರಣ ಸಿದ್ಧಲಿಂಗೇಶ್ವರನು ಹರುಷದಿಂದ ಇದ್ದನು. (ದ್ವಿತೀಯಾಶ್ವಾಸ)

ಹೀಗೆ ಸಂಚರಿಸುತ್ತ ಆ ಸಿದ್ಧಲಿಂಗಚರಮೂರ್ತಿಯು ಶಿವಯೋಗಲೀಲಾ ವಿಲಾಸದಿಂದ ಆರ್ಯದೇಶವನ್ನು ಹೊಕ್ಕು ಅಲ್ಲಿನ ಶಿವಭಕ್ತರ ಗೇಹಗಳಲ್ಲಿ ಪೂಜೆ ಸ್ವೀಕರಿಸುತ್ತ ಅವರಿಗೆಲ್ಲ ತತ್ತ್ವಮಾರ್ಗವನ್ನು ಬೋಧಿಸುತ್ತ ಕೃತಾರ್ಥರನ್ನಾಗಿ ಮಾಡಿ, ಅಲ್ಲಿಂದ ಮುಂದೆ ಹೊರಟು ಕೆಲವು ನಗರಗಳನ್ನು ಹೊಕ್ಕು ಭಿಕ್ಷಾಟನೆ ಮಾಡಿ ನದೀತೀರಕ್ಕೆ ಹೋಗಿ ಶಿವಪೂಜೆ ಮಾಡಿ ರುಚಿರೂಪ ತೃಪ್ತಿಗಳಿಂದ ಅರ್ಪಿತ ಮುಗಿಸುತ್ತಿದ್ದನು. ಹೀಗೆ ತನ್ನ ಕರಣಂಗಳೆಂಬ ತೀರ್ಥಯಾತ್ರೆಯಲ್ಲಿ ಸಂಚರಿಸುತ್ತಿದ್ದ ಸಿದ್ಧಲಿಂಗನು ಭಿಕ್ಷಾಟನೆಯ ನೆಪದಿಂದ ಭಕ್ತರ ಬಾಗಿಲಲ್ಲಿ ನಿಂದು ಭಿಕ್ಷೆ ಬೇಡುತ್ತಿದ್ದನು. ಒಂದು ಗೋವಿನಹಾಲು ಕರೆಯುವಷ್ಟು ಹೊತ್ತು ಮಾತ್ರ ಕಾಯುತ್ತಿದ್ದನು. ಅಷ್ಟರಲ್ಲಿ ಅವರು ಭಿಕ್ಷೆ ನೀಡದಿದ್ದರೆ ಶಾಂತನಾಗಿಯೇ ಮುಂದಿನ ಮನೆಗೆ ಹೋಗುತ್ತಿದ್ದನು. ಒಮ್ಮೆ ಒಂದು ಊರಿನಲ್ಲಿ ಯಾರೂ ಭಿಕ್ಷೆಯನ್ನೇ ಹಾಕಲಿಲ್ಲ. ಆಗ ಆ ಗ್ರಾಮದಲ್ಲಿದ್ದ ದೇಗುಲವೊಂದರಲ್ಲಿ ವಿಶ್ರಮಿಸಿ ನಿತ್ಯತೃಪ್ತನಾದ ಈಶ್ವರನಿಗೆ ಹರ್ಷವೆಂಬ ಅಮೃತದ ಆರೋಗಣೆಯನ್ನೆ ಮಾಡಿ ತೃಪ್ತನಾಗಿ ಆ ರಾತ್ರಿಯನ್ನು ಅಲ್ಲಿ ಕಳೆದು ಬೆಳಗಾದೊಡನೆ ಮತ್ತೊಂದು ಗ್ರಾಮಕ್ಕೆ ಹೋಗಿ ಅಲ್ಲಿ ಭಿಕ್ಷೆಬೇಡಿದನು 'ಘೋಷಾಯಿ ಭಿಕ್ಷಾನ್ನಹಿ' ಎಂದು ಪ್ರತಿಯೊಂದು ಮನೆಯ ಸ್ತ್ರೀಯರೂ ನುಡಿದರು. ಹೀಗೆ ಭಿಕ್ಷೆಯಿಲ್ಲದೆ ಒಂಬತ್ತು ದಿನಕಳೆದು, 'ರೋಹಿಣಿಖೇಡ'ವೆಂಬ ಪಟ್ಟಣವನ್ನು ಹೊಕ್ಕನು.

ಆ ರೋಹಿಣೀಖಂಡದ ಒಂದು ದೇವಾಲಯವನ್ನು ಪ್ರವೇಶಿಸಿದನು. ಅಷ್ಟರಲ್ಲಿ ಹೊತ್ತು ಮುಳುಗಿತು. ಹಸಿದ ಸಿದ್ಧೇಶ್ವರನ ಇರವನ್ನು ಶಿವನಿಗೆ ಹೇಳುತ್ತೇನೆಂದು ಹೊರಟುಹೋಗುವಂತೆ ಸೂರ್ಯ ಕಾಣದಾದನು. ಎಲ್ಲಲ್ಲೂ ಕತ್ತಲು ಹಬ್ಬಿತು. ಆ ಊರಿನ ಎಲ್ಲ ಜನಗಳೂ ಊಟಮಾಡಿ ಮಲಗಿದರು. ಹಸಿದಿರುವ ಸಿದ್ಧೇಶ್ವರನಿಗೆ ಶಶಿಧರನು ಊಟಕ್ಕಿಕ್ಕುವುದನ್ನು ನೋಡುವೆನೆಂಬಂತೆ ಚಂದ್ರ ಉದಯಗೊಂಡನು. ಸಿದ್ಧೇಶನಾದರೋ ತನ್ನ ಇಷ್ಟಲಿಂಗವನ್ನು ಮನಹರ್ಷದ ಮಜ್ಜನದಿಂದ ತನುಪುಳಕದ ಹೂಗಳಿಂದ, ಪೂಜಿಸಿ, ನಿರ್ಭಯತೆಯ ನೈವೇದ್ಯಮಾಡಿ, ವಿನಯದ ತಾಂಬೂಲವಿತ್ತು ಪೂಜೆ ಮಾಡುತ್ತಲೇ ಇದ್ದನು. ಆ ಗುಡಿಯಲ್ಲಿದ್ದ ಕುಂಬಳೇಶ್ವರನೆಂಬ ಹೆಸರಿನ ಶಿವಲಿಂಗವು ಶಿವಭಕ್ತ ವೇಷಧರಿಸಿ ಬಂದು ಸಿದ್ಧೇಶ್ವರನಿಗೆ ವಂದಿಸಿ ಈಗಲೆ ಇಲ್ಲಿಗೆ ಭಿಕ್ಷೆಯನ್ನು ತರಿಸುತ್ತೇನೆಂದು ಭಸ್ಮಕೊಟ್ಟನು. ಅವನು ಜಂಗಮವೇಷ ಧರಿಸಿ ಆ ಊರ ಗೌಡನ ಸ್ವಪ್ನದಲ್ಲಿ ಕಾಣಿಸಿಕೊಂಡು ನಾನು ಒಂಬತ್ತು ಉಪವಾಸ ಕಳೆದು ಬಹಳ ಹಸಿದಿದ್ದೇನೆ ಅನ್ನವನ್ನು ಬೇಗನೆ ನೀಡು ಎಂದನು. ಗೌಡನು ಎಚ್ಚತ್ತು ಹೆಂಡತಿಯನ್ನು ಬಡಿದೆಬ್ಬಿಸಿ, ಕನಸಿನಲ್ಲಿ ಕುಂಬಳೇಶ್ವರನು ಹೇಳಿದುದನ್ನು ಹೇಳಿ, ಬೇಗನೆ ಉಳಿದ ಅನ್ನವನ್ನು ತೆಗೆದುಕೊಂಡು ಒಪ್ಪಿಸಿಬರೋಣ ಏಳೆಂದನು. ಅವಳು ಉಂಡು ಮಿಕ್ಕಿದ ಅನ್ನವನ್ನು ಈಶ್ವರನಿಗೆ ಅರ್ಪಿಸಲುಂಟೆ? ಬೆಳಗಾದಮೇಲೆ ಮಡಿ ಹುಡಿಯಿಂದ ಅಡಿಗೆಮಾಡಿ ದೇವರಿಗೆ ಅಭಿಷೇಕ ಮಾಡಿಸಿ ನೈವೇದ್ಯಮಾಡಿ ಬರೋಣ ಸುಮ್ಮನೆ ಮಲಗಿಕೋ ಎಂದಳು. ಈಶ್ವರನು ಪುನಃ ಅವರಿಬ್ಬರ ಕನಸಿನಲ್ಲಿ ಬಂದು

ಬೆಳಗಾಗುವಲ್ಲಿಯವರೆಗೆ ನಾನು ತಡೆಯಲಾರೆ. ನೀವೀಗ ಮನೆಯಲ್ಲಿದ್ದ ಶಾಲ್ಯಾನ್ನ ಉಪ್ಪಿನಕಾಯಿ ಕೆನೆಮೊಸರು ಮೊದಲಾದವುವನ್ನು ಬೇಗನೆ ತಂದು ಚರ ಜಂಗಮಕ್ಕೆ ತೃಪ್ತಿಪಡಿಸಬೇಕೆಂದು ತಿಳಿಸುತ್ತ, ಅವರ ಮನೆಯಲ್ಲಿ ಎಲ್ಲಿ ಎಲ್ಲಿ ಯಾವ ಯಾವ ಪದಾರ್ಥಗಳಿವೆಯೋ ಅದೆಲ್ಲವನ್ನೂ ಹೇಳಿದುದನ್ನು ಕೇಳಿ ದಂಪತಿಗಳಿಬ್ಬರೂ ಭಯ ಭೀತರಾಗಿ, ಶಿವನು ಹೇಳಿದಂತೆ ಎಲ್ಲ ಪ್ರಸಾದ ಪರಿಕರಗಳನ್ನು ಸಿದ್ಧಪಡಿಸಿಕೊಂಡು ಶಿವಾಲಯಕ್ಕೆ ಬಂದು ಲಿಂಗಕ್ಕೆ ಪೂಜೆ ಸಲ್ಲಿಸಿ, ಚರಜಂಗಮಕ್ಕೆಡೆ ಮಾಡಿದರು. ಸಿದ್ಧಲಿಂಗೇಶನು ರೂಪು ರುಚಿ ತೃಪ್ತಿ ಪ್ರಸಾದವನ್ನು ಲಿಂಗತ್ರಯಕ್ಕೆ ಸಮರ್ಪಿಸಿ ತೃಪ್ತ ನಾದನು. ಬೆಳಗಾಗುವವರೆಗೆ ಗೌಡನು ಸಿದ್ಧಲಿಂಗೇಶ್ವರನ ಹತ್ತಿರವೇ ಇದ್ದು ಬೆಳಗಾ ದೊಡನೆ ತನ್ನ ಮನೆಗೆ ಕರೆತಂದು ಪೂಜಿಸಿದನು. ಭಕ್ತರೆಲ್ಲ, ಕುಂಬಳೇಶ್ವರನು ಈ ಯತಿಯನ್ನು ಪೂಜಿಸಿದನು, ಇವನು ಶಿವನಿಂದಲೇ ಮಧ್ಯರಾತ್ರಿ ಪೂಜೆಗೊಂಡವ ನೆಂದು ಕೊಂಡಾಡಿದರು.

ಹೀಗೆ ಸಿದ್ಧಲಿಂಗೇಶ್ವರನು ರೋಹಿಣೀಖಂಡದ ಕುಂಬಳೇಶ್ವರನಿಂದ ಪೂಜೆಗೊಂಡು ಅವನಿಗೆ ದರ್ಶನಕೊಟ್ಟು ಅಲ್ಲಿಂದ ಹೊರಟು ನಾಸಿಕದ ತ್ರಯಂಬಕವನ್ನು ನೋಡುತ್ತ ಕೊಂಕಣ ದೇಶದಲ್ಲಿರುವ ಭೀಮನು ಪ್ರತಿಷ್ಠಿಸಿರುವ ಭೀಮೇಶ್ವರಲಿಂಗದ ಮಸ್ತಕದಿಂದ ಬರುತ್ತಿರುವ ನೀರಿನಿಂದ ತಮ್ಮ ಇಷ್ಟಲಿಂಗಕ್ಕೆ ಅಭಿಷೇಕಮಾಡಿ, ಆ ಭೀಮೇಶ್ವರನಿಗೆ ದರ್ಶನವಿತ್ತು ಅಲ್ಲಿಂದ ಮಾಬಳೇಶ್ವರನಲ್ಲಿಗೆ ಬಂದು ಅವನಿಗೆ ದರ್ಶನವಿತ್ತು, ಎತ್ತರ ವಾಗಿದ್ದ ಆ ಲಿಂಗಪೀಠವನ್ನು ಹತ್ತಿ, ಲಿಂಗಮಸ್ತಕಾಗ್ರದಲ್ಲಿನ ಬಿಲದಿಂದ ಬರುತ್ತಿದ್ದ ನೀರನ್ನು ನೋಡಿ ತೆಂಗಿನ ಚಿಪ್ಪಿನಿಂದ ಆ ನೀರನ್ನು ಮೊಗೆಮೊಗೆದು ತಮ್ಮ ಮುಖ ಮಾರ್ಜನ ಮಾಡಿಕೊಂಡು ಹಲ್ಲುಜ್ಜಿಕೊಂಡು ಲಿಂಗಮಜ್ಜನಮಾಡಿ ಆ ಬಿಲದಲ್ಲಿ ಕೈಯಿಕ್ಕಿ ನೋಡಿ ನೋಡಿ ಹರ್ಷಿಸುತ್ತಿದ್ದನು. ಅಷ್ಟರಲ್ಲಿ ಪೂಜಾರಿಗಳು ಬಂದು ನೋಡಿ ಕೋಪಗೊಂಡರು. 'ಲಿಂಗಪೀಠವನ್ನೇರಿ ಕುಳಿತುಕೊಳ್ಳುವರುಂಟೆ? 'ಶಿವಾ ಲಯ ಅಪವಿತ್ರವಾಯಿತು' ಇತ್ಯಾದಿಯಾಗಿ ಆಕ್ಷೇಪಿಸಿದರು. 'ಸೂತಕವಿಲ್ಲದಿರ್ಪ ಜಂಗಮವು ಮುಟ್ಟಿದರೆಲ್ಲಿಯ ಅಪವಿತ್ರ ಬಂತು! ಅಂತಕನಾಲಯಕ್ಕೆ ಸಿಕ್ಕುವ ನಿಮ್ಮ ಈ ಮಾತನ್ನು ಕೇಳಲಾಗುವುದಿಲ್ಲ' ಎಂದು ನುಡಿದು ಸಿದ್ಧಲಿಂಗೇಶ್ವರನು ಅಲ್ಲಿಂದ ಹೊರಟು ದೇವಾಲಯದಿಂದ ಕೂಗಳತೆ ದೂರದಲ್ಲಿದ್ದ ಒಂದು ವೃಕ್ಷದಡಿಯಲ್ಲಿ ತನ್ನೊಡ ನಿದ್ದ ಚರಜಂಗಮದೊಡನೆ ವಿಶ್ರಮಿಸಿದನು.

ಇತ್ತ ಪೂಜಾರಿಗಳು ಗುಡಿಯೆಲ್ಲ ಅಪವಿತ್ರವಾಯಿತೆಂದು ಅದರ ಶುದ್ಧೀಕರಣ ದಲ್ಲಿ ನಿರತರಾದರು. ಆಗ ಈಶ್ವರನು ಪೂಜಾರಿಗಳು ಶುದ್ಧೀಕರಣಕ್ಕೆ ತಂದ ಪಂಚಾ ಮೃತ ಘಟಗಳನ್ನೆಲ್ಲ ಒಡೆದು ನೂಕಿ, 'ಶ್ರೀಗುರು ಸಿದ್ಧಲಿಂಗೇಶ್ವರನನ್ನು ನೀವೆಲ್ಲ ಝಂಕಿಸಿ ನುಡಿದು ಅಟ್ಟಲುಂಟೆ? ಅವರಿದ್ದಲ್ಲಿಗೆ ನೀವೆಲ್ಲ ಹೋಗಿ ಕ್ಷಮೆಯಾಚಿಸಿ ನನ್ನ ಆಲಯಕ್ಕೆ ಕರೆತಂದಲ್ಲದೆ ಆಗದು', ಎಂದನು. ಆ ವಿಪ್ರರೆಲ್ಲ ನಡುಗಿ ಕಳಶ ಕನ್ನಡಿ

ಸಹಿತ ಸಿದ್ಧಲಿಂಗನಲ್ಲಿಗೆ ಬಂದು ನಮಸ್ಕರಿಸಿ ದೈನ್ಯಂಬಟ್ಟು ಮಹಾಬಳೇಶ್ವರನಲ್ಲಿಗೆ ಕರೆತಂದರು. ಹೀಗೆ ಸಿದ್ಧಲಿಂಗನು ಬಂದು ಆ ಮಹಾಬಳೇಶ್ವರನಿಗೆ ತನ್ನ ದರ್ಶನ ಕೊಟ್ಟು, ಅಲ್ಲಿಂದ ಹೊರಟು ಉಳುವೆಯ ಮಹಾಮನೆಗೆ ಬಂದನು.

ಅಲ್ಲಿ ಬಿಡಾರ ಮಾಡಿರುವಾಗ ಓರ್ವ ವೈಷ್ಣವನು ಬಂದು 'ಎಲ್ಲಿಂದ ಬಂದೆ? ನಿನಗೆ ಸತಿಸುತರಾರೂ ಇಲ್ಲವೆ?' ಇತ್ಯಾದಿ ಹಾಸ್ಯದ ಕಟಕಿ ನುಡಿದನು. ಸಿದ್ಧಲಿಂಗನು ಸಮಾಧಾನದಿಂದ ಆವನಿಗೆ ಉತ್ತರಕೊಟ್ಟನು ಇಬ್ಬರಿಗೂ ಶಿವಪಾರಮ್ಯ ವಿಷ್ಣು ಪಾರಮ್ಯದ ಮಾತು ಬೆಳೆಯಿತು. ದಾಸನು ವಿಷ್ಣುವಿಗೆ ಸಮಾನ ದೈವವಿಲ್ಲವೆಂದು ವಾದಿಸತೊಡಗಿದನು. ಸಿದ್ಧೇಶನು ಶಿವನೇ ದೈವ ಅವನಿಗೆ ಸಮಾನರಾರೂ ಇಲ್ಲವೆಂದು ಅನೇಕ ಪುರಾಣಾಧಾರಗಳಿಂದ ವಾದಿಸಿದನು. ಪಂಚಾಕ್ಷರಿಯೇ ಶ್ರೀರುದ್ರ ಜಪವೆಂದು ಸಿದ್ಧಲಿಂಗೇಶ್ವರನು ಕೊನೆಗೆ ಹೇಳಿಮುಗಿಸಿದನು. ಆಗ ಆ ವೈಷ್ಣವನು ಕ್ರೋಧಗೊಂಡು ಜರಿದು ಮಾತನಾಡಿ ಈ ಜಂಗಮವಿದ್ದರೆ ನಮ್ಮ ಸಮಯವೇ ಇಲ್ಲದಂತಾಗುವುದೆಂದು ಮನಸ್ಸಿನಲ್ಲಿ ಯೋಚಿಸಿ ಕೊಲ್ಲುವುದಕ್ಕೋಸುಗ ಭೂತಗಳನ್ನು ನೇಮಿಸಿದನು. ಭೂತಗಳು ರಾತ್ರಿ ಸಿದ್ಧೇಶನಿದ್ದಲ್ಲಿಗೆ ಬಂದು ಶಿವಧ್ಯಾನನಿರತನಾಗಿದ್ದ ಅವನನ್ನು ಕಂಡು ತಮ್ಮ ಆರ್ಭಟಾದಿಗಳನ್ನೆಲ್ಲ ಮಾಡಿದವು. ಧ್ಯಾನಮುಖದಿಂದ ಎಚ್ಚೆತ್ತ ಸಿದ್ಧೇಶನು ಹರಿದಾಡುವ ಭೂತಗಳನ್ನು ಕಂಡು, ಇದೆಲ್ಲ ಹರಿದಾಸನಿಂದಾದ ಅಪಚಾರ ವಿದ್ಯೆಯೆಂದು ತಿಳಿದು ನಿಶ್ಶಂಕನಾಗಿರಲು ಶಿವನು ಐದುವರ್ಷದ ಬಾಲಕನವೇಷದ ಜಂಗಮನಾಗಿ ಬಂದು ಹೂಂಕಾರ ಮಾಡಲು ಭೂತಗಳೆಲ್ಲ ಬೀಳುತ್ತೇಳುತ್ತ ಓಡಿಹೋದವು. ಜಂಗಮ ವೇಷದ ಶಿಶುವು ಸಿದ್ಧೇಶನಲ್ಲಿಗೆ ಬಂದು ಸಂತೈಸಿ ಎಂದಿನಂತೆ ಲಿಂಗಾಕಾರವಾದನು. ಆಗ ವೈಷ್ಣವನು ಬಂದು ಸಿದ್ಧೇಶನಿಗೆ ಅಡ್ಡಬಿದ್ದು 'ನಿಮ್ಮನ್ನು ಕೊಲ್ಲಲೆಂದು ಭೂತ ಗಳನ್ನು ಕಳಿಸಿದ ಪಾಪಿಯೇ ನಾನು. ನನ್ನ ಗುಣಾವಗುಣಗಳನ್ನು ನೋಡದೆ ರಕ್ಷಿಸೆಂ' ದನು. ಆಗ ಅವನಿಗೆ ಸಿದ್ಧೇಶನು ಅಭಯಕೊಟ್ಟು ಅವನನ್ನು ಆಶೀರ್ವದಿಸಿ ಮುಂದಕ್ಕೆ ಪ್ರಯಾಣ ಕೈಗೊಂಡು ಕೊಂಕಣಕ್ಕೆ ಬಂದು ಸೂಜಿಕಾಯಕದ ವೀರಣಯ್ಯನೆಂಬು ವನು ಕೈಲಾಸಕ್ಕೆ ಹೋದ ಸ್ಥಾನವಾದ ದೊಪ್ಪೇಶ್ವರ ಗ್ರಾಮವನ್ನು ಹೊಕ್ಕು ಅಲ್ಲಿದ್ದ ನೀಲಕಂಠೇಶ್ವರ ಶಿವಲಿಂಗಕ್ಕೆ ದರ್ಶನವಿತ್ತು, ಅಲ್ಲಿಂದ ಹೊರಟು ಒಂದು ವೃಕ್ಷದಡಿಯಲ್ಲಿ ಶಿವಧ್ಯಾನ ಪರಾಯಣನಾಗಿ ಕುಳಿತನು.

ಹೀಗೆ ವೃಕ್ಷದಡಿಯಲ್ಲಿ ಕುಳಿತಿರುವಾಗ ಕೆಲವು ಭೈರವರು ಸಿದ್ಧೇಶನ ಹತ್ತಿರಕ್ಕೆ ಬಂದರು. ಜೋಗಿಗಳು ತಮ್ಮಲ್ಲಿ ತಾವು ಭೈರವನ ಮಹತ್ವವನ್ನು ಮಾತನಾಡುತ್ತ ಸಿದ್ಧಿಯಲ್ಲಿ ಅವನ ಸಮಾನರು ಯಾರೂ ಇಲ್ಲವೆಂದು ಕೊಚ್ಚಿಕೊಳ್ಳತೊಡಗಿದರು. ಸಿದ್ಧೇಶನು ಅವರ ಮಾತನ್ನು ಕೇಳಿ—'ಎಲವೊ ನಿಮ್ಮ ಸಿದ್ಧರಲ್ಲಿ ವ್ಯಾಳಿಯೆಂಬುವನು ಉರಿಯಲ್ಲಿ ಸತ್ತ; ರತ್ನಘೋಷನೆಂಬುವವನು ಕೆಸರಿನಲ್ಲಿ ಮುಳುಗಿದ; ನಾಗಾರ್ಜು ನನು ವಿಷ್ಣುವಿನಿಂದ ಸತ್ತ; ಕೋರಾಟಸಿದ್ಧ ಕೆರೆಯಲ್ಲಿ ಮುಳುಗಿದ ತಿಳಿಮುಕೋ.

ಭೈರವ ಸಂಪ್ರದಾಯದ ಎಲ್ಲರು ಸಿದ್ಧಿಯನ್ನರಿಯದೆ ಭವಭಾರಿಗಳಾವರೆಂದು ನುಡಿದನು ಆಗ ಸಿದ್ಧರು ಸಿದ್ಧಲಿಂಗೇಶ್ವರನಮೇಲೆ ಗತಿಸ್ತಂಭ, ದೃಷ್ಟಿಸ್ತಂಭ, ವಾಚ್ಯಸ್ತಂಭಾದಿಗಳೇ ಮೊದಲಾದ ಮಂತ್ರಗಳನುಚ್ಚರಿಸಿ ಬಾಧೆಗೊಳಿಸಲೆತ್ನಿಸಿದಾಗ ಆ ಬಾಧೆಗಳೆಲ್ಲ ಮರಳಿ ಆ ಭೈರವರಿಗೇ ಹಿಂತಿರುಗತೊಡಗಿದಾಗ ಅವರೆಲ್ಲ ಭಯಭೀತರಾಗಿ ಸಿದ್ಧಲಿಂಗೇಶ್ವರನಿಗೆ ನಮಸ್ಕರಿಸಿ ದೈನ್ಯದಿಂದ ಪಲ್ಗಿರಿದು ಕ್ಷಮೆಕೇಳಲು ಅವರಿಗಾದ ಬಾಧೆಯನ್ನು ಪರಿಹರಿಸಿದನು.

ಅಲ್ಲಿಂದ ಸಿದ್ಧೇಶನು ಹೊರಟು ಗೋಕರ್ಣದ ಮಹಾಬಳೇಶ್ವರ ಮೊದಲಾದ ಅಲ್ಲಿನ ಶಿವಲಿಂಗಗಳಿಗೆ ದರ್ಶನವಿತ್ತು, ಸಹ್ಯಾದ್ರಿಘಟ್ಟ ಕರಾವಳಿಗಳಲ್ಲಿ ಹೊರಟು ಜಿನದೇಶವಾದ ಕಾರ್ಕಳಕ್ಕೆ ಹೋಗಿ, ಆ ನಗರದಲ್ಲಿದ್ದ ಓರ್ವ ಶಿವಭಕ್ತನ ಮನೆಯಲ್ಲಿ ಶಿವಪೂಜೆಮಾಡಿ, ಒಂದು ಬಸವೇಶ್ವರನ ಮಂದಿರದಲ್ಲಿ (?) ಮೂರ್ತಿಗೊಂಡು ಶಿವಧ್ಯಾನ ತತ್ಪರನಾದನು.

ಅಲ್ಲಿ ಈತನಿಗೂ ಜೈನರಿಗೂ ಮಾತು-ಮರುಮಾತು ನಡೆದುವು. ಸಿದ್ಧೇಶನು ಅವರಿಗೆ ಪ್ರಾಚೀನ ಶೈವರ ಮತ್ತು ಶಿವಶರಣರ ಬದುಕಿನಲ್ಲಿ ನಡೆದ ಹಲವು ಘಟನೆಗಳನ್ನು ಉಲ್ಲೇಖಿಸಿ ಅವರ ಬಾಯಿಮುಚ್ಚಿಸಿದನು. ಕಡೆಗೆ ಅವರು ತಮ್ಮ ಸೋಲನ್ನು ಒಪ್ಪಿಕೊಂಡು ಸಿದ್ಧೇಶನಿಗೆ ಶರಣುಮಾಡಿದರು. ಜಿನೇಂದ್ರನೇ ತಮ್ಮನ್ನು ಉದ್ಧಾರ ಮಾಡಲು ಈ ಜಂಗಮವೇಷದಲ್ಲಿ ಬಂದಿರುವನೆಂದು ಅವನನ್ನು ಒಬ್ಬ ಭಕ್ತ ಮನೆಗೆ ಕರೆದೊಯ್ದು ಪೂಜಿಸಮಾಡಿಸಿದರು. ಸಿದ್ಧೇಶನು ಅಲ್ಲಿಂದ ಗಾಳಿಪೂಜೆ ಬೆಟ್ಟಕ್ಕೆಹೋಗಿ ಒಂದು ಗವಿಯಲ್ಲಿ ಕುಳಿತು ಶಿವಪೂಜೆಯಲ್ಲಿ ನಿರತನಾದನು. ಆಗ ಭಾರಿಯ ಕಂಥೆ, ಟೊಪ್ಪಿ, ಕರಕಂಕಣ, ದಂಡಾದಿಗಳಿಂದ ಕೂಡಿದ ಜಂಗಮವೇಷದ ಮಲ್ಲಿಕಾರ್ಜುನನು ಸಿದ್ಧೇಶನಿಗೆ ಪ್ರಸಾದವನ್ನು ತಂದಿತ್ತು ಅವನೊಡನೆ ತಾನೂ ಪ್ರಸಾದ ಸ್ವೀಕರಿಸಿದನು. ಮರುದಿನ ಉದಯದಲ್ಲಿ ಅಲ್ಲಿಂದ ಹೊರಟು ಕಾವೇರಿಯು ಉದ್ಭವವಾಗಿರುವ ನೀಲಾದ್ರಿಯನ್ನು ಹೊಕ್ಕು ಅಲ್ಲಿದ್ದ ಲಿಂಗಗಳಿಗೆ ದರ್ಶನವಿತ್ತು, ಸಹದೇವ ನಕುಲರೊಡನೆ ಅಗ್ನಿಪುರುಷನು ಕಾದಿದ ಕಾಳಗದ ಭೂಮಿಯನ್ನು ಮೆಟ್ಟಿ ಪವಿತ್ರಗೊಳಿಸಿದನು. ಅಲ್ಲಿಂದ ಮುಂದೆ ಮಲಯಾಳ, ಕೊಂಗು, ಪಾಂಡ್ಯ, ವರಾಟ ದೇಶಗಳನ್ನು ಹೊಕ್ಕು ಅಲ್ಲಿರುವ ಲಿಂಗಗಳಿಗೆ ದರ್ಶನವಿತ್ತು, ಸೇತುಬಂಧಕ್ಕೆ ಬಂದು ಅಲ್ಲಿನ ರಾಮೇಶ್ವರ ಲಿಂಗಕ್ಕೆ ದರ್ಶನಕೊಟ್ಟು, ಅಲ್ಲಿಂದ ಕುಂಭಕ್ಷೇತ್ರ (ಕುಂಭಕೋಣ ?)ವನ್ನು ನೋಡಿ, ತೀರ್ಥಕೊಳವನ್ನು ಸಂದರ್ಶಿಸಿದನು. ಅನಂತರ ದ್ರಾವಿಡದೇಶ ಪ್ರವೇಶಮಾಡಿ ಪೊನ್ನಾಂಬಲೇಶ (ಚಿದಂಬರೇಶ)ನಿಗೆ ದರ್ಶನವಿತ್ತು ಕಂಚಿಯ ಏಕಾಂಬ್ರನಾಥನಿಗೆ ದರ್ಶನಕೊಟ್ಟನು. ಅನಂತರ, ಕಾಳಾವತಿ, ವರಾಟ, ಕಾಶಿ, ಬೊಟ್ಟು ಮಹಾಬೊಟ್ಟು, ತಿನಿ, ಮಹಾತಿನಿ, ಕೇತಾರ್ನ ದೇಶಗಳನ್ನು ಹೊಕ್ಕು ಅಲ್ಲಿನ ಶಿವಲಿಂಗಗಳಿಗೆ ದರ್ಶನವಿತ್ತನು. ಮುಂದೆ ಅಲ್ಲಮಪ್ರಭುದೇವರು ಶಿವಯೋಗದಿಂದ ಮೂರ್ತಿಗೊಂಡಿದ್ದ

ಗುಹೆಯನ್ನು ನೋಡಿದನು. ಅಲ್ಲಿಂದ ನೀಲಕಂಠ, ನೇಪಾಳ, ಪ್ರಯಾಗ, ಗಯಾ, ತುರುಷ್ಕ ದೇಶಗಳನ್ನು ಹೊಕ್ಕು ಆಂಧ್ರದೇಶಕ್ಕೆ ಬಂದು ರೇವಣಸಿದ್ಧೇಶ್ವರನ ಜನ್ಮ ಸ್ಥಾನವಾದ ಕೊಲ್ಲಿಪಾಕಿಯ ಸೋಮೇಶ್ವರಲಿಂಗಕ್ಕೆ ದರ್ಶನವಿತ್ತನು. ಆಮೇಲೆ ಇಂದ್ರಕೀಲದ ಬೆಜ್ಜವಾಡದ ಮಲ್ಲಿಕಾರ್ಜುನ, ಅಮರಾರಾಮದಲ್ಲಿರುವ ಪಂಚಲಿಂಗ ಗಳಿಗೆ ದರ್ಶನವಿತ್ತನು.

ಇಲ್ಲಿಂದ ಮುಂದೆ ಶ್ರೀಶೈಲದತ್ತ ಹೊರಟು ನೀಲವರ್ಣದಿಂದ ಸಾರಗದಂತೆ ಕಾಣುವ ಆ ಗಿರಿಯ ಸೌಂದರ್ಯಕ್ಕೆ ಮನಸೋತು, ವಿಂಧ್ಯಗಿರಿ, ಗೋವರ್ಧನಗಿರಿ, ರಜತಾಚಲ, ಹೇಮಾದ್ರಿ ಮೈನಾಕಪರ್ವತ, ಹಿಮಶೀಕರಿ, ಶೋಣಾನದಿ, ಮಾಲ್ಯವಂತ ಮಲಯಪರ್ವತಗಳು, ಮಾನಸ್ತೋಕರ, ಇಂದ್ರಕೀಲ, ವಿಶ್ವಂಭರಾಪರ್ವತಗಳು, ರೋಹಣಾಚಲ, ಗಂಧಮಾಧನಾಚಲಗಳಿಗೆಲ್ಲ ದರ್ಶನವಿತ್ತನು. ಶ್ರೀಶೈಲ ಪ್ರಾಂತದ ಸಮಸ್ತಾದ್ಭುತಗಳನ್ನೆಲ್ಲ ನೋಡಿದನು. ಹೀಗೆ ಸಂಚರಿಸಿ ಕರ್ನಾಟಕ ದೇಶದ ಕಡಲಾದ್ರಿಗೆ, ಅಲ್ಲಿಂದ ಶಿವಗಂಗೆಗೆ ಬಂದು ಗಂಗಾಧರನಿಗೂ ಸ್ವರ್ಣಾಂಬಿಕೆಗೂ ದರ್ಶನವಿತ್ತು ಕಗ್ಗೆರೆಗೆ ಬಂದನು. (ತೃತೀಯಾಶ್ವಾಸ)

ಶಿವಗಂಗೆಯಿಂದ ನೇರವಾಗಿ ಕಗ್ಗೆರೆಯ ಕಡೆಗೆ ನಡೆತಂದ ಸಿದ್ಧಲಿಂಗೇಶ್ವರನು ಕಗ್ಗೆರೆಯ ಹೊರವಲಯದಲ್ಲಿರುವ ವನದಲ್ಲಿ ಬೀಡುಬಿಟ್ಟನು. ಆ ಊರ ಗೌಡನಿಗೆ ಈ ಊರನ್ನು ಬೇಡರು ಸೂರೆಮಾಡುವರೆಂದು ಭವಿಷ್ಯನುಡಿಯುವನು. ಸಿದ್ಧಲಿಂಗೇಶ್ವರ ನಿದ್ದ ಆ ವನವು ಅನೇಕ ವಿಧವಾದ ತರುಗುಲ್ಮಲತೆಗಳಿಂದ ಮನೋಹರವಾಗಿತ್ತು. ಖಗಮೃಗಗಳು ಸ್ವೇಚ್ಛೆಯಾಗಿ ವರ್ತಿಸುತ್ತಿದ್ದವು. ಇಂಥ ವನದ ಮಧ್ಯದಲ್ಲಿ ಶಿವಯೋಗ ಲೀಲಾವಿನೋದಚಿತ್ತನಾಗಿ ಕುಳಿತುಕೊಂಡನು. ಆಗ ಅವನು ನಿಬ್ಬೆರಗಿನ ಸಮಾಧಿ ಯಲ್ಲಿರುವ ನಿರಾಳದೇವಿಯಂತೆ, ತಳತಳಿಸಿ ತೊಳಗಿ ಬೆಳಗುವ ಚಿತ್ಪ್ರಭಾಲಿಂಗಸಂಗ ಸಮರಸದ ಸಮಾಧಿಯಲ್ಲಿದ್ದ ಶಿವಯೋಗಿ ಮಲ್ಲರಸನಂತೆ ಇದ್ದನು. ಗುರುಕರಜಾತ ನಾಗಿ ವಿಧಿಗ್ರಂಥಿಯ ಖಂಡಿಸಿ. ಲಿಂಗದಲ್ಲಿ ಲೀನಗೊಂಡು ರುದ್ರಗ್ರಂಥಿಯನ್ನು ಖಂಡಿಸಿ ಮಾಯೆಯನ್ನು ಗೆದ್ದ ಸಿದ್ಧಲಿಂಗನು ಲಿಂಗಾಂಗ ಸಂಯೋಗ ಸುಖದಲ್ಲಿ ಮುಳುಗಿ ಸರ್ವಾಂಗಲಿಂಗಮಯನಾಗಿ ಧ್ಯಾನಯೋಗ ನಿರತನಾಗಿದ್ದನು. ಚಿದ್ರೂಪವಾದ ಶೂನ್ಯಲಿಂಗದತ್ತಣದ ಬ್ರಹ್ಮಸ್ಥಾನದಲ್ಲಿರುವ 'ಓಂ ಹ್ರಾಂ ಹ್ರೀಂ ಹ್ರುಂ ಹ್ರೈಂ'ಎಂಬ ಪಂಚಬೀಜಾಕ್ಷರದ ಲಿಂಗವನ್ನೂ, ಅಲ್ಲಿಂದತ್ತಣದ ಆಜ್ಞಾಸ್ಥಾನದಲ್ಲಿರುವ 'ಹಂ ಕ್ಷಂ' ಚರಾಚರ ಲಿಂಗವನ್ನೂ, ಅಲ್ಲಿಂದತ್ತಣದ ವಿಶುದ್ಧಿಸ್ಥಾನದಲ್ಲಿರುವ ಅಕಾರಾದಿ ಅಃಕಾರ ಪರ್ಯಂತದ ಷೋಡಶಕಲಾ ಲಿಂಗವನ್ನೂ, ಅಲ್ಲಿಂದತ್ತಣ ಅನಾಹತ ಸ್ಥಾನದಲ್ಲಿರು ಕಕಾರಾದಿ ಠಕಾರಾಂತವಾದ ದ್ವಾದಶಲಿಂಗವನ್ನೂ ಅಲ್ಲಿಂದತ್ತಣದ ಮಣಿಪೂರಕ ಸ್ಥಾನ ದಲ್ಲಿರುವ ಡಕಾರಾದಿ ಫಕಾರಪರ್ಯಂತರವಾಗಿ ವ್ಯಾಪಿಸಿರುವ ದಶವಿಧಲಿಂಗವನ್ನೂ ಅಲ್ಲಿಂದ ತ್ತಣದ ಸ್ವಾಧಿಷ್ಠಾನ ಸ್ಥಾನದಲ್ಲಿ ಷಡಾಂಸಿಕವಾಗಿ ಸ್ಥಾನಗೊಂಡಿರುವ ಬಕಾರಾದಿ

ಲಕಾರಾಂತವಾದ ಷಡ್ವಿಧಲಿಂಗವನ್ನೂ, ಅಲ್ಲಿಂದತ್ತಣದ ಆಧಾರಸ್ಥಾನದಲ್ಲಿ ಚೇತರಿಸುತ್ತಲಿರುವ ವಕಾರಾದಿ ಸಕಾರಾಂತ ವಿಕಲವಿಕೃತಿ ಮೂಲಲಿಂಗವನ್ನೂ ಆವರಿಸಿಕೊಂಡಿರುವ ಅನುಭಾವ ಭಾಷ್ಯಾರ್ಥವಾದ ಸರ್ವಜ್ಞತ್ವ, ತೃಪ್ತಿತ್ವ, ಅನಾದಿಬೋಧತ್ವ ಸ್ವತಂತ್ರತ್ವ, ನಿತ್ಯತ್ವ, ಅಲುಪ್ತಶಕ್ತಿತ್ವಗಳೆಂಬ ಆರು ಚಿದಂಗಳಲ್ಲಿ ಶಿವ-ಸದಾಶಿವ, ಈಶ-ಬ್ರಹ್ಮತತ್ತ್ವ, ಈಶ್ವರ-ಈಶಗಳೆಂಬ ಆರು ತತ್ತ್ವಗಳಿಗೆ ಆಶ್ರಯವಾದ ಪರಾತತ್ತ್ವಗಳೇ ಮೊದಲಾದ ಐದು ಚಿತ್ಪ್ರಾಣಶಕ್ತಿ ಪರಿಪೂರ್ಣಪ್ರಕಾಶವುಳ್ಳ ನಿರುಪಾಧಿಕ ಜ್ಯೋತಿರ್ಮಯವಾದ ಚಿದಗ್ನಿ ಇವನ್ನೆಲ್ಲ ಒಳಗೊಂಡ ಚಿದಾಕಾಶ, ಆ ಚಿದ್ಘನವನೊಳಕೊಂಡ ಘನಲಿಂಗ, ಅಂಥ ಘನಲಿಂಗ ವೇದ್ಯನಾದ ಸಿದ್ಧಲಿಂಗೇಶ್ವರನು ಪ್ರಣಮಚ್ಛವಿಯ ಮಧ್ಯದಲ್ಲಿ ವಿರಾಜಮಾನನಾಗಿ ಅಚಲನೂ ಅದ್ವಯನೂ ಆದ ಅವನು ಬೇರಾಗದ ಬೆಡಂಗಿನಿಂದ ಶಿವಯೋಗದಲ್ಲಿದ್ದನು.

ಸಿದ್ಧಲಿಂಗೇಶ್ವರನು ಹೀಗಿರುತ್ತಿರುವಲ್ಲಿ ಕಗ್ಗೆರೆಯ ಗೌಡನು ತನ್ನ ಗ್ರಾಮವನ್ನು ದಾಳಿಮಾಡಿದ ಶಬರಾಧಿಪನಿಂದ ಪ್ರಮಾಣವನ್ನು ಪಡೆದು ಕೆಲವು ಗೃಹಸ್ಥರನ್ನು ಕೂಡಿಕೊಂಡು ಬಂದು ಎಂದಿನಂತೆ ಮನೆಗಳನ್ನು ಕಟ್ಟಿದನು. ನಮ್ಮೂರು ದಾಳಿಯಾಗುವುದನ್ನು ಸೂಚಿಸಿದ ಸಿದ್ಧಲಿಂಗೇಶ್ವರನು ಎಲ್ಲಿಗೆ ಹೋದನೋ ಇಂದಿಗೆ ಆರು ತಿಂಗಳುಗಳಾದುವೆಂದು ತಮ್ಮ ತಮ್ಮಲ್ಲಿ ಮಾತನಾಡಿ ಕೊಳ್ಳುತ್ತ ಹೂವೆತ್ತುವುದಕ್ಕೆಂದು ತೋಟಕ್ಕೆ ಬಂದು ಯತೀಶ್ವರನಿರುವ ಇರವನ್ನು ಕಂಡು ಆಶ್ಚರ್ಯಪಟ್ಟು, ಹತ್ತಿರಕ್ಕೆ ಬಂದು ವಂದಿಸಿ ನಿಂತು ನೋಡಿದರು. ಜಡೆಗಳ ಹೊದರಿನಲ್ಲಿದ್ದ ಮೊಲಗಳು ಬೆದರಿ ಓಡಿದುವು. ಅದಕ್ಕೆ ಆ ಗೌಡನು ಹೆದರಿ ಹಿಮ್ಮೆಟ್ಟಿ ಮತ್ತೆ ಮುಂದಕ್ಕೆ ನಡೆದು ಬೆನ್ನಹಿಂದಣ ಮೊಲಗಳ ಮರಿಗಳನ್ನು ಕಂಡನು. ಅಲ್ಲಿ ಕಟ್ಟಿದ್ದ ಕಡಜದ ಗೂಡನ್ನು ಅವರ ಅಪ್ಪಣೆಯಿಲ್ಲದೆ ತೆಗೆದುಹಾಕಲು ಹೆದರಿದನು. ಆ ಶಿವಯೋಗಿಯ ಸುತ್ತಲೂ ಬೆಳೆದಿದ್ದ ಹೊದರನ್ನೆಲ್ಲ ಕಿತ್ತು ಧೂಳನ್ನೆಲ್ಲ ಗೂಡಿಸಿ ಸಮ್ಮಾರ್ಜನೆಮಾಡಿ ಮುಂಭಾಗದಲ್ಲಿ ಕುಳಿತುಕೊಂಡು ಪೊನ್ನಾಂಬಲದಲ್ಲಿ ಶಿವಚಿತ್ತನೆಂಬ ವಿರತನು ಶಿವಯೋಗದಿಂದ ಕ್ಷುತ್ಪಿಪಾಸೆಗಳನ್ನೆಲ್ಲ ಗೆದ್ದು ತಿಂಗಳಿಗೊಮ್ಮೆ ಪ್ರಸಾದಭೋಗ ಮಾಡುತ್ತಾನೆಂದು ಕೇಳಿದ್ದೇವೆ. ಅಲ್ಲಿಯೇ ಚಿದಾನಂದನೆಂಬ ವಿರತನನ್ನು ಚೋರರು ಒಯ್ದು ಅರಣ್ಯದಲ್ಲಿ ಒಂದು ಸರುವಿನ ವೃಕ್ಷಮೂಲಕ್ಕೆ ಕಟ್ಟಿ ಹೊದ್ದುದನ್ನು ಕಿತ್ತುಕೊಂಡು ಹೋಗಲು ಆ ಬಂಧನದಲ್ಲಿಯೇ ಶಿವಧ್ಯಾನ ತತ್ಪರನಾಗಿ ಕ್ಷುತ್‌ತೃಷಾದಿಗಳನ್ನೆಲ್ಲ ಮರೆತು ನಾಲ್ಕು ತಿಂಗಳಿರಲಾಗಿ ಪೊನ್ನಾಂಬಲೇಶನೇ ಹೋಗಿ ಆ ಕಟ್ಟುಗಳನ್ನೆಲ್ಲ ಬಿಚ್ಚಿ ಕರೆತಂದನೆಂದು ಹೇಳುತ್ತಾರೆ ಈಗ ಈ ಸಿದ್ಧಲಿಂಗ ಶಿವಯೋಗಿಯು ಆರು ತಿಂಗಳಿಂದ ಕ್ಷುತ್ತೃಷಾದಿಗಳಿಲ್ಲದಿರ್ದನು ಎಂದು ಕೊಂಡಾಡುತ್ತಿದ್ದರು. ವಸ್ತುವಿನಲ್ಲಿ ಸಿಕ್ಕ ಸತ್ಕಲೆ ಭಾವಕ್ಕೆ ಬಂದು, ಭಾವದಿಂದ ಮನಸ್ಸಿಗೆ ಇಳಿದು, ಮನಸ್ಸಿನಿಂದ ದೃಷ್ಟಿಗೆ ಬರುತ್ತ, ದೃಷ್ಟಿಯಿಂದ ಹಸ್ತದಲ್ಲಿರುವ ಇಷ್ಟಲಿಂಗದಲ್ಲಿ ನಿಂತು ಎಡಬಲಗಳನ್ನು ಸಿದ್ಧಲಿಂಗನು ಈಕ್ಷಿಸಿದನು.

ಆ ಗೌಡನೇ ಮುಖ್ಯರಾದ ಹರಭಕ್ತರೆಲ್ಲ ನಮಸ್ಕರಿಸಿ 'ದೇವಾ ಇಂದಿಗಾರುವರೆ ತಿಂಗಳ ಹಿಂದೆ ಬೇಡರಿಂದ ದಾಳಿಯಾಗಿಹೋಯಿತು. ಅವರಿಂದ ಸುಪ್ರಮಾಣಂಗಳನ್ನು ಪಡೆದು ಪುನಃ ಇಲ್ಲಿ ಮನೆಗಳನ್ನು ಕಟ್ಟಿದ್ದೇವೆ. ತಮ್ಮನ್ನು ಕಂಡು ಇಲ್ಲಿಗೆ ಬಂದಿದ್ದೇವೆ' ಎಂದು ಕಣ್ಣೆವೆಯಾಟವಲ್ಲಿ ಹರಿವಿರಿಂಚಿಗಳನ್ನು ಸೃಜಿಸಿಬಿಡುವ ಸಾಮರ್ಥ್ಯದ ಶಿವಯೋಗಿಯನ್ನು ಕೀರ್ತಿಸಿ ಬಿನ್ನವಿಸಿಕೊಂಡರು. 'ಇಲ್ಲಿ ನಿಮ್ಮ ಇಳಿಬಿದ್ದ ಜಟಾಸಮೂಹದಲ್ಲಿ ಮನೆಮಾಡಿಕೊಂಡಿರುವ ಮೊಲದ ಹುತ್ತವನ್ನೂ, ಕಡಜದ ಗೂಡುಗಳನ್ನೂ ತೆಗೆಯುವೆವೆ'ಂದು ಬಿನ್ನವಿಸಿಕೊಂಡ ಗೌಡನಿಗೆ ಶಿವಯೋಗಿಗಳು 'ಹತ್ತೆಂಟು ದಿನಗಳು ಹೋಗಲಿ, ಮರಿಗಳೆಲ್ಲ ಬಲಿತು ಓಡಾಡುವಂತಾಗುತ್ತವೆ. ಕಡಜದ ಮರಿಗಳೂ ದೊಡ್ಡವಾಗುತ್ತವೆ ಆಗ ತೆಗೆಯಿರೆಂ'ದರು. ಅವರು ಹೇಳಿದಂತೆ ಮಾಡಿ ಅವರ ಜಡೆಗಳನ್ನೆಲ್ಲ ಒದರಿ, ಶರೀರವನ್ನು ಮೃದುವಸ್ತ್ರದಿಂದ ಒರೆಸಿ, ತೈಲಾಭ್ಯಂಜನ ಮಾಡುವಾಗ ಅವರ ಮಸ್ತಕಾಗ್ರದಲ್ಲಿದ್ದ ರಂಧ್ರವನ್ನು ಕಂಡು ಇದೇನೆಂಬುದನ್ನು ಅಪ್ಪಣೆಕೊಡಿಸಬೇಕೆಂದು ಬೇಡಿಕೊಂಡರು. ಶಿವಯೋಗಿಗಳು 'ಲಿಂಗದಲ್ಲಿ ನ್ಯಸ್ತವಾದ ಮನಸ್ಸಿನಲ್ಲಿರಲು ಚಿಜ್ಜ್ವಾಲೆ ತಾಗಿ ಆ ಭಾಗ ಹಿಸ್ತಿದೆ' ಎಂದು ಹೇಳಿದ ಮಾತನ್ನು ಕೇಳಿ ಆಶ್ಚರ್ಯಗೊಂಡರು. ಸಿದ್ಧಲಿಂಗನು ತನ್ನೊಡನಿದ್ದ ಚರಲಿಂಗಗಳು ಸಮೇತವಾಗಿ ಶಿವಲಿಂಗಾರ್ಚನೆಮಾಡಿ ಪ್ರಸಾದ ಪ್ರಸನ್ನ ಪರಿಣಾಮಿಗಳಾದರು. ಆಗ ಒಂದು ಇಲಿಯನ್ನು ಬೆನ್ನಟ್ಟಿ ಕೋಪದಿಂದ ಹಾವೊಂದು ಬರುತ್ತಿತ್ತು. ಇಲಿಯು ಪ್ರಾಣಭಯದಿಂದ ಓಡಿಬಂದು ಸಿದ್ಧಲಿಂಗನು ಧರಿಸಿದ್ದ ಜಿರ್ಣಕಂಥೆಯಲ್ಲಿ ಪ್ರವೇಶಿಸಿತು. ಸರ್ಪವೂ ಬಂದು ಇಲಿ ಸಿಗದಿರುವ ಕಾರಣದ ಕೋಪದಿಂದ ಆರ್ಭಟಿಸುತ್ತಿತ್ತು. ಮೂಷಕವು ಹೆದರಿ ಶಿವಯೋಗಿಯ ತೋಳಸಂಧಿ, ಬೆನ್ನು, ಉರ, ಕಕ್ಷ, ಮೊಳಕಾಲು ಎಲ್ಲೆಲ್ಲೂ ಹರಿದಾಡುತ್ತಿತ್ತು. ಸರ್ಪವೂ ಅದನ್ನು ಹಿಡಿಯಲು ಹರಿದಾಡುತ್ತಿತ್ತು. ಆಗ ಸಿದ್ಧಲಿಂಗೇಶನು ಪ್ರಾಣಭೀತಿಯಿಂದ ಬಂದ ಈ ಮೂಷಕವನ್ನು ರಕ್ಷಿಸಬೇಕೆಂದುಕೊಂಡು, ಇಲಿಯನ್ನು ತನ್ನ ಕಂಕುಳಲ್ಲಿ ಹಿಡಿದು ಹಾವಿಗೆ ಕಾಣದಂತೆ ಮಾಡಿದನು. ಸರ್ಪವು ಇಲಿಯು ಎಲ್ಲಿಯೋ ಹೋಯಿತೆಂದುಕೊಂಡು ಅಲ್ಲಿಂದ ಓಡಿಹೋಯಿತು. ಸರ್ಪಹೋದಮೇಲೆ ಇಲಿಯನ್ನು ಕಂಕುಳಿನಿಂದ ಹೊರಬಿಟ್ಟರು. ಇಲಿಯೂ ಕೂಡ ಬದುಕಿ ಓಡಿಹೋಯಿತು. ಜನರೆಲ್ಲ ಇದು ಚೋದ್ಯವೆಂದು ಕೊಂಡಾಡತೊಡಗಿದರು.

ಸಿದ್ಧಲಿಂಗನು ಯಥಾಕ್ರಮ ಪುನಃ ಧ್ಯಾನಿಸುತ್ತ ಕುಳಿತನು. ನಾನಾ ದಿಕ್ಕಿನ ಜನ ನಾನಾತರದ ಪಕ್ವಾನ್ನಗಳನ್ನು ಮಾಡಿಕೊಂಡುಬಂದು, ಫಲಾದಿಗಳನ್ನು ದ್ರವ್ಯವನ್ನು ತಂದು ಸಮರ್ಪಿಸತೊಡಗಿದರು. ಬೇಡರು ಇದನ್ನೆಲ್ಲ ಕಂಡು, ಈ ಜಂಗಮನನ್ನು ಬಾಧಿಸಿ ಈ ದ್ರವ್ಯವನ್ನು ಅಪಹರಿಸಬೇಕೆಂದು ರಾತ್ರಿಯಲ್ಲಿ ಒಬ್ಬರೇ ಇರುವ ಆ ಯತೀಶ್ವರನ ಬಳಿಗೆ ಬರುವ ಮುನ್ನವೇ ಶಿವನು ಇದನ್ನೆಲ್ಲ ತಿಳಿದು ಘಟಸರ್ಪನ ರೂಪದಲ್ಲಿ ಬಂದು ಆ ಯತಿಯಿರ್ದ ಮನೆಯನ್ನು ಹೊಕ್ಕು ಕುಳಿತುಕೊಂಡಿದ್ದನು. ಬೇಡರು ಶಿವಯೋಗಿಯಿದ್ದ ಮನೆಹೊಕ್ಕು ಹೊನ್ನಗಳನ್ನು ಕೊಡುಕೊಡೆಂದು ಬಾಧಿಸ

ತೊಡಗಿದರು. ಆಗ ಯತೀಶ್ವರನು ಒರಗಿದ್ದ ಗೋಡೆಯ ತುದಿಯ ಹುತ್ತದಿಂದ ತಲೆಯನ್ನು ಮೇಲಕ್ಕೆತ್ತಿ ಘೋರಘಟಸರ್ಪವು ಮೊರೆಯಲು ಅವರೆಲ್ಲ ಅಯ್ಯೋ! ಹಾವೆಂದು ಹಿಂದಕ್ಕೆ ಸರಿದು, ಮತ್ತೆಬಂದು ಹೊನ್ನನ್ನು ತೋರಿಸು ತೋರಿಸೆಂದು ಮುಂದಕ್ಕೆ ಬರುತ್ತಿದ್ದಂತೆಯೇ ಹಾವು ಹುತ್ತದಿಂದಿಳಿದು ಬಂದು ತನ್ನ ಬಾಲದಿಂದ ಅವರನ್ನೆಲ್ಲ ತಾಟಿಸಿತು. ಆಗ ಆ ಭಿಲ್ಲರೆಲ್ಲ ಭರದಿಂದ ಓಡತೊಡಗಿದರು. ಹಾವೂ ಆರ್ಭಟಿಸಿ ಅವರ ಹಿಂದೆಯೇ ಹರಿದುಹೋಗಿ ಹೆಡೆಯೆತ್ತಿ ಹೆದರಿಸಿತು.

ಇಷ್ಟಾದರೂ ಬೇಡರ ಆಸೆ ತೊಲಗಲಿಲ್ಲ. ಈ ಜಂಗಮನಿರ್ಪ ಮಂದಿರದ ಗೋಡೆಯನ್ನು ಕೆಡವಿ ಅವನನ್ನು ಕೊಂದು ಅವನಲ್ಲಿರುವ ಒಡವೆಗಳನ್ನು ತೆಗೆದುಕೊಳ್ಳೋಣವೆಂದು ಯೋಚಿಸಿ ಆ ಮಂದಿರದ ಹಿಂಭಾಗಕ್ಕೆ ಬಂದರು. ಆಗ ಸರ್ಪವು ದೀರ್ಘದೇಹಿಯಾಗಿ ಬೆಳೆದು ಆ ಮಂದಿರವನ್ನು ಸುತ್ತುಹಾಕಿ ತನ್ನ ಮುಖವನ್ನು ಬಾಗಿಲಿಗೆ ಮರೆಮಾಡಿತು. ಇದನ್ನು ಕಂಡ ಬೇಡರು ಇದೊಂದು ಭೂತವೆಂದು ಹೆದರಿ ಗಿಡ-ಮರ ಮುಳ್ಳು ಎನ್ನದೆ ಬೀಳುತ್ತೇಳುತ್ತ ಓಡಿ ನೆಲೆಗೆಟ್ಟು ತಮ್ಮ ಮನೆಯೆಲ್ಲಿದೆಯೆಂಬುದನ್ನೇ ಅರಿಯದಾದರು ; ಬಲಗುಂದಿದರು ; ಹಲುಬಿ ಹಣ್ಣಾದರು. ಯತೀಶ್ವರನನ್ನು ಕೊಲ್ಲಲಿಕ್ಕೆ ಯೋಚಿಸಿದುದೇ ತಮ್ಮ ಈ ಭಂಗಕ್ಕೆ ಕಾರಣವೆಂದು ಅರಿವಾಗಿ, ನಮ್ಮ ಈ ದುಃಸ್ಥಿತಿ ತೊಲಗಿದರೆ ನಮ್ಮ ಮಕ್ಕಳಿಗೆ ಆ ಯತಿಪನ ಹೆಸರಿಟ್ಟು ಪರ್ವಗಳನ್ನು ಮಾಡುತ್ತೇವೆಂದು ಬೇಡಿಕೊಂಡರು. ಆಗ ಅವರ ಮರುಳ್ತನ ಬಿಟ್ಟು ಹೋಯಿತು. ಅವರೆಲ್ಲ ಯತೀಶನಿಗೆ ವಂದಿಸಿ ಭಕ್ತರಾಗಿ ಪರ್ವಾದಿಗಳನ್ನು ಮಾಡಿ ತಮ್ಮ ಮಕ್ಕಳಿಗೆ ಆ ಯತಿಯ ಹೆಸರಿಟ್ಟರು. ಆಗ ಹಾವಾಗಿ ಬಂದಿದ್ದ ಶಿವನು ಕೈಲಾಸಕ್ಕೆ ತೆರಳಿದನು. ಸಿದ್ಧಲಿಂಗನು ಅವರಿಗೆ ಅನುಗ್ರಹಿಸಿ ಕಳುಹಿಸಿಕೊಟ್ಟನು.

ಸಿದ್ಧಲಿಂಗನು ಈಡಾಪಿಂಗಳ ಸುಸುಮ್ನ ತ್ರಿಕೂಟ ಭ್ರೂಮಧ್ಯದಲ್ಲಿರುವ ಅಕಾರ, ಉಕಾರ, ಮಕಾರ ಕೂಡಿದ ತಾರಕಬ್ರಹ್ಮದ ಚಿದ್ಬೆಳಗೇ ತಾನಾಗಿ ಪ್ರಕಾಶಿಸುತ್ತ ಅಲ್ಲಿರತೊಡಗಿದನು. ಆಗ ಸಿದ್ಧನ ಮಹಿಮೆಯನ್ನು ಲಿಂಗಸಂಗಿಗಳೂ, ನಿರ್ಮಲಭಕ್ತರೂ ನೋಡಲು ಬರತೊಡಗಿದರು. ಬಂದ ಲಿಂಗಾಂಗ ಸಂಗಿಗಳೊಡನೆ ಶಿವತತ್ತ್ವಾನುಭವ ಗೋಷ್ಠಿಗಳನ್ನು ಮಾಡುತ್ತ ಸಿದ್ಧಲಿಂಗನು ಇದ್ದನು. ಆಗ ಎಡೆಯೂರೆಂಬ ಗ್ರಾಮದ ಮೃಡಭಕ್ತರು ಬಂದು ವಂದಿಸಿ ತಮ್ಮೂರಿಗೆ ಕರೆದುಕೊಂಡು ಹೋದರು. ಆ ಗ್ರಾಮದಲ್ಲಿದ್ದ ಸಿದ್ಧರಾಮಯ್ಯನೆಂಬ ಭಕ್ತನು ಯತಿಗಳನ್ನು ಪೂಜೆಗಾಗಿ ತನ್ನ ಮನೆಗೆ ಕರೆದುಕೊಂಡು ಹೋದನು. ಅವನ ಮನೆಗೆ ಹೋಗಿ ಮೃದುಗದ್ದುಗೆಯಲ್ಲಿ ಕುಳಿತು, ಎಲ್ಲ ಸ್ನಾನಕ್ಕಿಂತ ಭಸ್ಮಸ್ನಾನ ಶ್ರೇಷ್ಠವೆಂದು ಅವನಿಗೆ ತಿಳಿಸಿ, ಅಲ್ಲಿ ಭಸ್ಮೋದ್ಧೂಳಿತ ವಿಗ್ರಹನಾಗಿ ರುದ್ರಾಕ್ಷಿಗಳನ್ನು ಧರಿಸಿ ಲಿಂಗದಲ್ಲಿ ಲೀಯವಾಗಿ ತನುತ್ರಯದಲ್ಲಿ ಲಿಂಗತ್ರಯ ಪೂಜೆಯನ್ನು ಜಾಗೃತ ಸ್ವಪ್ನ ಸುಷುಪ್ತಿಯಿಂದ ನಿಬ್ಬೆರಗುಗೊಳಿಸಿ ಚಿತ್ರದ ಗೊಂಬೆಯಂತೆ ಕುಳಿತುಬಿಟ್ಟನು. ಈ ರೀತಿಯಲ್ಲಿ ಕುಳಿತ ಸಿದ್ಧಲಿಂಗನ ಸ್ಥಿತಿಯಿಂದ

ಉಳಿದ ಜಂಗಮಕ್ಕೆಲ್ಲ ಪ್ರಸಾದಕ್ಕೆ ಬಹಳ ವೇಳೆಯಾಯಿತು. ಯತಿಗಳನ್ನು ಎಬ್ಬಿಸಿ ರೆಂದರು. ಅವರು ಎಬ್ಬಿಸಿದರೂ ಯತಿ ನಿಶ್ಶಬ್ದದಲ್ಲಿಯೇ ಇದ್ದನು. ಎಲ್ಲರಿಗೂ ಆಶ್ಚರ್ಯದ ಮೇಲೆ ಆಶ್ಚರ್ಯ. ವೀಣೆ ಮೊದಲಾದ ತಂತ್ರೀವಾದ್ಯಗಳನ್ನು ಶ್ರುತಿಗೊಳಿಸಿ ಅನೇಕ ಭಕ್ತರು ಭಕ್ತಿಗೀತೆಗಳನ್ನು ಹಾಡಿ ಎಚ್ಚರಗೊಳಿಸಲು ಯತ್ನಿಸಿದರು. ಮೂರು ದಿನದವರೆಗೂ ಹಾಡೇ ಹಾಡಿದರು. ಕೊನೆಗೆ ಯತೀಶ್ವರನು ಬಹಿರ್ಮುಖನಾದನು. ಭಕ್ತರು ಉಘೇ ಉಘೇ ಎಂದು ಕೊಂಡಾಡಿದರು. ಯತಿಯ ಪಾದಗಳ ಮೇಲೆ ಬಿದ್ದು ಹೊರಳಾಡಿದರು. ಅವರೆಲ್ಲರೂ ಬಸವಣ್ಣನವರು ಕಲ್ಯಾಣದಲ್ಲಿ ಮಾಡಿದ ಅನೇಕ ಮಹಿಮೆಯ ಕಥೆಗಳನ್ನು ನೆನೆಸಿಕೊಂಡು ನಾವಿಲ್ಲಿ ಸಿದ್ಧಲಿಂಗೇಶನು ಲಿಂಗದಲ್ಲಿ ಮೂರು ದಿನಗಳ ಪರ್ಯಂತ ಲೀಯವಾಗಿದ್ದ ಸ್ಥಿತಿಯನ್ನು ಕಣ್ಣಾರೆ ಕಂಡೆವೆಂದರು. ಆಗ ಸಿದ್ಧೇಶ್ವರನು ಸರ್ವರೊಡನೆ ಪ್ರಸಾದ ಸ್ವೀಕರಿಸಿ ತೃಪ್ತನಾಗಿದ್ದನು. (ಚತುರ್ಥಾಶ್ವಾಸ)

ಎಡೆಯೂರಿನಲ್ಲಿ ಶಿವತತ್ತ್ವಾನುಭಾವದಲ್ಲಿ ಕಾಲಕಾಳೆಯುತ್ತ ಮುದಗೊಂಡು ಸಿದ್ಧಲಿಂಗೇಶ್ವರನಿರುವಾಗ ಒಂದು ವಸಂತಕಾಲ ಬಂತು. ಮಾರ್ಗವನ್ನೆಲ್ಲ ಕಾವೇರಿಸುವ ಬಿಸಿಲು ಅಧಿಕವಾಯಿತು. ಬೆಟ್ಟಗಳನ್ನು ಸೀಳುತ್ತ, ಮೃಗಖಗಾದಿಗಳ ಜೀವನವನ್ನೇ ಸುಟ್ಟುರುಪತಕ್ಕ ಆ ಬಿಸಿಲಿನ ಬೇಗೆ ರವಣನೆಂಬ ದೈತ್ಯನನ್ನು ಕೊಲ್ಲಲು ಕಾರಿದ ಸೂರ್ಯವೀಚಿಯೋ ಎಂಬಂತೆ ಪ್ರಖರಗೊಂಡಿತು. ಇಂಥ ಭಯಂಕರ ಉಷ್ಣಕಾಲದಲ್ಲಿ ಭಕ್ತರುಗಳು ಕುಸುಮಮಂಟಪದಲ್ಲಿ ಮೂರ್ತಗೊಂಡ ಸಿದ್ಧಲಿಂಗೇಶ್ವರನಿಗೆ ಉಷ್ಣತಾಕಿ ತೊಂದರೆಯಾಗದ ರೀತಿಯಲ್ಲಿ ಸೇವಿಸುತ್ತಿದ್ದರು. ಸಿದ್ಧಲಿಂಗನನ್ನು ಸೇವಿಸಲೆಂದು ಅನೇಕಜನ ಚರಜಂಗಮರು ಬಂದು ಸೇವೆಯಲ್ಲಿ ನಿರತರಾಗಿ ಶಿವಾನುಭವ ಪ್ರಸಂಗಗಳ ಗೋಷ್ಠಿಯಲ್ಲಿ ನಿರತರಾಗಿದ್ದರು. ಕೆರೆ ತೊರೆ ತಟಾಕಗಳಲ್ಲಿ ಬೇಸಿಗೆಯ ಫಲವಾಗಿ ನೀರಿಲ್ಲದೆ ಶಿವಪೂಜೆಗೆ ತೊಂದರೆಯಾದ ಸ್ಥಿತಿಯನ್ನು ಸಿದ್ಧಲಿಂಗನಿಗೆ ಅರಿಕೆಮಾಡಿ ಕೊಳ್ಳಲು, ಯತೀಶ್ವರನು ಈ ತೊರೆಯಲ್ಲಿ ನೀರು ವಿಪುಲವಾಗಿ ಬರುವುದೆಂದು ಹೇಳು ತ್ತಿದ್ದಂತೆ ತೊರೆತುಂಬಿ ಹರಿಯಲುಪಕ್ರಮಿಸಿತು. ಅದು ಭಗೀರಥನು ಸ್ವರ್ಗದಿಂದ ಗಂಗೆಯನ್ನು ತಂದ ರೀತಿಗೆ ಸಮನಾಯಿತು. ಹೀಗೆ ತುಂಬಿಬಂದ ತೊರೆಯಲ್ಲಿ ಭಕ್ತರು ಚರಜಂಗಮರೂ ಸ್ನಾನಾದಿಗಳನ್ನು ಮಾಡಿ ತಮ್ಮ ವ್ರತಾದಿಗಳನ್ನು ನೆರವೇರಿಸಿ ಕೊಂಡರು.

ಎಡೆಯೂರಿನಿಂದ ಹೊಳಲುಗುಂದ ಗ್ರಾಮಕ್ಕೆ ಅಲ್ಲಿನ ಭಕ್ತರು ಬಂದು ಯತೀಶ್ವರ ನನ್ನು ಕರೆದೊಯ್ದು ಪೂಜಿಸಿದರು ಒಂದು ದಿನ ಸಿದ್ಧಲಿಂಗೇಶ್ವರನು ಆ ಹೊಳಲು ಗುಂದದ ಹೊರಭಾಗದಲ್ಲಿನ ದೇವಿಯ ಮಂದಿರದ ಪಕ್ಕದಲ್ಲಿರುವ ಕಲ್ಲುಗುಂಡೊಂದರ ಮೇಲೆ ಕುಳಿತುಕೊಂಡು ಶಿವಯೋಗಾನಂದದಲ್ಲಿ ಮುಳುಗಿದನು. ಸೂರ್ಯಾಸ್ತವಾಯಿತು. ಊರಿನ ಭಕ್ತರು ಸ್ವಾಮಿಯನ್ನು ಕಾಣದಾದರು. ಭಯಂಕರ ಕಗ್ಗತ್ತಲೆ ಆವರಿಸಿತು. ಕಾರ್ಮುಗಿಲು ಆಕಾಶವನ್ನೆಲ್ಲ ಆವರಿಸಿ ಮಿಂಚತೊಡಗಿತು. ಆ ಘೋರಾಂಧಕಾರದಲ್ಲಿ

ಸಿದ್ಧನು ಓರ್ವನೇ ಇದ್ದಾನೆಂದು ಶಕ್ತಿಯು ಭಕ್ತಿಯಿಂದ ಸುಂದರರೂಪಧರಿಸಿ ಅನೇಕ ವಿಳಾಸಿನೀ ಸ್ತ್ರೀಯರೊಡನೆ ಅವನ ಹತ್ತಿರಕ್ಕೆ ಬಂದಳು. ಅದೊಂದು ಸುಂದರ ವನಿತೆಯರ ತಂಡವೇ ಆಗಿತ್ತು. ಅನೇಕರು ವೀಣೆ, ಸ್ವರಮಂಡಲ, ಕುಂಚ, ಕಳಾಂಜಿಗಳನ್ನು ಹಿಡಿದಿದ್ದರು. ಕನ್ನಡಿ, ಗಂಧ, ಕಸ್ತೂರಿ, ಕರ್ಪೂರ, ಕಜ್ಜಳಾದಿ ಕರಂಡಗಳು ಅವರ ಹಸ್ತಗಳಲ್ಲಿದ್ದವು. ದೇವಿಯು ಇಂಥ ಕಗ್ಗತ್ತಲೆಯಲ್ಲಿ ಸಿದ್ಧೇಶನ ಹತ್ತಿರ ಬಂದು ವಂದಿಸಿ ನಿಂತಳು. ಆಗ ಸಿದ್ಧನು ನಿರ್ಭಯದಿಂದ 'ನೀನಾರು? ನಿನ್ನ ಇಷ್ಟವೇ'ನೆಂದು ಕೇಳಿದನು. ಆಗ ಅವಳು 'ನಾನು ಹೊಳಲುಗುಂದದಲ್ಲಿಯ ಮಹಾದೇವಿ. ಬಹು ಕಾಲದಿಂದ ಈ ವನದಲ್ಲಿದ್ದೇನೆ. ಸ್ವಾಮಿಯು ಈ ದಿನ ನನ್ನ ಮಂದಿರಕ್ಕೆ ದಯಮಾಡಿಸಿ ನನ್ನನ್ನು ಪಾವನಗೊಳಿಸಬೇಕೆ'ಂದು ಕೇಳಿದಳು. ಸಿದ್ಧಲಿಂಗನು ಒಪ್ಪಿ ಅವಳ ಮಂದಿರಕ್ಕೆ ಹೋದನು. ಅವಳು ಸಿದ್ಧೇಶನ ಪಾದಾರ್ಚನೆಮಾಡಿ ಪಾದತೀರ್ಥ ಧರಿಸಿದಳು. ಯತೀಶನಿಗೆ ಸುಗಂಧಾನುಲೇಪನ ಮಾಡಿದಳು. ಹೂವುಗಳಿಂದ ಶೃಂಗರಿಸಿ ಮುತ್ತಿನಾರತಿಯನ್ನೆತ್ತಿದಳು. ಬೆಳಗಿನವರೆಗೆ ಅನೇಕ ವಿಧವಾದ ಸೇವಾ ಕಾರ್ಯ್ಯಗಳನ್ನು ಮಾಡಿದಳು. ಬೆಳಗಾಗುತ್ತಲೆ ಸಿದ್ಧಲಿಂಗೇಶ್ವರನನ್ನು ಹುಡುಕಿಕೊಂಡು ಬಂದ ಭಕ್ತರು ಪೂರ್ವದಲ್ಲಿ ರೇವಣಸಿದ್ಧೇಶ್ವರನು ಮೈಲಾರೇಶ್ವರನಿಂದ ಪೂಜೆಮಾಡಿಸಿಕೊಂಡ ಮತ್ತು ಕಲ್ಲಿಸೆಟ್ಟಿಯ ಕೊಟ್ಟಿಗೆಯಲ್ಲಿ ಸಿರಿಸರಸ್ವತಿಯರಿಂದ ಪೂಜಿಸಿಕೊಂಡುದನ್ನು ಕೇಳಿದ್ದೆವು. ಈಗ ಸಾಕ್ಷಾತ್ ದುರ್ಗಿಯಿಂದ ಸಿದ್ಧಲಿಂಗೇಶ್ವರನು ಪೂಜಿಸಿಕೊಂಡುದನ್ನು ಕಣ್ಣಾರ ನೋಡಿದೆವೆಂದು ಕೊಂಡಾಡಿದರು.

ನಾಗಸಮುದ್ರದ ಜನರು ಬಂದು ತಮ್ಮ ಗ್ರಾಮಕ್ಕೆ ಕರೆದುಕೊಂಡು ಹೋದರು. ಆ ಊರ ಭಕ್ತರ ಪೂಜೆಯನ್ನು ಸ್ವೀಕರಿಸುತ್ತಿರುವಾಗ ಮಳೆಗಾಲ ಪ್ರಾರಂಭವಾಯಿತು. ಭೋರೆಂದು ಮಳೆ ಸುರಿಯುತ್ತಿತ್ತು. ಇಂಥ ಮಳೆಗಾಲದಲ್ಲಿ ಸಿದ್ಧಲಿಂಗನ ದರ್ಶನಕ್ಕೆಂದು ಲಿಂಗಭೋಗೋಪಭೋಗಿಗಳಾದ ಅನೇಕ ಲಿಂಗವಂತರೂ ಜಂಗಮ ತಿಂಥಿಣಿಯೂ ಬಂದಿತು. ಅವರೊಡನೆ ಸಿದ್ಧಲಿಂಗೇಶನು ಊರಹೊರಗಿನ ಒಂದು ಸ್ಥಳದಲ್ಲಿ ಶಿವಾನುಭಾವಗೋಷ್ಠಿಯಲ್ಲಿದ್ದನು. ಮೇಘದ ಗರ್ಜನೆ ಅಧಿಕವಾಯಿತು. ಬಿರುಗಾಳಿ ಬೀಸಿತು. ಆಗ ಭಕ್ತರೆಲ್ಲ ಭಯಂಕರ ಬಿರುಗಾಳಿ ಬಿರುಮಳೆ ಬರುತ್ತಿದೆ, ಎಂದು ಅಂಜಿ ಸ್ವಾಮಿಯವರಿಗೆ ಇಲ್ಲಿಯೇ ಪಕ್ಕದಲ್ಲಿ ಕಲ್ಲಿನಾಥನ ಗುಡಿಯಿದೆ ಅಲ್ಲಿಗೆ ಬಿಜಯಂಗೈಸಿ ನಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು. ಸಿದ್ಧೇಶನು ಮೇಲೆದ್ದು ಸಮಸ್ತರೊಡನೆ ಕಲ್ಲಿನಾಥನ ದೇವಾಲಯಕ್ಕೆ ಬಂದನು. ಆಗ ದೇವಾಲಯದ ಕದ ಮುಚ್ಚಿ ಬೀಗಮುದ್ರೆಯಿಂದ ಕೂಡಿತ್ತು. ಸಿದ್ಧೇಶನು ಬಂದೊಡನೆ ಒಮ್ಮೆಲೆ ಕಲ್ಲಿನಾಥನು ಹೆದರಿ ದೇವಾಲಯದ ಆ ಭದ್ರವಾದ ಕದಗಳನ್ನು ತಾನೇ ತೆರೆದನು. ಸೌರಾಷ್ಟ್ರದ ಸೋಮೇಶ್ವರನು ಓಹಿಲರಾಜನಿಗೆ, ಕೂಡಲಸಂಗಮೇಶ್ವರನು ಬಸವಣ್ಣನಿಗೆ, ಹುಲಿಗೆರೆಯ ಸೋಮೇಶ್ವರನು ಆದಿಮಯ್ಯನಿಗೆ, ಕಾಳಹಸ್ತೀಶ್ವರನು ಕಣ್ಣಪ್ಪನಿಗೆ......ಕದ ತೆಗೆದಂತಾಯಿತೆಂದು ಭಕ್ತರೂ ಜಂಗಮರೂ ಆಶ್ಚರ್ಯಪಟ್ಟರು.

ಮಂಗಲವೆಂಬೂರಿನ ಭಕ್ತರು ಬಂದು ತಮ್ಮೂರಿಗೆ ಸಿದ್ಧೇಶನನ್ನು ಕರೆದು ಕೊಂಡು ಹೋದರು. ಮಳೆಯು ಘೋರೆಂದು ಸುರಿಯುತ್ತಲೇ ಇತ್ತು. ಆ ಮಳೆ ಇಳೆಯೊಂಡ ಗುಡಿಮಾರಯ್ಯನ ಅಳವಳವನ್ನು ನೋಡಲು ಹರನೇ ಕಳುಹಿದ ಮಳೆಯೋ, ಸಿಂಧು ಬಲ್ಲಾಳನ ಮಸದಂದವ ನೋಡಲ್ಕೆ ಶಿವನು ಕಳಿಸಿದ ಮಳೆಯೋ ಎಂಬಂತೆ ಇತ್ತು. ಇಂಥ ಕಾರ್ಗಾಲದಲ್ಲಿ ಆ ಊರ ಭಕ್ತರಿಂದ ಭಕ್ತಿಯುಪಚಾರದಲ್ಲಿ ಸಿದ್ಧನಿದ್ದನು. ಆಗ ನೆರೆಯೂರಿನ ಕೆಲವು ಭಕ್ತರು ಬಂದು 'ಸ್ವಾಮಿ ನಮ್ಮೂರು ಇಲ್ಲೇ ಪಕ್ಕದಲ್ಲಿದೆ; ಅಲ್ಲಿಗೆ ಬಿಜಯಮಾಡಬೇಕೆ'ಂದು ಕೇಳಿದ ಬಿನ್ನಹ ಮನ್ನಿಸಿ ಚರ ತಿಂಥಿಣಿಯೊಡನೆ ಹೊರಟನು. ಭಯಂಕರವಾದ ಮಳೆಯ ಕಾರಣ ಹೊಳೆಯೊಂದು ತುಂಬಿ ಸರಿಯುತ್ತಿತ್ತು. ಎಲ್ಲ ಜಂಗಮರೂ ಹಿಂದಕ್ಕೆ ತಿರುಗಬೇಕೆಂದು ಬೇಡಿದರು. ಸಿದ್ಧೇಶ್ವರನು 'ಲಿಂಗಾಂಗಿಯನು ಗಂಗೆತಾನೇನ ಮಾಳ್ಪಳು?' ಎಂದು ನದಿಯಲ್ಲಿ ಪಾದವಿಟ್ಟರು. ಹರಿಯುವ ಗಂಗೆ ನಿಂತು ತಾಯಿಮಳಲು ಕಾಣಿಸತೊಡಗಿತು. 'ಸೋಮಾಸಿಮಾರನು ಕಾಮಾರಿಯ ನಿರ್ಮಾಲ್ಯದ ಪೂಸರವನ್ನು ಪ್ರೇಮದಿಂದ ಕಾವೇರಿಯಲ್ಲಿ ನೀಡಲು ಅದು ದಾರಿಕೊಟ್ಟಂತಾಯಿತು. ತಿರುಜ್ಞಾನಿ ಸಂಬಂಧರಿಗೆ ಮತ್ತು ವಾಗೀಶ್ವರರಿಗೆ ಕಾವೇರೀ ನದಿಯೂ, ಮಡಿವಾಳಯ್ಯಂಗೆ ಭೀಮರತಿಯೂ, ಬಸವಣ್ಣನಿಗೆ ಕೃಷ್ಣವೇಣಿಯೂ ಹಂಪೆಯ ಹರೀಶ್ವರನಿಗೆ ತುಂಗಭದ್ರೆಯೂ, ಸಾಸಲ ಭೈರವನಿಗೆ ಹೇಮಾವತಿಯೂ, ರೇವಣಸಿದ್ಧೇಶ್ವರನಿಗೆ ಮಾಸೂರು ಮದಗದ ಕೆರೆಯೂ ದಾರಿಕೊಟ್ಟಂತಾಯಿತೆಂದು ಎಲ್ಲರೂ ಹೊಗಳಿದರು. ಸಿದ್ಧೇಶನು ಆ ಗ್ರಾಮಕ್ಕೆ ಹೋಗಿ ಆ ಜನರ ಭಕ್ತಿಯನ್ನು ಸ್ವೀಕರಿಸಿದನು.

ಹೂಲಿಯೂರು ಎಂಬಲ್ಲಿ ಮಾಹೇಶ್ವರ ಜ್ವರಹೊಕ್ಕು ಜನರನ್ನು ಕಾಡುತ್ತಿತ್ತು. ಸಿದ್ಧೇಶ್ವರನು ಬಂದು ಊರು ಹೊಕ್ಕರೆ ಜ್ವರದ ಬಾಧೆ ನೀಗುವುದೆಂದು ಜನರು ಬಂದು ವಂದಿಸಿ ಬಿನ್ನವಿಸಿಕೊಂಡರು. ಸಿದ್ಧೇಶನು ಒಪ್ಪಿ ಹೋಗುವ ಮಾರ್ಗದ ಘೋರ ಅರಣ್ಯದಲ್ಲಿ ದೊಡ್ಡ ದೊಡ್ಡ ಗಿಡಮರಗಳು, ಆನೆ, ಸಿಂಹ, ನರಿ ಮೊದಲಾದ ವನ್ಯ ಮೃಗಗಳು, ಪಕ್ಷಿಗಳು ತುಂಬಿದ್ದವು. ಇಂಥ ಅರಣ್ಯಕ್ಕೆ ಶಿವನು ಭವಾನಿಯೊಡನೆ ಇತರ ದೇವತೆಗಳೊಡನೆ ಮತ್ತು ದೇವತಾಸ್ತ್ರೀಯರೊಡನೆ ಸಿದ್ಧಲಿಂಗನ ನಿಃಕಲತ್ವ, ನಿರಾಶಾನೀಕ, ಧೈರ್ಯ, ಶಾಂತಿ, ನಿಃಕ್ರೋಧ ಗುಣವನ್ನು ನೋಡಬೇಕೆಂದು ಶಬರ ರೂಪದಿಂದ ಬಂದಿಳಿದಿದ್ದನು. ಇವರ ಬೇಟೆಯಾಡುವ ಕೆಲಸ ಭರದಿಂದ ನಡೆದಿತ್ತು. ಮೃಗ-ಪಕ್ಷಿಗಳೊಡನೆ ಶಬರರ ಘೋರ ಸೆಣಸಾಟ ಸಾಗಿತ್ತು. ಇವನ್ನೆಲ್ಲ ಸಿದ್ಧೇಶನು ನೋಡುತ್ತ ಬರುತ್ತಿರುವಾಗ ಶಬರರೆಲ್ಲ ಸಿದ್ಧೇಶ ಮತ್ತು ಇತರ ಚರಜಂಗಮರು ಮತ್ತು ಭಕ್ತರನ್ನು ಸುತ್ತಿಮುತ್ತಿ ಸಿಲ್ಲಿಸಿ ಸುಲಿಗೆಮಾಡತೊಡಗಿದರು. ಸಿದ್ಧೇಶನು ಶಬರವೇಷದ ಶಿವನನ್ನು ಕಂಡು ತನ್ನಲ್ಲಿದ್ದ ಬೆವರ್ಮಾಸವನ್ನು ಹಿಡಿದು 'ಶಬರನೇ ಬದುಕು' ಎಂದು ಹರಸಿ ಕೈಯೆತ್ತಿದರು. ಉಳಿದ ಜಂಗಮರೂ ತಮ್ಮ ತಮ್ಮ ಕೈಗಳಲ್ಲಿದ್ದ ಬೆಮರ್ವಾಸ, ಪುಸ್ತಕ, ಧೋತ್ರ, ಟೊಪ್ಪಿಗೆ ಮೊದಲಾದುವನ್ನು ಮೇಲಕ್ಕೆತ್ತಿ 'ಕೋ ಕೋ' ಎಂದರು,

ಶಬರಾಧೀಶನು ಯಶೀಶ್ವರನ ಶಾಂತಿ-ಸದ್ಗುಣಗಳಿಗೆ ಬೆರಗಾದನು. ಸಿದ್ಧನಿಗೆ ವಂದಿಸಿ 'ನಿಮ್ಮನ್ನು ನಾವು ಸುಲಿಗೆ ಮಾಡಲಾರೆವು ಹೋಗಬಹುದೆಂ'ದನು. ಅದಕ್ಕೆ ಸಿದ್ಧೇಶನು, 'ಮಗನೇ, ನನಗೆ ನನ್ನ ಶಿಷ್ಯರಿದ್ದಾರೆ. ಅವರು ನನಗೆ ಏನೆಲ್ಲವನ್ನೂ ಕೊಡುತ್ತಾರೆ. ನಿನಗಾರು ಕೊಟ್ಟಾರು' ! ಎನ್ನಲು ಶಬರವೇಶದ ಶಿವನು ನಸುನಕ್ಕು 'ನನ್ನ ವಸ್ತುಗಳೆಲ್ಲವನ್ನು ನಿನಗೆ ನಾನು ಭಕ್ತಿಯಿಂದ ಅರ್ಪಿಸಿದ್ದೇನೆ.' ಎಂದು ಹೇಳುತ್ತ ಸಮಸ್ತ ಶಬರರು ಸಮೇತವಾಗಿ ಮಾಯವಾದನು. ಎಲ್ಲರೂ ಈ ಆಶ್ಚರ್ಯಕ್ಕೆ ಬೆರಗಾಗಿ, ಓಹಿಲನ ಮನಮಂ ನೋಡಲು ಸೌರಾಷ್ಟ್ರ ಸೋಮೇಶ್ವರನು ವ್ಯಾಧರೂಪದಿಂದಲೂ, ಅರ್ಜುನನಲ್ಲಿ ಯುದ್ಧಮಾಡಲೆಂದು ಕಿರಾತರೂಪದಿಂದಲೂ, ವೆಳ್ಮತಯ್ಯಗಳ ಗುರುಭಕ್ತಿಯನ್ನು ನೋಡಲೆಂದು ಶಬರವೇಷದಿಂದಲೂ ಶಿವನು ಬಂದನೆಂದು ಪೂರ್ವದ ಕಥೆಗಳಲ್ಲಿ ಕೇಳಿದ್ದೆವು. ಈಗ ಸಿದ್ಧಲಿಂಗೇಶನ ಮನಸ್ಸನ್ನು ನೋಡಲು ಶಬರಲೀಲೆಯಿಂದ ಶಿವನು ಬಂದದನ್ನು ಕಣ್ಣಾರ ಕಂಡೆವೆಂದರು. ಹೀಗೆ ಸಿದ್ಧಲಿಂಗನು ಅರಣ್ಯದಲ್ಲಿ ನಡೆದು ಬಂದು ಹುಲಿಯೂರನ್ನು ಹೊಕ್ಕೊಡನೆ ಅಲ್ಲಿನ ಮಾಹೇಶ್ವರ ಜ್ವರದಬಾಧೆ ಹಿಂಗಿತು. ಜನರು ಆಶ್ಚರ್ಯಪಟ್ಟ ದ್ರಾವಿಡದೇಶದ ಶಿವ ಪುರದಲ್ಲಿಯ ಜ್ವರ ತಿರುಜಾನವಂ ಬಂಧರು ಬರಲು ಹೋಯಿತು. ತಿಲ್ಲವಲ್ಲಿನಾಚಿಯ ಮುಖ ಕಂಡಾಕ್ಷಣ ವಾಗೀಶರ ಜ್ವರಬಿಟ್ಟೋಡಿತ್ತು. ಉತ್ತುಂಗಚೋಳನು ಕೃತಾಂತನ ಮೇಲೆಂದು ಎಡಕಾಲಲ್ಲಿ ತೊಡದು ಕಟ್ಟಿದಾಗಲೆ ಆತನಾಳ್ವದೇಶದಲ್ಲಿಯ ಜ್ವರ ಹೋಗಿತ್ತು, ಇವೇ ಮೊದಲಾದ ಕಥೆಗಳನ್ನು ಕೇಳಿದ್ದೆವು. ಈಗ ಪ್ರತ್ಯಕ್ಷ ಕಂಡೆವೆಂದು ಮಾತನಾಡಿದರು.

ಆಗ ಹುಲಿಯೂರಿನ ವಾಮಲೋಚನೆಯರು ಸಿದ್ಧೇಶನ ದರ್ಶನಕ್ಕೆ ಬಂದರು. ಓರ್ವ ಕಳ್ಳಿಯೂ ಆ ಗುಂಪಿನಲ್ಲಿದ್ದಳು. ಗುರುಸಿದ್ಧಲಿಂಗೇಶನಲ್ಲಿ ಮುಕ್ತಿಯಂ ಬೇಡ ಬಂದಳೋ ಎಂಬಂತೆ ಬಂದಿದ್ದಳು. ಹೆಂಗಸರೆಲ್ಲ ಸಿದ್ಧಲಿಂಗನಿಗೆ ವಂದಿಸಿ ಕತ್ತಲಾಗಲು ಊರಲ್ಲಿ ಒಂದು ಮನೆಯಲ್ಲಿ ನಿದ್ರೆಗೆಯ್ಯಲು ಹೋಗಿ ಮಲಗಿದಾಗ ಕಳ್ಳಿಯಾದ ಹೆಂಗಸು ಓರ್ವ ಹೆಣ್ಣುಮಗಳ ಮುತ್ತಿನಮೂಗುತಿಯನ್ನು ಕದ್ದಳು. ಬೆಳಗಾಯಿತು. ಮೂಗುತಿ ಕದ್ದವರಾರೆಂದು ತನಿಖೆ ಪ್ರಾರಂಭವಾಯಿತು. ಸಿದ್ಧಲಿಂಗನ ಪಾದಮುಟ್ಟಿ ಕೈಯೆತ್ತಿ ಆಣೆಮಾಡಿ ಒಬ್ಬೊಬ್ಬರೇ ಹೋಗಬೇಕೆಂದು ತೀರ್ಮಾನವಾಯಿತು. ಅದರಂತೆ ಎಲ್ಲರೂ ಮಾಡಿದರು. ಕಳ್ಳಹೆಂಗಸು ಬಲದ ಕೈಯೆತ್ತಿದಳು. ಆದರೆ ಅವಳ ಎತ್ತಿದಕೈ ಇಳಿಯಲೇ ಇಲ್ಲ. ಬಾದರಾಯಣನು ಹಿಂದೆ ಕಾಶಿಯಲ್ಲಿ ಎತ್ತಿದಕೈ ಹಾಗೇ ನಿಂತಂತೆ ಆಯಿತು. ಭಾಸ್ಕರರಾಜ ಸೂರ್ಯನಾರೋಗಣೆಗೆ ರತ್ನಪರಿವಾಣದಲ್ಲಿ ಭಕ್ಷ್ಯಾನ್ನಪಾನಾದಿ ಗಳನ್ನು ಕಳಿಸಲು ಕರಿಕಾಲ ಚೋಳನ ಭಟರು ಬಂದು ಚೋಳನೃಪನ ಪಾದದಾಣೆ ಯಿಡಲು ಅಂತರದಲ್ಲಿಯೇ ಹರಿವಾಣವು ನಿಂತಂತಲ್ಲ. ಬಾಚರಸನ ಲೆಕ್ಕದ ನಿಮಿತ್ತ ಬಸವೇಶ್ವರಂ ಹನ್ನೊಂದು ದಿನ ಅಂತರಿಕ್ಷದಲ್ಲಿ ಸೂರ್ಯನನ್ನು ನಿಲ್ಲಿಸಿದಂತಲ್ಲ. ಹರಿ ಗೋವರ್ಧನಗಿರಿಯ ನೆಗಪಿದಂತಲ್ಲ. ಬಸವೇಶ್ವರನು ಗೊಲ್ಲತಿಯ ಕೊಡವನ್ನು

ಅಂತರಿಕ್ಷದಲ್ಲಿ ನಿಲ್ಲಿಸಿದಂತಲ್ಲ. ಸಾಸಲ ಭೈರವನ ರಾಣಿ ಮಹಾದೇವಿ ಸಣ್ಣಕ್ಕಿಯುನ್ನ ಥಳಿಸುವಾಗ ಜಂಗಮರು ಬರಲಾಗಿ ಒನಕೆಯನ್ನು ಬಿಡಲಾಗಿ ಅದು ಅಂತರಿಕ್ಷದಲ್ಲಿ ನಿಂತಂತಲ್ಲ. ಈಗ ಸಿದ್ಧಲಿಂಗೇಶನ ಪಾದದಾಣೆಯೆಂದು ನೆಗಪಿದ ಹಸ್ತವು ಅಂತರಿಕ್ಷದಲ್ಲಿ ಸಿಕ್ಕುಹೋಗಿರುವುದು ಇದು ಮಹಾಶ್ಚರ್ಯವೆಂದು ಎಲ್ಲರೂ ಕೊಂಡಾಡುತ್ತಿರಲು, ಆ ಹೆಂಗಸು ತನ್ನ ತೋರ ತುರುಬಿನಲ್ಲಿದ್ದ ಮುತ್ತಿನ ಮೂಗುತಿಯನ್ನು ಎಡಹಸ್ತದಿಂದ ತೆಗೆದು ಸಿದ್ಧಲಿಂಗನ ಪಾದತಲದಲ್ಲಿಡಲು ಬಲದಹಸ್ತವು ಎಂದಿನಂತಾಯಿತು. ಅವಳು ನಾಚಿದಳು.

ಆಮೇಲೆ ಸಿದ್ಧಲಿಂಗೇಶ್ವರನು ಆರೋಗಣೆಗೆ ನಡೆದನು. ದಾರಿಯಲ್ಲಿ ಬರುವಾಗ ಓರ್ವನಾರಿಯು ದೂರದ ಯುದ್ಧವೊಂದರಲ್ಲಿ ತನ್ನಗಂಡ ಸತ್ತ ಕಾರಣದಿಂದ ಅಗ್ನಿ ಕೊಂಡದಲ್ಲಿ ಪ್ರವೇಶಿಸಲು ಬರುತ್ತಿದ್ದಳು. ಅವಳು ಸಿದ್ಧೇಶನಿಗೆ ನಮಸ್ಕರಿಸಿದಳು. ಸಿದ್ಧನು, 'ನಾರೀ ನೀನು ಬದುಕೆ'ಂದು ಆಶೀರ್ವದಿಸಿದನು. 'ಸ್ವಾಮಿ, ಸಾಯುತ್ತಿರುವ ನನಗೆ ನೀನು ಬದುಕು ಎಂದುದು ಚೋದ್ಯವಲ್ಲವೆ?' ಎಂದಳು. 'ಎಲೆ ಅಂಗನೆಯೇ ಮೂರುದಿನ ಬದುಕು ಅಷ್ಟರಲ್ಲಿ ನಿನ್ನಗಂಡ ಬರುವನೆಂ'ದರು. ಮೂರು ದಿನಗಳಿಗೆ ಅವಳ ಪತಿಯು ಬಂದನು, ಅವನು ಬಂದುದನ್ನು ಕಂಡು, ಹಿಂದೆ ವಿಮಾನದ ಮುಂದೆ ಮೆರೆದು ಹೋಗುವಾಕೆ ಬಸವೇಶ್ವರನಿಗೆ ಕರಕಮಲವಂ ಮುಗಿಯಲು ಬದುಕೆಂದು ಹರಸಿ ಆ ಹೆಣಕ್ಕೆ ಪ್ರಾಣವನ್ನು ಇತ್ತ, ಹಾಗಲ್ಲ. ಮುಸುಟೆಯ ಚೌಡಯ್ಯನಂ ನಮಿಸಿದ ನಾರಿಗೆ ಆಶೀರ್ವಾದಮಾಡಿದ ಮರುದಿನಕ್ಕಸುವಿತ್ತ ಅಂದವಲ್ಲ. ವಿಮಾನದ ಹಿಂದೆ ಅಳುತ್ತ ಹೋಗುವ ನಾರಿಯು ದೈನ್ಯಕ್ಕೆ ಮರುಗಿ ಆ ಶವಕ್ಕೆ ಪ್ರಾಣ ಕೊಟ್ಟ ಸಿದ್ಧ ರಾಮಯ್ಯನಂತಲ್ಲ. ಹಾವುಕಚ್ಚಿದ ಅರಸನ ವಧುವು ದೈನ್ಯಂಬಡಲು ಅವಳ ಪತಿಗೆ ಪ್ರಾಣವಿತ್ತ ವೇಮನಾರಾಧ್ಯನಂತಲ್ಲ. ಬಾಲಕನ ಮುದ್ದು ಮಾತುಗಳಿಗೊಲಿದು ಚಿಕ್ಕ ಮಾದಣ್ಣನಿಗೆ ಪ್ರಾಣಕೊಟ್ಟ ಸಕಲೇಶ ಮಾದರಸನಂತಲ್ಲ. ಈಗ ಸಿದ್ಧಲಿಂಗೇಶ್ವರನು ಮೆರವಣಿಗೆಯಲ್ಲಿ ಚಿತೆಗೆ ಹೋಗುವಾಕೆಗೆ ಮೂರುದಿನಕ್ಕೆ ನಿನ್ನ ಗಂಡ ಬರುವನೆಂದು ಸೂಚಿಸಿದುದು ಮಹಾಶ್ಚರ್ಯವೆಂದು ಕೊಂಡಾಡುತ್ತಿದ್ದರು.

ಸಿದ್ಧಲಿಂಗೇಶ್ವರನು ಆರೋಗಣೆಯನ್ನು ಆ ಹಳ್ಳಿಯಲ್ಲಿ ಮುಗಿಸಿದನು. ಬಂಡಿ ಹಳ್ಳಿಯ ಭಕ್ತರು ಬಂದು ತಮ್ಮೂರಿಗೆ ಭಕ್ತಿಯಿಂದ ಸಿದ್ಧೇಶನನ್ನು ಕರೆದೊಯ್ದರು. ಆ ಊರಿಗೆ ಸಕಲ ಮಾಹೇಶ್ವರರು ಸಮೇತವಾಗಿ ಸಿದ್ಧಲಿಂಗನು ಬರುತ್ತಿರುವಾಗ ದಾರಿಯಲ್ಲಿ ಒಂದು ಕ್ರೂರವಾದ ಹಾವು, ಮನುಷ್ಯ, ಪ್ರಾಣಿ ಎಲ್ಲರನ್ನೂ ಕಚ್ಚಿ ಕೊಂದುಹಾಕುತ್ತಿತ್ತು. ಜೋಗಿಗಳ ಯಾವ ಮಂತ್ರತಂತ್ರದಿಂದಲೂ ಏನೂ ಪ್ರಯೋಜನವಾಗುತ್ತಿರಲಿಲ್ಲ. ಕೊನೆಗೆ ಆ ಸರ್ಪವನ್ನು ಸುತ್ತುಗಟ್ಟಿ ಜನರೆಲ್ಲ ಅದನ್ನು ಕೊಂದುಹಾಕಿದರು. ಸತ್ತ ಹಾವು ಬಿದ್ದಿತ್ತು. ಅದನ್ನು ನೋಡಲು ಜನಜಂಗುಳಿ ಸೇರಿತ್ತು. ಸಿದ್ಧಲಿಂಗನು ಬಂದು ಹಾವಿನ ಹೆಡೆಯಮೇಲೆ ಕಾಲಿಟ್ಟೊಡನೆ ಅದಕ್ಕೆ ಜೀವದುಂಬಿ ಭೋರ್ಗರೆ

ಯಿತು. ಸಿದ್ಧಲಿಂಗನು ಹಾವಿಗೆ 'ಇನ್ನು ಮುಂದೆ ನೀನು ಯಾರನ್ನೂ ಕೊಲ್ಲಬೇಡ. ಕಾಣಿಸಿಕೊಳ್ಳಬೇಡ. ದೂರದಲ್ಲಿ ಎಲ್ಲಿಯಾದರೂ ಬದುಕು ಹೋಗು' ಎಂದರು. ಅದು ಅಂದಿನಿಂದ ಯಾರನ್ನೂ ಹಿಂಸಿಸಲಿಲ್ಲ. ಭಕ್ತರೆಲ್ಲ ಹಾವಿನಹಾಳ ಕಲ್ಲಯ್ಯ ಸತ್ತ ಹಾವಿಗೆ ಪ್ರಾಣವಿತ್ತನೆಂದೂ, ಸಿಂಗಿ ಬೊಪ್ಪಯ್ಯನು ತನ್ನ ಚರಣಕಮಲವನ್ನು ಕಚ್ಚಿ ಸತ್ತ ಸಿಂಗಿಗೆ ಪ್ರಾಣವಿತ್ತನೆಂದೂ ಮುಂತಾಗಿ ಕೇಳಿದ್ದೆವು. ಈಗ ಸಿದ್ಧಲಿಂಗೇಶನು ಈ ಹಾವಿಗೆ ಪ್ರಾಣವಿತ್ತುದನ್ನು ಪ್ರತ್ಯಕ್ಷ ಕಂಡೆವೆಂದು ಕೊಂಡಾಡಿದರು. ಯತೀಶ್ವರನು ಆ ಹಳ್ಳಿಗೆ ಹೋಗಿ ಪೂಜೆಗೊಳ್ಳುತ್ತಿರಲು ಆ ಊರಿನಲ್ಲಿ ಒಂದು ಮನೆಯು ಅಗ್ನಿಯಿಂದ ಸುಡುತ್ತಿತ್ತು. ಆ ಬೆಂಕಿಯಲ್ಲಿ ಬೆಕ್ಕಿನ ಮರಿಗಳೂ ಸತ್ತವು. ತಾಯಿಬೆಕ್ಕು ಇದಕ್ಕಾಗಿ ದುಃಖಿಸುತ್ತಿತ್ತು. ಸಿದ್ಧಲಿಂಗೇಶನು ಆ ಮರಿಗಳಿಗೆ ಪ್ರಾಣವಿತ್ತನು. ಸೊಲ್ಲಾಪುರದಲ್ಲಿ ಸಿದ್ಧರಾಮೇಶ್ವರನು ಸುಡುತ್ತಿರುವ ಮನೆಯಲ್ಲಿ ತಾಯಿಬೆಕ್ಕು ಸತ್ತುಹೋಗಲು ದುಃಖಪಡುತ್ತಿರುವ ಮರಿಗಳನ್ನು ಕಂಡು ತಾಯಿ ಬೆಕ್ಕಿಗೆ ಪ್ರಾಣವಿತ್ತನು, ಎಂದು ಕೇಳಿದ್ದೇವೆ. ಈಗ ಸಿದ್ಧಲಿಂಗನು ಬೆಕ್ಕಿನ ಮರಿಗಳಿಗೆ ಪ್ರಾಣವಿತ್ತುದನ್ನು ಕಣ್ಣಾರ ಕಂಡೆವೆಂದು ಕೊಂಡಾಡುವ ಸಮಯದಲ್ಲಿ ಹೆಬ್ಬೂರಿನ ಭಕ್ತರು ಬಂದು ನಮಸ್ಕರಿಸಿ ತಮ್ಮೂರಿಗೆ ಸಿದ್ಧಲಿಂಗೇಶ್ವರರನ್ನು ಕರೆದೊಯ್ದರು.

ಹೆಬ್ಬೂರಿನಲ್ಲಿ ಪೂಜೆ ಮಾಡಿಕೊಂಡಿದ್ದರು. ಅನೇಕ ಭಕ್ತರು ಚರಮೂರ್ತಿಗಳು ಬಂದು ಸಿದ್ಧೇಶನನ್ನು ಸೇವಿಸುತ್ತ ಕೀರ್ತಿಸುತ್ತ ಇದ್ದರು. ದೊಡ್ಡ ಪರಿಷೆಯೇ ಆ ಊರಿನಲ್ಲಿ ನೆರೆಯಿತು. ಆ ಪರಿಷೆಯಲ್ಲಿ ಓರ್ವ ಯುವತಿಯು ಸಿದ್ಧಲಿಂಗನ ಪ್ರಸಾದ ಸೇವಿಸಬೇಕೆಂದು ಬಯಸಿ ಒಂದು ತಟ್ಟೆಯಲ್ಲಿ ಒಳ್ಳೆಯ ಬಾಳೆಹಣ್ಣು ತುಂಬಿ ತಂದು ಸಿದ್ಧೇಶನ ಮುಂದಿಟ್ಟು ನನಗೆ ಪ್ರಸಾದ ಕೊಡಬೇಕೆಂದು ಕೇಳಿದಳು. ಅವಳ ಇಚ್ಛೆಯಂತೆ ಶೇಷಪ್ರಸಾದವನ್ನು ಸಿದ್ಧೇಶ ಕೊಟ್ಟನು. ಆ ಪ್ರಸಾದವನ್ನು ತಂದು ಅವಳು ಬಸವೇಶ್ವರನ ಗುಡಿಯಲ್ಲಿ ಬಸವೇಶನ ಇದಿರಲ್ಲಿಟ್ಟು ಲಿಂಗಪೂಜೆಮಾಡಿ ಪ್ರಸಾದ ತೆಗೆದುಕೊಳ್ಳಬೇಕೆಂದು ಯೋಚಿಸಿ ಮುಖತೊಳೆಯಲು ಹೋದಳು ಕಲ್ಲಿನ ಕಂಬದ ಬಸವೇಶನು ಅವಳು ಕಾಣದಂತೆ ಆ ಪ್ರಸಾದವನ್ನು ಉಲ್ಲಾಸದಿಂದ ತಿನ್ನುತ್ತಿರಲು ಅವಳು ಅಷ್ಟರಲ್ಲಿ ಬಂದು ಅಕಟಕಟಾ! ಎಂದು ಪರಿವಾಣವನ್ನು ಸೆಳೆದುಕೊಳ್ಳುವಷ್ಟರಲ್ಲಿ ಪ್ರಸಾದವನ್ನೆಲ್ಲ ಕಲ್ಲು ಬಸವ ನುಂಗಿ ಎಂದಿನಂತೆ ಕಲ್ಲಾಗಿಬಿಟ್ಟನು. ಇದನ್ನು ಎಲ್ಲರೂ ಕಂಡು ಬೆರಗಾದರು. ಹೆಬ್ಬೂರಿಗೆ ಗುಳೂರಿನ ಭಕ್ತರು ಬಂದು ಸಿದ್ಧೇಶ್ವರನನ್ನು ತಮ್ಮೂರಿಗೆ ಕರೆದೊಯ್ದರು.

ಆ ಊರಿನಲ್ಲಿ ಓರ್ವ ಬಂಜೆ ಹೆಂಗಸು ಸಿದ್ಧಲಿಂಗೇಶ್ವರರ ದಾಸೋಹಕ್ಕೆಂದು ಧಾನ್ಯ ತರಕಾರಿ ಮೊದಲಾದವನ್ನು ಲಿಂಗಯ್ಯನೆಂಬ ಭಕ್ತನ ಮನೆಯಲ್ಲಿ ಒಟ್ಟಿದ್ದರು. ಆತನ ಬಂಜೆ ಹೆಂಡತಿ ಒಂದು ಬದನೆಕಾಯಿಯನ್ನು ಕದ್ದು, ಅದನ್ನು ಸುಟ್ಟು ತಿನ್ನುವ ಅಪೇಕ್ಷೆಯಿಂದ ಒಲೆಗೆ ಹಾಕಿದಳು. ಅಗ್ನಿಯು ಆ ಬದನೆಕಾಯಿಯನ್ನು ಸುಡಲು

ಅಂಜಿತು. ಏನು ಮಾಡಿದರೂ ಸುಡದಿರುವ ಬದನೆಕಾಯನ್ನು ಕಂಡು ಹೆದರಿ, ಸಿದ್ಧಲಿಂಗನಲ್ಲಿಗೆ ಆ ಬದನೆಕಾಯಿ ಸಮೇತ ಬಂದು ಕ್ಷಮೆ ಕೇಳಿದಳು. ಆಗ ಸಿದ್ಧಲಿಂಗನು ಇನ್ನು ಇದು ಬೇಯುತ್ತದೆ. ಅದನ್ನು ತಿಂದು ಸಂತಾನ ಪಡೆಯೆಂದು ಆಶೀರ್ವದಿಸಿದರು. ಅದರಂತೆಯೇ ಆಯಿತು ಹಿಂದೆ ನಡೆದ ಇಂಥ ಅನೇಕ ಘಟನೆಗಳನ್ನು ನೆನೆದರು ಒಂದು ದಿನ ಓರ್ವ ಭಕ್ತನು ಒಂದು ರಾತ್ರಿ ತನ್ನ ಮನೆಯಲ್ಲಿ ಪೂಜೆ ಮಾಡಬೇಕೆಂದು ಕರೆತಂದನು. ಚರಮೂರ್ತಿಗಳು ಸಹವಾಗಿ ಅನೇಕರಿಗೆ ಪ್ರಸಾದಕ್ಕಾಗಿ ತಟ್ಟೆಗಳ ಅಭಾವವಿತ್ತು. ಉಳಿದ ಭಕ್ತರ ಮನೆಯೊಳಗೆ ಹೋಗಿ ತಟ್ಟೆಗಳನ್ನು ಕೇಳಿದನು ತಟ್ಟೆಗಳನ್ನು ಯಾರೂ ಕೊಡಲಿಲ್ಲ. ಬೀಗಮುದ್ರೆ ಹಾಕಿ ಬಾಗಿಲು ಭದ್ರಪಡಿಸಿದರು. ಸಿದ್ಧಲಿಂಗೇಶ್ವರರ ಬಳಿಗೆ ಬಂದು ಈ ವಿಚಾರವನ್ನು ಅರಿಕೆಮಾಡಿಕೊಂಡನು. ಅಷ್ಟರಲ್ಲಿ ಅರ್ಧರಾತ್ರಿ ಕಳೆದುಹೋಗಿತ್ತು. ಸಿದ್ಧಲಿಂಗೇಶನು ಇನ್ನೊಮ್ಮೆ ಆ ಭಕ್ತರ ಮನೆಗಳಿಗೆ ಹೋಗಿ ಬಾಗಿಲು ಬಡಿದು ಒತ್ತಿ ನೂಕಿ ಕೇಳೆಂದು ಕಳಿಸಿಕೊಟ್ಟರು. ಈ ಭಕ್ತನು ಬಂದು ಬಾಗಿಲು ಮುಟ್ಟದೊಡನೆ ಬೀಗಮುದ್ರೆಗಳೆಲ್ಲ ಕಳಚಿಬಿದ್ದು ಬಾಗಿಲು ತಾವೇ ತಾವಾಗಿ ತೆರೆದವು. ಭಕ್ತನು ಒಳಗೆಹೋಗಿ ತಟ್ಟೆಗಳನ್ನು ಕೇಳಲು ಅವರೆಲ್ಲ ನಾಚಿ ಸುಮ್ಮನೆ ತಟ್ಟೆಗಳನ್ನು ಕೊಟ್ಟರು. ಮತ್ತೊಬ್ಬಳು ಪಾತ್ರೆಗಳನ್ನು ಮುಚ್ಚಿಟ್ಟುಕೊಂಡು 'ಇಲ್ಲ' ಎಂದುಬಿಟ್ಟಳು. ಇದ್ದ ಪಾತ್ರೆಗಳೆಲ್ಲ ಇದ್ದಲ್ಲೇ ಮಾಯವಾಗಿದ್ದವು. ಹಿಂದೆ ನಡೆದ ಇಂಥ ಅನೇಕ ಘಟನೆಗಳನ್ನು ನೆನೆನೆನೆದು ಸಿದ್ಧಲಿಂಗನನ್ನು ಹೊಗಳಿದರು.

ಒಂದು ದಿನ ಸಿದ್ಧೇಶನು ಶಿವಪೂಜೆಯಲ್ಲಿದ್ದಾಗ ಮಲ್ಲನೆಂಬುವನೊಬ್ಬನು ಯತೀಶ್ವರತೀರ್ಥವನ್ನು ಪಡೆದು ಮನೆಗೆ ಹೋಗಿ ತೆಗೆದುಕೊಳ್ಳಬೇಕೆಂದು ಒಂದು ಪಾತ್ರೆಯಲ್ಲಿಟ್ಟು ವಿಸ್ಮೃತಿಯಿಂದ ಆ ತೀರ್ಥವನ್ನು ಚೆಲ್ಲಿಬಿಡಲು ಅವನ ಕರಂಡಕದಲ್ಲಿನ ಲಿಂಗವೇ ಮಾಯವಾಗಿಹೋಯಿತು. ಓಡಿಬಂದು ಸಿದ್ಧಲಿಂಗನಲ್ಲಿ ಬೇಡಿಕೊಂಡು ಪುನಃ ಸಿದ್ಧಲಿಂಗೇಶನ ಪಾದತೀರ್ಥವನ್ನು ಕೊಂಡೊಡನೆ ಸಜ್ಜೆಯಲ್ಲಿ ಲಿಂಗವಿದ್ದುದ ಕಂಡನು. ಹೀಗೆ ಗೂಳೂರಿನಲ್ಲಿರುತ್ತಿರುವಾಗ ಸಿದ್ಧೇಶನಿಗೆ ಮಜ್ಜನಮಾಡಿಸಿದರು. ಅದನ್ನು ನೋಡಲು ಜನ ಭೂಮಿ ಕುಗ್ಗುವಂತೆ ಸೇರಿತು ಮಸ್ತಕರಂಧ್ರದಲ್ಲಿ ಹಾಲನ್ನು ಸುರಿದರು. ಅದು ಆ ಹಾಲನ್ನು ಹೀರುತ್ತಿತ್ತು. ಆ ರಂಧ್ರವು ಆರು ಕೊಳಗ ಹಾಲನ್ನು ಹೀರಿತು. ಸೂರ್ಯನು ಮುಳುಗಿದನು. ತಂಪಾದಗಾಳಿ ಬೀಸತೊಡಗಿತು. ಕ್ಷೀರವನ್ನೆರೆಯುವುದನ್ನು ಬಿಟ್ಟರು. ಬಿಸಿ ನೀರನ್ನು ಶಿವಸಹಸ್ರ ನಾಮಾವಳಿಯೊಡನೆ ಎರೆಯುತ್ತ ಮಜ್ಜನ ಮಾಡಿಸಿದರು. ಶಿರಸ್ಸಿನ ರಂಧ್ರವನ್ನು ಕಂಡು ಭಕ್ತರೆಲ್ಲ ಆಶ್ಚರ್ಯಗೊಂಡರು. ದಂಡಿದೇವಯ್ಯ ಪುಷ್ಪವಂ ತರುವಲ್ಲಿ ಹಾಸ್ಯವಾಡಲು ಕರಂಡದಿಂದ ಹೊಡೆಯಲು ಒಡೆದ ಶಿವನ ಶಿರವೋ, ಅರುಂಧತಿಯು ನೆತ್ತಿಯನ್ನು ದರ್ವಿಯಿಂದ ಘಾತಿಸಲು ಒಡೆದ ಹರನ ಶಿರವೋ, ಘಂಟಾಕರ್ಣನು ಕಂಬಿಯಿಂದ ತಿವಿದಾಗ ಒಡೆದ ನೀಲಕಂಠನ ತಲೆಯ ರೀತಿಯೋ, ಕರಿಕಾಲಚೋಳನ ಭಟರು ವೇಣುದಂಡದಿಂದ ಹೊಡೆದರೆ ಒಡೆದ ಪಶುಪತಿಯ ಮಸ್ತಕವೋ ಇತ್ಯಾದಿ ನುಡಿದು, ಚಿಪ್ಪಗಿರಿಯ ಭೋಗೇಶ್ವರ ಲಿಂಗದ

ಮಸ್ತಕದೊಳಗೆ ಎರಡು ಪಡಿತೈಲವಿಂಗುವುದೆಂಬುದು ಇದಕ್ಕೆ ಸರಿಯಲ್ಲ; ಸಿದ್ಧ ರಾಮಯ್ಯ, ತಿರುಮೂಲದೇವಯ್ಯ, ತುಪ್ಪದರಿ ಯಮರಾಜ, ಗೊಲ್ಲಾಳ ಚಂಡೇಶ ಚಿಕ್ಕ ದೇವಿ ಮೊದಲಾದವರಿಂದ ಅಮೃತಮಜ್ಜನವನ್ನು ಕೈಕೊಂಡ ರೀತಿಗಿಂತ ಸಿದ್ಧ ಲಿಂಗೇಶನ ಮಜ್ಜನ ಹಿರಿದಾದುದೆಂದು ಎಲ್ಲರೂ ಕೊಂಡಾಡಿದರು.

ಹೀಗಿರಲು ತುಮಕೂರಿನ ಭಕ್ತರು ಬಂದು ಸಿದ್ಧಲಿಂಗೇಶ್ವರನನ್ನು ತಮ್ಮೂರಿಗೆ ಕರೆದೊಯ್ದರು. ಅಲ್ಲಿ ಊರ ದಕ್ಷಿಣ ದಿಕ್ಕಿನಲ್ಲಿರುವ ಬಸವನ ಮಂದಿರದಲ್ಲಿ ಶಿವಾನು ಭಾವಗೋಷ್ಠಿಯಲ್ಲಿರತೊಡಗಿದನು. ಅಲ್ಲಿಗೆ ಶಿವಯೋಗಿಗಳ ದರ್ಶನಕ್ಕೆಂದು ಅಧಿಕ ವಾಗಿ ಜನ ಬಂದು ತಮ್ಮ ತಮ್ಮ ಕಾಣಿಕೆ ಸಲ್ಲಿಸುತ್ತಿದ್ದರು. ಎಲ್ಲರಿಗೂ ಸಿದ್ಧ ಲಿಂಗೇಶನು ಭಸ್ಮದ ಘುಟಿಕೆಗಳನ್ನು ಆಶೀರ್ವದಿಸುತ್ತಿದ್ದನು. ಓರ್ವ ವೈಷ್ಣವನು ಬಂದು ಈ ಯತಿಯು ಕೊಡುವ ಭಸ್ಮದ ಘುಟಿಕೆಗಳು ಲಿಂಗಗಳಾದರೆ ನಾನು ವೈಷ್ಣವಮತ ಬಿಟ್ಟು ಇವನನ್ನೇ ಸೇವಿಸುತ್ತೇನೆಂದು ಪಣತೊಟ್ಟನು, ಸಿದ್ಧಲಿಂಗನು ಹಾಗೆಯೇ ಮಾಡಿದನು. ಆಗ ಉರಿಲಿಂಗದೇವನು ಪೆದ್ದಣ್ಣನಿಗೆ ಕಾಂತಿಯಿಂದ ಶೋಭಿಸುವ ಲಿಂಗವನ್ನು ಕೊಟ್ಟಂತೆ, ಅನಿಮಿಷನಿಗೆ ಸಂದೀಶನು ಕೊಟ್ಟ ಲಿಂಗದ ಕಾಂತಿಯಂತೆ ಭಸ್ಮದ ಘುಟಿಕೆ ಆ ವೈಷ್ಣವನ ಕೈಗೆ ಬಂತು.

ಮತ್ತೊಂದು ದಿವಸ ಓರ್ವಭಕ್ತೆ ಮಲ್ಲಕ್ಕ ಎಂಬುವಳು ಆರು ಕೊಳಗ ತಂಡುಲ ವನ್ನು ಮೊಸಲು ತೆಗೆದಿಟ್ಟು ಅದರಲ್ಲಿ ಒಂದು ಪಡಿ ಅಕ್ಕಿಯನ್ನು ಅಡಿಗೆಮಾಡಿ ಉಣ್ಣಲು, ಎಲ್ಲ ಅಕ್ಕಿಯೂ ಇದ್ದಕ್ಕಿದ್ದಂತೆ ಮಾಯವಾಯಿತು, ಇನ್ನೊಬ್ಬಳು ನಾನೂರು ಅಚ್ಚು ಬೆಲ್ಲವನ್ನು ಗುರುವರನಿಗೆ ಹರಕೆಯೆಂದು ತೆಗೆದಿಟ್ಟು, ಒಂದು ದಿನ ನಂಟರು ಬಂದಿದ್ದಾ ರೆಂದು ಅದರಲ್ಲಿ ಒಂದು ಅಚ್ಚನ್ನು ಹಾಕಿ ಅಡಿಗೆಮಾಡಲು ಉಳಿದ ಯಾವತ್ತೂ ಬೆಲ್ಲ ಮಾಯವಾಯಿತು. ಅಲ್ಲಿದ್ದ ಓರ್ವ ಪ್ರಭುಸೆಟ್ಟಿಯೆಂಬ ಭಕ್ತ ಏಳನೂರು ಎಳೆನೀರನು ಯತೀಶ್ವರಂಗೆಂದು ಹರಕೆಗೆ ತೆಗೆದಿದ್ದನು. ಬಾಲಕನು ಅಳುತ್ತಿರುವನೆಂದು ಅವನಿ ಗೊಂದು ಎಳನೀರನ್ನು ಅದರಲ್ಲಿ ಕೊಡಲಾಗಿ ಎಲ್ಲ ಕಾಯಿಗಳಲ್ಲಿರುವ ನೀರು ಇಂಗಿದವು. ಆಗ ಅದರ ಮೂರುಪಟ್ಟು ಎಳೆನೀರನ್ನು ದಂಡತೆರಬೇಕಾಯಿತು. ಮತ್ತೊರ್ವಳು ಸೌಳುನೀರನ್ನು ತಂದು ಚರಜಂಗಮಕ್ಕೆಡೆಮಾಡಿ, ತಾನು ಸೀನೀರಿನ ತೀರ್ಥವನ್ನು ಪಡೆದು ಇಡಲು ಅದು ಆ ಕ್ಷಣವೇ ಮಾಯುವಾಯಿತು. ಹೀಗೆ ಮೂರು ಸಲ ತೆಗೆದು ಕೊಂಡ ತೀರ್ಥವೂ ಮಾಯವಾಯಿತು.

ಆ ಊರಿನಲ್ಲಿದ್ದ ಮುದ್ದಪ್ಪನೆಂಬ ಓರ್ವಭಕ್ತನ ಮನೆಯಲ್ಲಿ ಯತೀಶ್ವರನು ಶಿವಾರ್ಚನೆ ಮಾಡಿದನು. ಮುದ್ದಪ್ಪನ ಹೆಂಡತಿ ಪ್ರಸಾದಕುಸುಮಗಳನ್ನು ಎಲ್ಲ ಮಾಹೇ ಶ್ವರರಿಗೆ ಎರಡೆರಡು ಎಡೆಮಾಡಿ ತಾನು ಒಂದು ಕಳಸಿಗೆ ತುಂಬ ಇಟ್ಟುಕೊಂಡಳು. ಆಗ ಅವೆಲ್ಲ ಬಯಲಾಗಿ ಎರಡು ಪುಷ್ಪಗಳು ಮಾತ್ರ ಉಳಿದಿದ್ದವು. ಆ ಊರಿನಲ್ಲಿದ್ದ ಇನ್ನೊಬ್ಬ ಭಕ್ತ ಸಿದ್ಧಲಿಂಗೇಶ್ವರಂಗೆಂದು ಕುರಿತು ತಂದ ನೆಲ್ಲವರೆಕಾಯಿ ತಾನು

ತಿನ್ನಲು ಆಸೆಪಟ್ಟು ಬೇಯಿಸಲುಪಕ್ರಮಿಸಲು ಅವು ಬೇಯಲಿಲ್ಲ. ಮತ್ತೊಬ್ಬನು ಸಿದ್ಧಲಿಂಗೇಶನಿಗೆಂದು ಕುರಿತುತಂದ ಹೊಲದ ಅವರೆಕಾಯಿಗಳನ್ನು ಬಯಸಿ, ಪಾಕ ಮಾಡಲು ಅವೂ ಬೇಯಲಿಲ್ಲ. ಅವನ್ನೇ ತಿನ್ನಲು ಅವು ವಿಷವಾದವು. ಈ ರೀತಿ ಅನೇಕ ಮಹಾತ್ಮ್ಯಗಳನ್ನು ಸಿದ್ಧಲಿಂಗನು ತುಮಕೂರಿನಲ್ಲಿ ತೋರಿದನು. ಹೀಗಿರು ವಾಗ ಅಲ್ಲಿ ಒಂದಾನೊಂದುದಿನ ಪುರಾಣ ಪ್ರವಚನಾನಂದ ಸುಖದಲ್ಲಿದ್ದನು. ಅನೇ ಕರು ನೆರೆದಿದ್ದರು. ಶಂಕರನಿಗೆ ಪೌರಾಣವನ್ನು ಪೇಳುವ ಮಾಯಿಭಟ್ಟರ, ಶಂಕರ ಲೀಲಾಕಥನವನ್ನು ಶಂಕರಭಕ್ತರಿಗೆ ಹೇಳುವ ಹರಿದೇವನ, ಶಿವನಿಗೆ ಪೌರಾಣವನ್ನು ಕೇಳಿಸುವ ಮಾಯಿದೇವನ, ಶಿವಭಕ್ತೆಯರಿಗೆ ಶಿವಪುರಾಣ ಹೇಳುವ ಮಾಯಿಯ, ಪುರಾತನರ ಕಥೆಗಳನ್ನು ಪುರಾತನ ನಾರಿಯರಿಗೆ ಹೇಳುವ ರೆಬ್ಬವ್ವೆಯ ಚರಿತೆ ಗಳನ್ನು ಯತೀಶನು ಕೇಳುತ್ತಿದ್ದನು. ಹೀಗೆ ಕೇಳುತ್ತಿರುವಾಗ ಸೂರ್ಯಾಸ್ತವಾ ಯಿತು. ಸಿದ್ಧಲಿಂಗೇಶನು ಶಿವಾರ್ಚನೆಗೆ ತೆರಳಿದನು. ಅಂದಿನ ಪೂಜೆ ಹಲಗಿಸೆಟ್ಟಿ ಯೆಂಬುವನ ಮನೆಯಲ್ಲಿತ್ತು. ಸಿದ್ಧಲಿಂಗನ ಎಡಬಲದಲ್ಲಿ ಗದ್ದುಗೆಗಳ ಮೇಲೆ ಚರ ಸಮೂಹ ಕುಳಿತಿತ್ತು. ಲಿಂಗಪೂಜೆ ವೈಭವದಿಂದ ನೆರವೇರಿತು. ಆ ಕಾಲದಲ್ಲಿ ದ್ರೋಣ ಪುಷ್ಪಗಳ ಸುರಿಮಳೆ ಶಿವಯೋಗಿಯಮೇಲೆ ಸುರಿಯಿತು. ಪೂಜೆಮುಗಿಸಿ ಸಿದ್ದೇಶನು ಪ್ರಸಾದದಿಂದ ತೃಪ್ತನಾಗಿ ಶಿವಯೋಗನಿದ್ರೆಯಲ್ಲಿದ್ದನು. ಬೆಳಗಾಯಿತು. ಭಕ್ತರೆಲ್ಲ ಭೂಪಾಳಿ ರಾಗದಲ್ಲಿ ಉಪ್ಪವಡಗೀತೆ ಹಾಡಿ ಶಿವಯೋಗಿಯನ್ನು ಎಚ್ಚರಿಸಿದರು.

ಯತೀಶ್ವರನು ಅನುಭವಗೋಷ್ಠಿಯಲ್ಲಿದ್ದನು. ಓರ್ವ ಗಾಣಿಗರ ಸ್ತ್ರೀ ನೀರು ತರಲು ದೊಡ್ಡ ಕೊಡವನ್ನು ತೆಗೆದುಕೊಂಡುಹೋಗಿ ಕೊಡವನ್ನು ಕೆರೆಯ ತೀರ ದಲ್ಲಿಟ್ಟು ಮುಖಮಾರ್ಜನ ಮಾಡುತ್ತಿದ್ದಳು. ಕೊಡವು ನೀರಿನಲ್ಲಿ ತೇಲಿ ಮುಂದಕ್ಕೆ ಹೊರಟುಹೋಯಿತು. ಸಿದ್ಧಲಿಂಗನನ್ನು ಧ್ಯಾನಿಸಿದಳು. ಕೊಡ ಕೈಗೆಬಂತು. ಕೊಡ ತುಂಬಿ ಮೇಲಕ್ಕೆತ್ತಹೋದಳು, ಎತ್ತಲಿಲ್ಲ. ಹತ್ತೆಂಟುಜನ ಎತ್ತಹೋದರು, ಎತ್ತಲಿಲ್ಲ. ಸಿದ್ಧಲಿಂಗನ ಸ್ತೋತ್ರ ಮಾಡಿದಮೇಲೆ ಎತ್ತಿತು. ತಲೆಯಮೇಲಿಟ್ಟುಕೊಂಡು ಸಿದ್ಧ ಲಿಂಗನಲ್ಲಿಗೆ ಬಂದು ಸಿದ್ಧಲಿಂಗನ ಸ್ತೋತ್ರಮಾಡಿದಳು – ಹೀಗೆ ಅನೇಕ ಮಹಿಮೆ ಗಳನ್ನು ತೋರಿಸುತ್ತಲಿದ್ದನು.

ಸಿದ್ಧಲಿಂಗನನ್ನು ನೋಡಲೆಂದು ಬಂದು ಬೀಡುಬಿಟ್ಟ ಹರದರ ಪರಿಷೆಯಲ್ಲಿ ಒಂದು ದಿನ ಒಂದು ದೊಡ್ಡ ಗೂಳಿಯು ಬೆದರಿ ಹಗ್ಗವನ್ನು ಹರಿದುಕೊಂಡು ಓಡತೊಡ ಗಿತು. ಆ ಹರದನು ಓಡಿದರೆ ಸಿದ್ಧಲಿಂಗನಾಣೆಯೆಂದು ಆಣೆಯಿಟ್ಟೊಡನೆ ಅದು ನಿಂತಿತು. ಮರಳಿ ಮತ್ತೊಂದು ಆಣೆಯಿಡಲು ಸಮೀಪಕ್ಕೆ ಬಂದಿತು. ಮುಂದೆ ಸಿದ್ಧಲಿಂಗೇಶ್ವರನ ರಥೋತ್ಸವ ನೋಡಬೇಕೆಂದು ನಾನಾ ದಿಕ್ಕಿನ ಜನ ತುಮಕೂರಿಗೆ ಬಂದಿತು. ಜಂಗಮಸ್ತೋಮ ನೇರಿತು. ದೊಡ್ಡಪರಿಷೆ ಸೇರಿಹೋಯಿತು. ದೇವಲೋಕದ

ಸ್ತ್ರೀಯರು ಆಕಾಶದಲ್ಲಿಯೇ ಸಿದ್ಧೇಶನನ್ನು ನೋಡುತ್ತ ನಿಂತರು. ಅಲಂಕರಿಸಿದ ಮಂಟಪದಲ್ಲಿ ಚರಜಂಗಮರುಸಹಿತ ಸಿದ್ಧೇಶ ಕುಳಿತಿದ್ದನು. ಭಕ್ತರೆಲ್ಲ ನವವಿಧ ಹೂಗಳು, ದವನ ಮೊದಲಾದವನ್ನು ಯತೀಶನ ಪಾದಕ್ಕೆ ಸಮರ್ಪಿಸುತ್ತಿದ್ದರು. ಸಮಸ್ತ ಪರಿಷೆಯಜನಕ್ಕೆ ಸಿದ್ಧೇಶ ದರ್ಶನಕೊಟ್ಟು ಅವರವರ ಇಷ್ಟಾರ್ಥಗಳನ್ನು ಸಲ್ಲಿಸಿದನು. ಇದೇದಿನ ರಾತ್ರಿ ಕುಣಿಗಲ್ಲು ದೇವರಾಯಪಟ್ಟಣಗಳಲ್ಲಿ ಭಕ್ತರ ಭಕ್ತಿಗೊಲಿದು ಕಾಣಿಸಿಕೊಂಡನು. ಎಲ್ಲರೂ ಸಿದ್ಧಲಿಂಗೇಶನ ಮಹಿಮೆಗೆ ಆಶ್ಚರ್ಯಪಟ್ಟರು. (ಪಂಚಮಾಶ್ವಾಸ).

ದೇವರಾಯಪಟ್ಟಣದ ಜನರು ಬಂದು ಶಿದ್ಧೇಶನಿಗೆ ವಂದಿಸಿ ಒಪ್ಪಿಸಿ ತಮ್ಮೂರಿಗೆ ಕರೆದೊಯ್ದರು. ಅಲ್ಲಿಯ ಸ್ತ್ರೀಯರು ನಾನಾವಿಧ ಭಕ್ಷ್ಯಭೋಜನಗಳನ್ನು ಮಾಡಿ ಸಿದ್ಧೇಶನಿಗೆ ಮತ್ತು ಚರಜಂಗಮಕ್ಕೆ ನೀಡಿ ಪ್ರಸಾದ ಪರಿತೃಪ್ತಿಗೊಳಿಸಿದರು. ಐನೂರು ಜನ ಜಂಗಮರು ಶಿವಪ್ರಸಾದತೃಪ್ತರಾಗಿ ಕೈ ತೊಳೆದರು. ಆ ವೇಳೆಯಲ್ಲಿ ಪಟ್ಟಣದ ಬಸವೇಶ್ವರ ದೇವರು ಬರಿದಾದ ಪ್ರಸಾದಭಾಂಡಗಳನ್ನು ನೋಡಲು ಮೊದಲಿನಂತೆಯೇ ಆಗುತ್ತಿದ್ದವು. ಶರಣಮಾರ್ಗ, ಷಟ್‌ಸ್ಥಲವಿಚಾರಗಳಲ್ಲಿ ಜೀವಿಸುತ್ತಿದ್ದ ಹಿರಣ್ಯದೇವನೆಂಬ ವಿರಕ್ತನು ಸಿದ್ಧೇಶನ ಅಭಿದಾನದ ಮುದ್ರೆಯಿಂದ ಬರೆದ ವಚನಗಳ ಬರವಣಿಗೆಯ ಪುಸ್ತಕವನ್ನು ಕಂಡು ಓರ್ವನು ಇದೇನೆಂದು ಕೇಳಿದನು. ಆಗ ಆ ವಿರಕ್ತನು 'ಇದು ನಿಖಿಲಶಾಸ್ತ್ರ, ಆಗಮ, ಪುರಾಣ ರಹಸ್ಯಗಳ ಸಾರವನ್ನೊಳಗೊಂಡು ಯತಿಯ ಮುದ್ರೆಯನ್ನುಳ್ಳ ಪಂಚಶತ ಪದಗಳ ಒಂದು ಕಡಿತ ಸಿದ್ಧೇಶನೆದುರಿನಲ್ಲಿ ಇದನ್ನೀಗ ಓದಿಸಬೇಕು. ಇದು ಭಕ್ತಿಮಾರ್ಗಿಗಳಿಗೆ ಸುಖವನ್ನುಂಟುಮಾಡುವಂತಹುದು' ಎಂದು ಹೇಳಿದನು. ಆಗ ಭಕ್ತರು ಐನೂರು ಹೊನ್ನುಗಳನ್ನು ಭಸ್ಮಸಮೇತವಾಗಿರಿಸಿ ಅವರ ಕೈಗಿತ್ತು 'ಈ ನಿಮ್ಮ ಪುಸ್ತಕವನ್ನು ಓದುವ ವೇಳೆಯಲ್ಲಿ ಪರ್ವಮಾಡಿ ಶಾಂತಿ ಮಾಡಿಸಬೇಕೆಂ'ದು ಕೇಳಿಕೊಂಡರು ಹೀಗೆ ಭಕ್ತರು ಕೊಟ್ಟ ಐನೂರು ಹೊನ್ನುಗಳನ್ನು ಹಿರಣ್ಯದೇವರೆಂಬ ಆ ವಿರಕ್ತರು ಗುರುಸ್ಥಲದ ಸಂಗಪ್ಪನೆಂಬುವವನ ಕೈಗೆ ಕೊಟ್ಟು, ವಿಸ್ತಾರವಾಗಿ ಪರ್ವವನ್ನು ಮಾಡಿಸೆಂದು ತಿಳಿಸಿದರು ಸಂಗಪ್ಪನು ಆ ಹಣದಿಂದ ಮಲ್ಲಪ್ಪನೆಂಬುವವನ ಗೃಹದಲ್ಲಿ ಪಾಕಮಾಡಿಸಿ ಸಿದ್ಧಲಿಂಗೇಶ್ವರರಿಗೆ ಬಿನ್ನಹ ಮಾಡಿದನು. ಸಿದ್ಧಲಿಂಗೇಶ್ವರರು ಬಂದು ಪೂಜೆ ಮುಗಿಸಿದರು. ಊಟ ನಡೆಯಿತು. ಹೀಗೆ ಸಿದ್ಧೇಶನ, ಚರಜಂಗಮರ ಪ್ರಸಾದ ಸ್ವೀಕಾರ ಕಾರ್ಯ ನಡೆಯುತ್ತಿದ್ದಾಗ ಗುಡುಗು ಮಿಂಚುಗಳಿಂದ ಕೂಡಿದ ದೊಡ್ಡ ಮಳೆ ಸುರಿಯುವ ಲಕ್ಷಣವಾಗಿ ಮಳೆಹನಿಯೊಡೆಯಿತು. ಆಗ ಯತೀಶ್ವರನು 'ಶಿವಭಕ್ತರು ಪ್ರಸಾದ ಸ್ವೀಕರಿಸುವವರೆಗೆ ತಡೆದು ಆಮೇಲೆ ಬರಬಹುದೆಂ'ದು ಮಳೆಗೆ ಆಜ್ಞಾಪಿಸಲು ಮಳೆ ನಿಂತಿತು. ಎಲ್ಲರೂ ಪ್ರೀತಿಯಿಂದ ಪ್ರಸಾದ ಸಲ್ಲಿಸುವುದು ಮುಗಿದಮೇಲೆ ದೊಡ್ಡಮಳೆ ಸುರಿಯಿತು. ಇದನ್ನು ಕಂಡು ಎಲ್ಲರೂ ಆಶ್ಚರ್ಯಚಕಿತರಾಗಿ, ದೇವರಕೊಂಡೆಯಲ್ಲಿ ಉಪ್ಪರಿಯ ಗಗಣ್ಣಪ್ಪನೆಂಬುವನಿಗೆ ವೈಷ್ಣವರು ಹಾಸ್ಯದಿಂದ ಜೇಸಿಗೆಯಲ್ಲಿ ಕೆರೆಯನ್ನು ತುಂಬಿ

ಸೆಂದು ಹೇಳಲಾಗಿ ಎರಡು ದಿನಮಳೆಗರೆಯಿಸಿ ಕೆರೆ ತುಂಬಿಸಿದುದನ್ನೂ, ಮತ್ತು ಕೊಂಡೆವೀಡೆಯಲ್ಲಿ ಹೊನ್ನಕಾಯಕದ ಅಬ್ಬೆಯಣ್ಣನೆಂಬುವನಲ್ಲಿ ಪರವಾದಿಗಳು ಬಂದು ನೀನು ಶಿವಶರಣನಾದರೆ ಈ ಬರದಲ್ಲಿ ಮಳೆಯನ್ನು ತರಿಸು ಎನ್ನಲು ಆ ಕ್ಷಣದಲ್ಲಿ ಮಳೆಯನ್ನು ಆ ಶರಣನು ತರಿಸಿದನು ಎಂಬುದನ್ನು ಪೂರ್ವ ಕಥೆಗಳಲ್ಲಿ ಕೇಳಿದ್ದೆವು. ಈಗ ಸಿದ್ಧಲಿಂಗನು 'ಭಕ್ತರು ಪ್ರಸಾದ ತೆಗೆದುಕೊಳ್ಳುವವರೆಗೆ ತಡೆದು ಆಮೇಲೆ ಬಾ' ಎಂದು ಆಜ್ಞಾಪಿಸಲು ಅದರಂತೆ ಆದುದನ್ನು ಪ್ರತ್ಯಕ್ಷ ಕಂಡೆವೆಂದರು.

ಸಿದ್ಧೇಶನ ದರ್ಶನಕ್ಕೆ ಬಂದ ಪರಿಷೆಯ ಜನಗಳಲ್ಲಿ ಒಬ್ಬ ಹುಟ್ಟುಗುರುಡನನು ಬಂದು ನಮಸ್ಕರಿಸಿ ನನಗೆ ಕಣ್ಣನ್ನು ಕೊಡು ಎಂದು ಕೇಳಿದನು. 'ನಿನಗೆ ಕೊಡಲು ನಮಗೆಲ್ಲಿ ಕಣ್ಣಿವೆ' ಎಂದನು. ಆಗ ಕುರುಡನು 'ಸದ್ಯಕ್ಕೆ ಒಂದು ಕಣ್ಣು ಕೊಡು. ಆಮೇಲೆ ನಿಧಾನವಾಗಿ ಮತ್ತೊಂದನ್ನು ಕೊಡುವೆಯಂತೆ' ಎನ್ನಲಾಗಿ ಆತನ ಮುಗ್ಧ ಮಾತಿಗೆ ಮೆಚ್ಚಿದ ಯತೀಶನು ಅವನಿಗೊಂದು ಕಣ್ಣು ದಯಪಾಲಿಸಿದನು. ಈ ಘಟನೆಯಿಂದ ಜನ ವಿಸ್ಮಿತಗೊಂಡು ರೇವಣೇಶನು ಗಾಣದ ಕಲ್ಲಯ್ಯನಿಗೂ ಅವನ ಹೆಂಡತಿಗೂ, ಮತ್ತು ಅವನ ಗಾಣದೆತ್ತಿಗೂ ಒಂದೊಂದು ಕಣ್ಣುಕೊಟ್ಟದ್ದೇ ಮೊದಲಾದ ಕಥೆಗಳನ್ನು ಕೇಳಿದ್ದೆವು. ಈಗ ಪ್ರತ್ಯಕ್ಷ ಕಂಡಂತಾಯಿತೆಂದುಕೊಂಡರು.

ಮಂಗಳವಾಡದಿಂದ ಎಲೆಯ ಪರ್ವಯ್ಯ ಎಂಬುವವನು ತನ್ನ ಹೆಂಡತಿ ಲಿಂಗಮ್ಮ ಮತ್ತು ಮೂರು ವರ್ಷದ ಮಗನೊಡನೆ ಯತಿಯ ದರ್ಶನಕ್ಕೆ ದೇವರಾಯಪಟ್ಟಣಕ್ಕೆ ಬಂದನು. ಮಗನಿಗೆ ತೀವ್ರಜ್ವರ ಬಂದು ಸತ್ತುಹೋಗಲು ಸತ್ತ ಆ ಕೂಸನ್ನು ಸಿದ್ಧಲಿಂಗೇಶನ ಹತ್ತಿರಕ್ಕೆ ತರಲು ಭಸ್ಮವನ್ನು ಧರಿಸಿ ಮಗುವಿಗೆ ಪ್ರಾಣದಾನ ಮಾಡಿದನು. ಮೊರದವೇಮಯ್ಯನು ರಾಚಮಲ್ಲನ ಶಿಶುವಿಗೆ ಪ್ರಾಣವಿತ್ತುದೇ ಮೊದಲಾದವುಗಳನ್ನು ಈ ಪೂರ್ವದಲ್ಲಿ ಕೇಳಿದ್ದೆವು ಈಗ ಸಿದ್ಧೇಶನು ಮೂರುವರ್ಷದ ಮೃತಶಿಶುವಿಗೆ ಪ್ರಾಣದಾನ ಮಾಡಿದ್ದನ್ನು ಪ್ರತ್ಯಕ್ಷ ಕಂಡಂತಾಯಿತೆಂದು ಭಕ್ತರು ಕೊಂಡಾಡಿದರು.

ರಾಯದುರ್ಗದ ಮಲ್ಲಪ್ಪನೆಂಬುವನು ಸಿದ್ಧೇಶ್ವರನ ದರ್ಶನಕ್ಕೆ ಬಂದನು. ಈತನ ಹೆಂಡತಿ ಮೈಲಾರನ ಭಕ್ತೆಯಾಗಿದ್ದರಿಂದ ತಾನು ಬರದೆ ಗೊರವರಿಗೆ ಪೂಜೋಪಚಾರವನ್ನು ಮನೆಯಲ್ಲಿ ನಡೆಸಿದಳು. ಮಲ್ಲಪ್ಪ ಸಿದ್ಧಲಿಂಗೇಶ್ವರರಲ್ಲಿ ತನ್ನ ಹೆಂಡತಿ ಬಾರದಿರ್ದುದನ್ನು ತಿಳಿಸಿದನು. ಯತಿಗಳು 'ತಾನೇ ಬರುತ್ತಾಳೆ' ಎಂದು ಬಿಟ್ಟರು. ಮಲ್ಲಪ್ಪ ಊರಿಗೆ ಬಂದನು. ಇದ್ದಕ್ಕಿದ್ದಂತೆ ಅವರ ಮನೆಯ ದೊಡ್ಡ ಒಂದು ಎಮ್ಮೆ ಸತ್ತುಹೋಯಿತು. ಸಿದ್ಧೇಶನನ್ನು ತಿರಸ್ಕರಿಸಿದುದೇ ಈ ಎಮ್ಮೆ ಸಾಯಲು ಕಾರಣವೆಂದು ಮಲ್ಲಪ್ಪನ ಹೆಂಡತಿಗೆ ಹೊಳೆಯಿತು. ಸಿದ್ಧೇಶನು ಕೊಟ್ಟದ್ದ ಭಸ್ಮವನ್ನು ಎಮ್ಮೆಗೆ ಹಚ್ಚಲಾಗಿ ಅದು ಜೀವಕಳೆಗೊಂಡು ಎದ್ದುನಿಂತಿತು. ಅವಳು ಮೈಲಾರನ ಭಕ್ತಿಯನ್ನು ತೊರೆದಳು. ಗಂಡನೊಡನೆ ಸಿದ್ಧೇಶನಲ್ಲಿಗೆ ಆ ಎಮ್ಮೆಯ

ತುಪ್ಪದೊಡನೆ ಬಂದಳು ; ತುಪ್ಪವನ್ನು ಸಿದ್ಧೇಶನಿಗೆ ಅರ್ಪಿಸಿ ನಡೆದ ವೃತ್ತಾಂತ ಹೇಳಿದಳು.

ಬುಗುಡುಕುಂಟೆಯಲ್ಲಿದ್ದ ಗಬ್ಬಿ ನಾಯಕನೆಂಬುವನು ಸಿದ್ಧಲಿಂಗೇಶನ ದರ್ಶನಕ್ಕಾಗಿ ಪರಿವಾರಸಮೇತವಾಗಿ ಬಂದು ಯತಿಯ ದರ್ಶನ ಮಾಡಿದನು. ಇದ್ದಕ್ಕಿದ್ದಂತೆ ಗಬ್ಬಿನಾಯಕನ ಮಗನ ಕುದುರೆ ಸತ್ತುಬಿತ್ತು. ಸಿದ್ಧಲಿಂಗೇಶ್ವರನ ಪಾದತೀರ್ಥವನ್ನು ಅದರ ಮೇಲೆ ಪ್ರೋಕ್ಷಣೆಮಾಡಲು ಕುದುರೆ ಬದುಕಿತು. ಹಿಂದೆ ಮಾಣೂರ ಏಕೋದೇವಬಾಹು ಎಂಬ ಶಿವಕವಿಯು ವೀಣಮಲ್ಲುಕನ ಸತ್ತಕುದುರೆಗೆ ಪಾದಜಲವನ್ನು ಸಿಂಪಡಿಸಿ ಎಬ್ಬಿಸಿದುದನ್ನು, ಕೂಗಿನ ಕೋಟಿಯ ವರದಾನಿಯಮ್ಮನು ಗರ್ಭಶೂಲೆಯಿಂದ ಸತ್ತ ಕುದುರೆಗೆ ಪಾದೋದಕ ತಳಿದು ಎಬ್ಬಿಸಿದುದೇ ಮೊದಲಾದುವನ್ನು ಪೂರ್ವ ಪ್ರಸಂಗಗಳಲ್ಲಿ ಕೇಳಿದ್ದೆವು. ಈಗ ಸಿದ್ಧೇಶನು ಗಬ್ಬಿನಾಯಕನ ಮಗನ ಕುದುರೆಯನ್ನು ಬದುಕಿಸಿದ ಪ್ರಸಂಗವನ್ನು ಪ್ರತ್ಯಕ್ಷ ಕಂಡೆವೆಂದು ಕೊಂಡಾಡಿದರು.

ಭಿಕ್ಷಾವತಿ ರಾಯನೆಂಬುವನು ಸಿದ್ಧೇಶನಿಗೆ ಸುವರ್ಣರೇಖಿತವಾದ ಒಂದು ಬೆವರ್ಗಂಥೆ ಮತ್ತು ರತ್ನದಿಂದ ಕೆಚ್ಚಿದ ಸುವರ್ಣಕಿರೀಟವನ್ನು ತಂದರ್ಪಿಸಿದನು. ಆತನ ಇಚ್ಛೆಯಂತೆ ಸ್ವಾಮಿಯವರು ಆ ಕಂಥೆಯನ್ನೂ ಆ ಕಿರೀಟವನ್ನೂ ಧರಿಸಿ ಆ ದಿನ ಪುರಾಣಗೋಷ್ಠಿಯಲ್ಲಿ ಕಾಲಕಳೆಯುತ್ತಿದ್ದಾಗ ಗುರುಲಿಂಗದೇವನೆಂಬ ಓರ್ವ ವಿಟ ಜಂಗಮನು ಬಂದು ಅವೆರಡನ್ನೂ ಅಪೇಕ್ಷಿಸಿದನು. ಅವನಿಗೆ ಸಿದ್ಧೇಶನು ಅವೆರಡನ್ನೂ ಕೊಟ್ಟುಬಿಟ್ಟನು. ನಿಡುಮಾರಯ್ಯ ಮಡದಿಯುಟ್ಟಿದ್ದನ್ನು ಓರ್ವ ಚರನಿಗಿತ್ತುದನ್ನೂ, ಆಯ್ದಕ್ಕಿಯ ಮಾರಯ್ಯ ಮಡದಿ ಮತ್ತು ತಾನು, ಉಟ್ಟ ಬಟ್ಟೆಗಳನ್ನು ವಿಟಜಂಗಮಕ್ಕೆ ಕೊಟ್ಟುದನ್ನೂ, ನೈಯಾರೆಂಬುವನು ನೆಯ್ದ ದೇವಾಂಗವನ್ನು ಜಂಗಮಕ್ಕೆ ಕೊಟ್ಟುದನ್ನೂ ಹೊನ್ನಬ್ರಹ್ಮಯ್ಯ ರತ್ನ ಪದಕವನ್ನು ವಿಟಜಂಗಮರಿಗೆ ಕೊಟ್ಟುದೇ ಮೊದಲಾದುವನ್ನು ಪೂರ್ವ ಪ್ರಸಂಗಗಳಲ್ಲಿ ಕೇಳಿದ್ದೆವು. ಈಗ ಸಿದ್ಧೇಶನು ಗುರುಲಿಂಗ ದೇವರೆಂಬ ವಿಟಜಂಗಮನಿಗೆ ಸ್ವರ್ಣಚಿತ್ರಿತ ಕಂಥೆ ಮತ್ತು ನವರತ್ನ ಕಿರೀಟಗಳನ್ನು ಬೇಡಿದಾಕ್ಷಣವೇ ಕೊಟ್ಟದ್ದನ್ನು ಪ್ರತ್ಯಕ್ಷಕಂಡೆವೆಂದು ಕೊಂಡಾಡಿದರು.

ದ್ರಾವಿಡ ದೇಶದಿಂದ ಐವತ್ತು ಜನ ಚರಜಂಗಮರು ಸಿದ್ಧೇಶನನ್ನು ಕಾಣಲು ಬಂದು ಕೇತಸಮುದ್ರದಲ್ಲಿ ಬೀಡುಬಿಟ್ಟಿದ್ದರು. ಯತೀಶನ ದರ್ಶನಕ್ಕಾಗಿ ಅನ್ನದಾನಿ ಮಲ್ಲಯ್ಯನಿರುವ ಬಿಡಾರಕ್ಕೆ ಬರುತ್ತಿರುವಾಗ ದಾರಿಯಲ್ಲಿ ಒಂದು ಹಾವು ಜಂಗಮನೊಬ್ಬನನ್ನು ಕಚ್ಚಿತು. ಅವರು ಹಾವನ್ನು ಕೊಂದುಹಾಕಿದರು ಜಂಗಮನಿಗೂ ವಿಷವೇರಿ ವಿಷಮಸ್ಥಿತಿ ಬಂದುಬಿಟ್ಟಿತು. ನಡೆದ ವೃತ್ತಾಂತವನ್ನು ಸಿದ್ಧೇಶನಿಗೆ ಬಿನ್ನವಿಸಿಕೊಂಡರು. ಮರಣಾವಸ್ಥೆಯಲ್ಲಿದ್ದ ಆತನನ್ನು ಸಿದ್ಧೇಶ ಭಸ್ಮಧರಿಸಿ ಬದುಕಿಸಿದನು. ಹಾವನ್ನು ಕೊಂದುದನ್ನು ಆಕ್ಷೇಪಿಸಿದನು.

ಕುಂತಳದೇಶದ ಓರ್ವ ಕುರುಡ ಜಂಗಮನು ಸಿದ್ಧಲಿಂಗೇಶನ ದರ್ಶನಮಾಡ್ಕಿ ತನ್ನ ಕಣ್ಣನ್ನು ಪಡೆಯಬೇಕೆಂದು ಇಚ್ಛಿಸಿ ಬಂದು, ಯತಿಯಲ್ಲಿ ತನಗೆ ಕಣ್ಣನು ಕೊಡೆಂದುಬೇಡಿಕೊಂಡನು. ಯತಿಯು ಆತನಿಗೆ ಕಣ್ಣುಬರುವಂತೆ ಮಾಡಿದನು. ಹಿಂದೆ ಕಾಳಿದಾಸನಿಗೆ ಶಿವನು ಮೂಗುಳ ಕಣ್ಣು ಕೊಟ್ಟುದನ್ನೂ, ಕಂಗಳ ನಾಗಿದೇವನಿಗೆ ಮೂಗಂಡುಗ ಕಣ್ಣುಗಳನ್ನು ಕೊಟ್ಟುದನ್ನೂ, ಸಂಹಿತೆಯು ಕಾಳಿದಾಸನಿಗೆ ಮೂರು ಕಂಡುಗ ನವಣೆಯ ಕಾಳುಗಳ ಸಂಖ್ಯೆಯ ಕಣ್ಣು ಕೊಟ್ಟದ್ದನ್ನೂ, ಬಸವೇಶನು ಚೆನ್ನ ಬಸವೇಶನಿಗೆ ಲೋಚನಗಳನ್ನಿತ್ತುದೇ ಮೊದಲಾದುವನ್ನು ಪೂರ್ವಪ್ರಸಂಗದಲ್ಲಿ ಕೇಳಿದ್ದೆವು. ಈಗ ಕುರುಡ ಜಂಗಮನೊಬ್ಬನಿಗೆ ಸಿದ್ಧೇಶನು ಕಣ್ಣುಕೊಟ್ಟದ್ದನ್ನು ಪ್ರತ್ಯಕ್ಷ ಕಂಡೆವೆಂದು ಕೊಂಡಾಡಿದರು

ಹಲಕೂರಿನ ಭಕ್ತರೆಲ್ಲ ಯತಿಯ ದರ್ಶನಕ್ಕಾಗಿ ಹೊರಟಾಗ ಹಲ್ಲಚಿಕ್ಕಯ್ಯನೆಂಬುವನು ಮನುಷ್ಯನ ಬಳಿಗೇಕೆ ಹೋಗುತ್ತೀರೆಂದು ತಿರಸ್ಕಾರದ ಮಾತನ್ನು ಆಡಿದನು. ಆಗ ಭಕ್ತರೆಲ್ಲ ಅವನನ್ನು ಜರಿದು ನಿನಗೇನೋ ಕೇಡುಕು ಕಾದಿದೆಯೆಂದರು. ಅಷ್ಟರಲ್ಲಿ ಅವನ ಮನೆಗೆ ಬೆಂಕಿಬಿದ್ದು ಸುಟ್ಟುಹೋಯಿತು. ಆಪರೆ ಅಕ್ಕಪಕ್ಕದಲ್ಲಿದ್ದ ಯಾವ ಒಂದು ಮನೆಗೂ ಅಪಾಯ ಸಂಭವಿಸದೆ ಮಧ್ಯದ ಹಲ್ಲಚಿಕ್ಕಯ್ಯನೊಬ್ಬನ ಮನೆಯೇ ಬೆಂದುಹೋದುದನ್ನು ಕಂಡು, ಸಮಸ್ತ ಮಾಹೇಶ್ವರರು ಆಶ್ಚರ್ಯಗೊಂಡು ರಾಜ ಮಹೇಂದ್ರದಲ್ಲಿ ಭಂಡಾರಿ ಸೋಮಣ್ಣನೆಂಬಾತನನ್ನು ನಿಂದಿಸಿದ ವಿಪ್ರರ ಮನೆಗಳೆಲ್ಲ ಬೆಂದು ಭಕ್ತರ ಮನೆಗಳೇನೂ ಆಗದಿದ್ದುದನ್ನೂ, ಕೋರಮಂಗಲ ನಾಡಿನ ಕೆಸ್ತೂರಿನಲ್ಲಿ ಮಾಯಿಯನ್ನು ನಿಂದಿಸಿದ ವೈಷ್ಣವರ ಗೃಹಗಳೆಲ್ಲ ಸುಟ್ಟು, ಮಧ್ಯದ ಶಿವಭಕ್ತರ ಮನೆಗಳು ಸುಡದಿದ್ದುದನ್ನು ಪೂರ್ವಪ್ರಸಂಗಗಳಲ್ಲಿ ಕೇಳಿದ್ದೆವು. ಈಗ ಪ್ರತ್ಯಕ್ಷಕಂಡೆವೆಂದು ಕೊಂಡಾಡಿದರು.

ಒಂದು ಬೇಸಿಗೆಯಲ್ಲಿ ಸಿದ್ಧಲಿಂಗೇಶನಿಗೆ ಭಕ್ತಜನ ದೊಡ್ಡ ಬಾವಿಯೊಂದರಿಂದ ನೀರು ಸೇದಿ ಮಜ್ಜನ ಮಾಡಿಸುತ್ತಿದ್ದರು ಸ್ನಾನವಿನ್ನೂ ಮುಗಿದಿರಲಿಲ್ಲ. ಬಾವಿಯಲ್ಲಿ ನೀರೇ ಇಲ್ಲದಂತಾಯಿತು. ಇನ್ನಾವ ಭೂಭಾಗದಲ್ಲೂ ನೀರು ಇಲ್ಲದಂತಾಗಿತ್ತು. ಎಲ್ಲರೂ ಅಸಂತೋಷಗೊಂಡು ಚಿಂತೆಗೊಳಗಾದಾಗ ಸಿದ್ಧೇಶನ ಮಜ್ಜನಕ್ಕೆ ಅನ್ನದಾನಿ ಮಲ್ಲಯ್ಯನೆಂಬ ಶರಣನು ಗಂಗೆಯನ್ನು ಬಾವಿಗೆ ಬರಿಸಿದನು. ಆಗ ಸಾವಿರ ಘಟ ನೀರುಸೇದಿ ಸಿದ್ಧಲಿಂಗೇಶನಿಗೆ ಮಜ್ಜನಮಾಡಿಸಿ ಮುಗಿಸಿದರು. ಶರಣನ ಈ ಮಹತ್ವಕ್ಕೆ ಎಲ್ಲರೂ ಆಶ್ಚರ್ಯಗೊಂಡರು.

ಕೇತಸಮುದ್ರದ ಕೆರೆಯ ಕೆಳಗೆ ಚೆನ್ನಾಗಿ ಬೆಳೆದುನಿಂತಿದ್ದ ಪೈರನ್ನು ಒಂದು ಗೂಳಿಯು (ಬಸವನು) ತಿನ್ನುತ್ತಿತ್ತು. ಆ ಗದ್ದೆಯನ್ನು ಕಾಯುತ್ತಿದ್ದವನು, ಅದನ್ನು ಕೋಪದಿಂದ ಹೊಡೆದನು. ಅದು ಹಾಯಲು ಬರಲು ಅವನು ಹೆದರಿ ದೂರ ಹೋಗಿ ಕವಣೆಗಲ್ಲಿನಿಂದ ಅದನ್ನು ಹೊಡೆಯತೊಡಗಿದನು. ಆಗಲೂ ಅದು ಹೆದರದೆ ಮೇಯು

ತ್ತಿತ್ತು. ಆಗ ಸಿದ್ಧೇಶನಮೇಲೆ ಆಣೆಯಿಟ್ಟನು. ಆ ಆಣೆಯನ್ನು ಕೇಳಿ ಹೆದರಿ ಗೂಳಿಯು ಗದ್ದೆಯನ್ನು ಬಿಟ್ಟು ಬಟ್ಟಬೈಲಿಗೆ ಬಂದು ಜಲಧಾರಾಗ್ರದಲ್ಲಿ ಮಲಗಿ ಬಿಟ್ಟಿತು. ಮೇವು ನೀರು ಏನನ್ನೂ ಮುಟ್ಟಲಿಲ್ಲ. ಉಪವಾಸವನ್ನೇ ಪ್ರಾರಂಭಿಸಿ ತೀರಾ ಬಳಲಿಹೋಯಿತು. ಆಗ ಯತೀಶನಹತ್ತಿರ ಬಂದು ಈ ಸಮಾಚಾರ ತಿಳಿಸಲು ಯತೀಶ್ವರನು 'ಭ್ರಾಂತನೇ ಆಣೆಯನ್ನು ಬಿಟ್ಟುಬಿಡೆಂ'ದು ಸೂಚಿಸಲು ಮೇಯತೊಡ ಗಿತು. ಆಗ ಅದಕ್ಕೆ ಚೈತನ್ಯಬಂದಿತು. ಮೃಗ, ಧೂರ್ತ, ಸರ್ಪ, ವೃಶ್ಚಿಕ, ಅಗ್ನಿ, ವೃಷ್ಟಿ ಮುಂತಾದುವೆಲ್ಲ ಯತೀಶನ ಆಣೆಯನ್ನು ಮೀರಲು ಅಂಜುತ್ತಿರುವುವೆಂದು ಭಕ್ತಜನರೆಲ್ಲ ಕೊಂಡಾಡುತ್ತಿದ್ದರು. ಹೀಗೆ ಸಿದ್ಧೇಶನು ಅನಂತ ಮಹಿಮೆಗಳಿಂದ ಕೂಡಿ ಇರುತ್ತಿದ್ದರು.

ಶಿವಧ್ಯಾನ ಶಿವಯೋಗ ರಹಸ್ಯಾರ್ಥವನ್ನೆಲ್ಲ ಶಿವಾಗಮಾನುವರ್ತಿಗಳಾದ ಶರಣ ರಿಗೂ ಜಂಗಮರಿಗೂ ಬೋಧಿಸುತ್ತ ಸಿದ್ಧೇಶನು ಹೀಗೆ ಕಾಲಯಾಪನೆ ಮಾಡುತ್ತಿ ದ್ದನು. (ಷಷ್ಠಾಶ್ವಾಸ)

ವಿಚಿತ್ರತರವಾಗಿ ಶೃಂಗಾರಗೊಳಿಸಲ್ಪಟ್ಟ ಮಂಟಪದಲ್ಲಿಯ ಸಿಂಹಾಸನದಲ್ಲಿ ಸಿದ್ಧೇಶನು ಕುಳಿತುಕೊಂಡು ಶಿವಭಕ್ತರ ವೊತ್ತಕ್ಕೆ ಗುರುಲಿಂಗ ಜಂಗಮ ಮಹತ್ವ, ಆಚಾರಾದಿ ಷಟ್ಲಿಂಗ ಮಹತ್ವ, ಶಿವಾನುಭಾವಾದಿ ಅನುಭವ ಮಹತ್ವಗಳನ್ನು ಹೇಳು ತ್ತಿದ್ದನು. ಈ ಸಮಯದಲ್ಲಿ ತಮ್ಮ ಶಿಷ್ಯನು (ಕರಕಂಜ ಸಂಜಾತನು) 'ಭಕ್ತಿಗಳ ಮರ್ಮವೆಷ್ಟು ಬಗೆ ಅದನ್ನು ಹೇಳಬೇಕೆಂ'ದು ಕೇಳಿದನು ಅದಕ್ಕೆ ಯತಿಯು ವತ್ಸಾ, ಕರ್ಣಿಸು ಹರಭಕ್ತಿಯು ಬಹಿರಂತರಂಗವೆಂದೆರಡು ತೆರ. ಬಹಿರಂಗದ ಪೂಜೆಯೇ ಶೈವ. ಅಂತರಂಗಸಲ್ಲಿ ಚಿತ್ಸುಖಲೀಲೆಯಿಂದ ಭಜಿಸುವ ಭಕ್ತಿಯೇ ವೀರಶೈವ. ಶೈವವು ಸಾಮಾನ್ಯಶೈವ, ಮಿಶ್ರಶೈವ, ಶುದ್ಧಶೈವವೆಂದು ಮೂದೆರ. ವೀರಶೈವವೂ ಸಾಮಾನ್ಯ ವೀರಶೈವ, ವಿಶೇಷ ವೀರಶೈವ, ನಿರಾಭಾರವೆಂದು ಮೂರು ಬಗೆ.

ಶಿವನಿಂದ ಜನಿಸಿದ ಎಲ್ಲ ಪ್ರಾಣಿಗಳಲ್ಲಿ ಮನುಷ್ಯನು ಮುಖ್ಯನಾದರೂ ಶಿವನು ಪ್ರಾಣಿಮಾತ್ರಕ್ಕೂ ಕೂಡ ತನ್ನ ಸಂಬಂಧದ ಭಕ್ತಿಯನ್ನು ಅರಿತೋ ಅರಿಯದೆಯೋ ಆಚರಿಸಿದರೂ ಮೋಕ್ಷವೀಯುತ್ತಾನೆ. ತೀರ್ಥಕುಂಡದಲ್ಲಿ ಮುಳುಗಿದ ವರಾಹಕ್ಕೆ ಮತ್ತು ನಾಯಿಗೆ ಮೋಕ್ಷಸಿತ್ತನು. ಪಾಪಿಷ್ಠನಾದ ಬೇಡನೊಬ್ಬನನ್ನು ಸಾಯುವ ಸಮಯದಲ್ಲಿ ಬೂದಿಯೊಳಗೆ ಹೊರಳಾಡಿ ಬಂದ ನಾಯಿಯು ಆತನ ಹಣೆಯನ್ನು ಮೆಟ್ಟಿತು. ಆಗ ಅವನ ಹಣೆ ಭಸ್ಮಾಂಕಿತವಾಯಿತು. ಅಷ್ಟು ಮಾತ್ರದಿಂದಲೇ ಆ ಬೇಡನಿಗೆ ಕೈವಲ್ಯ ಪದವಿ ಸಿಕ್ಕಿತು. ಇಕ್ಷ್ವಾಕುವಂಶದ ಮಿತ್ರಸಹನೆಂಬ ಅರಸನ ಮಾತಿನಿಂದ ಶ್ಮಶಾನದ ಬೂದಿಯ ನೇಮವನ್ನು ಹೊಂದಿದ್ದ ಶಬರನಿಗೂ ಸಹ ವೀರೇಶನು ಪ್ರಸನ್ನನಾದನು. ರುದ್ರಾಕ್ಷಿಯನ್ನು ಧರಿಸಿದ ಕೋಳಿಯೂ ನಿರ್ವಾಣ ಪದವಿಯನ್ನು ಪಡೆಯಿತು. ಹೀಗೆ ಶಿವಸಂಬಂಧದ ಲಾಂಛನ ಧರಿಸಿದ ಪ್ರಾಣಿ ಮಾತ್ರಕ್ಕೂ ಮೋಕ್ಷಪದವಿ ಸಿಗುತ್ತದೆ.

ಎನ್ನುವಾಗ ಅರಿತು ಆಚರಿಸುವ ಮನುಷ್ಯನ ಬಗೆಗೆ ಹೇಳುವುದೇನಿದೆ? ಆಟದಲ್ಲಿ ಶಿವನನ್ನು ಪೂಜಿಸಿದ ಬಾಲಕರಿಗೂ ಶಿವನು ಬಯಸಿದ್ದನ್ನು ಕೊಡುತ್ತಾನೆ.

ಪೂಜೆಗೆ ವೇಳೆಯಿರದಿದ್ದರೂ ಲಿಂಗವನ್ನು ನೋಡಿ ಪ್ರದಕ್ಷಿಣಾದಿಗಳನ್ನು ಮಾಡಿ ಶೋಭಿಸುವ ಭಸ್ಮಧರಿಸಿ ಪವಿತ್ರ ಶರೀರಿಯಾಗಿ ಲಿಂಗದಲ್ಲಿ ಸಹಜಭಕ್ತಿ ನಟ್ಟಿದ್ದರೆ ಅವನು ಸಾಮಾನ್ಯ ಶೈವನೆನಿಸುವನು. ಸ್ಥಾಪಿತವಾದ ಸ್ಥಾವರಲಿಂಗಗಳು ಸಿಕ್ಕದೆ ಇದ್ದರೆ ಕಲ್ಲು ಮರ ಮಳಲುಗುಂಪೆ ಮೊದಲಾದವುಗಳಲ್ಲಿ ಶಿವನನ್ನು ಊಹಿಸಿಕೊಂಡು ಪೂಜೆಯನ್ನು ಮಾಡಿ ಚರಜಂಗಮ ಸಮೂಹದಲ್ಲಿ ಪ್ರೀತಿಯುಳ್ಳವನಾಗಿ ಅವರಿಗೆ ಅಕ್ಕಿ ತುಪ್ಪ ಮೊದಲಾದುವನ್ನು ಪ್ರೀತಿಯಿಂದ ಅರ್ಪಿಸುವವನಾವನೂ ಸಾಮಾನ್ಯ ಶೈವನೇ ಎನಿಸುವನು ಗೊಲ್ಲಾಳ, ಚೆಂಡನಾಥ, ಬಳ್ಳಮಲ್ಲಯ್ಯ, ಸೋಯಿದೇವ, ತಿರುನಾಳ್ಪವ, ಕಣ್ಣಪ್ಪ, ಸಾಂಖ್ಯ, ದೀಪದಕಲಿ, ಅರಿವಾಳ, ಅತಿಭಕ್ತರೇ ಮೊದಲಾದವರೆಲ್ಲ ಸಾಮಾನ್ಯ ಶೈವದೊಳಗಾಗುವರು.

ಇನ್ನು ಮಿಶ್ರಶೈವದ ಬಗೆಗೆ ಕೇಳು: ಭಾಳಾಕ್ಷನನ್ನು ಬಳಸಿ ವಿಷ್ಣು, ಉಮೆ, ಷಣ್ಮುಖ ಸಮ್ಮೇಳೈಸಿದ ಗಣಪದವಿಗಳೊಳಾವರಣ ಪಂಚಪೂಜೆ ಮಿಶ್ರವೆನಿಸುವುದು. ಈ ಆವರಣದ ಪೂಜೆಯಲ್ಲಿ ಮನ್ಮಥಹರನಾದ ಶಿವನೇ ಅಧಿಪತಿಯು ಅವೆಲ್ಲವೂ ಈ ಶಿವನಲ್ಲಿಯೇ ಇವೆ ಎಂಬ ಭಾವದಿಂದ ಪೂಜಿಸುವ ನೇಮ ಮಿಶ್ರಶೈವದ್ದು.

ಎಲ್ಲಾ ದರ್ಶನಕ್ಕೂ ಚರಜಂಗಮರೇ ಒಡೆಯರು ಎಂದು ಅವರನ್ನು ಭಜಿಸಿ, ಕೃಪೆಯನ್ನು ಪಡೆಯಬೇಕು. ಅಲ್ಲದಿದ್ದರೆ ಮಿಶ್ರಶೈವನಿಗೆ ಗತಿಯಿಲ್ಲವೆಂದು ತಿಳಿಯಬೇಕು. ಶಿವನಿಂದಾದ ಶೈವದ ವಿವಿಧ ಕ್ರಿಯೆಗಳಿಂದ ಶಿವನನ್ನು ಭಜಿಸಿದರೆ ಮತ್ತು ಆ ಶಿವನಿಂದ ದೀಕ್ಷಿತರಾಗಿ ಆ ಭಕ್ತಿಯ ಹವಣಿನಲ್ಲಿ ಇರುವ ಮುನಿಗಳೇ ಶಿವದ್ವಿಜರು. ಗೌತಮ, ಅತ್ರಿ, ಭರದ್ವಾಜ, ಕಶ್ಯಪ, ಕೌಶಿಕಾದಿಗಳೆಲ್ಲರೂ ಶಿವನಿಂದ ದೀಕ್ಷೆ ಪಡೆದ ಶಿವದ್ವಿಜರೇ ಎನಿಸಿದ್ದಾರೆ. ಈ ಋಷಿಗೋತ್ರದಲ್ಲಿರುವವರೆಲ್ಲ ಶಿವದ್ವಿಜರೆಂದೇ ಹೆಸರು ಪಡೆದಿದ್ದಾರೆ. ಇವರು ಪುನರ್ದೀಕ್ಷೆಗೆ ಅರ್ಹರಲ್ಲ. ಈ ರೀತಿಯಲ್ಲಿ ಸ್ವಶಿಷ್ಯನಿಗೆ ಸಿದ್ಧೇಶನು ಶಿವದ್ವಿಜಾದಿ ಶೈವಪ್ರಭೇದಗಳನ್ನು ಹೇಳಿದನು.

ರತ್ನಪೀಠದಲ್ಲಿ ಲಿಂಗವನ್ನು ದಕ್ಷಿಣಮುಖವಾಗಿರಿಸಿ ಷೋಡಶೋಪಚಾರದಿಂದ ಪೂಜಿಸುವುದು ಶುದ್ಧಶೈವನಿಗೆ ಆತ್ಮಾರ್ಥ ಪೂಜೆಯೆನಿಸುವುದು. ಶುದ್ಧಶೈವನ ಲಿಂಗ ಲೋಪವಾದರೆ, ಒಂದು ಲಕ್ಷ ಅಘೋರ ಜಪವನ್ನು ಮಾಡಿ, ಹಿಂದಣ ಗುರುವನ್ನು ಪೂಜಿಸಬೇಕು. ಆಮೇಲೆ ಅವನಿಂದ ಮರಳಿ ಲಿಂಗವನ್ನು ಪಡೆದು ಧರಿಸಿ ಹಿಂದಿನಂತೆ ಪೂಜಿಸುತ್ತ ಬರಬೇಕು. ಸೂರ್ಯನು ತನ್ನ ಲಿಂಗವು ತನ್ನಿಂದ ಸಡಿಲಿಹೋಗಲು ತನ್ನ ಶಿರಸ್ಸನ್ನೇ ಕೊಯ್ದಿಟ್ಟನು. ಇದು ಶುದ್ಧಶೈವರ ನೈಷ್ಠಿಕ. ಇಂದ್ರನೀಲ ಲಿಂಗವನ್ನು ಕೃಷ್ಣನೂ, ಶೈಲಮಯಲಿಂಗವನ್ನು ಬ್ರಹ್ಮನೂ, ಮಣಿಮಯಲಿಂಗವನ್ನು ಇಂದ್ರನೂ, ಅನ್ನಮಯಲಿಂಗವನ್ನು ಅಗ್ನಿಯೂ, ಸ್ಫಾಟಿಕಲಿಂಗವನ್ನು ವರುಣನೂ, ಆರಕೂಟ

ಲಿಂಗವನ್ನು ವಾಯುವೂ, ಹೇಮಮಯಲಿಂಗವನ್ನು ಕುಬೇರನೂ, ತಾಮ್ರದಲಿಂಗವನ್ನು ಸೂರ್ಯನೂ, ಮುತ್ತಿನಲಿಂಗವನ್ನು ಚಂದ್ರನೂ, ರೌಪ್ಯಲಿಂಗವನ್ನು ವಿಶ್ವದೇವತೆಗಳೂ ಕಂಚಿನಲಿಂಗವನ್ನು ವಸುದೇವತೆಗಳೂ, ಪಾರ್ಥಿವಲಿಂಗವನ್ನು ಅಶ್ವಿನೀದೇವತೆಗಳೂ, ಸೀಸಲಿಂಗವನ್ನು ಪಿಶಾಚಿಗಳೂ, ತ್ರೈಲೋಹಮಯ ಲಿಂಗವನ್ನು ಗುಹ್ಯಕರೂ, ಹವಳದ ಲಿಂಗವನ್ನು ಪನ್ನಗರೂ, ಪುಷ್ಪಲಿಂಗವನ್ನು ಮನ್ಮಥನೂ, ವಜ್ರಲಿಂಗವನ್ನು ಬುದ್ಧನೂ, ಭಾವಲಿಂಗವನ್ನು ಜಿನೇಂದ್ರನೂ ಪೂಜಿಸಿ ತಮ್ಮ ತಮ್ಮ ಪದಗಳನ್ನು ಪಡೆವರೆಂಬುದನ್ನು ನಿಶ್ಚೈಸಿ ಶಿವನನ್ನುದ್ದೇಶಿಸಿ ಮಾಡುವ ಪೂಜೆ ಶುದ್ಧಶೈವನೆನಿಸುವುದು. ತಿರುನೀಲಕಂಠ, ಏಣಾದಿನಾಥ, ಪಿಳ್ಳೈನೈನಾರ್, ತಿರುಮೂಲ, ಇಹಪ್ಪಗೆಯಾಂಡ, ಕಲಿಕಂಪ, ಮಾನಕಂಜರ ಕರಿಕಾಲಚೋಳ, ಅರಿವಾಳತಾಂಡಿ, ಕಾರಿಕಾಲಮ್ಮೆ, ವೆಳ್ಳೂತ, ರಾಜೇಂದ್ರಚೋಳ, ತಿರುತೊಂಡರೇ ಮೊದಲಾದವರು ಶುದ್ಧಶೈವದಲ್ಲಿ ಬರುವರು.

ಗುರುಕರಕಮಲದಲ್ಲಿನ ಇಷ್ಟಲಿಂಗವನ್ನು ದೀಕ್ಷಾಸಂಗದಿಂದ ಪಡೆದುಕೊಂಡು, ಎದೆ, ಕಂಠ, ಕರಕಮಲ, ಬಗಲು ಮೊದಲಾದ ಸ್ಥಾನಗಳಲ್ಲಿ ಧರಿಸಿ ಪ್ರಾಣದಿಂದಲೂ, ಭಾವದಿಂದಲೂ ಆ ಭೂತೇಶನಲ್ಲಿ ಕೂಡಿಕೊಂಡು ಆಲಸ್ಯವಿಲ್ಲದಂತೆ ಪೂಜಿಸುವವನೇ ಸಾಮಾನ್ಯ ವೀರಶೈವನೆನಿಸುವನು. ಪಂಚಾಕ್ಷರಿ ಮಂತ್ರವನ್ನು ಜಪಿಸುತ್ತ ಭಸ್ಮ ರುದ್ರಾಕ್ಷಿಗಳನ್ನು ಧರಿಸಿ, ಗುರುಲಿಂಗ ಚರಭಕ್ತಿಗಳನ್ನು ಆಚರಿಸುತ್ತ ಮೂರು ವೇಳೆಯಲ್ಲೂ ಪೂಜಿಸುವ ಆ ಭಕ್ತನೇ ಸಾಮಾನ್ಯ ವೀರಶೈವನು. ಈ ಸಾಮಾನ್ಯನು ಶಿವಪೂಜಾವ್ರತಯುಕ್ತನಾಗಿ ಭಕ್ತನೆಂದೆನಿಸಬೇಕು. ಸತ್ಯಶುದ್ಧನೆನಿಸಿರಬೇಕು. ಈಶಲಾಂಛನ ಧಾರಿಗಳನ್ನು ಶಿವನೆಂದೇ ಭಾವಿಸಿ ಅವರನ್ನು ಪೂಜಿಸಿ ಹೇಮವಸನಾದಿಗಳನ್ನು ಅರ್ಪಿಸಬೇಕು. ಶಿವಶರಣರಲ್ಲಿ ದಾಸೋಹ ವ್ರತವನ್ನು ಆಚರಿಸಿ ತೃಪ್ತಿಪಡಿಸಬೇಕು. ಇವೆಲ್ಲ ಸಾಮಾನ್ಯ ವೀರಶೈವನ ಆಚರಣೆಗಳೆಂದು ಸಿದ್ಧೇಶನು ಶಿಷ್ಯನಿಗೆ ತಿಳಿಸಿದನು.

ಇನ್ನು ವಿಶೇಷ ವೀರಶೈವನ ಲಕ್ಷಣವನ್ನು ಕೇಳು: ಪಿಂಡ ಮತ್ತು ಪಿಂಡಜ್ಞಾನವನ್ನು ತಿಳಿದು ಸಂಸಾರ ವಿಷಯದಲ್ಲಿ ಹೇಯವುಳ್ಳವನಾಗಿ, ಗುರುಕರುಣವನ್ನು ಪಡೆದು, ಹಸ್ತಮಸ್ತಕ ಸಂಯೋಗದಿಂದ ಕಾರಣದೇಹಕ್ಕೆ ವೇಧಾದೀಕ್ಷೆಯ ಮೂಲಕ ಭಾವಲಿಂಗವನ್ನು ಕಾರಣ ತನುವಿನ ಭಾವಹಸ್ತದಿಂದ ಪಡೆದುಕೊಳ್ಳಬೇಕು. ಕರ್ಣದಲ್ಲಿ ಶಿವಮಂತ್ರವನ್ನು ಹೇಳುವುದರಿಂದ ಸೂಕ್ಷ್ಮತನುವಿಗೆ ಮಾಡುವ ಮಂತ್ರದೀಕ್ಷೆಯ ಮೂಲಕ ಕೊಡುವ ಪ್ರಾಣಲಿಂಗವನ್ನು ಮನದ ಹಸ್ತದ ಮೂಲಕ ಆಂತುಕೊಳ್ಳಬೇಕು. ಮತ್ತು ಕ್ರಿಯಾದೀಕ್ಷೆಯಿಂದ ಕೊಡುವ ಕ್ರಿಯಾಲಿಂಗವನ್ನು ಸ್ಥೂಲ ತನುವಿನ ಹಸ್ತದೊಳಗಿರಿಸಿಕೊಂಡು ಆ ಲಿಂಗವನ್ನು ಕಾಂಚನಕ್ಕೆ ಕೈಚಾಚದಂತೆ ಕರಸ್ಥಳದಲ್ಲಿಯಾಗಲಿ, ಭೋಗಾಭೋಗಂಗಳನ್ನು ಇಚ್ಛಿಸದೆ ಕಕ್ಷಸ್ಥಾನದಲ್ಲಿಯಾಗಲಿ,

ಅಂಗಸೋಂಕಿದ ಸುಖವನ್ನು ಲಿಂಗದಲ್ಲಿ ವೇಧಿಸುತ್ತ ಎದೆಯ ಮೇಲಾಗಲಿ, ಮನ ಸೂತಕ, ಅನೃತ, ಕುತರ್ಕ, ಮದಮತ್ಸರ ಜಿಹ್ವಾಲಂಪಟತ್ವವಿಲ್ಲದೆ ಮುಖದಲ್ಲಾಗಲಿ, ನವನಾಳದಲ್ಲಿ ಬೀಸುವ ಪ್ರಾಣನ ಗುಣವನ್ನು ಪರಿಹರಿಸಿ ಅಮಳೋಕ್ಯದಲ್ಲಾಗಲಿ ಧರಿಸಬೇಕು. ಹೀಗೆ ಧರಿಸಿದ ಲಿಂಗವೇ ಕ್ರಿಯಾಲಿಂಗವೆನಿಸುವುದು. ಇಷ್ಟಲಿಂಗ-ಪ್ರಾಣಲಿಂಗ-ಭಾವಲಿಂಗಗಳೆಂಬ ತ್ರಿವಿಧಲಿಂಗಗಳನ್ನು ತ್ರಿವಿಧ ತನುಗಳಲ್ಲಿ ತಾಳಿ, ಗುರುಲಿಂಗಜಂಗಮ ವಿಭೂತಿರುದ್ರಾಕ್ಷಿ ಮಂತ್ರ ಪಾದೋದಕ ಪ್ರಸಾದಗಳೆಂಬ ಅಷ್ಟಾವರಣಯುಕ್ತನಾಗಿ, ಕುಳಿತಲ್ಲಿ, ನಿದ್ರೆ ಮಾಡುವಾಗ, ಸಂಚರಿಸುವಾಗ, ಊಟ ಮಾಡುವಾಗ, ಮಲಮೂತ್ರ ವಿಸರ್ಜನಾದಿಕ್ರಿಯೆಯಲ್ಲಿ, ಸ್ನಾನದಲ್ಲಿ, ಕೊನೆಗೆ ಸ್ತ್ರೀಸಂಬಂಧಾದಿಗಳಲ್ಲೂ ಕೂಡ ಲಿಂಗವನ್ನು ದೇಹಸಂಬಂಧ ತಪ್ಪದ ಹಾಗೆ ನೋಡಿಕೊಂಡು ಶಿವಯೋಗ ನಿಷ್ಠನಾಗಿ ವ್ಯವಹರಿಸುವವನೇ ವಿಶೇಷ ವೀರಶೈವನೆನಿಸುವನು. ಭೂತಬಡಿದಾತ ಭೂತನೇ ಆಗುವಂತೆ, ಹಾವು ಕಡಿದವನ ದೇಹಕ್ಕೆಲ್ಲ ವಿಷವು ವ್ಯಾಪಿಸುವಂತೆ, ಜಾಜಿ, ಯೂಧಿಕಾ, ಕೇತಕೀ ಹೂವುಗಳ ಸಂಬಂಧ ಪಡೆದ ತಿಲದ ತೈಲವು ಸುಗಂಧವಾಗುವ ಹಾಗೆ ಇಷ್ಟಲಿಂಗಸೋಂಕಿದವನ ತನುವಿನ ಜೀವವೂ ಲಿಂಗವೇ ಆಗುವುದು. ಕುಂಭವೊಂದರಲ್ಲಿ ನೀರನ್ನು ತುಂಬಿ ಒಲೆಯಮೇಲಿಟ್ಟು ಕೆಳಗೆ ಉರಿ ಹಾಕಿದಾಗ ಜಲವೆಲ್ಲ ಉಷ್ಣವಾಗುವ ಹಾಗೆ ಉತ್ಕೃಷ್ಟಲಿಂಗ ಧಾರಣದಿಂದ ಅಸುವು ಲಿಂಗವೇ ಆಗುವುದು. ಅಂತರಂಗದಲ್ಲಿ ಲಿಂಗಜ್ಞಾನ, ಬಹಿರಂಗದಲ್ಲಿ ಲಿಂಗಕ್ರಿಯೆಗಳು ಕೂಡಿಕೊಳ್ಳಲು ಅಂಧಪಂಗುನ್ಯಾಯದಂತೆ ಅವರು ಹೊರಒಳಗೆ ಲಿಂಗಜ್ಞಾನದಿಂದಲೇ ಕೂಡಿದವರೆನಿಸುವರು. ಹೀಗೆ ವಿಸ್ತಾರವಾಗಿ ಇಷ್ಟ, ಪ್ರಾಣ, ಭಾವಲಿಂಗ ಮಹತ್ವವನ್ನು ಶಿಷ್ಯನಿಗೆ ಸಿದ್ಧೇಶ ಉಪದೇಶಿಸಿದನು.

ಶಿವಕಥೆ ಕೇಳುವುದು, ಹರನನ್ನು ಕೀರ್ತಿಸುವುದು. ಸ್ಮರಿಸುವುದು, ಪೂಜಿಸುವುದೇ ಮೊದಲಾದ ನವವಿಧ ಭಕ್ತಿಯು ಲಿಂಗಧಾರಿಗೆ ಅವಶ್ಯಕ. ಅಶನ, ಪಿಪಾಸೆ, ಶೋಕ, ಜನನ, ಜರಾಮರಣ, ಮೋಹಗಳೇ ಮೊದಲಾದುವನ್ನು ತಾಪತ್ರಯಗಳೆಂಬ ಸಮುದ್ರವನ್ನು ಭಕ್ತಿಯೆಂಬ ತೆಪ್ಪವನ್ನೇರಿ ದಾಟಬೇಕು. ಗುರುವಿಗೆ ಜಂಗಮಕ್ಕೆ ಶಿವಭಕ್ತರಾದವರಿಗೆ ಜಾತಿಸೂತಕ, ರಜಸ್ಸೂತಕ ಜನನಸೂತಕ, ಮೃತಸೂತಕಾದಿ ಸೂತಕಗಳಿರುವುದಿಲ್ಲ. ಲಿಂಗದೊಳೈಕ್ಯವಾದ ಭಕ್ತನಿಗೆ, ಲೌಕಿಕರು ಸತ್ತರೆ ಮಾಡುವಂತೆ ಶ್ರಾದ್ಧಾದಿಕರ್ಮಗಳನ್ನಾಚರಿಸಬಾರದು. ಮಾಡುವ ಪಾಪಿಷ್ಠನ ಮನೆಯಲ್ಲಿ ಉಣ್ಣಬಾರದು. ಮೃತಸೂತಕವಂ ಬಗೆಯದೆ ನಂಬಿಯಕ್ಕನ ಮನೆಯಲ್ಲಿ ಉಂಡ ಹರನನ್ನು ಪೂಜಿಸುವ ಭಕ್ತರಿಗೆಲ್ಲಿಯ ಮೃತಸೂತಕ ? ಚೆನ್ನನುಂಡ ಹರನಂ ಭಜಿಸುವ ಭಕ್ತರಿಗೆಲ್ಲಿಯ ಎಂಜಲು ಸೂತಕ ?

ಆದುದರಿಂದ ಶಿವಭಕ್ತನಾದವನು, ವ್ರತ, ನಿಯಮ, ಉಪವಾಸ, ಹೊಲೆ, ಇತ್ಯಾದಿಗಳನ್ನು ಆಚರಿಸಬಾರದು. ಅವನು ಅವಿರತ ನವವಿಧ ಶಿವಲಿಂಗಭಕ್ತಿ ಸುಖ

ದಲ್ಲಿ ಇರಬೇಕು. ಗಿರಿ, ವಾರಣಾಸಿಗಳೆಂದು ತಿರುತಿರುಗಿ ಅಲ್ಲಿಯ ತೀರ್ಥಗಳಲ್ಲಿ ಮುಳುಗಿ ಪವಿತ್ರರಾದೆವೆಂಬ ಭಾವನೆ ಸಲ್ಲದು. ಇಷ್ಟಲಿಂಗವನ್ನುಳಿದು ಬೇರೆ ಗಿರಿಗಳಲ್ಲಿ ರುವ ಲಿಂಗಗಳನ್ನು ಭಕ್ತರು ಉಪಾಸಿಸಬಾರದು. ಶರಣನು ನೆಲಸಿರುವ ನೆಲವೇ ಪುಣ್ಯಕ್ಷೇತ್ರವೆಂದು ತಿಳಿಯಬೇಕು. ಬಾಹ್ಯದಲ್ಲಿರುವ ಸಮಸ್ತ ಲಿಂಗಕ್ಷೇತ್ರಗಳು, ತೀರ್ಥಕ್ಷೇತ್ರಗಳು ತನ್ನಿಷ್ಟಲಿಂಗದಲ್ಲಿ ನೆಲಸಿರುವುವೆಂದು ತಿಳಿದು ಗುರುಲಿಂಗಜಂಗಮ ತೀರ್ಥಪ್ರಸಾದ ಸೇವನೆಯನ್ನಲ್ಲದೆ ಅನ್ಯ ತೀರ್ಥಪ್ರಸಾದ ಸೇವನೆ ಶಿವಲಿಂಗಭಕ್ತನಿಗೆ ಸಲ್ಲದು – ಹೀಗೆಂದು ಸಂಯಮವಲ್ಲಭನು ಅಕ್ಕರೆಯಿಂದ ನಿಜಶಿಷ್ಯನಿಗೆ ಬೋಧಿ ಸಿದನು.

ಜಂಗಮವನ್ನು ಉದಾಸೀನ ಮಾಡಿ ಲಿಂಗಪೂಜೆಯನ್ನು ಮಾಡಿದರೆ ಫಲವಿಲ್ಲ. ಚರರನ್ನು ನೋಯಿಸಿ ಚರಸೇವೆಮಾಡಿದೆನೆನ್ನಬಾರದು. ಗುರುಚರಶರಣ ಜನಗಳನ್ನು ನೋಯಿಸಬಾರದು. ಶರಣರಮೇಲೆ ಮಿಥ್ಯತಥ್ಯರಾಗದ್ವೇಷಾದಿಗಳನ್ನು ತಾಳಬಾರದು, ಶಿವಭಕ್ತರನ್ನು ನಿಂದಿಸಬಾರದು, ಶಿವಭಕ್ತರ ನಿಂದೆಯನ್ನೂ ಕೇಳಬಾರದು. ಜೂಜು ಮೊದಲಾದವುಗಳ ವ್ಯಸನದಲ್ಲಿ ಶಿವಭಕ್ತರಿರಕೂಡದು. ಹುಸಿ, ಕಳವು ಹಾದರ ಮೊದಲಾದುವು ಶಿವಭಕ್ತರಿಗೆ ಸಲ್ಲವು. ಶಿವಸಹಿತಮಾಡಿದ ಕಾಯಕವೇ ಭಕ್ತನ ಶುದ್ಧಕ್ರಿಯೆ. ಉದಯಮರಸನಂತೆ ನ್ಯಾಯವ ಹೇಳಿಯಾದಡುಂ, ಜಕ್ಕಿಯರ ಬೊಮ್ಮಯ್ಯನಂತೆ ಬೊಂಬೆಯನ್ನು ಕುಣಿಸಿಯಾದಡುಂ, ಸಿಗುರ ಚಂದ್ರಯ್ಯನಂತೆ ಗಿರುಗಟೆಯಂ ಬಾರಿಸಿಯಾದಡುಂ–ಹೀಗೆ ಅನೇಕ ಶರಣರು ಆಚರಿಸಿದಂತೆ ಸತ್ಯ ಶುದ್ಧ ಕಾಯಕಮಾಡಿ ಗುರುಚರಭಕ್ತಿನ್ನಾಚರಿಸುವುದೇ ವೀರಶೈವನಿಗೆ ಪವಿತ್ರ ಕ್ರಿಯೆ ಯಾಗಿದೆ. ಶಿವನನ್ನು ಅವನ ಶರಣರನ್ನು ಕೀರ್ತಿಸಬೇಕಲ್ಲದೆ ಅನ್ಯರನ್ನು ಕೀರ್ತಿಸ ಬಾರದು. ಹಾಗೆ ಮಾಡಿದ್ದಾದರೆ ಮಹಾನರಕದಲ್ಲಿ ಬೀಳುವನು. ಮಾಡುವ ಭೋಗ ವನ್ನೆಲ್ಲ ಚರಲಿಂಗಕ್ಕೆ ಮಾಡುವೆನೆಂಬ ಭಾವದಿಂದ ಮಾಡಬೇಕು. ಗುರುಚರರನ್ನು ನರರೆಂದು ಭಾವಿಸಬಾರದು. ನಗುರೋರಧಿಕವೆಂಬ ಶ್ರುತಿವಾಕ್ಯದಲ್ಲಿ ನಂಬುಗೆಯಿಡ ಬೇಕು. ಗುರುಸಾಹಿತ್ಯದ ಭಕ್ತನು ಲಿಂಗದಲ್ಲಿಯೇ ಗುರುವನ್ನು ಕಾಣಬೇಕು. ಹಾಗೆ ತಿಳಿಯದಿದ್ದರೆ ಅದು ಗುರುಪಾತಕವಾಗುವುದು. ಜಂಗಮಲಿಂಗವೇ ನಾದವು. ಲಿಂಗವೇ ಬಿಂದು, ಅನಾದಿಯೇ ಭಕ್ತಿಸ್ಥಲ. ನಾದಬಿಂದುಗಳೆರಡರ ಸಂಗದಿಂದ ಉಭಯಸಂಗವಳವಡುವುದು. ಆ ಸಂಬಂಧಿಸಿದ ಭಾವವೇ ಜಂಗಮ. ಅದೇ ಬಹಿಃ ಕರಿಸಿ ತೋರುತ್ತಿದೆ. ಗುರುವನ್ನೂ, ಲಿಂಗವನ್ನೂ ಹೇಗೆ ಪೂಜಿಸುತ್ತಿರುವನೋ ಹಾಗೇ ಜಂಗಮವನ್ನು ಪೂಜಿಸಬೇಕು. ಮೃಚ್ಛಿಲಾದಿಗಳಿಗಿಂತ ಲಿಂಗಂಗಳು ಹೇಗೋ ಹಾಗೆ ಜಂಗಮ ಶಿವಯೋಗಿಯೇ ಶ್ರೇಷ್ಠನು. ಸ್ಥಾವರ ಲಿಂಗದಲ್ಲಿ ಮಂತ್ರಸಂಸ್ಕಾರ ದಿಂದ ಶಿವನಿರುವ ಹಾಗೆ ಚರಲಿಂಗದಲ್ಲಿ ಅವಿರತವಾಗಿ ಹರನಿದ್ದಾನೆ. ಲಿಂಗತೀರ್ಥ ವನ್ನು ಪ್ರೀತಿಯಿಂದ ಸೇವಿಸುವಂತೆ ಜಂಗಮ ತೀರ್ಥವನ್ನು ಗುರುಪಾದೋದಕವನ್ನು ಸ್ವೀಕರಿಸಬೇಕು. ಜಂಗಮವು ಸರ್ವಪಾವನಕ್ಕೆ ಪಾವನವೆನಿಸಿದೆ. ಚರಜಂಗಮಕ್ಕೆ

ವಸ್ತ್ರ, ಅನ್ನ, ಪಾನ, ಹೇಮಂಗಳನ್ನು ಅರ್ಪಿಸಿ ಹರುಷವನ್ನುಂಟುಮಾಡುವುದು ಚರಭಕ್ತಿಯ ವ್ರತವೆನಿಸಿದೆ. ಜಂಗಮ ಪೂಜೆಯಿಲ್ಲದೆ ಕರಸ್ಥಲದ ಲಿಂಗಪೂಜೆ ಪೂರ್ಣವೆನಿಸುವುದಿಲ್ಲ. ಜಂಗಮ ಜಿಹ್ವೆಯೇ ಶಂಕರಜಿಹ್ವೆ—ಹೀಗೆ ವಿಸ್ತಾರವಾಗಿ ಸ್ವಶಿಷ್ಯನಿಗೆ ಗುರು.ಲಿಂಗ ಜಂಗಮದ ಬಗೆಗೆ ಸಿದ್ಧೇಶನು ಬೋಧಿಸಿದನು. (ಸಪ್ತಮಾಶ್ವಾಸ)

ಶಿಷ್ಯನು ಷಟ್ಸ್ಥಲವಿಧಾನ್ವಿತ ಮೂರ್ತಿಯಾದ ಸಿದ್ಧೇಶನಲ್ಲಿ ಭಕ್ತನಾದವನು ಮಹೇಶನಾದುದನ್ನು ಪ್ರೀತಿಯಿಂದ ಹೇಳಬೇಕೆಂದು ಕೇಳಲು ಸಿದ್ಧೇಶನು ಮಹೇಶನ ಲಕ್ಷಣವನ್ನು ಹೇಳತೊಡಗಿದನು. ತನ್ನಯ ಪತ್ನಿಯಲ್ಲದೆ ಉಳಿದ ಸ್ತ್ರೀಯರ ಹಾವಭಾವಾದಿಗಳೇ ಮೊದಲಾದುವನ್ನು ಕಂಡು ಆಸೆಪಡದೆ ಇರುವವನು ಮಹೇಶನಾಗುವನು. ಧೀಷನ ಪತ್ನಿಗಾಗಿ ಸುರರಾಜನು ಭಗಾಂಕಿತನಾದನು. ಯೋಷಿತೆಗಾಗಿ ನಹುಷನು ಹಾವಿನರೂಪ ಧರಿಸಿದನು. ಕಾಶಿಗೆ ಹೋದ ವಿಪ್ರನ ಸತಿಗಾಗಿ ಶತದ್ಯುಮನು ಕೆಟ್ಟನು ವೇಶ್ಯಾದಿ ಸಂಗವು ಪಾಪಕಾರಕ. ಹಾದರದಿಂದ ಭಕ್ತಿಗೆ ಹಾನಿ. ಆದ್ದರಿಂದ ಭಕ್ತನಾದವನು ಪರಾಂಗನಾಕೂಟವನ್ನು ಮಾಡಲಾಗದು. ಅನ್ಯನಾರಿಯರ ಸಂಗದಿಂದ ಲಘುವಾಗದ ಮಾನವರು ಲೋಕದೊಳಗುಂಟೆ ? ಕಾಮುಕನಾದವನಿಗೆ ಮೋಕ್ಷಕ್ಕೆ ಅಧಿಕಾರವಿಲ್ಲ. ದುರ್ನೀತಿ, ದುರಾಚಾರಾನ್ವಿತರು. ವಂಚಕರು, ಸಂಚಲಚಿತ್ತವುಳ್ಳವರೇ ಮೊದಲಾದವರೊಡನೆ ಕೂಡಿ ವ್ಯವಹರಿಸುವ ಭಕ್ತನ ಭಕ್ತಿ ಹಾರುವುದು. ಕಾಮಾಂಧರಾದವರುಕಾಮಾರಿಯ ಭಕ್ತರಾಗಲಾರರು. ಅವರು ನರಕಕ್ಕೆ ಇಳಿಯುವರು. ಪರರ ಅರ್ಥವನ್ನು ಬಯಸಿದವನು ಬಿಲ್ಲೇಶಬೊಮ್ಮಯ್ಯ ಕೆಟ್ಟಂತೆ ಕೆಡುವನು. ಪರರ ಒಡವೆಯನ್ನು ಕೊಂಡು ಕೊಡದವನು, ಪರರು ಹೂಳಿದ ಅರ್ಥವನ್ನು ತೆಗೆದುಕೊಳ್ಳುವವನು ನರಕಾರ್ಣವದಲ್ಲಿ ಮುಳುಗುವನು.

ಆನೆ, ಕುದುರೆ, ಕೋಣ, ಕಪಿ, ಗೂಳಿ ಮೊದಲಾದುವು ಮನುಷ್ಯನ ಶಿಕ್ಷೆಗೆ ಒಳಪಡುತ್ತವೆ. ಸುಜ್ಞಾನದಿಂದ ಮನುಷ್ಯನನ್ನು ಶಿಕ್ಷೆಗೆ ಒಳಪಡಿಸಿದರೆ ಮನಸ್ಸು ನಿರ್ಮಳವಾಗದಿರುವುದೇ ? ಕೆಲದವರೊಡನೆ ಮಾತನಾಡುತ್ತ ದಾಸಿಯು ತನ್ನ ತಲೆಯ ಮೇಲಿನ ಕೊಡವನ್ನು ಮರೆಯದಂತೆ ಲಲನಾ ಸುತಸುಖವರ್ತಿಯೊಳಿರ್ದ ಭಕ್ತನು ಲಿಂಗವನ್ನು ಮರೆಯಲರಿಯನು. ಹೊರಗಣ ಸತ್ಕೃತ್ಯ ಒಳಗಣ ಸುಜ್ಞಾನವನ್ನು ಭಕ್ತನು ಮರೆಯಲಾಗದು. ಯುದ್ಧದಲ್ಲಿ ಖಡ್ಗಮುರಿದ ಭಟನಿಗೆ ತನ್ನ ಕೈಯೇ ಆಯುಧವಾಗುವ ಹಾಗೆ. ವೇದೋದಿತ ಸತ್ಕ್ರಿಯೆಗಳನ್ನು ಆಚರಿಸುವವನಿಗೆ ಪೂರ್ಣಬೋಧೆಯಿಂದ ಮೋಕ್ಷವಪ್ಪುದು. ಜನಮೆಚ್ಚದಿದ್ದರೂ ಮನಮೆಚ್ಚುವಂತೆ ನಡೆಯುವವನಿಗೆ ಮೋಕ್ಷವಾಗುವುದು. ಗುರುವಿತ್ತ ಇಷ್ಟಲಿಂಗವಂ ನೆನೆದು ಜಪಿಸಿ, ಭಜಿಸಿ ಕರಣೇಂದ್ರಿಯಂಗಳೊಳಗೆ ಆ ಇಷ್ಟಲಿಂಗವನ್ನು ತಾಳಿ, ಮನಸ್ಸನ್ನದರಲ್ಲಿರಿಸಿ ಚಿತ್ಕಲೆಯನ್ನು ಸಾಧಿಸಬೇಕು. ಹಾಲಿನಲ್ಲಿ ತುಪ್ಪವಿದೆ, ಆದರೆ ತುಪ್ಪದಲ್ಲಿ ಹಾಲಿಲ್ಲವೆಂಬಂತೆ ಲಿಂಗದಲ್ಲಿ ಮೂಲ ಕಲೆಯಿರುವುದು. ಆದರೆ ಆ ಮೂಲ ಕಲೆಯಲ್ಲಿ ಇಷ್ಟ

ಲಿಂಗವಿಲ್ಲ. ಚಿತ್ಕಲೆ ಇಷ್ಟದಲ್ಲಿ ಉಂಟೆಂದು ನೀಲಲೋಚನೆಯ ಅನುಮಿಷಪ್ರಭುಗಳು ಸ್ಥೂಲಲಿಂಗವಂ ತಾಳಿ ಮೂಲ ಕಲೆಯೊಳ್ ಮನವಿಟ್ಟರೆಂಬ ಮಾತೆಲ್ಲಿಯದು ? ಸಚ್ಚಿದಾನಂದವಪ್ಪ ಲಿಂಗವು ಸದ್ಭಕ್ತನ ಬಚ್ಚಬರಿಯರಿವಿನ ಪೂರ್ಣದರಿವಿಂಗೆ ಮೆಚ್ಚಿ ಕರಸ್ಥಲದಲ್ಲಿ ನಿಂದನೆಂದರಿದಾತನೇ ಲಿಂಗನೈಷ್ಠಿಕನು. ಕರದೊಳಗೆ ಇಷ್ಟವೇಕೆಂದ ಗೋರಕ್ಷನಿಗೆ ಪ್ರಭುವು ಚಿತ್ಕಲೆಗೆ ಈ ಇಷ್ಟವೇ ಮೂಲವೆಂದುದನ್ನು ಅರಿದು ಶರೀರದ ಒಳಹೊರಗೆ ಭಿನ್ನವಿಲ್ಲದೆ ಕರದಲ್ಲಿ ಧರಿಸಿದ ಇಷ್ಟಲಿಂಗವೊಂದೇ ನವವಿಧ ಚಕ್ರದೊಳಗೆ ತೋರುವುದು. ಶಿವೆಗೆ ಶಿವನೊಬ್ಬನೇ ಗಂಡನಾದರೂ ಹರನು ನಾನಾರೂಪವನು ಧರಿಸಲು ಗಿರಿಜೆ ಹಲವಾಗಿ ಶಿವರೂಪಗಳೊಳಗೆ ಕೂಡಿ ಪತಿವ್ರತೆಯೆನಿಸುವಂತೆ ಶರಣನು ಲಿಂಗವೊಂದಾದರೂ ಶರಣನ ಕರಣ ಹಲವಾಗಲು ಅವುಗಳಲ್ಲಿ ಪರಮೇಶ್ವರನು ಪ್ರತಿಬಿಂಬಿಸಿ ಹಲವೆಂಬ ಹಾಗೆ ಇರುವನು ಹೀಗೆ ಇಷ್ಟಲಿಂಗವನ್ನು ತ್ರಿವಿಧ ತನುಸಂಬಂಧದಿಂದ ತ್ರಿವಿಧಪೂಜೆಮಾಡಿ ಭಕ್ತನು ಭಜಿಸಬೇಕು.

ಹಾಲಿನಿಂದಾದ ತುಪ್ಪವು ಮರಳಿ ಹಾಲಾಗುವುದೇ ? ಪೂರ್ವಕರ್ಮವನ್ನು ಓರೆ ಮಾಡಿ ಶಿವಾನುಭವಿಯಾದವನಿಗೆ ಜನ್ಮಗಳುಂಟೆ ? ಅಂಥವನಿಗೆ ತನುಕರಣಾದಿಭಾವ ವಿರುವುದಿಲ್ಲ. ಪೂಜಿಸ ಆತ್ಮ, ಪೂಜೆಗೊಂಬ ಶಿವ ಎಂಬ ಉಭಯಭೇದಭಾವವಳಿ ದವನೇ ನೈಷ್ಠಿಕ ಭಕ್ತನೆನಿಸುವನು. ಇಂಥ ಭಕ್ತನು ಮಹೇಶನೆನಿಸುವನು.

ಕೇಶವ, ಬ್ರಹ್ಮ, ವಿಷ್ಣು, ದೇವತೆಗಳು ಮೊದಲ್ಗೊಂಡು ಇರುವೆಯವರೆಗಿನ ಈ ವಿಶ್ವವೆಲ್ಲವೂ ಪಶುಗಳೆನಿಸುವುವು. ಶಿವನೇ ಕರ್ತೃವೆನಿಸುವನು. ಪಶುಜೀವಿಗೆ ಮಾಯೆಯೇ ಪಾಶ. ಆ ಮಾಯಾ ಪಾಶವನ್ನು ಹರಿದಲ್ಲದೆ ಮುಕುತಿಯಿಲ್ಲ. ಪಶು-ಪಾಶ-ಪತಿಜ್ಞಾನವೇ ಈ ವಿಷಮವಾದ ಸಂಸಾರ ಸಾಗರವನ್ನು ದಾಟಿಸುವ ದೋಣಿಯಿದ್ದಹಾಗೆ. ಜ್ಞಾತೃ, ಜ್ಞಾನ, ಜ್ಞೇಯದ ಸೂತ್ರವನ್ನು ಅರಿತು ಈಶ್ವರ ನನ್ನು ನೆನೆಯುವ ಭಕ್ತನೇ ಭೂಮಿಯಲ್ಲಿ ಅರಿವಿನ ತಿರುಳನ್ನುಬಲ್ಲಾತನೆನಿಸುವನು. ಅದ್ವೈತಭಾವವನ್ನು ಆಶ್ರಯಿಸದೆ ಶಿವನಿಗಾಗಿ ಸಕಲಕ್ರಿಯೆಗಳನ್ನು ಅರ್ಪಿಸಬೇಕು. ಧರಿಸಿರುವ ಇಷ್ಟಲಿಂಗಕ್ಕೆ ಆವಾಹನೆ ವಿಸರ್ಜನಾದಿಗಳಿಲ್ಲ. ಭಾಂಡಗಳನ್ನು ಮಾಡುವ ಕುಂಬಾರನು ಭಾಂಡಗಳಿಗೆ ಕರ್ತನಾದರೂ ಭಾಂಡಗಳಿಂದ ಬೇರೆಯಾಗಿದ್ದಾನೆ. ಇದರಂತೆ ಶಿವನು ಅಷ್ಟತನುವನ್ನು ಸೃಷ್ಟಿಸಿ, ತಾನು ಅದಕ್ಕಿಂತ ಭಿನ್ನನಾಗಿಯೇ ಇದ್ದಾನೆ. ಭೂ, ಜಲ, ಅಗ್ನಿ, ಗಾಳಿ, ಆಕಾಶ, ಸೂರ್ಯ, ಚಂದ್ರ ಆತ್ಮರು ಪ್ರಮಥ ರಿಂದ ಲಯಹೊಂದಿ, ಪುನಃ ಅವರಿಂದ ಹುಟ್ಟುವುವು. ಅಷ್ಟಮೂರ್ತಿ ನಿರಾಶಕನಾದು ಭಕ್ತ ಶರಣಭರಿತದಿಂದ ಶಿವನಿರುವನೆಂದರಿದು ಅರಿದು ಸರ್ವಗತ ನಿರಾಸಕ್ತನಾಗು ತ್ತಿರುವನು. ಶಿವನು ಸರ್ವಗತನಾದರೂ ಇಷ್ಟಲಿಂಗ ಪೂಜಕನು ಶಿವನು ಸರ್ವಗತನೆಂದು ನೆನೆಯಬಾರದು. ಸರ್ವವೃಕ್ಷಗಳ ಅಗ್ನಿಗಿಂತ ಶಮೀವೃಕ್ಷದ ಅಗ್ನಿಯು ಶ್ರೇಷ್ಠ ವೆಂಬಂತೆ ಶಿವನು ಸರ್ವಗತನಾಗಿದ್ದರೂ, ತನಗೆ ಆಧಾರವಾದ ಗುರುಲಿಂಗದಲ್ಲಿ ಅಧಿಕ

ವೆಂಬ ಭಾವದಿಂದ ಭಜಿಸಬೇಕು. ಮತ್ತು ಸರ್ವಸ್ಥಾನಗಳಿಂದ ಪರಾಙ್ಮುಖನಾಗಿ ಚರಗೌರವಲಿಂಗ ತ್ರಿವಿಧವನ್ನೇ ಭಜಿಸಬೇಕು. ಸರ್ವಗತ ನಿರಾಸಕ್ತನಾದವನು ತನ್ನ ಇಷ್ಟಲಿಂಗದಲ್ಲಿಯೂ ಗುರುಚರಭಕ್ತರಲ್ಲಿಯೂ ಶಿವನಿರ್ಪನಲ್ಲದೆ ಮತ್ತೆಲ್ಲಿಯೂ ಇಲ್ಲವೆಂಬ ನಿಯಮದಿಂದ ಪೂಜಿಸುತ್ತ 'ಶಿವವಿರಹಿತವಾಗಿ ಜಗತ್ತು ಹೊರಗಾಗಿ, ಸರ್ವರಲ್ಲಿಯೂ ಶಿವನಿರುವನೆಂದು ಭಾವಿಸಬೇಕು. ಹರನು ಚರಾಚರ ಜಗತ್ತಿನಲ್ಲಿ ತೆರಹಿಲ್ಲದಂತೆ ಇದ್ದಾನೆ. ಸಿಂಧುವಿನಲ್ಲಿ ಉದ್ಭವಿಸಿದ ನೊರೆತೆರೆ ಬುದ್ಬುದಗಳು ಹೇಗೆ ಸಿಂಧುವಿನಿಂದ ಹೊರಗಲ್ಲವೋ ಹಾಗೆ ತನ್ನ ಶಕ್ತಿಯ ಸಂತಸದಿಂದ ವಿಶ್ವಭರಿತನೇ ಆಗಿದ್ದಾನೆ. ಹೀಗಿದ್ದರೂ ಅವನು ಜಗಕ್ಕೆಲ್ಲ ಇದ್ದೂ ಇಲ್ಲದ ಹಾಗೆಯೇ ತೋರುತ್ತಿದ್ದಾನೆ. ಘಟದೊಳಗಣ ರವಿಯ ಹಾಗೆ ಇದ್ದು ತನ್ನನ್ನು ಪೂಜಿಸುವ ಭಕ್ತರಿಗೆ ಮಾತ್ರ ಅವನ ಅರಿವಾಗುವುದೇ ವಿನಾ ಅನ್ಯರಿಗಲ್ಲ. ಕದಡಿದ ನೀರಿನಲ್ಲಿ ಚಂದ್ರನು ತೋರದ ಹಾಗೆ ದುರ್ಜನರ ದೃಷ್ಟಿಗೆ ಅವನು ಗೋಚರಿಸುವುದಿಲ್ಲ. ನಿರ್ಮಲ ಮನಸ್ಸಿನ ಭಕ್ತರಿಗೆ ಅವನು ನಿರ್ಮಲನಾಗಿ ತೋರುವನು.

ಸಮಸ್ತೇಂದ್ರಿಯ ಸುಖವನ್ನೆಲ್ಲ ಲಿಂಗಕ್ಕೆ ಕೊಟ್ಟು ತತ್ಪ್ರಸಾದಭಾವನೆಯಿಂದ ಭಕ್ತನು ಲಿಂಗಭೋಗೋಪಭೋಗಿಯೆನಿಸಿ ಅವನ್ನೆಲ್ಲ ಅನುಭವಿಸಬೇಕು ಆಗಲೇ ಅದು ಪ್ರಸಾದವೆನಿಸುವುದು. ಉಪಚಾರಾರ್ಥವಾಗಿ ಶಂಭುವಿಗೆ ಕೊಡುವ ದ್ರವ್ಯ ಪದಾರ್ಥವೆನಿಸಿತ್ತು. ಸಮರ್ಪಿಸಿದ ಬಳಿಕ ಅದೇ ಪ್ರಸಾದವೆನಿಸಿತ್ತು. ಪ್ರಸಾದಕ್ಕೂ ಲಿಂಗಕ್ಕೂ ಭೇದವಿಲ್ಲ. ಹೀಗೆ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯಸ್ಥಾನದಲ್ಲಿರುವ ಲಿಂಗಭಕ್ತರ ಲಕ್ಷಣಗಳನ್ನು ಗುರುವಾದ ಸಿದ್ಧೇಶನು ಶಿಷ್ಯನಿಗೆ ಬೋಧಿಸಿದನು.

ಜ್ಞಾತೃ ಜ್ಞಾನ ಜ್ಞೇಯದ ಮಾತೃಕೆಯನ್ನು ನುಂಗಿತೋರುವ ಲಿಂಗದ ನಿಜವನ್ನು ಜ್ಞಾತೃ ಜ್ಞಾನ ಜ್ಞೇಯದ ಸೂತ್ರವೇ ತಾನು ಅಂಗಲಿಂಗವಾಗಿಹೆನೆಂಬ ಜ್ಞಾನಾನುಭವವು ಲಿಂಗಭಕ್ತನಿಗೆ ಉಂಟಾಗಬೇಕು. ಜ್ಯೋತಿರ್ಮಯವೇ ಲಿಂಗ ; ಸ್ವಾಂತದಲ್ಲಿ ಆ ಲಿಂಗವಿರುವುದೇ ಅಂಗ. ಈ ಎರಡರ ಅನುಭವಗಂಡಾತನೇ ಲಿಂಗಾನುಭವಿಯೆನಿಸುವನು. ಹೀಗೆ ಶಿವಜ್ಞಾನದ ಉತ್ಪತ್ತಿಯಿಂದ ಪರಮಾನಂದ ದೊರೆಕೊಂಡ ಶರಣನು ಅನ್ಯವನ್ನು ಪ್ರೀತಿಮಾಡಲರಿಯನು. ನೀರಡಿಸಿದವನು ಗಂಗಾಜಲ ದೊರಕೊಂಡಾಗ ಮೃಗತೃಷ್ಣಿಕೆಯನ್ನು ಬಯಸುವನೇ ? ಶಿವಾನಂದದೊರಕೊಂಡ ಬಳಿಕ ಅನ್ಯದ ಅರಿವಾಗದು. ಹೀಗೆ ಶಿವಜ್ಞಾನಸ್ವರೂಪನಾದವನು ಗುರುವೆನಿಸುವನು. ಸಹಸ್ರ ಸೂರ್ಯಸದೃಶ ಜ್ಞಾನಪ್ರಕಾಶವುಳ್ಳಾತನಿಗೆ ಅಜ್ಞಾನದ ಕತ್ತಲೆಯಿರಲುಂಟೆ ? ಅಜ್ಞಾನಮೂಲದ ರಾಗದ್ವೇಷ ಶಾಖೆಯ ವೃಕ್ಷಕ್ಕೆ ಶಿವಜ್ಞಾನವೇ ಕುಠಾರವು. ಶಮೆ, ವಿವೇಕ, ವೈರಾಗ್ಯ, ಕ್ಷಾಂತಿ, ಕಾರುಣ್ಯ, ಶ್ರದ್ಧೆ, ಶಿವಭಕ್ತಿಗಳಿಂದ ಕೂಡಿದ ಯೋಗಿಯೇ ಸಾತ್ವಿಕನೆನಿಸುವನು. ಕಾಮಕ್ರೋಧಾದಿಗಳೆಂಬ ಆನೆಗಳು ಶಿವಜ್ಞಾನ

ವೆಂಬ ಸಿಂಹದೊತ್ತಿನಲ್ಲಿ ಹೇಗೆ ತಾನೆ ಇರಲು ಶಕ್ತವಾದಾವು ? ಹೀಗೆ ಶಿವಜ್ಞಾನೈಕ ನಿಷ್ಠೆಯೊಂದರಲ್ಲಿ ಏಕೀಕರಿಸಿದ ಶೀಲವಂತನೇ ಐಕ್ಯನೆನಿಸುವನು. ನಾನೇ ಗುರು, ನಾನೇ ಶಿವ, ನಾನೇ ಚರಾ-ಚರಾತ್ಮಕವಾದ ಈ ಜಗತ್ತೆಲ್ಲ ಎಂಬ ಐಕ್ಯಜ್ಞಾನಾನು ಭವಿಯೇ ಶಿವಸಹಭೋಜನದವನಾಗಿದ್ದಾನೆ. ನಾನೇ ಭೃತ್ಯ, ನಾನೇ ಈಶ್ವರ, ನಾನು ಪತಿ, ನಾನು ಶಿಷ್ಯ, ನಾನು ಗುರು ಎಂಬ ಈ ಮನಸ್ಸಿನ ಭೇದವಳಿದು ಅಖಂಡ ಪರಿಪೂರ್ಣಜ್ಞಾನಿಯಾದವನೇ ಶಿವಾದ್ವೈತ ಪದವನ್ನಾಶ್ರಯಿಸಿದವನೆನಿ ಸುವನು. ದೇಹವನ್ನು ವಿಭಾಗಿಸಿ, ನಿರ್ದೇಹಿಯಾಗಿ, ಲೋಕಾಚಾರವರ್ತನೆಗಳಿಲ್ಲ ದಾತ್ಮನೇ ಭಕ್ತನೆನಿಸುವನು. ಆ ಭಕ್ತಿಯೇ ನೈಷ್ಠಿಕೆಯಿಂದ ಶಿವನನ್ನಾಶ್ರಯಿಸಿ, ಕಾಮಾಚಾರ ವಿಷಯಗಳನ್ನು ಹಿಂಗಿ, ನಿಶ್ಚಲವಾದಾತ್ಮನೇ ಮಹೇಶನು. ವಾದಿಕ್ಲೇಶ ಗಳಿಂದ ಚಿತ್ತಶುದ್ಧಿಯ ಪ್ರಸನ್ನತಿಕೆಯಿಂದ ಈ ಆತ್ಮನೇ ಪ್ರಸಾದಿಯೆನಿಸುವನು. ಜೀವಭಾವವಿಲ್ಲದೆ ಮರಣವನ್ನು ಗೆದ್ದು, ಪ್ರಾಣವೇ ಲಿಂಗವೆಂದು ತಿಳಿದವನು ಪ್ರಾಣ ಲಿಂಗಿಯೆನಿಸುವನು. ಪ್ರಾಣಾರ್ಪಣ ಕುಶಲದಿಂದ ಶಿವತತ್ತ್ವವನ್ನೈದಿ ತನ್ನಿಂದ ಮೇಲಾವ ವಸ್ತುವಿಲ್ಲವೆಂಬ ಬುದ್ಧಿಯಿಂದ ಕೂಡಿದವನೇ ಶರಣನು. ತಾನು ಶಿವನೆಂಬು ಭಯಭಾವವಿಲ್ಲದವನೇ ಐಕ್ಯನು. ಷಡ್ರುಚಿಯುಂಟಿದ ಜಿಹ್ವೆಯು ಆ ಆರೂ ರುಚಿಗಳ ಚಿನ್ಹೊತ್ತಿ ಆರುರುಚಿಗಳಾದಂತೆ ಭಕ್ತಾದ್ಯೈಕ್ಯಾಂತದೊಳಗೆ ಆತ್ಮನೊಬ್ಬನೇ ಆ ಆಚರಣೆ ಯಿಂದ ಬೇರೆ ಬೇರೆ ಹೆಸರು ಪಡೆದನು.-ಹೀಗೆ ಅನೇಕ ವಿಧದಲ್ಲಿ ಶಿಷ್ಯನಿಗೆ ಬೋಧಿ ಸಿದನು. (ಅಷ್ಟಮಾಶ್ವಾಸ)

ಷಡ್ವಿಧಾಂಗಮೂರ್ತಿಯಾದ ಸಿದ್ಧೇಶನು ಸ್ವಶಿಷ್ಯನಿಗೆ ವೀರಶೈವಧರ್ಮ ತತ್ತ್ವ ಬೋಧೆ ಮಾಡುತ್ತಿರುವಾಗ ಶಿಷ್ಯನು ವಂದಿಸಿ 'ಭಕ್ತಿಯ ಮಾರ್ಗವನ್ನು ತಿಳಿಸಿ ಹೇಳಿದಿರಿ. ಇನ್ನು ಅದರ ಮುಂದಣ ಶೈವವನ್ನು ಹೇಳಬೇಕು' ಎಂದು ಕೇಳಿದನು. ಆಗ ಸಿದ್ಧೇಶನು 'ಧೀರಕುಮಾರ, ಸದ್ಗುಣವಿಚಾರ, ಕೇಳು' ಎಂದು ಹೇಳಲು, ಉಪಕ್ರಮಿಸಿದನು.

ತ್ರೈಮಲಗಳನ್ನು ಗೆದ್ದವನೇ ಮನಸ್ಸಿನ ಸಂಸ್ಕೃತಿಯನ್ನು ಗೆದ್ದವನು. ತ್ರಿವಿಧ ದೀಕ್ಷೆಗಳನ್ನು ಪಡೆದು ಕಂಥೆ ಕಮಂಡಲು ದಂಡ ವಿಭೂತಿ ರುದ್ರಾಕ್ಷಿ ಮೊದಲಾದುವನ್ನು ಧರಿಸಿ ಸದ್ಗುರುವನ್ನು ಸೋಂಕಿ ಸದ್ಗುರುವೇ ಆಗಿ ಮೋಕ್ಷಾಪೇಕ್ಷೆಯಿಂದ ಭಿಕ್ಷಾಟನೆ ಮಾಡುತ್ತ ನಿರಾಭಾರಿಯಾಗಿ ಸಂಚರಿಸಬೇಕು. ಭಕ್ತರನ್ನು ನೋಯಿಸಿ ತಿನ್ನುವ ದುರ್ನೀತಿಯನ್ನು ತೊಲಗಿಸಿ ತುಂಬಿ ಕುಸುಮಗಳನ್ನು ಉಂಬುವಂತೆ ಭಕ್ತರ ಮನೆ ಗಳಲ್ಲಿ ಪ್ರಸಾದ ಸ್ವೀಕರಿಸಬೇಕು. ಇಂಥ ಜಂಗಮನೇ ನಿರಾಶಿಯೆನಿಸಿ, ಭಕ್ತರ ಪ್ರಾಣನಾಯಕನೆನಿಸುವನು. ಬಂದುದೆಲ್ಲವನ್ನು ಪ್ರಸಾದವೆಂಬ ಭಾವನೆಯಿಂದ ಕರಸ್ಥಲಲಿಂಗವನ್ನು ನಂಬಿ ಸ್ವೀಕರಿಸಬೇಕು. ಗಿರಿ ವಾರಣಾಸಿ ಮೊದಲಾದ ತೀರ್ಥ ಕ್ಷೇತ್ರಗಳಲ್ಲಿ ಸಂಚರಿಸುತ್ತೇನೆಂಬ ಮನೋಭಾವವನ್ನು ಬಿಟ್ಟು ಶರಣದರ್ಶನ, ಗುರು ದರ್ಶನಾದಿಗಳನ್ನು ಮಾಡುವವನೇ ಜಂಗಮನೆನಿಸುವನು. ನಿರ್ವಾಣದಿಂದ ಸಂಚರಿ

ಸುವ ಇಂಥ ಜಂಗಮುನಿಗೆ ಸುಖ-ದುಃಖಗಳೆಂಬೆರಡರ ಕಲ್ಪನೆಯೂ ಸಲ್ಲವು. ಎಲ್ಲವನ್ನೂ ಶಿವನ ಅನುಗ್ರಹವೆಂಬ ಭಾವನೆ ಬೆಳೆಯಬೇಕು. ಹೊನ್ನು-ಹೆಣ್ಣು-ಮಣ್ಣುಗಳೆಂಬು ವನ್ನು ನೆನೆಯದಿರುವವನೇ ನಿರಾಭಾರಿಕನೆನಿಸುವನು. ಸದ್ಭಕ್ತರ ಗೃಹಗಳಿಂದ ತಾನಾಗಿ ಬಂದ ಪ್ರಸಾದವನ್ನು ಸ್ವೀಕರಿಸಬೇಕು. ಅದುಬೇಕು ಇದುಬೇಕು ಎಂದು ಬಯಸಬಾರದು. ಅಳುಪು ಅನ್ಯಾಯ, ಅಸತ್ಯ, ಕಳವು, ವಂಚನೆ, ಬೆಡಗು, ಹುರುಡು, ಠಕ್ಕು ಕಳವಳ-ಮೊದಲಾದುವು ಮನದಮುಂದೆ ಸುಳಿಯಲೇಬಾರದು. ಶಿವಲಿಂಗ ದಲ್ಲಿ ಅಚ್ಯೊತ್ತಿದ ಮನಸ್ಸಿನಿಂದ ಚರಜಂಗಮವು ಸಂಚರಿಸಬೇಕು. ಹೀಗೆ ಅನೇಕ ವಿಧದಲ್ಲಿ ಜಂಗಮದ ಲಕ್ಷಣವನ್ನು ಹೇಳುತ್ತಿದ್ದನು.

ಆರವೆ ಪುಣ್ಯಕ್ಷೇತ್ರ ಗಿರಿಗಹ್ವರ ದೇಗುಲ ಕಾನನಾಂತರಗಳಲ್ಲಿ, ರಹಸ್ಯವಾದ ಸ್ಥಾನಗಳಲ್ಲಿ ಕುಳಿತು ಪಾಡಿ ಹಾಡಿ ಮಹೇಶ್ವರನನ್ನು ಕುರಿತು ಯೋಗವನ್ನು ಮಾಡುವ ನಿರಾಭಾರಿಯೇ ವೀರಶೈವ ಶರಣಸ್ಥಲಿಯೆನಿಸುವನು. ಅರೆಮುಗಿದ ಕಣ್ಣು, ಸ್ಥಿರ ಚಿತ್ತ, ನಿಶ್ಚಲದೇಹದಿಂದ ಪದ್ಮಾಸನಾಸೀನನಾಗಿ ಶ್ರೇಷ್ಠ ಚಿತ್ಕಲೆಯನ್ನು ಭಾವದಲ್ಲಿ ನೋಡುತ್ತ ಇರುವ ಚರಜಂಗಮದ ಇರವೇ ಯೋಗಮುದ್ರೆಯೆನಿಸುವುದು. ಆಸನದಲ್ಲಿ ಬೇಸತ್ತು ಸುಖಾಸನದಲ್ಲಿ ಕುಳಿತು ಹೃದಯಕಮಲದ ಕಲೆಯನ್ನು ನೆನೆಯುವಿಕೆಯೇ ಹರಯೋಗಮುದ್ರೆಯೆನಿಸುವುದು. ತಲೆಯನೆಲೆಯಲ್ಲಿ ಚಿದ್ರತ್ನವು ಪ್ರಜ್ವಲಿಸುತ್ತಿರಲು ಅದನ್ನು ನೆನೆದು ಹೊಗಗಣ ಬಳಕೆಗೆ ಅಲಸಿದ ಜಂಗಮರ ಇರವೇ ಶಿವಯೋಗಮುದ್ರೆ ಯೆನಿಸುವುದು.

ಶಿವಮಂತ್ರದಿಂದ ಪ್ರಾಣಾಯಾಮವನ್ನು ಮಾಡುತ್ತ ಸರ್ವೇಂದ್ರಿಯಗಳ ಮೇಲೆ ಜಯವನ್ನು ಹೊಂದಿ ಶಾಂಭವಯೋಗದಲ್ಲಿರುವಾತನೇ ಜಂಗಮಲಿಂಗನು. ಪಾವನ ವಾದ ಸಿದ್ಧಾಸನದಿಂದ ಕುಳಿತು ಕುಂಭಕದಿಂದ ಕೂಡಿ ಚಿದ್ಘನಲಿಂಗವನ್ನು ಭಾವಿಸುವ ಶಾಂಭವಯೋಗಸುಖದಿಂದ ಇರುವಾತನೇ ಚರವರೇಣ್ಯನು. ಇಷ್ಟಲಿಂಗದಿಷ್ಟರಲ್ಲಿ ಪ್ರಾಣಾನಿಲವು ಚರಿಸದೆಂಬುದೇ ಶಾಂಭವಮುದ್ರೆ. ಅದರಲ್ಲಿ ಮುದ್ರಿತನಾದಾತನೇ ಜಂಗಮನು. ಹೀಗೆ ಅನೇಕ ವಿಧದಲ್ಲಿ ಚರಲಿಂಗದ ಲಕ್ಷಣವನ್ನು ಹೇಳಿದನು. 'ಮಗನೇ, ಇನ್ನು ಶೈವದಲ್ಲಿ ಆವರಿಸಿರುವ ಷಟ್ಸ್ಥಲವನ್ನು ಕೇಳು' ಎಂದು ಷಟ್ಸ್ಥಲದಿರ ವನ್ನು ಪೇಳಲುಪಕ್ರಮಿಸಿದನು.

ಸರ್ವಭುವನಂಗಳಿಗೆ ಆಶ್ರಯವಾದ ಜೀವಗಣಕ್ಕೆ ತಾಣವಾಗಿರುವ ಸತ್-ಚಿತ್ ಗಳಿಗೆ, ಸರ್ವಶಕ್ತಿಗಳಿಗೆ ಈಶ್ವರನಾದ ಧರಾದಿ ಭೂತ ಪಂಚಕಕ್ಕೆ ಗೃಹನೆನಿಸಿದ ಶಿವ ತತ್ತ್ವವನ್ನೇ ಸ್ಥಲವೆನ್ನುವರು. ತತ್ತ್ವಗಳಿಗೆಲ್ಲಕ್ಕೂ ಆಶ್ರಯನಾದುದರಿಂದ 'ಸ್ಥ' ಕಾರವೂ, ತತ್ತ್ವಗಳಿಂದ ಲೀಯವಹುದಾದ್ದರಿಂದ 'ಲ' ಕಾರವೂ ಸೇರಿ 'ಸ್ಥಲ' ವಾಯಿತು. ಸ್ಥಲಪದ ವಾಚ್ಯನಾದ ಶಿವನು ಲಿಂಗ ಅಂಗಗಳೆಂದು ಎರಡಾಯಿತು. ಸ್ಥಲಗತವಾದ ಶಕ್ತಿಯೂಕೂಡ ಲಿಂಗಸ್ಥಲದಲ್ಲಿ 'ಕಲೆ' ಅಂಗಸ್ಥಲದಲ್ಲಿ 'ಭಕ್ತಿ' ಎಂಬ

ಹೆಸರನ್ನು ಪಡೆಯಿತು. ಲಿಂಗಗತ ಶಕ್ತಿಯು ಪ್ರವೃತ್ತಿಪರವಾದುದು. ಅಂಗಗತ ಭಕ್ತಿಯು ನಿವೃತ್ತಿಪರವಾದುದು. ಪ್ರವೃತ್ತಿಯುಳ್ಳದ್ದಾದ್ದರಿಂದ ಶಕ್ತಿ ಅಧೋಮುಖ; ಭಕ್ತಿ ಊರ್ಧ್ವಮುಖಿ. ಈ ಭಕ್ತಿಯ ವೈಚಿತ್ರ್ಯದಿಂದಲೇ ರೂಪವು ನಿರೂಪುಗೊಳ್ಳಬೇಕು. ಶಕ್ತಿಯೇ ಭಕ್ತಿಯೆನಿಸುವುದು. ಭಕ್ತಿಯೇ ಶಕ್ತಿಯೆನಿಸುವುದು. ಲಿಂಗವೇ ಅಂಗದ ಆತ್ಮ. ಲಿಂಗಾಂಗಸ್ಥಲದೈಕ್ಯವೇ ಶಿವಜೀವೈಕ್ಯ. ಲಿಂಗವೆಂದರೆ ಪರಬ್ರಹ್ಮವೇ ಆಗಿದೆ. ಅದು ಶಿವತತ್ತ್ವದ ರೂಪ.

ಲಿಂಗವು ಮೂರು ತೆರನಾಗಿ ಭಾವದಲ್ಲಿ ಭಾವಲಿಂಗವೆನಿಸಿ, ಪ್ರಾಣದಲ್ಲಿ ಪ್ರಾಣಲಿಂಗವೆನಿಸಿ ದೇಹದಲ್ಲಿ ಇಷ್ಟಲಿಂಗವಾಗಿ ಮೂರು ಅಂಗವಾಗಿ ಆಶ್ರಯಿಸಿರುವುದು. ಭಾವಲಿಂಗವೇ ನಿಷ್ಕಲವಾದ ಸದ್ರೂಪ; ಪ್ರಾಣಲಿಂಗವೇ ಸಕಲನಿಷ್ಕಲವಾದ ಚಿದ್ರೂಪ. ದೃಷ್ಟಿಯಿಂದ ಗ್ರಹಿಸುವ, ಅನಿಷ್ಟನಿವಾರಣೆಮಾಡಿ ಇಷ್ಟಪ್ರದವೆನಿಸಿರುವ ಇಷ್ಟಲಿಂಗವೇ ಸಕಲವಾಗಿ ಆನಂದರೂಪವೆನಿಸುವುದು. ಈ ಮೂರು ಲಿಂಗಗಳೇ ಭಾವದಲ್ಲಿ ಮಹಾಲಿಂಗ ಪ್ರಸಾದಲಿಂಗಗವಾಗಿಯೂ, ಪ್ರಾಣದಲ್ಲಿ ಚರಲಿಂಗ ಶಿವಲಿಂಗವಾಗಿಯೂ, ಇಷ್ಟದಲ್ಲಿ ಗುರುಲಿಂಗ ಆಚಾರಲಿಂಗವಾಗಿಯೂ ಆರುತೆರನೆನಿಸುವುದು. ಹೀಗೆ ಷಡ್ವಿಧ ಲಿಂಗ, ಷಡ್ವಿಧ ಲಿಂಗಭಕ್ತ, ಷಟ್ಸ್ಥಲ ಜ್ಞಾನಾನುಭವಾದಿ ಸಮಸ್ತ ಲಿಂಗಾಂಗಸಿದ್ಧಾಂತವನ್ನು ಆದ್ಯಂತವಾಗಿ ಸಿದ್ಧೇಶ್ವರನು ಶಿಷ್ಯನಿಗೆ ತಿಳಿಸುತ್ತ ಇಂಥ ವೀರಶೈವನನ್ನು ಪ್ರತಿಷ್ಠೆಗೊಳಿಸುವವನು ಸದಾಶಿವನೇ ಆಗುವನೆಂದು ಹೇಳಿ, ಚಿತ್ಪರಮಲಿಂಗದ ಸಂಗದ ಪರಮಾನಂದ ಸುಖದಲ್ಲಿ ಮುಳುಗಿದವನಾದನು. ಆಗ ಶಿಷ್ಯನು ಗುರುವನ್ನು ಅನಂತ ಬಗೆಯಲ್ಲಿ ಕೊಂಡಾಡಿದನು. (ನವಮಾಶ್ವಾಸ)

## ೩. ವಿಮರ್ಶೆ

'ಷಟ್‌ಸ್ಥಲ ವಲ್ಲಭ' ಚಂಪೂಕಾವ್ಯವು ಒಂದು ಮಹತ್ವದ ಕಾವ್ಯವಾಗಿದೆ. ಇದು ಬಸವಾದಿ ಪ್ರಮಥರ ನಂತರ ಅತ್ಯದ್ಭುತ ಕ್ರಾಂತಿಯನ್ನು ಮಾಡಿ ಷಟ್‌ಸ್ಥಲ ಸಿದ್ಧಾಂತವನ್ನು ಪ್ರಭಾವಯುತವಾಗಿ ಪ್ರತಿಷ್ಠಾಪಿಸಲು ಹೆಣಗಿದ ಶ್ರೀ ಮದನಾದಿ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರ ಹಿರಿಮೆ-ಹೆಚ್ಚುಗಾರಿಕೆಗಳನ್ನು ಬೆಳಗುವ ಒಂದು ಉತ್ತಮ ಕೃತಿಯೆನ್ನಬಹುದು. ತೋಂಟದ ಸಿದ್ಧಲಿಂಗೇಶ್ವರರ ಬಗೆಗೆ ಕೃತಿಗಳನ್ನು ಸ್ವತಂತ್ರವಾಗಿಯೂ ಬೇರೆ ಬೇರೆ ಕೃತಿಗಳಲ್ಲಿ ಪ್ರಾಸಂಗಿಕವಾಗಿಯೂ ರಚಿಸಿದವರ ಸಂಖ್ಯೆ ವಿಪುಲವಾಗಿದೆ. ವಿರಕ್ತ ತೋಂಟದಾರ್ಯ, ಗುಬ್ಬಿಯ ಶಾಂತೇಶ, ಹೇರಂಬ ಮುಂತಾದವರು ಸ್ವತಂತ್ರ ಕೃತಿಗಳನ್ನು ಬರೆದಿದ್ದಾರೆ; ತೋಂಟದ ಸಿದ್ಧೇಶ್ವರ ರಗಳೆಯೊಂದು ಉಪಲಬ್ಧವಿದೆ. ಜೊತೆಗೆ ನಿರಂಜನ ವಂಶರತ್ನಾಕರ, ನಿರಂಜನ ಜಂಗಮ ವಂಶದ ದರ್ಪಣಗಳಂಥ ಚರಿತ್ರೆಯಮೇಲೆ ಬೆಳಕನ್ನು ಚೆಲ್ಲಬಲ್ಲ ಕೃತಿಗಳೂ ಹುಟ್ಟಿವೆ. ಪ್ರಾಸಂಗಿಕವಾಗಿ ತಮ್ಮ ತಮ್ಮ ಕಾವ್ಯಗಳಲ್ಲಿ, ವಚನಗಳಲ್ಲಿ ಸುತ್ತೂರು ಮಠದಘನ ಲಿಂಗಿದೇವ (ಕ್ರಿ.ಶ. ಸು. ೧೪೭೦) ಮೊದಲ್ಗೊಂಡು ೧೭೪೫ ರವರೆಗೆ ೪೩ ಜನ ಕವಿಗಳು

ಇವರ ಪುಣ್ಯನಾಮ ಸ್ಮರಣೆಯನ್ನೋ ಸಂಕ್ಷೇಪ ಚರಿತ್ರೆಯನ್ನೊ, ಸ್ತೋತ್ರವನ್ನೊ ಪವಾಡಗಳನ್ನೊ ಹೇಳವುದರ ಮೂಲಕ ಗುರುಕಾಣಿಕೆ ಸಲ್ಲಿಸಿದ್ದಾರೆ.[1] ಒಂದೆರಡು ಶಾಸನಗಳೂ ಇವರ ಪುಣ್ಯನಾಮ ಸ್ಮರಣೆಗೆ ಮುಡುಪಾಗಿವೆ.[2] ಚನ್ನವೀರೇಶ್ವರನು ಈ ಕಾವ್ಯವನ್ನು ರಚಿಸಿ, ಸಿದ್ಧಲಿಂಗೇಶ್ವರರ ಬಗೆಗೆ ಚಂಪೂಶೈಲಿಯಲ್ಲಿ ಕಾವ್ಯಗಳು ಹುಟ್ಟಿಲ್ಲವೆಂಬ ಒಂದು ಕೊರತೆಯನ್ನು ನೀಗಾಡಿದ್ದಾನೆನ್ನಬಹುದು.

ಚಂಪೂಶೈಲಿಯ ಕಾವ್ಯರಚನೆಯ ಕಾಲವೆಲ್ಲ ಮುಗಿದು ಅವರ ಕಾವು ಆರಿ ಷಟ್ಪದಿ ಸಾಂಗತ್ಯ ರಗಳೆ ಮೊದಲಾದ ಪ್ರಕಾರಗಳಲ್ಲಿ ಕನ್ನಡ ಕಾವ್ಯಗಳು ಮೈದಾಳುವ ಸಮಯ ದಲ್ಲಿ ಈ ಕಾವ್ಯವು ಮೈವೆತ್ತು ಬಂದಿರಬೇಕು ಅಂತೆಯೇ ಇಲ್ಲ. ಪಂಪ, ರನ್ನ, ಹರಿಹ ರಾದಿಗಳ ಕಾಲದ ಚಂಪೂಶೈಲಿಯಲ್ಲಿರುವ ಭಾಷೆಯಾಗಲಿ, ಛಂದಸ್ಸಿನ ಕಟ್ಟುಪಾಡಾಗಲಿ ವ್ಯಾಕರಣದ ನಿಯಮಗಳಾಗಲಿ ಕಂಡುಬರುತ್ತಿಲ್ಲ. ಆದರೂ ಚಂಪೂ ಮಾರ್ಗದಲ್ಲಿ ಕಾವ್ಯವನ್ನು ಬರೆಯಲೇಬೇಕೆಂಬ ಉತ್ಸಾಹೀ ಕವಿಯೋರ್ವನ ತೀವ್ರಪ್ರಯತ್ನದ ಮನೋಭಾವವು ಕಂಡುಬರುತ್ತದೆ. ಈ ಉತ್ಸಾಹಾಧಿಕ್ಯ ಕಾರಣವಾಗಿ ಕಟ್ಟುಪಾಡು ಗಳನ್ನು ಸಡಿಲಿಸಹೊರಟ ಕವಿಯ ಸ್ವತಂತ್ರಮನೋಭಾವ ಕಾವ್ಯದುದ್ದಕ್ಕೂ ನಮಗೆ ಎದ್ದುಕಾಣುವ ಅಂಶವಾಗಿದೆ. ತನ್ನ ಕಾವ್ಯದ ಕಥಾವಸ್ತುವನ್ನು ಹೃದಯಂಗಮವಾಗಿ ರಮಣೀಯವಾಗಿ ಕೇಳುವವರ ಮನಸ್ಸಿಗೆ ಆಕರ್ಷಕವಾಗಿ ಆಗುವಂತೆ ಮಾಡಲು ಕಾವ್ಯ ದುದ್ದಕ್ಕೂ ಕವಿ ವಿಶೇಷ ಪ್ರಯತ್ನಿಸಿದ್ದಾನೆ. ಅವರೆ ಕೃತಕೃತ್ಯವಾಗಿದ್ದಾನೆ ಎನ್ನ ಲಾಗದು.'ರೀತಿರಾತ್ಮಾಕಾವ್ಯಸ್ಯ' ಎಂದು ವಾಮನನ ವಾಣಿ. ಆದರೆ ಯಾವ ಕಟ್ಟು ಪಾಡಿಗೂ ತಲೆಬಾಗದೆ ತಾನು ಅನುಭವಿಸಿದ ಅನುಭವವನ್ನು ಓದುಗರೂ ಅನುಭವಿಸು ವಂತೆ ಹೇಳುವ ಕವಿಯ ಈ ಸ್ವತಂತ್ರರೀತಿಗೆ ಮಾತ್ರ ಎಂಥವರೂ ತಲೆ ಬಾಗಬೇಕು. ಉತ್ತಮಶೈಲಿಯ ಎಲ್ಲ ಲಕ್ಷಣಗಳೂ ಕವಿಯಲ್ಲಿ ಇವೆಯೆಂದು ಹೇಳ ಲಾಗದಿದ್ದರೂ ಕವಿ ತನ್ನ ಕಾವ್ಯದಲ್ಲಿ ತನ್ನದೇ ಆದ ಒಂದು ವಿಶಿಷ್ಟರೀತಿಯ ಶೈಲಿ ಯನ್ನು ಅನುಸರಿಸಿ ಅನೇಕ ವೃತ್ತಜಾತಿಗಳನ್ನೂ ವಿಶಿಷ್ಟಶೈಲಿಯ ಗದ್ಯವನ್ನೂ ಸುಂದರವಾದ ಅನೇಕ ಪ್ರತಿಮಾ ಪ್ರತೀಕ ಕಲ್ಪನೆಗಳನ್ನೂ ಅಲಂಕಾರಗಳನ್ನೂ ಸೃಷ್ಟಿ ಸಿಕೊಂಡು ಶ್ರೀ ಸಿದ್ಧಲಿಂಗೇಶ್ವರರ ಬಗೆಗಿರುವ ತನ್ನ ಅಪಾರ ಭಕ್ತಿ ವಿಶ್ವಾಸಗಳನ್ನು ಚಂಪೂಮಾರ್ಗದ ಈ ನುಡಿದೇಗುಲ ಕಟ್ಟಿ ಅದರಲ್ಲಿ ಅವರ ಮೂರ್ತಿಯನ್ನು ಪ್ರತಿಷ್ಠಾಪಿಸಿ, ಕಾವ್ಯವನ್ನೋದುವ ಭಕ್ತವೃಂದವು ಅವರಿಗೆ ಕೈಮುಗಿಯುವಂತೆ

1. ಆರ್. ಸಿ. ಹಿರೇಮಠ (ಸಂ) ಷಟಸ್ಥಲಜ್ಞಾನಸಾರಾಮೃತ ಪೀ. ೨೩೨–೩೦
2. ಎಡೆಯೂರಿನ ದೇವಸ್ಥಾನದಲ್ಲಿರುವ ಶಾಸನ ಮತ್ತು ಚಿತ್ರದುರ್ಗದ ಮೋಕ್ಷಗುಂಡಂ ಶ್ರೀನಿವಾಸಾವಧಾನಿಗಳ ತೋಟದೊಳಗಿರುವ ಒಂದು ಭೂ ಶಾಸನ. (ಈ ಶಾಸನ ತೊ. ಸಿ. ಶಿವಯೋಗಿಗಳ ಒಂದು ವಚನವೇ ಆಗಿದೆ)–ಆರ್. ಸಿ. ಹಿರೇಮಠ (ಸಂ) ಷ. ಜ್ಞಾ. ಸಾ. ಪೀ–ಪು ೨೨೯–೨೩೨

ಮಾಡಿದ್ದಾನೆ. ಕವಿಯ ಕರ್ಮಕ್ಕಿಂತ ವಸ್ತುನಿಷ್ಠೆ ಬಹಳ. ತಾನೆತ್ತಿಕೊಂಡಿರುವ ವಸ್ತು ಅನರ್ಘ್ಯವಾದದ್ದು, ಅಮೋಘವಾದದ್ದು; ಮಹಾಕಾರಣಿಕರೂ, ನಿರಂಜನ ಜಂಗಮ ಪುಂಗವರೂ ಆದ ಸಿದ್ಧಲಿಂಗೇಶ್ವರರನ್ನು ಕುರಿತದ್ದು. ಅವರ ಈ ದಿವ್ಯ ಚರಿತೆಯನ್ನೊಳಗೊಂಡ ರಸವತ್ಕಾವ್ಯ ಬ್ರಹ್ಮಸಭೆ ದೇವಸಭೆಗಳಲ್ಲಿ ಜಸವಡೆದದ್ದು.[1] ಇದರಲ್ಲಿ ಭಕ್ತಿಯ ಆಚಾರವುಂಟು, ಭಕ್ತಿರಸವುಳ್ಳದ್ದು; ಇದು ಮುಕ್ತಿಪಥಕ್ಕೆ ಇದೇ ವಸ್ತು; ಶಿವನಿರುವ ವರೆಗೂ ಭಕ್ತರುಗಳ ಸಭೆಯಲ್ಲಿರುವಂತುಹುದು.[2] ಇದರಲ್ಲಿ ಕಾವ್ಯ ದೋಷಗಳೂ ಭಾಷಾದೋಷಗಳೂ ಇರಬಹುದು ಎಂದು ಕವಿಯೂ ಒಪ್ಪುತ್ತಾನೆ. ಆದರೆ ಅವನ್ನು ತಿದ್ದುವವರು ಕಂಡಕಂಡವರಲ್ಲ.

'ಶಿವನ ಕುಲಂ ಸದಾಶಿವನ ಕೀರ್ತಿಬಲಂ ಶಿವನಾಯುಮುನ್ನತಂ
ಶಿವನ ಚಲಂ ಮಹಾಶಿವನಮೂರ್ತಿಸುಖಂ ಶಿವನೂರ್ಜಿತೋಜ್ವಲಂ
ಶಿವನಮುಖಂ ಶಿವಾಧವನ ಪೂತಮತಂ ಶಿವಭಕ್ತರೆನ್ನಕಾ
ವ್ಯವನುರೆ ತಿರ್ದಿ ಪೊರ್ದಿ ನಲವಿಂ ಮಿಗೆ ಲಾಲಿಸಿ ತಾಳ್ವುದಕ್ಕರಿಂ' (೧-೮)

–ಎಂದು ಹೇಳಿಕೊಂಡಿದ್ದಾನೆ. 'ತಾನು ಬರೆವ ಕಂದಗಳು ಮೃದುವಾಕ್ಯದ ವೃಂದಗಳೇ, ತನಿರಸವುಕ್ಕುವ ಮಾಕಂದಗಳೇ, ಲಿಂಗಾಂಗದ ಬಂಧಗಳೇ ಆಗಿವೆ [3] ವೃತ್ತಗಳಾದರೋ ಶಿವಲಿಂಗವೃತ್ತಗಳು; ಪರಬ್ರಹ್ಮದ ವೊತ್ತಗಳು; ಶಿವಭಕ್ತಿಯ ಚಿತ್ತಗಳಾಗಿವೆ[4]' ಎಂಬ ಆತ್ಮವಿಶ್ವಾಸವನ್ನು ಕವಿ ಪ್ರಕಟಿಸಿಕೊಂಡಿದ್ದುದು ಭಾಗಶಃ ಸಾರ್ಥಕವೆನ್ನಬಹುದಾಗಿದೆ. ಏಕೆಂದರೆ ಕವಿಯ ಶಕ್ತಿ ಈ ರೀತಿಯ ಛಂದೋಬಳಕೆಯಲ್ಲಿ ಕಾವ್ಯರಚನೆ ಮಾಡಿ ಸೈಎನ್ನಿಸಿಕೊಳ್ಳುವ ಮಟ್ಟದ್ದಲ್ಲವಾದರೂ ಆತನ ಉತ್ಸಾಹಶಕ್ತಿಯಲ್ಲಿ ಅವೆಲ್ಲ ಮುಚ್ಚಿವೆಯೆನ್ನಬಹುದು. ಪದ್ಯರಚನೆಯಲ್ಲಿ ಈ ಮಾತು ಸತ್ಯವೆನಿಸಿದರೂ ಗದ್ಯ ರಚನೆಯು ಪ್ರಸಂಗ ಬಂದಾಗ ಕವಿಯ ಕಲ್ಪನಾಸಾಮರ್ಥ್ಯಕ್ಕೆ ಗರಿ ಮೂಡುತ್ತದೆ; ವಿಯದ್ಗಮನ ಮಾಡಿಬಿಡುತ್ತದೆ. ಅನೇಕ ಪ್ರತಿಮೆಗಳನ್ನು ಕಡೆದು ನಿಲ್ಲಿಸಿ ಓದುಗರಲ್ಲಿ ನೂತನ ರಸಭಾವವನ್ನು ದೃಷ್ಟಿಲಾಭವನ್ನುಂಟುಮಾಡುತ್ತದೆ ಎನ್ನಬಹುದು. ಮಾನವ ಪ್ರಪಂಚದಿಂದ ದೂರ ಸರಿದು ದಟ್ಟಡವಿಯಲ್ಲಿಪ್ಪ ದಿವ್ಯೇಶ್ವರಲಿಂಗವು ಪ್ರಕೃತಿಯಿಂದಲೇ ಪೂಜೆಗೈಸಿಕೊಂಡಿತ್ತೆನ್ನುವ ಸನ್ನಿವೇಶವನ್ನು ನೋಡಿ :

"ಆ ದಿವ್ಯಲಿಂಗೇಶ್ವರ ಲಿಂಗಕ್ಕಂ ದೇವಗಂಗೆಯಂ ತಂದು ಮಜ್ಜನಕ್ಕೆರೆವ
ಮೇಘಗಳಿಂ,
ತುಷಾರೋದಕಂಗಳಿಂ ನೆನೆದು ಮುದ್ದೆಗಟ್ಟಿ ಲಿಂಗದ ಮಸ್ತಕಾಗ್ರದೊಳ್
ಬೀಳ್ವ ಕುಸುಮಸಂಚಯದ ಗಂಧಪಿಂಡದಿಂ,

1. ನೋಡು ೧-೧೧; 2. ನೋಡು ೧-೧೨; 3. ನೋ. ೧-೯; 4. ನೋ ೧-೯

ಮರುತನಿಂ ತೊಟ್ಟೊಡೆದು ಲಿಂಗಶಿರಸ್ಸಿನ ಮೇಲಣ ಗಂಧಾಗ್ರದೊಳ್
ಬೀಳ್ವ ಸಣ್ಣ ಮಿಡಿಗಾಯ್ಗಳಕ್ಷತೆಗಳಿಂದಂ,

ಗಂಧವಹನಿಂ ಚಲಿಪ ಕುಜಂಗಳೊಳ್ ಕಳ್ದಲ್ದುಬೀಳ್ವ ಪೂಗೊಂಚಲ
ಸಂಚಯಂಗಳ ದಂಡೆಗಳಿಂ,

ಶೈತ್ಯಸೌರಭ್ಯಮಂ ಕೂಡಿಕೊಂಡು ನಲವುಣ್ಮಿ ಸುಳಿಸುಳಿದು ತೀಡುವ
ಮಂದ ಮಾರುತ ವ್ಯಜನಂಗಳಿಂ,

ತಂತಮ್ಮ ಕಿರಣಪುಂಜದಿಂ ದಶದಿಕ್ಕುಮಂ ಬೆಳಗುವ ಚಂದ್ರಾರ್ಕ
ಜ್ಯೋತಿಗಳಿಂದಂ,

ದಶದಿಕ್ಕುಗಳನಾವರಿಸಿಕೊಂಡಿರ್ದ ಮಂಜುಲ ಮಂಜಿನ ಪುಂಜ ಧೂಪ
ಧೂಮ್ರದಿಂದಂ,

ಹಿಂದುಮುಂದೆಡಬಲದೊಳ್ ಸಂಚಲಿಪ ಮಿಂಚುವ ಮಿಂಚಿನ ಸಂಚಯದ
ಮಂಗಲಾರತಿಗಳಿಂ,

ಎಡಬಲದಿ ನಳನಳಿಸಿ ಬೆಳೆದ ಕೋಮಲಲತೆ ಪುಲ್ಗಿಡುಗಳ ಪೊದರಿನೊಳ್
ಬಿರುಗಾಳಿ ಪೊಕ್ಕು ತಿರುಗಲ್ ಕಂಪಿಸುವ ಲತೆಗಳ ಸೀಗುರಿಚಮ
ರಂಗಳಿಂದಂ,

ಸೊಗಸಿನಿಂ ಬೆಳೆದು ಪಸರಿಸಿ ಕತ್ತಲಿಸಿ ಪಿಡಿದ ಶಶಿಕುಜದ ಸತ್ತಿಗೆಗಳಿಂ,

ಕುಜಾಗ್ರದಿಂ ಬೀಗಿಬೆಳೆದು ರಸಬಲಿದು ತೊಟ್ಟುಕಳೆದು ಬೀಳ್ವ ಪಣ್ಗಳ
ನೈವೇದ್ಯದವಸರಂಗಳಿಂದಂ,

ನಾಗವಲ್ಲೀದಳಂಗಳ್ತಾವೆ ತೊಟ್ಟುಕಳಲ್ದು, ಮುಂದಿರ್ದ ಚೂರ್ಣಶಿಲಾಗ್ರ
ದೊಳ್ ಬಿರ್ದುಮರ್ಪಿತಮಪ್ಪ ತಾಂಬೂಲವಜ್ರಗಳಿಂ,

ನಲಿದುರ್ವಿ ಕೊರ್ವಿ ಪರ್ವಿ ಕುಣಿವ ನವಿಲ್ಗಳ ನರ್ತನದಿಂದಂ,
ಉನ್ನತ ಸ್ವರದಿಂ ಕೂಗುವ ಕೋಗಿಲೆಗಳ ಗಾನರಸದಿಂ,
ಚಪ್ಪರಿಪ ಗಿಳಿನುಡಿಗಳ ತಾಳದುಗ್ಘಡಣೆಯಿಂದಂ,
ಮೇಘನಾದಂಗಳ ವಾದ್ಯಪವಂಗಳಿಂದಂ"— (೧-೩೮)

ಹೀಗೆ ಷೋಡಶೋಪಚಾರದ ಪ್ರಕೃತಿಯ ಪೂಜೆ 'ಅಲ್ಲಿಯೇ ಕಾದಿರ್ಪ ಮೃಗಸಮೂಹದ ಪೂಜಾರಿಗಳಿಂ'ದ ಜರಗುತ್ತಿತ್ತಂತೆ ಕವಿಯ ಕಲ್ಪನೆಯ ಕಣ್ಣಿನ ಈ ನೋಟ ಸನ್ನಿವೇಶದ ಸಹಜತೆಗೆ ಒಪ್ಪವಿಟ್ಟ ಹಾಗೆ ಪರಿಶೋಭಿಸುತ್ತದೆ. ಪ್ರತಿಮೆಗಳ ಕಲ್ಪನೆಯಲ್ಲಿಯೂ ಕವಿಯ ಕೈಚಳಕ ಅಂತುಹುದೇ ಆಗಿದೆ. ಹರದರಹಳ್ಳಿಯ ಪುರವ ಬಹಿರುದ್ಯಾನವನದ ಸೊಗಸನ್ನು ಹೇಳುತ್ತ ಕವಿ ಅನೇಕ ಸುಂದರ ಚಿತ್ರಗಳನ್ನು

ಚಿತ್ರಿಸಿ, ಪ್ರಾಚೀನ ಚಂಪೂ ಪ್ರಬಂಧಕಾರರ ಪ್ರೌಢಿಮೆಗೇರಿನಿಲ್ಲುವ ಸಾಹಸ ತೋರಿಸಿ ಕೊಂಡಿದ್ದಾನೆನ್ನಬಹುದಾಗಿದೆ. ಆ ಉದ್ಯಾನದಲ್ಲಿದ್ದ ಬೇರುಗಳಿಂದ ತುದಿಯ ವರೆಗೆ ಹಣ್ಣು ಬಿಟ್ಟ ಹಲಸಿನಮರದ ಪ್ರತಿಮೆ ಇರುವುದು ಹೀಗೆ :

'ಗರುತ್ಮಂ ತನ್ನ ತಾಯ ಸೆರೆಬಿಡಿಸಲೆಂದು ಸುರಪನೊಳ್ ಕಾಳಗಮನೆಯ್ದಿಯ ಮೃತಮಂ ತಂದು ತನ್ನ ದಾಯಾದ್ಯರಪ್ಪ ಕರ್ಕೋಟಕ, ಕುಳಿಕ, ಪದ್ಮಕ ಮೊದಲಾದ ಸರ್ಪರಾಜರುಗಳ್ಗಂ ಕೊಟ್ಟು ತನ್ನ ತಾಯಂ ಸೆರೆವಿಡಿಸಿಕೊಂಡು ಪೋದಾಕ್ಷಣದಲ್ಲಿ ಸುರಪಂ ಬಂದಾ ಅಮೃತಮಂ ಸರ್ಪಂಗಳ್ ಕಾಣದಂತೆ ಕೊಂಡೊಯಿದು ಪೊಂಬಣ್ಣದ ಕಿರುವರಣಿಗಳೊಳ್ ತುಂಬಿ, ಮತ್ತಮಾ ಬರಣಿಗಳಂ ಪೊರೆಗಟ್ಟಿ ಮೇಲೆ ಮುಳ್ಳಳಂ ಕಟ್ಟಿ ವೃಕ್ಷಂಗಳ ಬೇರುಗಳೊಳಂ ಶಾಖೆಗಳೊಳಂ ಕಟ್ಟಿರಿಸಿದನೆಂಬಂತಿರ್ದ ಪಕ್ವಫಲಭರಿತ ಮಾದ ಪಲಸದ್ರುಮರಾಜಿಗಳಿಂದಂ'—(೧–೭೩)

ಇದರ ಹಾಗೆಯೇ ಗಂಡು ಕೋಗಿಲೆಗಳ ಕಂಠವು ತಮ್ಮ ಪಂಚಮಸ್ವರಗಳಿಂದ ಕುಕಿಲರಿವ ಧ್ವನಿಯು ಬಗೆಗೆ ಮೂಡಿಬಂದ ಪ್ರತಿಮೆ ಹೀಗೆ :

'ಮಾಮರದೆಳೆವರಂಗಳೊಳಗಣ ಉತ್ತಳಿಕೆಗಳಂ ಸಂಚುವಿಂ ಮುರಿದು ಮೇಲಕ್ಕೆ ಜಿಗಿದು ಪಾಯ್ದ ನಸುರ್ಗಂ ನಾಲಗೆಯನೊಡ್ಡಿಯದಂ ಸವಿ ಸವಿಯೆ ಗಂಟಲಿಗಂ ನಸುರ್ತಾಗಿರೆ, ಕಣ್ಗಳರೆಮುಗಿದು, ಜಿಹ್ವೆಯಂ ಚಪ್ಪರಿದು, ನಸುರಂ ಕುಡಿದು, ದಣ್ಣನೆ ದಣಿದು, ಪಕ್ಕವನರೆಗೆದರಿ, ಕೆಂದಳಿರ ಹೊದರಿನ ಹೊಸಕೊನೆಗೆ ನೆಗೆನೆಗೆದು, ಬಂದು ಕುಳಿತು ಶರೀರಮಂ ಬಾಗಿಸಿ, ಕೊರಲನುಣ್ಮರಕೆತ್ತಿ ಅಳಿಲೇಶ್ವರನಂ ಓಲೈಸ ಲೆಂದು ಮದನರಾಜಂ ಬಂದು ಪುರಮುದ್ಯಾನದೊಳ್ ಬೀಡುಬಿಟ್ಟಿದ್ದಾನೆ ! ವಿಯೋಗಿಗಳಿತ್ತ ಹೊಪ್ಪದಿರಿ ! ಎಂದು ಪೇಳ್ವಂತೆ ಸುಸ್ವರದಿಂ ಕೂಗುವ ಗಂಡುಗೋಗಿಲೆಗಳ ತಂಡಂಗಳಿಂದಂ' (೧–೭೩).

ಕವಿಯ ಸಾಮರ್ಥ್ಯಕ್ಕೆ ಈ ದೃಷ್ಟಾಂತವೊಂದು ಜ್ವಲಂತ ನಿದರ್ಶನವಾಗಬಲ್ಲುದು. ಇನ್ನೊಂದು ದೃಷ್ಟಾಂತವನ್ನು ಈ ಬಗೆಗೆ ಕೊಟ್ಟರೆ ಬಾಧಕವಿಲ್ಲವೆಂದು ತೋರುತ್ತದೆ. ಇದೇ ಬಹಿರುದ್ಯಾನವನದಲ್ಲಿ ತಮ್ಮ ಶಿಶುಗಳನ್ನು ಪುಳಿನಸ್ಥಳಕ್ಕೆ ಕರೆದೊಯ್ದು ನಡಗೆ ಯನ್ನು ಕಲಿಸುವ ಸನ್ನಾಹದಲ್ಲಿರುವ ರಾಜಹಂಸ, ಮಲ್ಲಿಕಾಕ್ಷ, ಧೃತರಾಷ್ಟ್ರಗಳೆಂಬ ಹೆಸರಿನ ಹಂಸಪಕ್ಷಿಗಳ ರೀತಿ ಹೀಗಿತ್ತಂತೆ :

'ದಾಳಿಂಬದ ಪಣ್ಗಳೊಡೆದು ರಸಂಗಳ್ಗೂಡಿ, ಜೋರೆಂದು ಪರಿವ ಕಿರು ದೊರೆಗಳಂ ದಾಂಟಿಸಲೆಂದುಂ, ಕೆಂದಾವರೆಯೆಸಳ್ಗಳ ರತ್ನದೋಣಿಗಳಂ ಮುಡಗಿಸುವದೊಳ್ ತಮ್ಮ ಶಿಶುಗಳಂ ಒಯ್ಯಾರದಿಂದಿರಿಸಿ ದೋಣಿಗಳ ತುದಿಯುಂ ಕಚ್ಚಿ ಮೆಲ್ಲಮೆಲ್ಲನೆಳದೊಯ್ವಾಗಂ ಜಾದಿ ಸಂಪಿಗೆ ಹೊಂಗೇ ದಗೆ ದವನ ಮಲ್ಲಿಗೆ ಕಸ್ತೂರಿ ಮೊಲ್ಲೆ ಕರ್ಪೂರವಾಳೆಗಳ ಪರಿಮಳ

ದೊಡಗಲಸಿದ ಮಂದಮಾರುತಂ ಮೆಲ್ಲನೆ ಸುಳುಹುದೋರೆಯೆಳೆ ದೊಯ್ವ ದೋಣಿವೋರೆಯಾಗಲ್, ಜೀವಂ ಹಮ್ಮನೆ ಹಾರಿದಂತಾಗಿ ಬೆದರುತ್ತಂ, ಆ ತಂಬೆಲರಿಗೆ ತಮ್ಮ ಪಕ್ಕಂಗಳಿಂ ಮರೆಮಾಡಿಕೊಂಡು, ಮೆಲ್ಲಮೆಲ್ಲನಾಚೆಯ ದಡವಂ ಸೇರಿ ತಮ್ಮ ಶಿಶುಗಳಂ ಕರಕೊಂಡು ಪುಳಿನ ಸ್ಥಳಂಗಳೊಳುಂ ನಡೆಗಲಿಸುವ ರಾಜಹಂಸ. ಮಲ್ಲಿಕಾಕ್ಷ, ಧೃತರಾಷ್ಟ್ರಂಗಳಿಂ......' (೧-೭೩)

ಎಂದು ಹೇಳುವಾಗ ಓದುವವರ ಭಾವ ಭೂಮಿಯ ಮೇಲೊಂದು ಅಲೌಕಿಕ ಚಿತ್ರ ಮಿಂಚಿ ಮಾಯುವಾಗಿ ಕವಿಯ ಕಲ್ಪನೆಯ ಕಣ್ಣಿನ ನೋಟವ ಬಗೆಗೆ ಗೌರವ ತಾಳುವಂತಾಗುತ್ತದೆ.

ಈ ರೀತಿಯ ತನ್ನ ಸಾಮರ್ಥ್ಯವನ್ನು ಕವಿ ಕಾವ್ಯದುದ್ದಕ್ಕೂ ತೋರಿಸುತ್ತ ಹೋಗಿ ಸುಲಭವಾದ ಗದ್ಯಬಳಕೆಯಲ್ಲಿನ ತನ್ನ ಚಮತ್ಕೃತಿಯನ್ನು ತೋರಿಸದೆ ಬಿಟ್ಟಿಲ್ಲ. ಪದ್ಯಗಳ ಬಳಕೆಯಲ್ಲೂ ಚಮತ್ಕಾರವನ್ನು ತೋರಿಸದೆ ಬಿಟ್ಟಿಲ್ಲವಾದರೂ ಛಂದಸ್ಸಿನ ಕಟ್ಟಿಗೆ ಭಾವವನ್ನು ಒಳಪಡಿಸುವಲ್ಲಿ ಕವಿಯ ಅಸಾಮರ್ಥ್ಯ ಒಮ್ಮೊಮ್ಮೆ ಎದ್ದು ಕಾಣುವುದುಂಟು. ಅವನಿಗಿರುವ ಭಾಷೆಯ ಸಾಮರ್ಥ್ಯ ಅವನು ಬಳಸಿರುವ ವೃತ್ತ ಕಂದಗಳ ಲಕ್ಷಣದಮಟ್ಟಕ್ಕೇರದೆ ತಡಕಾಡಿ ಕೊನೆಗೆ ಶಬ್ದವನ್ನೇ ವಿಕೃತಗೊಳಿಸಿ ಛಂದೋಮರ್ಯಾದೆಯನ್ನು ಕಾಪಾಡಲು ಹೆಣಗಿದ್ದಾನೆ. ಉದಾಹರಣೆಗೆ 'ಕೇತರಕಾಶಿ ಪರ್ವತ ಕಕುದ್ಗಿರಿ ಕುಂಭವು ಮೂಡಲಾದ್ರಿ ಮು-...' (೨-೬) ಈ ಉತ್ಪಲಮಾಲಾ ವೃತ್ತದ ಸಾಲಿನಲ್ಲಿ ಕವಿ ಕೇದಾರಕ್ಕೆ ಕೇತರವೆಂದೂ ಕುಂಭಕೋಣಕ್ಕೆ 'ಕುಂಭ' ವೆಂದೂ ಹೇಳಹೋಗಿರುವುದು ಛಂದೋಭಂಗಕ್ಕೆ ಹೆದರಿ. ಹೀಗೆ ಛಂದೋಭಂಗಕ್ಕೆ ಹೆದರಿ ಭಾಷೆಗೆ ಕುಂದಕವನ್ನು ಎಷ್ಟೋ ಕಡೆಗೆ ಮಾಡಿದ್ದಾನೆ. 'ಐವಡಿ' ರೂಪ ಶುದ್ಧವಲ್ಲದಿದ್ದರೂ ಪ್ರಯೋಗಿಸಿದ್ದಾನೆ (೧-೫೮) ಪ್ರಯಾಗ-ಪ್ರಯುಗ, (೧-೨೮) ವಾರಣಾಸಿ-ವರಾಣಾಸಿ (೧-೨೮) ; ಉದ್ಯಾನವನ-ಉದಾವನ (೧-೬೭), ಯಮ-ಎಮ (೧-೨೮), ಯತಿ-ಎತಿ (೧-೨೪) ಬಾಣಾಂತಿ-ಬಾಣಾಂತಿ (೧-೫೩), ಷೋಡಶೋಪಚಾರ-ಷೋಡಶುಪಚಾರ (೭-೧೮೩), ಸಹಸ್ರರು-ಸಹಸ್ರರು (೭-೧೮೯), ಯಜ್ಞ-ಎಜ್ಞ (೭-೬೬), ಪನ್ನೆರಳ್ಸಾಸಿರ-ಪನ್ನೆರಡ್ಸಾಸಿರ (೨-೨೩೨), ಪಟ್ಟಸಮ್ಮಾರ್ಜನೆ-ಪಟ್ಟಸಮಾರ್ಜ (೨-೪೮) ಪ್ರಭುಸೆಟ್ಟಿ-ಪ್ರಾಭೂಶೆಟ್ಟಿ (೫-೨೦೪), ಕೇಳು ಎಂಬರ್ಥದಲ್ಲಿ-ಕರ್ಣಿಸು (೭-೮) ಕೌಟಿಲ್ಯ-ಕವುಟಿಲ್ಯ (೪-೪೦), ಪೌರುಷ-ಪವುರುಷ (೪-೪೦), ನವೀನ-ನವಿನ (೪-೪೨), ಅಹಂಕಾರ-ಅಹಂಕರ (೪-೫೯), ಒಂದುದಿನ-ಒಂದಿನ (೫-೨೦) ಸೊನ್ನಲಿಗೆ-ಸೊನ್ನಲ (೫-೧೮), ರಾವಣ-ರವಣ (೫-೬), ಪ್ರತ್ಯಾಹಾರ-ಪ್ರತ್ಯಹಾರ (೪-೭), ಸುಪ್ರಮಾಣ-ಸುಪ್ರಮಣ (೪-೭೦) ತಕ್ಕೊಂಡು-ತೆಕ್ಕಂಡುಂ (೪-೮), ಕಿರೀಟ-ಕಿರಿಟ (೫-೨೨), ಕಸ್ತೂರಿ-ಕಸ್ತುರಿ (೫-೧೧೪), ಅನೇಕಾನೇಕ-ಅನೇಕನೇಕ (೫-೧೪೬), ರಂಭಾನೂತನದಳ-ರಂಭ

ನೂತನವಳ (೫-೮), ಮುಂದಣ-ಮುಂದಳ ಹಿಂದಣ-ಹಿಂದಳ (೫-೩೦೧)... ಹೀಗೆ ಈ ಪಟ್ಟಿಯನ್ನು ಬೆಳೆಸುತ್ತ ಹೋಗಬಹುದು. ಇಂಥ ಬಳಕೆಗಳಿಗೆ ವ್ಯಾಕರಣ ತನ್ನ ಸಮ್ಮತಿಯನ್ನು ಕೊಡದಿರಬಹುದು. ಕವಿಯ ಸ್ವತಂತ್ರ್ಯ ಮನೋಭಾವ ಮತ್ತು ಉತ್ಸಾಹಾಧಿಕ್ಯಗಳು ಇದಕ್ಕೆ ಕಾರಣ. ಗದುಗಿನ ವೀರನಾರಾಯಣ ಎಂಬ ಪ್ರಯೋಗವನ್ನು ಛಂದಸ್ಸಿಗೆ ಲಯಕ್ಕೆ ಭಂಗ ತರಲೊಪ್ಪದೆ 'ಗದುಗಿನ ವೀರನಾರಯಣ' ಎಂದು ಪ್ರಯೋಗಿಸಿದ ಕುಮಾರವ್ಯಾಸನಂತೆ ಈತನೂ.

ಅರಿಸಮಾಸ ದೋಷಗಳ ಬಗೆಗೆ ಕವಿ ಯೋಚಿಸಿದಂತೆಯೇ ಇಲ್ಲ. ಹೀಗೇಕೆ ಬಳಸಬಾರದು ? ಎಂದು ಕವಿಯ ಅಭಿಪ್ರಾಯವಿರಬಹುದು. ಶಬ್ದ ವಿರೂಪವಾದರೂ ಚಿಂತೆಯಿಲ್ಲ, ಛಂದೋಭಂಗ ಬಾರದಂತೆ ಕವಿ ಎಚ್ಚರ ವಹಿಸಿರುವನೆಂಬುದು ಎಲ್ಲೆಲ್ಲೂ ಭಾಸವಾಗುವ ಅಂಶವಾಗಿದೆ. ಚಂಪೂಮಾರ್ಗದ ಅಬ್ಬರ ಆರ್ಭಟಗಳ ಸುಗ್ಗಿ ಮುಗಿದುಹೋದ ಕಾಲದಲ್ಲಿ ಆ ಶೈಲಿಗೆ ಮಾರುಹೋದ ಓರ್ವ ಕವಿ ಪ್ರಯತ್ನಪಟ್ಟು ಅಲ್ಪಸ್ವಲ್ಪ ದೋಷ ತಲೆದೋರಿದರೂ ಚಿಂತೆಯಿಲ್ಲ, ಆ ಮಾರ್ಗವೇ ಚೆನ್ನು ಎಂಬ ಮನೋಭಾವದಿಂದ ಆ ಚೌಕಟ್ಟನೊಳಗೆ ಮಹತ್ವದ ಒಂದು ವಿಷಯವನ್ನು ಅಳವಡಿಸಹೋಗಿ ಸ್ವಲ್ಪ ಒರಟಾಗಿಯೇ ತನ್ನ ಕೃತಿಯನ್ನು ಪೂರೈಸಿದ್ದಾನೆಂದು ಹೇಳಬಹುದು.

ಕಂದಪದ್ಯಗಳ ರಚನೆಯ ವಿಷಯದಲ್ಲಿಯೂ ಕವಿ ಹಳೆಯ ಕಟ್ಟುಪಾಡುಗಳನ್ನು ಮೀರಿ ಷಟ್ಪದಿಕಾರರ ಕಾಲದಲ್ಲಿ ವೈದಾಳಿದ ಕಂದಪದ್ಯಗಳ ಮಾದರಿಯಲ್ಲಿ ಅವನ್ನು ರಚಿಸಿದ್ದಾನೆ. ಈತನಿಗೆ ೧-೩ನೆಯ ಸಾಲುಗಳಲ್ಲಿ ೧೨ ಮಾತ್ರೆಗಳೂ ೨-೪ನೆಯ ಸಾಲುಗಳಲ್ಲಿ ಇಪ್ಪತ್ತು ಮಾತ್ರೆಗಳು ಬಂದರೂ ಸಾಕು ಕಂದವಾಗಿ ಹೋಯಿತು, ಎಂಬ ಮನೋಭಾವವಿದ್ದಂತೆ ಕಾಣುತ್ತದೆ. ಪೂರ್ವಾರ್ಧ ಉತ್ತರಾರ್ಧಗಳ ಆರನೆಯ ಗಣ ಮಧ್ಯ ಗುರುವುಳ್ಳ ಗಣವಾಗಲಿ ನಾಲ್ಕು ಲಘುವುಳ್ಳ ಗಣವಾಗಲಿ ಆಗಬೇಕೆಂಬ ನಿಯಮವಿಲ್ಲ; ೨-೪ನೆಯ ಸಾಲುಗಳ ಕೊನೆಯಕ್ಷರ ಗುರುವೇ ಆಗಬೇಕೆಂಬ ನಿಯಮವಿಲ್ಲ. (ಆ. ೧-ಪ ೯-೧೦-೨೬ ಇದ್ದಂತೆ ಎಲ್ಲ ಕಡೆಗೂ ಕಾಣಬಹುದು). ವಿಷಮ ಸ್ಥಾನದಲ್ಲಿ ಮಧ್ಯ ಗುರುವುಳ್ಳ ᑌ-ᑌ ಈ ವಿನ್ಯಾಸದ ಗಣವು ಇರಬಾರದೆಂಬ ನಿಯಮವೇನೂ ಇಲ್ಲ. ಇದ್ದರೂ ಇರಬಹುದು. ಇಲ್ಲದಿದ್ದರೂ ಆದೀತು ಎಂಬಂತಿದೆ.

ಪ್ರಾಸಾದ ವಿಚಾರದಲ್ಲಿ ಹೀಗೆಯೇ ಕವಿ ಶಾಸ್ತ್ರದ ಕಟ್ಟುಪಾಡುಗಳನ್ನು ಮುರಿದು ಸ್ವಾತಂತ್ರ್ಯ ಪ್ರಕಟಿಸಿದ್ದಾನೆ. ನಾಲ್ಕು ಸಾಲುಗಳ ಪದ್ಯದಲ್ಲಿ ಮೊದಲೆರಡು ಸಾಲುಗಳ ಪ್ರಾಸಾಕ್ಷರವೇ ಒಂದು; ಉಳಿದೆರಡು ಸಾಲುಗಳ ಪ್ರಾಸಾಕ್ಷರಗಳೇ ಒಂದು ಆಗಿರಬಹುದು. (೧-೬೪). ಸಿಂಹಗಜಾದಿ ಆರು ಪ್ರಾಸಗಳ ನಿಯಮ ಅನೇಕ ಕಡೆ ಪಾಲಿಸಲ್ಪಿಟ್ಟಲ್ಲ (೨-೭೫), ಒಂದು ವೇಳೆ ಇದ್ದರೆ ಬಾಧಕವಿಲ್ಲ; ಇಲ್ಲದಿದ್ದರೂ ನಡೆಯುತ್ತದೆಯೆಂಬುದು ಕವಿಯಲ್ಲಿ ಎದ್ದು ಕಾಣುವ ಮನೋಧರ್ಮ. ಟಕಾರ

ಡಕಾರಗಳೂ, (೨-೪೮), ರಕಾರ ಲಕಾರಗಳೂ (೨-೫೧) ಪ್ರಾಸದ ಸ್ಥಾನದಲ್ಲಿ ಸೇರ್ಪಡೆಯಾಗಿವೆ. ಒಂದು ಪ್ರಾಸಾಕ್ಷರವು ಸಂಯುಕ್ತ ವ್ಯಂಜನವಾಗಿದ್ದರೆ ಎರಡನೆಯ ಪ್ರಾಸಾಕ್ಷರದಲ್ಲಿ ಆ ಸಂಯುಕ್ತ ವ್ಯಂಜನದಲ್ಲಿ ಯಾವುದಾದರೂ ಒಂದು ವ್ಯಂಜನವಿದ್ದರೂ ಆಯಿತು. ಹೀಗೆ ಛಂದೋಮರ್ಯಾದೆಗೂ ಲಕ್ಷ್ಯಗೊಡದೆ, ಭಾಷಾ ಮರ್ಯಾದೆಯನ್ನೂ ಲೆಕ್ಕಿಸದೆ ಯಾರಿಗೂ ಅಂಜದೆ ಕವಿ ಸ್ವತಂತ್ರವಾಗಿ ವರ್ತಿಸಿರುವು ದನ್ನು ಮೆಚ್ಚಬೇಕು. ಆದರೆ ಕವಿಯ ಸಮಕಾಲೀನ ಜಗತ್ತು ಇದನ್ನು ಒಪ್ಪುತ್ತಿತ್ತೋ ಇಲ್ಲವೊ. 'ಕಾಲೋಹ್ಯಯಂ ನಿರವಧಿರ್ವಿಪುಲಾಚಪೃಥ್ವಿ' ಎಂದು, ಅನೇಕ ಎಲ್ಲೆ ಕಟ್ಟುಗಳನ್ನು ಮೀರಿ, ಉತ್ತರ ರಾಮಚರಿತ್ರೆಯನ್ನು ಹೇಳಿದ ಭವಭೂತಿಯಂತೆ ಈ ಕವಿಯೂ ತನ್ನ ಅಭಿಪ್ರಾಯವನ್ನೊಪ್ಪುವ ಜಗತ್ತು ಮುಂದೆ ಬಂದೇ ಬರುತ್ತದೆ ಎಂದು ಭಾವಿಸಿದ್ದನೋ ಏನೊ.

ಇಂದು ನಾವು ಇಂತಹ ಕವಿಗಳನ್ನು ಒಪ್ಪಿಕೊಂಡಿದ್ದೇವೆ; ಆದ್ದರಿಂದ ಕವಿಯ ಭಾಷೆ ಹೇಗೆ ತಪ್ಪಾದೀತು. ಅನೇಕ ಕಟ್ಟುಪಾಡುಗಳಿಂದ ಕೂಡಿದ ಚಂಪೂಮಾರ್ಗದಲ್ಲಿ ಅಡಿಯಿಡಲು ಹೆದರಿ ತಮ್ಮ ಭಾವನೆಗಳನ್ನು ಬರವಣಿಗೆಯಲ್ಲಿ ಶಾಶ್ವತಗೊಳಿಸಲು ಎಷ್ಟು ಜನ ಹೆದರಿ ಹಿಂಜರಿದರೋ ಏನೊ! ಯಾರು ಬಲ್ಲರು! ಚನ್ನವೀರೇಶ್ವರ ನಂತೂ ಹೆದರದೆ ತನ್ನ ಭಾವನೆ, ಭಾಷೆಗಳಿಗೂ, ವಸ್ತುವಿಗೂ ಬರವಣಿಗೆಯ ಶಾಶ್ವತ ರೂಪ ಕೊಟ್ಟು ಮಹೋಪಕಾರ ಮಾಡಿದ್ದಾನೆನ್ನಬಹುದು. ಇವನೂ ಶಾಸ್ತ್ರದ ಬಿಗುವಿಗೆ ಹೆದರಿ ಕೈಬಿಟ್ಟಿದ್ದರೆ ಅವನು ಕಂಡ 'ಷಟ್‌ಸ್ಥಲ ವಲ್ಲಭ'ದ ಮಹಾ ತಪಸ್ವಿ ಸಿದ್ಧಲಿಂಗೇಶ್ವರನ ಚರಿತ್ರೆಯನ್ನು ಓದುವ ಭಾಗ್ಯ ನಮಗೆಲ್ಲಿ? ಇಷ್ಟಾದರೂ ಚನ್ನವೀರೇಶನನ್ನು ಸಾಮಾನ್ಯ ಜಂಗಮನೆಂದು ಭಾವಿಸಬೇಕಾದುದೇನೂ ಇಲ್ಲ. ವೃತ್ತ ಗಳ ಬಳಕೆಯಲ್ಲಿ ತನ್ನದೇ ಆದ ವಿಕ್ರಮ ಸಾಧಿಸಿದ್ದಾನೆ. ೨೬ ಅಕ್ಷರಗಳ ವೃತ್ತವನ್ನು ಚಂಪೂ ಕವಿಗಳು ಬಳಸಿರುವುದು ಅಪರೂಪ. ಕವಿ ಇದನ್ನು ಜೃಂಭಿಸುತ್ತಿರುವ ಹಾವಿನ ವರ್ಣನೆಯಲ್ಲಿ, ದ್ವಿಸಂಧಾನವಾಗಿ ಭುಜಂಗ ಜೃಂಭಿತ ವೃತ್ತವನ್ನು ಹೇಳಿರು ವುದು ಹೀಗೆ:

ಮತ್ತಾ ದೀರ್ಘಾಂಗಂ ರವುದ್ರಭೂತದಿ ಪೆಡೆಯೊಳು ಧರೆಯನು
ಮಿಮ್ಮೆಯ ಮಿಮ್ಮೆಯಪ್ಪಳಿಸುತ್ತಲುಂ
ಮುತ್ತಾಕಾಶಕ್ಕೊಮ್ಮಿಂಗಂ ನೋಡುತಲಿ ಸುರಪುರದೆಸೆಯ ನೀಕ್ಷಿ
ಸುತ್ತಲು ಮುಮ್ಮೆಯುಂ
ಶಕ್ತ್ಯಭೀಳಂ ಹಾಳಾಹಳಾಗ್ನಿಯನುಗುಳುತ ಮರುತನ ನುಂಗುತ್ತಾ
ಯತಿಶನಿಗಂ
ಸುತ್ತೆಂಟುಂ ದಿಕ್ಕಿಂದಂ ನಿಂದೀಕ್ಷಿಸುತೆಡಬಲಕೊಲೆದು ಭುಜಂಗ ಜೃಂಭಿ
ಸುತ್ತಿರ್ದುದುಂ" (೫-೧೨೩)

ಇಲ್ಲಿ ಭುಜಂಗವುವೊಂದು ಸತ್ತಾಗ ಅವನ್ನು ಶ್ರೀ ಸಿದ್ಧಲಿಂಗೇಶ್ವರನು ತನ್ನ ಪಾದಸ್ಪರ್ಶ ದಿಂದ ಬದುಕಿಸಿದ ಸಂದರ್ಭ. ಬದುಕಿದ ಭುಜಂಗದ ಜೃಂಭಿಸುವಿಕೆಯೇ 'ಭುಜಂಗ ಜೃಂಭಿತವೃತ್ತ'ವಾಗಿ ಬಳಕೆಗೊಂಡಿರುವುದು ಕವಿಯ ಔಚಿತ್ಯಜ್ಞಾನಕ್ಕೆ ಒಂದು ಉತ್ತಮ ನಿದರ್ಶನ. ಇಂಥ 'ದ್ವಿಸಂಧಾನ' ವೃತ್ತಗಳನ್ನು ಕವಿ ಅನೇಕ ಕಡೆ ಬಳಸಿ ದ್ದಾನೆ. ದ್ವಿಸಂಧಾನ, ದ್ವಿಸಂಧಿ ಎಂದು ಅದಕ್ಕೆ ಕರೆದಿದ್ದಾನೆ. ಇದರ ಅರ್ಥವಿಷ್ಟೆ : ವೃತ್ತದ ಹೆಸರಿನ ವಾಚ್ಯಾರ್ಥ ವೃತ್ತವಿಷಯವಾಗಿದ್ದರೆ ಅದು ದ್ವಿಸಂಧಾನವಾಯಿ ತೆಂದು ಕವಿಯ ಭಾವನೆ. 'ಚಂಪಕಮಾಲಾವೃತ್ತ'ವೆಂದರೆ ಸಂಪಿಗೆಹೂವಿನಮಾಲೆ ಎಂಬ ಹೆಸರಿನ ವೃತ್ತ. ಪದ್ಯದಲ್ಲಿ 'ಸಂಪಿಗೆ ಹೂವಿನಮಾಲೆ' ಎಂಬುದನ್ನು ಸಂದರ್ಭಕ್ಕೆ ಅನುಗುಣವಾಗಿ ಈ ಹೆಸರಿನ ವೃತ್ತಜಾತಿಯಲ್ಲಿದ್ದರೆ ಅದು ದ್ವಿಸಂಧಾನ ವೆಂದು ಕವಿ ಕರೆದು ಆದರಂತೆ ಅನೇಕ ಪದ್ಯ ಬರೆದಿದ್ದಾನೆ. ಈ ಬಗೆಗೆ ಒಂದೆರಡು ಉದಾಹರಣೆಗಳನ್ನು ನೋಡಬಹುದು. ಓರ್ವ ಕವಿ ಹೂಗಾರರ ಬೀದಿಯಲ್ಲಿ ಹೋಗು ವಾಗ ಮಾಲೆಗಾರ್ತಿಯೊಬ್ಬಳು ಹೂವಿನ ಮಾಲೆಗಳನ್ನು ಎತ್ತಿ ಅವನಿಗೆ ತೋರಿಸು ತ್ತಿರುವ ಸಂದರ್ಭವು ದ್ವಿಸಂಧಾನ ಚಂಪಕಮಾಲಾ ವೃತ್ತದಲ್ಲಿದೆ ನೋಡಿ.

> ಸುರಪತಿ ಸೋಲ್ತನರ್ಕ ಮನವಿಟ್ಟು ಸುಧಾಕರ ಸೋಲ್ತ ಮತ್ತೆ ಮಾ-
> ಶರರುಗಳೊಪ್ಪೆ ಮೂವರುಗಳೊತ್ತಿನೊಳಗ್ನಿಯು ಸೋಲ್ತರೆಲ್ಲರುಂ
> ವಿರತನು ಸೋಲ್ತನೊಮ್ಮೆ ಪದಿಮೂರನೆ ಪೂವಿಗೆಯೆಂಬುತಾಗ ಪೂ-
> ಸರವನು ಎತ್ತಿ ತೋರಿದಳು ಚಂಪಕಮಾಲೆಯ ಮಾಲೆಗಾರ್ತಿಯುಂ (೧-೯೬)

–ಇಲ್ಲಿ ಮಾಲೆಗಾರ್ತಿ ಚಂಪಕಮಾಲೆಯನ್ನು ತೋರಿದಳೆಂಬ ವಿಷಯ ಚಂಪಕ ಮಾಲಾವೃತ.ದಲ್ಲಿಯೇ ಬರೆಯಲ್ಪಟ್ಟಿದೆ. ಆದಕಾರಣ ಇದು 'ದ್ವಿಸಂಧಾನ ಚಂಪಕಮಾಲಾವೃತ್ತ'ವೆಂದು ಕವಿಯ ತೀರ್ಮಾನ. ಇದರ ಹಾಗೆಯೇ ದ್ವಿಸಂಧಾನ ಉತ್ಪಲಮಾಲಾವೃತ್ತ (೧-೯೭), ದ್ವಿಸಂಧಾನ ಮಲ್ಲಿಕಾವೃತ್ತ ((೧-೯೮), ಕುಸುಮಿತ ಲತಾವೃತ್ತ (೧-೧೦೦), ವಿದಳಿತ ಸರಸಿಜವೃತ್ತ (ನಿರೋಷ್ಠ ದ್ವಿಸಂಧಾನ ೧-೧೦೧)- ಮುಂತಾದ ಅನೇಕ ಚಮತ್ಕಾರಪೂರ್ವಕ ವೃತ್ತಗಳನ್ನು ಬಳಸಿರುವುದು ಕಂಡು ಬರುವುದು.

**ಕವಿಯ ವೈಶಿಷ್ಟ್ಯ**

ಕವಿ ಯೋಗಶಾಸ್ತ್ರದಲ್ಲಿ ಗಟ್ಟಿಗನೆಂದು ತೋರುತ್ತದೆ. ಶಿವಶರಣನಿಗೆ ಅಷ್ಟಾಂಗ ಯೋಗವಾಗಲಿ ಇನ್ನಾವ ಯೋಗವಾಗಲಿ ಸಲ್ಲದೆಂದು ಶಿವಯೋಗದ ಮೇಲ್ಮೆಯನ್ನು ಹೇಳುವ ಸಂದರ್ಭದಲ್ಲಿ ಅಷ್ಟಾಂಗಯೋಗದ ಸ್ವರೂಪವೇನೆಂಬುದರ ದಿಗ್ದರ್ಶನವನ್ನು ಮನಂಬುಗುವ ರೀತಿಯಲ್ಲಿ ಮಾಡಿ ಶಿವಯೋಗಮಾರ್ಗವು ಅವಕ್ಕಿಂತ ಭಿನ್ನವೆಂದೂ ವೈಶಿಷ್ಟ್ಯಪೂರ್ಣವೆಂದೂ ಹೇಳುವುದರಲ್ಲಿ ಅತ್ಯಂತ ಜಾಣ್ಮೆ ಮತ್ತು ತನಗಿರುವ ಶಿವಯೋಗ ಮಾರ್ಗದಲ್ಲಿನ ನೈಪುಣ್ಯವನ್ನು ವ್ಯಕ್ತಪಡಿಸಿದ್ದಾನೆ. ಕವಿಗೆ ಈ ವಿಷಯ

ದಲ್ಲಿರುವ ಜ್ಞಾನ ಅಪಾರವೆಂದು ಎಂಥವರಿಗೂ ಅನ್ನಿಸದಿರದು. ಅಷ್ಟಾಂಗಯೋಗ ಮಾರ್ಗದ ಪ್ರಕಾರವಿರುವ ಸಾಧನ ಚತುಷ್ಟಯವನ್ನು ವಿವರಿಸಿ ಶಿವಯೋಗ ಮಾರ್ಗ ದಲ್ಲಿ ಇದನ್ನು ಹೇಗೆ ಸಾಧಿಸಬೇಕೆಂಬ ವಿವರಣೆಯನ್ನು ಕೊಡುತ್ತಾನೆ (ಅಧ್ಯಾಯ-೪).

> "ಇಂತೀ ಸಾಧನ ಚತುಷ್ಟಯ ಶರಣಂಗೆ ಸಲ್ಲದೆಂದು ನಿತ್ಯಾನಿತ್ಯ ವಸ್ತು ವಿವೇಕ ಇಹಾಮುತ್ರ ಫಲಭೋಗವಿರಾಗ ಶಮಾ ಮುಮುಕ್ಷುತ್ವವೆಂಬ ಸಾಧನ ಚತುಷ್ಟಯವನ್ನು ಸಾಧಿಸುತ್ತಂ; ಮತ್ತಂ ವೈಬಿಮುರ್ಪುಟ್ಟು ವಂತೆ ಮರ್ದಿಸಿ ಕ್ಷೀರಾಹಾರವನಾಚರಿಸುವ ವಜ್ರಕರ್ಮಂ ಶರಣಂಗೆ ಸಲ್ಲದೆಂದು ಪ್ರಸಾದ ಕರ್ಮವನಾಚರಿಸುತ್ತಂ, ಗುದ, ಮೇಢ್ರ, ಮಧ್ಯ ನಾಭಿ, ಮಧ್ಯಹೃತ್, ಮಧ್ಯತುಂಡ, ಮಧ್ಯದಲ್ಲಿಯ ಅಗ್ನಿಯ ವಿವೇಕಂ ಸಲ್ಲದೆಂದು ಚಿದಾಗ್ನಿಯಂ ಪರಿಪೂರ್ಣಭಾವದಿಂ ವಿವೇಕಿಸಿ, ಮತ್ತಂ ಅಪಾನವಾಯುವಂ ಬಲಾತ್ಕಾರದಿಂದಂ ಊರ್ಧ್ವಕ್ಕಾಕುಂಚಿಸಿ ಗುದ ಮೇಢ್ರ ಮಧ್ಯದಗ್ನಿಮಂಡಲಂ ಬಲಿದು ವಾಯುವಿನೊಡನೆ ಕೂಡಿ ಉನ್ನತಕ್ಕೈದೆ ಪ್ರಾಣವಾಯುವು ಉಷ್ಣಸ್ವರೂಪವಾಗಿ ಪ್ರಕಾಶಿಸುತ್ತಿರೆ, ಮರೆದೊರಗಿರ್ದ ಕುಂಡಲಿ ಆ ಉಷ್ಣಕಾಗಿಯೆಚ್ಚತ್ತು, ದಂಡವಪ್ಪು ಜುಲವಾಗಿ ಬ್ರಹ್ಮನಾಡಿ ರಂಧ್ರದತ್ತ ಮುಖ ಮಾಡುವ ಮೂಲಾಧಾರ ಬಂಧವಂ ಬಲಿದು......" (೪-೨೩).

-ಹೀಗೆ ಸಾಗುತ್ತದೆ, ಶಿವಯೋಗಸಾಧನೆಯ ವರ್ಣನೆ. ಕವಿಗಿರುವ ಯೋಗ ಶಾಸ್ತ್ರಜ್ಞಾನಕ್ಕೆ ಎಂಥವರೂ ತಲೆದೂಗಬೇಕು. ಈ ನಿರೂಪಣೆಗೆ ಆಕರಗ್ರಂಥ ವಾವುದೋ ಗೊತ್ತಾಗುತ್ತಿಲ್ಲ.

## ಪರಂಪರೆಯಲ್ಲಿ ಕವಿಯ ಆಸಕ್ತಿ ಮತ್ತು ಬಹುಶ್ರುತತ್ವ

ವೀರಶೈವ ಪುರಾಣಕಾರರ ಪರಂಪರೆಯೇ ಒಂದು ವೈಶಿಷ್ಟ್ಯವುಳ್ಳದ್ದು. ಇವರು ತಮ್ಮವೇ ಆದ ಲಕ್ಷಣಗಳನ್ನು ತಮ್ಮ ಪುರಾಣ ಸಾಹಿತ್ಯಕ್ಕೆ ರೂಪಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಈ ಪರಂಪರೆ ಪಾಲ್ಕುರಿಕೆ ಸೋಮನಾಥನಿಂದ ಬೆಳೆದುಬಂದಿರ ಬಹುದು. ಸೋಮನಾಥನ ತೆಲಗು ಬಸವ ಪುರಾಣದ ಯಥಾವತ್‌ನಕಲು ಭೀಮಕವಿಯ ಬಸವ ಪುರಾಣ. ಪುರಾಣವೆಂಬ ನಾಮವನ್ನು ಹೊತ್ತು ಮೊದಲು ವೀರಶೈವರಲ್ಲಿ ಬಂದ ಕೃತಿಯಿದಾಗಿದೆ. ಈ ಕೃತಿಯ ಪ್ರಭಾವ ಮುಂದೆ 'ಶಿವನಂ ತದೀಯ ಶರಣ ವ್ರಜಮಂ' ಕುರಿತ ಎಲ್ಲಾ ಪುರಾಣಗಳಮೇಲೆಯೂ ಬಿದ್ದಿದೆ. ಯಾವ ಶರಣರ ಚರಿತ್ರೆ ಅಥವಾ ಪುರಾಣಗಳನ್ನೇ ಹೇಳಲಿ ಆ ಕಥೆಯಲ್ಲಿ ಬಂದ ಘಟನೆಗಳಿಗೆ ಸಮಾನವಾದ ಘಟನೆಗಳು ತಮಿಳು ತೆಲಗು ಮತ್ತು ಕನ್ನಡನಾಡಿನ ಶರಣರು ಅರುವತ್ತುಮೂವರು ಪುರಾತನರುಗಳ ಚರಿತ್ರೆಯಲ್ಲಿ ಎಲ್ಲೆಲ್ಲಿ ಬರುವುವೋ ಅವನ್ನೆಲ್ಲ ತಮ್ಮ ಸಂದರ್ಭಕ್ಕೆ ಬಳಸಿಕೊಂಡು ಜ್ಞಾಪಿಸುತ್ತಾರೆ. ಪ್ರಸಂಗದಲ್ಲಿ ಖಂಡನ ಮಂಡನಕ್ಕೂ ಇಂಥ ಸಂದರ್ಭ

ಗಳನ್ನು ಉಪಯೋಗಿಸಿಕೊಳ್ಳುತ್ತಾರೆ. ಒಂದುವೇಳೆ ೧ಲ ಪುರಾಣ, ಭಾರತ ರಾಮಾಯಣಗಳಲ್ಲಿನ ಸನ್ನಿವೇಶಗಳು ತಮ್ಮ ಉದ್ದೇಶಕ್ಕೆ ಅನುಗುಣವಾಗಿದ್ದರೆ ಅವನ್ನೂ ಬಳಸಿಕೊಳ್ಳದೆ ಬಿಟ್ಟಿಲ್ಲ. ಹೀಗಾಗಿ ವೀರಶೈವ ಪುರಾಣ ಲಕ್ಷಣಗಳನ್ನು ಇನ್ನುಳಿದ ಜೈನ, ವೈದಿಕ ಪುರಾಣಗಳ ಲಕ್ಷಣಗಳೊಡನೆ ಹೋಲಿಸಲಾಗುವುದೇ ಇಲ್ಲ. ಇವಕ್ಕೆ ಇವುಗಳದೇ ಆದ ಅನೇಕ ವಿಶಿಷ್ಟ ಲಕ್ಷಣಗಳಿವೆ. ಈ ಲಕ್ಷಣಗಳನ್ನು ಚನ್ನವೀರ ಜಂಗಮದೇವನ 'ಷಟ್‌ಸ್ಥಲ ವಲ್ಲಭ'ದಲ್ಲಿಯೂ ಕಾಣಬಹುದಾಗಿದೆ. ಕವಿಯು ಸಿದ್ಧ ಲಿಂಗೇಶ್ವರನ ಅಥವಾ ಗೋಸಲೇಶನ ಮಹಿಮಾ ವಿಶೇಷಗಳ ಪ್ರಸಂಗಗಳಲ್ಲಿ ಆ ಮಹಿಮಾ ವಿಶೇಷಗಳಿಗೆ ಹೊಂದಿಕೆಯಾಗುವ ಅನೇಕ ಘಟನೆಗಳನ್ನು ಜೋಡಿಸಿ ಹೇಳಿ ತನ್ನ ಬಹುಶ್ರುತತ್ವವನ್ನು ತೋರಿಸಿಕೊಂಡಿರುವುದು ಎಲ್ಲರೂ ಮೆಚ್ಚತಕ್ಕ ಅಂಶವಾಗಿದೆ. ಜೊತೆಗೆ ಪರವಾದಿಗಳ ವಾದವನ್ನು ಅಲ್ಲಗಳೆದು ಶಿವಾದ್ವೈತ ತತ್ತ್ವಪ್ರತಿಪಾದನೆ ಮಾಡುವಲ್ಲಾಗಲಿ, ಶೈವಪುರಾಣಕಥೆಗಳನ್ನು ಖಂಡಿಸುವವರಿಗೆ ಸೂಕ್ತ ಉತ್ತರಕೊಟ್ಟು ಅವುಗಳ ವೈಶಿಷ್ಟ್ಯವನ್ನು ಎತ್ತಿ ಹಿಡಿಯುವಲ್ಲಾಗಲಿ ಕವಿಗೆ ವಿಶೇಷ ಶಕ್ತಿಯಿರುವುದನ್ನೂ ಕಾಣುತ್ತೇವೆ. ಪ್ರಕೃತ ಕೆಲವು ಉದಾಹರಣೆಗಳನ್ನು ನೋಡಬಹುದು.

ಸಿದ್ಧಲಿಂಗೇಶ್ವರನು ತನ್ನ ಗುರುವಾದ ಗೋಸಲ ಚನ್ನಬಸವೇಶ್ವರರ ಸೇವೆ ಮಾಡುವಾಗ "ಪರಮೇಶ್ವರಂಗೆ ನಿರ್ಮಲೋದಕದಿಂದ ಮಜ್ಜನಕ್ಕೆರೆವ ನೇಮವನುಳ್ಳ ದಾರಯ್ಯ, ಸೋಮಾಸಿಮಾರಯ್ಯ, ಹಂಪಿದೇವಯ್ಯ, ಅಗ್ಗವಣಿಹೊನ್ನಯ್ಯ, ಸದ್ಯೋಜಾತಯ್ಯ ಮತ್ತಂ ಪನ್ನೀರಿಂದೀಶ್ವರಂಗೆ ಮಜ್ಜನಂ ಮಾಳ್ಪನೇಮದ ಶಿವರಾತ್ರಿ ಸಂಗಯ್ಯ ಮುಂತಾದ ನೇಮದ ಶರಣರ ತಿಂತಿಣಿಯಂತೆ ಮತ್ತಂ ನಿತ್ಯವೂ ಸಹಸ್ರ ಕುಂಭಾಭಿಷೇಕದ ನೇಮದ ಪೋಚಲದೇವಿಯಂತೆ ಗುರುಪದಸರಸಿಜಯುಗ್ಮಕ್ಕೆ ಭಕ್ತಿಯಿಂ ಮಂತ್ರೋದಕದಿಂ ಮಜ್ಜನಕ್ಕೆರೆದುಂ... ಮತ್ತಂ ತಿರುವಾರೂರ ತ್ಯಾಗನಾಥನ ಮಕುಟಮಂ ಸಿಂಗರಿಪ ನೇಮದ ಪೂಜಿದೇವನಂತೆ ಶ್ರೀ ಗುರುವಿನ ಮಕುಟಮಂ ಪುಷ್ಪಗಳಿಂ ಸಿಂಗರಿಸಿ, ಮತ್ತಂ ಶಿವಭಕ್ತ ನೀಲಕಂಧರಂಗೆ ಚಂಪಕಪುಷ್ಪವಂ ಸಮರ್ಪಿಸುವಲ್ಲಿ ಪ್ರೀತಿವಂತನಾದ ಚಿಲುಪುರಿಯರಂತೆ ಚಂಪಕಕುಸುಮ ದಂಡೆಯಂ ಶ್ರೀಗುರುವಿನುರದೊಳೆಳಲಿಟ್ಟುಂ..." (೨-೩೫).

–ಹೀಗೆ ಎಲ್ಲ ತರದ ಕ್ರಿಯೆಗಳಿಗೂ ಸಂಬಂಧಿಸಿದ ಶರಣರ ಪುರಾತನರ ಹೆಸರೆತ್ತುವುದು ಬರೆಯುವವನಿಗೆ ಶ್ರೇಯಸ್ಕರವೆಂಬ ಭಾವನೆಯಿರಬಹುದು. ಪವಾಡದ ಕಥೆ ಬರುವಾಗಲೂ ಇಷ್ಟೆ. ಸಿದ್ಧಲಿಂಗೇಶನ ಪವಾಡವೊಂದನ್ನು ಹೇಳಿದ ಮೇಲೆ ಅಂಥ ಪವಾಡಗಳು ಇನ್ನೆಲ್ಲಿ ನಡೆದುವೆಂಬುದರ ಒಂದು ಪಟ್ಟಿ ಸಿದ್ಧವಾಗೇ ಬಿಡುತ್ತದೆ. ಇದಕ್ಕೆರಡು ಉದಾಹರಣೆಗಳನ್ನು ನೋಡಬಹುದು.

(೧) ಹುಲಿಯೂರನ್ನು ಸಿದ್ಧೇಶನು ಹೊಕ್ಕೊಡನೆ ಅಲ್ಲಿನ ಜನರಿಗೆ ಬಂದೆರಗುತ್ತಿದ್ದ ಜ್ವರಪೀಡೆ ಮಾಯವಾಗಿ ಹೋಯಿತಂತೆ. ಇದು "ದ್ರಾವಿಡದೇಶದ ಶಿವಪುರ

ದಲ್ಲಿಯ ಜ್ವರಂ ತಿರುಜ್ಞಾನ ಸಂಬಂಧಿಗಳು ಬರೆ ಹೋಯಿತ್ತೆಂಬುದಂ, ತಿಲ್ಲೆವಲ್ಲಿ ನಾಚಿಯ ಮುಖವಂ ಕಂಡಾಕ್ಷಣ ವಾಗೀಶ್ವರನ ಜ್ವರಂ ಬಿಟ್ಟತ್ತೆಂಬುದಂ, ಉತ್ತುಂಗ ಚೋಳಂ ಕೃತಾಂತನ ಮೇಲೆಂದುಂ ಎಡವ ಕಾಲೊಳ್ ತೊಡರುಗಟ್ಟಿದಾಗಲೆ ಆತನಾಳ್ವ ದೇಶದಲ್ಲಿರ್ಪ ಜ್ವರಂ ಹೋಯಿತೆಂಬುದಂ, ಕಲ್ಯಾಣದೊಳೊರ್ವ ಶಿವ ಭಕ್ತಂಗೆ ಬಂದ ಜ್ವರಂ ಸಗರದ ಬ್ರಹ್ಮಯ್ಯನಂ ಕಾಣುತ್ತೆ ಹೋಯಿತ್ತೆಂಬುದಂ, ಓರ್ವ ಜಂಗಮಕ್ಕೆ ಬಂದ ಜ್ವರಂ ವೀರಸಂಗಯ್ಯಂ ಬಂದಾಗಳೆ ಹೋಯಿತ್ತೆಂಬುದಂ ಪೂರ್ವ ಪುರಾತನರ ಪ್ರಸಂಗದೊಳ್ ಕೇಳ್ದೆವು. ಈ ಸಿದ್ಧಲಿಂಗೇಶ್ವರಂ ಹುಲಿಯೂರ್ ಪೊಕ್ಕಾಕ್ಷಣಮಾ ಜ್ವರಂ ಹಾರಿಹೋದುದಂ ಪ್ರತ್ಯಕ್ಷ ಕಂಡೆವೆಂದು ನಿಖಿಲಮಾಹೇಶ್ವರರು ಕೊಂಡಾಡುತ್ತಿರೆ...." (೫-೧೦೭).

(೨) ಓರ್ವ ಚೋರೆಯಾದ ಸ್ತ್ರೀಯು ಇನ್ನೊಬ್ಬಳ ಮೂಗುತಿಯಂ ಕದ್ದ ಪ್ರಸಂಗ ದಲ್ಲಿ ತಾನು ಕದ್ದಿಲ್ಲವೆಂದು ಸುಳ್ಳು ಆಣೆಯನ್ನು ಬಲಗೈ ಮೇಲೆತ್ತಿ ಸಿದ್ಧನ ಮುಂದೆ ಮಾಡಿದಾಗ ಎತ್ತಿದ ಕೈ ಕೆಳಗಿಳಿಯದಂತೆ ಹಾಗೇ ಮೇಲಕ್ಕೆ ನಿಂತಿತು. ಈ ಪ್ರಸಂಗಕ್ಕೆ ಕವಿ ಕೊಡುವ ದೃಷ್ಟಾಂತಗಳು–" ಕಾಶಿಯೊಳ್ ಬಾದರಾಯಣನುಮೆತ್ತಿದ ಕೈ ನಿಂದ ವೊಲ್,....ಕಾಶಿಯೊಳ್ ಭಾಸ್ಕರರಾಜಂ ಸೂರ್ಯನಾರೋಗಣೆಗೆ ರತ್ನಪರಿವಾಣದೊಳಂ ಭಕ್ಷ್ಯಾನ್ನ ಪಾನಾದಿಗಳಂ ಕಳುಪಲ್ ಅನಿತರೊಳ್ ಕರಿಕಾಲಚೋಳನ ಭಟರೆಯ್ದಿ ಚೋಳನೃಪನ ಪಾದದಾಣೆಯಿಡೆ ಅಂತರದಲ್ಲಿಯೇ ನಿಂದಿರ್ದ ಪರಿವಾಣದ ತೆರನಲ್ಲಂ; ಚಾಚರಸರ ಲೆಕ್ಕದ ನಿಮಿತ್ತಂ ಬಸವೇಶ್ವರಂ ಹನ್ನೊಂದು ದಿನಂ ಅಂತರಿಕ್ಷದಲ್ಲಿ ಸೂರ್ಯನಂ ನಿಲಿಸಿದಂತಲ್ಲಂ; ಗೋವರ್ಧನಗಿರಿಯಂ ಹರಿ ನೆಗಪಿದಂತಲ್ಲಂ; ಬಸವೇಶ್ವರಂ ಆರುಹವಾದದ ವಿಚಾರಣ ರಕ್ಷೆಯನಂಬರತಲಕೆತ್ತಿ ನಿಲಿಸಿದಂತಲ್ಲಂ; ಬಸವೇಶ್ವರಂ ಗೊಲ್ಲತಿಯ ಕೊಡನಂ ಅಂತರಿಕ್ಷದಲ್ಲಿ ನಿಲ್ಲಿಸಿದಂತಲ್ಲಂ; ಸಾಸಲಭೈರವನ ಮಹದೇವಿ ಸಣ್ಣಕ್ಕಿಯಂ ಥಳಿಪ ವೇಳೆಯೊಳ್ ಜಂಗಮದೇವರು ಬರೆ ಕಾಣುತ ಒಣಕೆಯಂ ಬಿಡಲಂತರದಲ್ಲಿ ನಿಂದಂತಲ್ಲಂ; ತಿರುಚಿಟ್ಟಂಬಲನ ಕೈಯ ಕುಸುಮ ಕರಂಡಸಹಂ ಹರಂ ನೆಗಹಿ ಅಂತರದಲ್ಲಿ ನಿಲ್ಲಿಸಿದಂತಲ್ಲಂ; ಮಡಿವಾಳಯ್ಯಂ ಬಿಜ್ಜಳನ ಪಟ್ಟದಾನೆಯಂ ಸೀಳ್ದಿಡಲೋಸುಗಂ ಹರಭಕ್ತರ ಸೀರೆಗಳ ನಂಬರತಳಕಿಟ್ಟು ಅಂತರ ದಲ್ಲಿ ನಿಲ್ಲಿಸಿದಂತಲ್ಲಂ; ಜಲಂಧರಂ ಕೃಷ್ಣನ ತಿರುಪಿಟ್ಟೊಡೆ ಬಹಿರಾವರಣದಲ್ಲಿ ಸಿಕ್ಕಿ ದಂತಲ್ಲಂ; ಹಡಪದಪ್ಪಣ್ಣಂ ಕುಲಗಿರಿಗಳಂ ಬೆರಳ ಕೊನೆಯಲ್ಲಿ ನಿಲಿಸಿದಂತಲ್ಲಂ, ಸಿದ್ಧಲಿಂಗೇಶ್ವರನ ಪದಕಮಲದಾಣೆಯೆಂದು ನೆಗಹಿದ ಹಸ್ತಂ ಅಂತರಿಕ್ಷದಲ್ಲಿ ಸಿಕ್ಕಿರು ತ್ತಿರೆ ಇದು ಚೋದ್ಯಂ......" (೫-೧೧೩). ಹೀಗೆ, ಮೊದಲು ಹೋಲುವಂತಹ ದೃಷ್ಟಾಂತಗಳನ್ನು ವಿರುದ್ಧವಾದ ಪ್ರಸಂಗಗಳ ರೀತಿಯನ್ನೂ ಸಮಗ್ರ ಭಾರತೀಯ ಪುರಾಣ ಸಾಹಿತ್ಯವನ್ನೇ ಮಥನಮಾಡಿ ಆರಿಸಿ ಪಟ್ಟಿಮಾಡಿ ಹೇಳುವಲ್ಲಿ ಕವಿ ಉದ್ದಕ್ಕೂ ಆಸಕ್ತಿ ತೋರಿ ತನ್ನ ಬಹುಶ್ರುತತ್ವವನ್ನು ವ್ಯಕ್ತಪಡಿಸಿ ಓದುಗರನ್ನು

ಮೂಕವಿಸ್ಮಿತಗೊಳಿಸುತ್ತಾನೆ. ಭಾಷೆ, ಛಂದಸ್ಸು ಪರಿಣತಿಯ ಬಗೆಗೆ ನಾವೇನೆಂದರೂ ಈ ರೀತಿಯ ಒಕ್ಕಣೆ ಬಗೆಗಾದರೂ ಮೆಚ್ಚುಗೆ ವ್ಯಕ್ತಪಡಿಸದಿರಲಾರೆವು. ಈ ಪೂರ್ವಕಥೆಗಳಿಗೆಲ್ಲ ಆಕರಗಳನ್ನು ಹುಡುಕುವ ಸಾಹಸ ಮಾಡಿದರೆ, ಅವುಗಳ ಪಟ್ಟಿ ಮಾಡಿದರೆ ಅದೇ ಒಂದು ಪ್ರೌಢ ಪ್ರಬಂಧವಾದೀತು. ಅಥವಾ ಸಂದರ್ಭ ಕೋಶವೇ ಆದೀತು. ಕಾವ್ಯದುದ್ದಕ್ಕೂ ಕವಿ ಈ ಮಾದರಿಯಲ್ಲಿ ಸಾಗಿದ್ದಾನೆ. ಘಟನೆಗಳನ್ನು ಜೋಡಿಸುವುದು ಇದೊಂದು ಪರಿಯಾದರೆ ಇನ್ನೊಂದು ರೀತಿಯಲ್ಲಿ ಒಮ್ಮೊಮ್ಮೆ ಕವಿ ತನಗೆ ಗೊತ್ತಿದ್ದ ಅನೇಕ ಪೌರಾಣಿಕ ಘಟನೆಗಳ ಮಾದರಿಯಲ್ಲಿ ಸಿದ್ಧಲಿಂಗನ ಸಂಬಂಧದಲ್ಲಿಯೂ ಆ ಘಟನೆಯನ್ನು ತಂದರೆ ಚೆನ್ನಾಗಿರುತ್ತದೆಂದು ಜ್ಞಾಪಿಸಿಕೊಂಡೋ ಏನೋ ಆ ಘಟನೆಗಳನ್ನು ತರುತ್ತಾನೆಂದು ತೋರುತ್ತವೆ. ಉದಾಹರಣೆಗೆ–ರೇವಣ ಸಿದ್ಧೇಶನು ಗಾಣದ ಕಲ್ಲಯ್ಯ ಅವನ ವನಿತೆ, ಅವನ ಎತ್ತಿಗೆ ಒಂದೊಂದು ಕಣ್ಣು ಕೊಟ್ಟನಂತೆ; ನಂಬ್ಯಣ್ಣನಿಗೆ ಕಂಚಿಯ ಕಾಮಾಕ್ಷಿಯೂ, ತ್ಯಾಗನಾಥನೂ ಒಂದೊಂದು ಕಣ್ಣು ಕೊಟ್ಟರಂತೆ; ಹೀಗೆ ಒಂದೊಂದು ಕಣ್ಣು ಪಡೆದವರ ಪಟ್ಟಿ ಮಾಡಿ–ದೇವರಾಯ ಪಟ್ಟಣದಲ್ಲಿ ಸಿದ್ಧೇಶನಿದ್ದಾಗ ಒಬ್ಬ ಹುಟ್ಟುಗುರುಡ ಬಂದು ತನಗೆ ಕಣ್ಣು ಕೊಡೆಂದನು. ಆಗ ಸಿದ್ಧೇಶನು 'ನಿನಗೆ ಕಣ್ಣು ಕೊಡಲು ಎಲ್ಲಿರ್ದಪವು?' ಎನ್ನುವನು. ಆಗ ಹುಡುಗನು 'ಈಗ ಒಂದು ಕೊಡಿ ಸಾಕು' ಎಂದನು. ಆ ಮುಗ್ಧನ ಮಾತಿಗೆ ಸ್ವಾಮಿ ಒಂದು ಕಣ್ಣು ಕೊಟ್ಟ. ಈ ಘಟನೆಯನ್ನು ಕವಿಯೇ ಕಲ್ಪಿಸಿಕೊಂಡನೋ ಅಥವಾ ಸಿದ್ಧಲಿಂಗೇಶನ ಜೀವನದಲ್ಲಿ ಅದು ನಡೆದುದೋ ಹೇಳುವುದು ಕಷ್ಟ. ನೇತ್ರದಾನದ ಕಥೆಗಳು ಸಿದ್ಧಲಿಂಗನ ಚಾರಿತ್ರದಲ್ಲಿ ಅನೇಕ. ಹೀಗೆ ಘಟನೆ ನಡೆದೊಡನೆ ಹಿಂದೆ ನಡೆದ ಇಂಥ ಅನೇಕ ಘಟನೆಗಳನ್ನು ಜ್ಞಾಪಿಸಿ ತಾನು ಹೇಳುವ ಘಟನೆಯನ್ನು ಸಮರ್ಥಿಸಿಕೊಳ್ಳುತ್ತಾನೆ. ಅಥವಾ ಆ ಘಟನೆ ನಡೆದಿದ್ದೀತು. ಓದುತ್ತ, ಓದುತ್ತ ಹೋದಂತೆ ವಿಮರ್ಶಕ ಈ ರೀತಿಯ ಅನುಮಾನಪಡುವಂತಾಗುತ್ತದೆ. (೬ ; ೫೫–೫೯)

## ಕವಿಯ ವರ್ಣನಾಕೌಶಲ್ಯ

ಚಂಪೂ ಕಾವ್ಯವೆಂದ ಮೇಲೆ ಕನ್ನಡ ಕಾವ್ಯ ಧರ್ಮಕ್ಕೆ ಅಂಟಬಂದ ೧೮ ವರ್ಣನೆಗಳ ವಿಚಾರದಲ್ಲೂ ಈ ಕವಿ ವಿಮರ್ಶಕರ ಗಮನ ಸೆಳೆಯದಿಲ್ಲ ಪ್ರಸಂಗಗಳನ್ನು ಕಲ್ಪಿಸಿಕೊಂಡು ಋತುಗಳು, ರಾತ್ರಿ, ಸೂರ್ಯೋದಯ, ಸೂರ್ಯಾಸ್ತ, ಚಂದ್ರೋದಯಾದಿ ವರ್ಣನೆಗಳು ಈ ಪ್ರಬಂಧದಲ್ಲಿ ಬಂದಿವೆ. ಅಲ್ಲಿ ಈತನು ತನ್ನದೇ ಆದ ಜಾಣ್ಮೆಯನ್ನು, ಕವಿ ಸಮಯಗಳನ್ನೆಲ್ಲ ಬಳಸಿಕೊಂಡು ತೋರಿಸದೆ ಬಿಟ್ಟಿಲ್ಲ. ಅಂಥ ಕೆಲವು ಪ್ರಸಂಗಗಳನ್ನು ನೋಡಬಹುದು :

ಮುಳುಗುತಲಿರುವ ಸೂರ್ಯದೇವನ ವರ್ಣನೆ ಹೇಗಿರುವುದು ನೋಡಿ :

ಪಶ್ಚಿಮನಾರಿ ನೋಳ್ಪ ಮಣಿದರ್ಪಣವೊ ಸುರರುಂಬ ರತ್ನದಾ-
ವೆಚ್ಚಿನಪಾತ್ರೆಯೋ ಪವಳ ಹೆಜ್ಜೊಡರೋ ಸಿರಿದೇವಿಹಸ್ತದಾ-
ನಿಶ್ಚಟ ರತ್ನಕಂದುಕವೊ ತಾನುರಗೇಂದ್ರಫಣಾಸುರತ್ನವೋ
ಹೆಚ್ಚಿ ರಥಾಂಗದುಃಖದುರಿಯೋಯೆನಲೊಪ್ಪಿತುಮರ್ಕಬಿಂಬವುಂ

(೫–೨೧೨)

ಹೀಗೆ ಕಾಣುವ ಸೂರ್ಯನು 'ಅಂಬುಜ ಅರೆಮುಗಿವುತ್ತಿರಲ್ ಅರೆವಿರಿವುತ್ತಿರಲುಕುಮುದ ಆ ಸಮಯದೊಳ್ ಅರೆವೈ ವನಧಿಯೊಳ್ ಇಳಿದಂ ಅರೆಯಾಗಿಯೆ ತೋರುತಿರ್ದ ಪಶ್ಚಿಮ ದಿಸೆಯೊಳ್' (೫–೨೧೩). ಇದು ಕವಿಯ ಸೂರ್ಯಾಸ್ತದ ಕಲ್ಪನೆಯ ಒಂದು ನೋಟ. ಸೂರ್ಯನು ಮುಳುಗಿದಾಗ,

ಕೋಕಂಗಳ್ ಬಹುದುಃಖದಿ
ಘೂಕಂಗಳ್ ದೃಷ್ಟಿ ಹರುಷದಿಂದಂ ಮುಳುಗಲ್
ಲೋಕಂಗಳ್ ಮುಳುಗೆ ನಿಸೆಯೊಳ್
ಲೋಕಾಕ್ಷನಪರಾಬ್ಧಿಯೊಳ್ಮುಳುಗಿದನಾಗಳ್ (೫–೨೧೫)

ಮುಗಿವಬುಜವ ಕಾಣುತ್ತಂ
ನಗುವಂತರಳಿದವು ಕುಮುದಕುಲವಾ ಸಮಯದಿ
ಮಿಗೆ ದುಗುಡದಿ ಕೋಕಿಗಳುಂ
ಪಗಲಾಣ್ಮನ ನೆನೆದು ಬಳಲುತಿರ್ದುವು ಸತತಂ (೫–೨೧೬)

–ಇಂಥ ಸಹಜ ಮತ್ತು ಅಸಹಜ ಕವಿಸಮಯದ ವಿವರಗಳನ್ನೊಳಗೊಂಡ ವರ್ಣನೆ ಕವಿಜನ ಸಾಮಾನ್ಯವಾದರೂ ಸುಲಭವಾಗಿ ಚಂಪೂ ಶೈಲಿಯಲ್ಲಿ ಕಾವ್ಯ ಬರೆಯಬಹುದೆಂಬುದಕ್ಕೂ ನಿದರ್ಶನಗಳಾಗಬಹುದು. ಈ ಸಮಯದಲ್ಲಿ ಎಲ್ಲರ ಮನೆಯಲ್ಲೂ ದೀಪಗಳು ಕಾಣಿಸಿಕೊಂಡುದನ್ನು ಕವಿ ಉತ್ಪ್ರೇಕ್ಷಿಸಿರುವುದು ಹೀಗೆ :

ವೀರೇಶ ದಕ್ಷಯಜ್ಞಾದಿ
ಸೂರನ ಶರಿರವನು ತರಿಯೆ ಕಿರಣಗಳೆಲ್ಲಂ
ಊರಂ ಪೊಕ್ಕಡಗಿಪ್ಪೊಲ್
ಸೇರಿರ್ದವು ಪಲವು ದೀಪವಾ ಮನೆಮನೆಯೊಳ್ (೫–೨೧೮)

ಆಕಾಶದಲ್ಲಿ ನಕ್ಷತ್ರಗಳು ಶೋಭಿಸುತ್ತಿದ್ದುವೆಂಬುದನ್ನು ಕವಿ ಕಲ್ಪಿಸಿಕೊಂಡಿರುವ ಚಿತ್ರ ಚೆಂದ.

ಕಪ್ಪಿನ ಸೀರೆಗೆ ಮುತ್ತಂ
ತಪ್ಪದೆ ಸೇರಿಸಿದ ತೆರದಿಯಾಕಾಶದೊಳುಂ
ಇಪ್ಪವು ಉಡುಗಣತತಿಗಳ್
ಒಪ್ಪವನೇನೆಂಬೆನವರ ಬಹಳೋನ್ನತಿಯಂ (೫–೨೧೯)

ದಿನನಾರಿಯ ಕಂಧರದೊಳು
ಮಿನುಗುವ ಮೌಕ್ತಿಕದ ಹಾರಮಂ ದಿವಸೇಶಂ
ವಿನಯದಿ ಪರಿದಡೆ ಕೆದರಿಯು
ಮಿನುಗುವ ಮುತ್ತುಗಳ ತೆರದಿ ಭಗಣಗಳೆಸೆಗುಂ (೫-೨೨೦)

ಈ ಎಲ್ಲ ಪದ್ಯಗಳನ್ನು ನೋಡಿದಾಗ ಕವಿಗಿರುವ ಸಾಮರ್ಥ್ಯದ ಬಗೆಗೆ ಗೌರವ ತಾಳಲೇಬೇಕಾಗುತ್ತದೆ. ಚಂಪೂ ಸಾಹಿತ್ಯನಿರ್ಮಿತಿಯ ಕಾಲವೆಲ್ಲ ಹೊರಟುಹೋಗಿ ಸುಲಭಶೈಲಿಯ ಷಟ್ಪದಿ, ಸಾಂಗತ್ಯ, ತ್ರಿವಿಧಿ, ತ್ರಿಪದಿಗಳು ಹುಟ್ಟುತ್ತಿರುವ ಕಾಲದಲ್ಲಿ ಚಂಪೂಶೈಲಿಯ ಗಾಂಭೀರ್ಯಕ್ಕೆ ಮಾರುಹೋಗಿ ಪ್ರಯತ್ನಪೂರ್ವಕ ಆ ಮಾರ್ಗದಲ್ಲಿ ಕಾವ್ಯರಚನೆ ಮಾಡಿದವನೆಂದು ಚನ್ನವೀರ ಜಂಗಮನ ಬಗೆಗೆ ನಾವು ಮಾತನಾಡಿದರೂ ಅವನಲ್ಲಿ ಶಕ್ತಿ, ನಿಪುಣತೆಗಳಿಲ್ಲದಿಲ್ಲ. ಅವನ ಸಂಗ್ರಹಬುದ್ಧಿಯ ಬಗೆಗೆ ಲಘುವಾಗಿ ಮಾತನಾಡುವಂತಿಲ್ಲ. ತಾನು ಮಾಡಿದ ಅಪಾರ ಸಂಗ್ರಹವನ್ನೆಲ್ಲ ಕಾವ್ಯದಲ್ಲಿ ತುಂಬಿ ಚಾರಿತ್ರಿಕ ವ್ಯಕ್ತಿಯೊಬ್ಬರ ಬಗೆಗೆ, ತನಗಿಂತ ಕೆಲವು ದಿನಗಳು ಮೊದಲು ಜೀವಿಸಿದ್ದ ಓರ್ವ ಶಿವಯೋಗಿಗಳ ಬಗೆಗೆ ಚಂಪೂ ಶೈಲಿಯಲ್ಲಿ ಒಂದು ಪುರಾಣವನ್ನು ಬರೆದಿರುವುದೇ ಅವನ ವೈಶಿಷ್ಟ್ಯವೆನ್ನಬಹುದಾಗಿದೆ.

ರಾತ್ರಿಯಾದಕೂಡಲೆ ಉಳಿದ ಕವಿಗಳು ಸಾಮಾನ್ಯವಾಗಿ ವೇಶ್ಯಾವಾಟಿಕೆ, ಜಾರರು ಚೋರರುಗಳನ್ನು ವರ್ಣಿಸುವುದುಂಟು. ಕವಿಗೆ ಅದು ಸಮ್ಮತವಿಲ್ಲ. ಇದಕ್ಕೆ ಕವಿ ಕೊಡುವ ಕಾರಣ ಇದು : ಸಿದ್ಧಲಿಂಗೇಶ್ವರರ ಶಿವಪೂಜಾ ಸಮಯ. ಇಂಥ ಪವಿತ್ರ ಸಮಯದಲ್ಲಿ ಜಾರಚೋರರನ್ನು ವರ್ಣಿಸುವುದುಂಟೆ? "ಅದೇಕೆಂದೊಡೆ ಪುಃಕಳಿ ಸೌಂಡಕರುಂ, ಭಾವಕಿವೋಟರುಂ ಯಶೋಧರನಾರಿ, ಕೃಷ್ಣಗೋವರುಂ, ಮತ್ತಂ ಕೀಚಕ, ರಾವಣ, ಶೂದ್ರಿಕ ವೀರಾದಿಗಳ್ ಕೆಟ್ಟುವರಿಂ ವರ್ಣಿಸಬಾರದು, ಸಿದ್ಧ ಲಿಂಗೇಶ್ವರಂ ಶಿವಾರ್ಚನೆಗೆಯ್ವ ಪೊತ್ತಿನೊಳುಂ" (೫-೨೨೪) ಇಲ್ಲಿ ಕವಿ ವಸ್ತುವಿನ ಬಗೆಗಿಟ್ಟಿರುವ ಅಪಾರ ಗೌರವ, ವಸ್ತುವಿನ ಶುದ್ಧಿ, ಸಿದ್ಧಿ, ಶುಚಿ, ರುಚಿಗಳ ಬಗೆಗೆ ಓದುಗರಲ್ಲೂ ಪವಿತ್ರಭಾವನೆ ಮೂಡಿಸುತ್ತಾನೆ. ಜಾರಚೋರರ ಕಥೆ ಹೇಳಬಹುದು. ಅದರಿಂದಾಗುವ ಪ್ರಯೋಜನವೇನು? ಅಸಂಸ್ಕಾರವನ್ನೇಕೆ ಹೇಳಬೇಕೆಂಬುದೇ ಕವಿಯ ಉದ್ದೇಶವಾಗಿರಬಹುದು.

ಇಂಥ ರಾತ್ರಿಯ ಸಮಯದಲ್ಲಿ ಚಂದ್ರೋದಯವಾಯಿತು. ಈ ಸಮಯದಲ್ಲಿ ಮುಂದೆ ಸಿದ್ಧಲಿಂಗೇಶ್ವರ ಶಿವಪೂಜಾ ಕಾಲದಲ್ಲಿ ತುಂಬೆಹೂವುಗಳನ್ನು ಸುರಿಸುವ ಒಂದು ಪವಾಡದ ಕಥೆ ಬರುತ್ತದೆ. ಅದನ್ನು ಜ್ಞಾಪಿಸಿಕೊಂಡು ಚಂದ್ರೋದಯಕ್ಕೆ ಸಂಬಂಧ ಕಲ್ಪಿಸುತ್ತ, ಆ ವರ್ಣನೆಗೊಂದು ಸೌಂದರ್ಯ ತುಂಬುವುದನ್ನು ಕಾಣಬಹುದು.

ಮೂಡಣದಿಕ್ ಕೆಂಪೇರ-
ಲ್ಕೋಡಿತು ತಮ ದೆಸೆದೆಸೆಗೆ ಮಿಗೆ ಪಸರಿಸೆ ಜೊನ್ನ
ಕೂಡೆ ಚಕೋರಂ ನಲಿಯಲ್
ಗಾಢದಿ ನೆರೆ ತೋರಿತಾಗ ಚಂದ್ರನ ಬಿಂಬಂ (೫-೨೭೫)

ಯತಿಪಗೆ ಪೂಮಳೆಗರೆವುದ
ನತಿಶಯದಿಂ ನೋಡಬಂದನೆಂಬೊಲ್ ಚಂದ್ರಂ
ವಿತತ ಹಿಮಾಂಶುವನುಂ ಕೆದ-
ರುತ್ತೈದಿದ ನಿಂದ್ರಾದ್ರಿಯ ಸಿಂಹಾಸನಕಂ- (೫-೨೭೬)

ಆಗಿನ ಚಂದ್ರನ ಬಿಂಬವು ಕಂಡ ರೀತಿಯನ್ನು ಹೇಳುವ ಕವಿಯ ಮಾತು ಬಹು ಸುಂದರ :

ಪೂರ್ವದಿಶಾಂಗನಾಕರದ ರತ್ನದ ಕಂದುಕವೊ ವಿನೋದದಿಂ
ಶಾರ್ವರಿನಾರಿ ಕಂಧರದಿ ಕಟ್ಟಿದ ರತ್ನದ ದೊಡ್ಡ ತಾಳಿಯೋ
ಪಾರ್ವತಿ ನೋಡುತಿರ್ಪ ವರರತ್ನದ ದರ್ಪಣವೋ ಅಮರ್ತ್ಯರುಂ
ಉರ್ವಿಗೆ ತೋರ್ಪ ರತ್ನಘಟವೋಯೆನಲೊಪ್ಪಿತು ಚಂದ್ರಬಿಂಬವುಂ
(೫-೨೭೭)

ಇದರ ಹಾಗೆ ಪಸರಿಸಿದ ಬೆಳದಿಂಗಳ ಕಾಂತಿಗೆ ಕವಿ ಕೊಡುವ ಹೋಲಿಕೆಗಳೂ ಪವಿತ್ರ ಭಾವನೆಯನ್ನು ಹೊತ್ತು ತಂದವುಗಳೇ ಆಗಿವೆ.

ಅಂಬರ ಭೂಮಿಯೆಲ್ಲ ಘನಶಂಕರ ಮೂರ್ತಿಯ ಕಾಂತಿ ತುಂಬಿತೋ
ಶಂಬರವೈರಿವೈರಿಯಹ ಸಿದ್ಧನ ಅಂಗದ ಭೂತಿಕಾಂತಿಯೋ
ಅಂಬಿಕೆ ತೊಟ್ಟ ಮೌಕ್ತಿಕದ ಮಂಡನಕಾಂತಿಯ ಮೊತ್ತ ತೀವಿತೋ
ಯೆಂಬೊಲು ಸಾಂದ್ರಚಂದ್ರಿಕೆ ವಿರಾಜಿಸಿತಾಗಲದೇನನೆಂದಪೆಂ
(೫-೨೩೦)

–ಹೀಗೆ ಕವಿ ತನ್ನ ವರ್ಣನೆಯ ಕೌಶಲ್ಯದಿಂದ ತನ್ನದೇ ಆದ ಸ್ಥಾನವನ್ನು ಚಂಪೂ ಮಾರ್ಗದಲ್ಲಿ ಉಳಿಸಿಕೊಳ್ಳಲು ಪ್ರಯತ್ನಿಸದೆ ಇಲ್ಲ. ಸೂರ್ಯೋದಯ–ಮಳೆಗಾಲ–ಚಳಿಗಾಲ ಎಲ್ಲ ಸನ್ನಿವೇಶಗಳ ವರ್ಣನೆಯಲ್ಲೂ ಕವಿ ಕೈಯಾಡಿಸಿದ್ದಾನೆ. ರೀತಿ ಮಾತ್ರ ಉಳಿದವರಂತಲ್ಲ. ಪ್ರಕೃತ ಕಾವ್ಯವೇ ಓದುಗರಿಗೆ ಆದರ ಪರಿಚಯಮಾಡಿ ಕೊಡಲಿ.

### ಕವಿಯ ಲೋಕಾನುಭವ ಅನೇಕ ಮುಖದ್ದು

ಬಹುಶ್ರುತನಾದ ಕವಿಗೆ ತನ್ನ ಕಾವ್ಯದಲ್ಲಿ ತನಗಿರುವ ಎಲ್ಲ ಅನುಭವಗಳನ್ನೂ ಸಂಬಂಧ ಕಲ್ಪಿಸಿ ತುಂಬುವ ಚಟ ಸಾಮಾನ್ಯವಾಮದೇ. ಕೆಲವರಲ್ಲಿ ಅದು ಸಮಯ ಸನ್ನಿವೇಶಗಳನ್ನರಿತು ಹಿಡಿತದಲ್ಲಿದ್ದರೆ ಕೆಲವರಲ್ಲಿ ಹೆಚ್ಚಾಗಿರಬಹುದು. ಒಬ್ಬರು

ತಾವು ತಮ್ಮ ಜೀವನದಲ್ಲಿ ಗಳಿಸಿದ ಲೋಕಾನುಭವವನ್ನು ಯಾವ ಮಾರ್ಗದಿಂದಲೋ ಅಳವಡಿಸದಿದ್ದರೆ ಲೋಕ ಜೀವನಕ್ಕೆ ಅದೊಂದು ಕೊರತೆಯೇ. ಅವರ ನೆನಪುಗಳು, ಅನಿಸಿಕೆಗಳು, ಅನುಭವಗಳು ಉಳಿಯಬೇಕು. ಮುಂದಿನ ಲೋಕದ ಜೀವನಕ್ಕೆ ಅವು ಬೇಕಾಗಬಹುದು. ಚನ್ನವೀರಜಂಗಮ ಬಡಪಟ್ಟನ ಸ್ವಾಮಿಯೇನೂ ಅಲ್ಲವೆಂದು ತೋರುತ್ತದೆ. ಲೋಕಜೀವನದಲ್ಲಿ ಅನೇಕ ಅನುಭವಗಳನ್ನು ಕಂಡ ವ್ಯಕ್ತಿಯಾಗಿ ತನ್ನ ಕಾವ್ಯದಲ್ಲಿ ಕಾಣಿಸಿಕೊಂಡಿದ್ದಾನೆ. ಪಾಕಶಾಸ್ತ್ರದಲ್ಲಿ ಏನಿದೆಯೋ ಏನು ಬಿಟ್ಟದೆಯೋ, ಕೆಲವು ಅಡಿಗೆಗಳ ಸಂಬಂಧದಲ್ಲಿ ಅವನು ಕೊಟ್ಟ ಕೆಲವು ನೆನಕೆಗಳು ಎಂಥವರ ಬಾಯಲ್ಲೂ ನೀರೂರಿಸುತ್ತವೆ. ದೇವರಾಯಪಟ್ಟಣದಲ್ಲಿ ಸಿದ್ಧೇಶ್ವರರಿದ್ದಾಗ ಅಂಥ ಅಡಿಗೆಯು ಎಡೆಗಾಗಿ ಬಂದಿತ್ತಂತೆ. ದೇವರಾಯಪಟ್ಟಣದವರಿಗೆ ಆ ಅಡಿಗೆ ಗೊತ್ತಿತ್ತೋ ಇಲ್ಲವೊ ಆ ಪ್ರಶ್ನೆ ಬೇರೆ, ಕವಿಗೆ ಮಾತ್ರ ಗೊತ್ತಿತ್ತು. ಅಂತೆಯೇ ಆ ಸಂದರ್ಭದಲ್ಲಿ ತನ್ನ ಅನುಭವ ಹಿಡಿದಿಟ್ಟನು. ಅದು ಹೀಗೆ:

ಆ ಊರ ಹೆಂಗಸರು 'ಭಿತ್ತಿಯ ಚಿತ್ರದ ಘಕಸುಬಂದವೋಲು ನೈವೇದ್ಯಮಂ ಯತಿಗೆ ಭಕ್ತಿಯೊಳ್' ಹೊತ್ತು ತಂದರು. ಅದರಲ್ಲಿ ಪರಮಾನ್ನ, ಪಿಷ್ಟಾನ್ನ, ಪೀಯೂಷಪಿಷ್ಟದನ್ನ, ಪೈತರಪ್ರಣೀತ ಮಾಧುರ ಪಿಚ್ಚಿಲ, ಚಿಕ್ಕಣ, ಕೈಕಂದ, ಅಪೂಪು, ಔಗು, ಲಡ್ಡುಗಳಿದ್ದವು. ಬುಡುಬುಡುಪೇನಗಳೂ ಇದ್ದುವಂತೆ. ಅವನ್ನು ಅವರು ಮಾಡಿದ ರೀತಿ ಹೀಗಿತ್ತಂತೆ.

> 'ಮುದ್ಗವಿದಳನುಂ ಮುಗುಳ ಹದದಿಂ ಪಚನಂ ಮಾಡಿ, ಸಣ್ಣಿತ್ತಾಗರೆದು, ಮತ್ತಂ ಬೆಳತಿಗೆ ಅಕ್ಕಿಯ ಹಿಟ್ಟಂ ತಿಳಿದುಪ್ಪದಲ್ಲಿ ಕಲಸಿ, ಆ ಹಿಟ್ಟನ ನಾಲ್ಕು ಭಾಗ ಅರೆದ ಹೆಸರನಿಕ್ಕಿ, ಹಾಲಂ ತಳೆದು ಮರ್ದನಂ ಮಾಡಿ ಒಂದು ಕಾಣಿಯಗಲದಲ್ಲಿ ಪಿಷ್ಟವಂ ಮಾಡಿ, ಕಾದ ತುಪ್ಪದೊಳು ಹಾಕಿ, ಮೇಲೆ ತುಪ್ಪವನ್ನೆರೆದು ಅದು ಉಬ್ಬಿದ ಹದನನರಿದು ತೆಗೆದು, ಬಿಸಿಯಾರದ ಮುನ್ನ ಸಕ್ಕರೆಯ ತಳೆದು ಬಡಿಸುವ ಬುಡುಬುಡುಪೇನ.'
> (೬-೨೦)

ಇದೂ ಅಲ್ಲದೆ ಅಮೃತ ಖಂಡಿಪೇನ, ಚಂದ್ರಪೇನ, ನಕ್ಷತ್ರಪೇನ-ಇವೆಲ್ಲ ಅವರ ಹೆಡಗೆಗಳಲ್ಲಿ ತುಂಬಿದ್ದುವಂತೆ. ಇಂಥ ಅಡಿಗೆಯನ್ನು ನಾವೀಗ ವಸ್ತು ಪ್ರದರ್ಶನ ದಲ್ಲಿ ಮಾತ್ರ ಇಡಬಹುದು, ಅಷ್ಟೆ ಅನ್ನಿಸುತ್ತದೆ. ಇಷ್ಟು ಕಷ್ಟಪಟ್ಟು ಮಾಡು ಪವರೂ ಇಲ್ಲ; ಮಾಡಲೂ ಶಕ್ತಿಯಿಲ್ಲ; ಮಾಡುವುದೂ ಗೊತ್ತಿಲ್ಲ.

ಲಡ್ಡುಗೆಗಳು:

> 'ನೆನೆದ ಸಜ್ಜಗೆಯರ್ಧ ಕಟ್ಟು ಮೊಸರಿಂದ ಅದರರ್ಧ ನವನೀತವನಿಕ್ಕಿ ಮರ್ದಿಸಿ, ಗಣಿಕಾ ಪ್ರಮಾಣದ ಸೇವಗೆಯಂ ಹೊಸೆದು, ಕಾದ ತುಪ್ಪ ದೊಳು ಹಾಯಿಕಿ, ಇಬ್ಬೆರಳುದ್ದದಿಂ ಮುರಿದು ಲಡ್ಡುಗೆಯ ಹದನಾಗಿ

ಕಾದ ಶರ್ಕರಾಪಾನಮಂ ಎರೆದ ಲಡ್ಡುಗೆ'. ಕಡಲೆ ಲಡ್ಡುಗೆ ಕುಸುಪ ಲಡ್ಡುಗೆ, ಕುಂಬಳ ಬೀಜದ ತಿರುಳ ಲಡ್ಡುಗೆ ಪ್ಪುಡಲೆ (?) ಲಡ್ಡುಗೆ, ಮಣಿಲಡ್ಡುಗೆ, ಸರವಳಿಲಡ್ಡುಗೆ', (೬–೨೦)

ಇವೆಲ್ಲ ಅವರ ಹೆಡಗೆಳಲ್ಲಿದ್ದುವಂತೆ. ಇನ್ನು ಹೂರಿಗೆಗಳು :

'ಕಡಲೆಬೇಳೆ ಬೆಲ್ಲ ತುಪ್ಪದಿಂದರೆದ ಹೂರಣದ ಹೂರಿಗೆ, (ಸೀತ ಮನುಂ ?) ನಾರಿಕೇಳ ಫಲ ಕುರುಜಮಂ ಅಯಿಲ ಕರ್ಪೂರ (?) ಮಿಶ್ರಿತವಾದ ನಾರಿಕೇಳ ಹೂರಿಗೆ, ದ್ರಾಕ್ಷಾ ಹೂರಿಗೆ, ಎಣ್ಣೆ ಬೂರಿಗೆ ಕದಂಬಣ್ಣೆ ಬೂರಿಗೆ.' (೬–೨೦) ಇತ್ಯಾದಿ·

–ಹೀಗೆ ಇಲ್ಲಿ ಕೊಡುವ ಅಡಿಗೆಗಳ ಅನೇಕ ಪ್ರಕಾರಗಳ ಪಟ್ಟಿಯು ಕವಿಯು ಯಾವುದೋ ಗ್ರಂಥದಿಂದೆತ್ತಿ ಇದ್ದಕ್ಕಿದ್ದಂತೆ ಇಟ್ಟನೆಂದು ನಮಗನಿಸುವುದಿಲ್ಲ. ಅನುಭವಿಸಿ ಬರೆದಿರಬೇಕೆನ್ನಿಸುತ್ತದೆ. ಇಲ್ಲಿರುವ ಪಟ್ಟಿ ಬಹು ದೊಡ್ಡದು ; ವೈವಿಧ್ಯ ಮಯ ಭಕ್ಷ್ಯದ್ದು. ಇಂಥವನ್ನೇ ಲೋಕಾನುಭವವೆನ್ನುವುದು. ಕಾವ್ಯದಲ್ಲಿ ಅವುಗಳ ಬಗೆಗೆ ವಿವರಣೆ ಕೊಡುವುದರ ಮೂಲಕ ಲೋಕದ ಗಮನ ಸೆಳೆಯುವುದೂ ಒಂದು ಪ್ರಕಾರ. ಹೀಗೆ ಮಾಡದಿದ್ದರೆ ನಮಗಿಂತ ಎಷ್ಟೋ ತಲೆಮಾರುಗಳ ಹಿಂದಿದ್ದ ನಮ್ಮವರ ಊಟಪಾಟಗಳೇನು ? ? ಶುಚಿರುಚಿಗಳೇನು ? ಆಮೋದ ಪ್ರಮೋದ ಸುಖದುಃಖಗಳ ಕಲ್ಪನೆಯ ಆಳವಾದ ಬಾವಿಯನ್ನು ನಾವೂ ಸ್ವಲ್ಪ ಇಣಿಕಿ ನೋಡಲಾದರೂ ಅವಕಾಶ ಸಿಗುತ್ತದಲ್ಲವೆ ?

ಜನರ ಉಡಿಗೆ ತೊಡಿಗೆಗಳ ವಿಚಾರದಿಂದಲೂ ಕವಿಯ ಲೋಕಾನುಭವದ ಮಟ್ಟವನ್ನಳೆಯಬಹುದುದಾಗಿದೆ. ಸ್ತ್ರೀಯರುಟ್ಟ ಸೀರೆಗಳ ಪ್ರಕಾರಗಳದೇ ಒಂದು ದೊಡ್ಡ ಪಟ್ಟಿ. ದೇವರಾಯಪಟ್ಟಣದ ಸ್ತ್ರೀಯರು ಸಿದ್ಧೇಶನ ದರ್ಶನಕ್ಕೆ ಬಂದಾಗ ಉಟ್ಟುಕೊಂಡು ಬಂದ ಸೀರೆಗಳ ಪ್ರಕಾರ ಹೀಗೆ:

ಚೆಂಬಿಲಿದಾಮ ಗಂಟಿ ವರಗಂಟಿರವಂತಿ ವಸಂತಮಂಜರೀ (?) (ಡಿ ?)
ನೆಂಬಿಳಿದುಂ ಗಜಾವಳಿ ಸರಾವಳಿ ಪೊಪ್ಪಳಿ ರಾಯಶೇಖರಂ
ಕುಂಬಳಗಂಟಿಗಿಂಟಿ ನವನಾರಿಯಕುಂಜರ ಚಿನ್ನದಾರಿಯುಂ
ಬೊಂಬೆಯ ಮಂಜಡೀ ಕಮಲಮಂಜಡಿಯಾದಿಯನುಟ್ಟನಾರಿಯರ್
(೬–೧೫)

ಕಾವುರಿಗೇಳ ಕೈಬರಹ ಮುತ್ತಿನ ಚಪ್ಪರ ಪುಷ್ಪಮಂಜುಡುಂ
ದೇವುಕಬಣ್ಣ ನೀಲ ಗಿಳಿರಾಮ ಸುರಾವಳಿ ರಲ್ಲ ಪಾವುಟಂ
ಚಾವುಕದಾಳಿ ರಂಗರಥಮಂಜಡಿ ಕೇಸರಿ ಮೇಘವಣ್ಣೆಯುಂ
ಕಾವುಳ ಕಂಬಿವಾಳ ಕಡಿತಾಸುರ ಸೀರೆಯನುಟ್ಟ ನಾರಿಯರ್ (೬–೧೬)

ಈ ಪಟ್ಟಿಯೇ ನಮ್ಮನ್ನು ಹಿಂದಿನ ಕಾಲದ ಸ್ತ್ರೀಯರ ಉಡಿಗೆತೊಡಿಗೆಗಳತ್ತ ಎಳೆದೊಯ್ಯುತ್ತದೆ. ಇಂದು ಈ ಹೆಸರಿನ ಸೀರೆಗಳು ಯಾವುವಿರಬಹುದು? ಎಂಬ ಯೋಚನೆಗೆ, ಶೋಧನೆಗೆ ಪ್ರಚೋದಿಸುತ್ತದೆ. ಇಂದು ಈ ಹೆಸರೆಲ್ಲ ಮುಗ್ಗಿ ಹೋಗಿರಬಹುದು; ಈ ವಿನ್ಯಾಸ ಇಂದಿನ ಸೀರೆಗಳಲ್ಲಿ ಇಲ್ಲದಿರಬಹುದು. ಚರಿತ್ರೆ ಇಂಥವನ್ನು ಸಂಗ್ರಹಿಸಿಡುತ್ತ ಹೋಗುತ್ತದೆಂಬುದನ್ನಂತೂ ಒಪ್ಪಲೇಬೇಕಲ್ಲವೆ? ಈ ರೀತಿಯ ಅನೇಕ ಲೋಕಾನುಭವಸಂಜನಿತ ಜ್ಞಾನಾನುಭವವಿಶೇಷಗಳನ್ನು ಕಾವ್ಯದುದ್ದಕ್ಕೂ ಕವಿ ಪುದುಗೊಳಿಸುತ್ತ ಬಂದಿರುವುದನ್ನು ಕಂಡಾಗ ಸಾಮಾನ್ಯ ದರ್ಜೆಯ ಕವಿಯೆಂದು ಚನ್ನವೀರ ಜಂಗಮನ ಬಗೆಗೆ ಉದಾಸೀನ ತಾಳುವುದು ವಿಹಿತವಲ್ಲವೆನ್ನಿಸುತ್ತದೆ.

## ಸಹಜ ಚಿತ್ರಣದಲ್ಲಿ ಕವಿಯ ಕೈಚಳಕ

ಲೋಕಜೀವನದ ಸಹಜ ಚಿತ್ರಣದ ವಿಚಾರದಲ್ಲೂ ಕವಿಯ ಬರವಣಿಗೆ ಸತ್ವಪೂರ್ಣವೆಂಬುದನ್ನು ಅನೇಕ ಕಡೆ ನಾವು ಕಾಣುತ್ತೇವೆ. ಮಳೆಗಾಲದಲ್ಲಿ ಮಳೆ ಸುರಿಯುತ್ತಿರುವಾಗ ಹೊರಗೆ ತಿರುಗಾಡುವ ಜನರ ರೀತಿ-ನೀತಿಗಳು ಎಲ್ಲರಿಗೂ ತಿಳಿವ ಅಂಶಗಳೇ ಆಗಿವೆ. ಓರ್ವ ವೃದ್ಧ ಜಂಗಮನ ಗತಿ ಈ ಸಮಯದಲ್ಲಿ–

ಶೀಕರದಬ್ಬರಕ್ಕೆ ಭಯಗೊಂಬುತ ವೃದ್ಧನದೋರ್ವ ಜಂಗಮಂ
ಆಕರಿಸುತ್ತ ನೇಲ್ವ ಜಡೆ ಬಿಟ್ಟಹ ಕಚ್ಚುಟ ಜೋಲ್ವ ದೋತ್ರದಿಂ
ಪಕ್ಕದೊಳೌಂಕಿಕೊಂಡವರ ಕಂಥೆಯದಂಡಕಮಂಡಲೊಕ್ಕೆಯಿಂ
ದಿಕ್ಕನೆಪೋಪುದೆಂದಡಹುತಿರ್ದನು ವೃಷ್ಟಿಯ ಭೀತಿಯೆಂತುಟೋ! (೫-೪೪)

ಹೀಗಾಯಿತಂತೆ. ಇದರಂತೆ ಓರ್ವಬಾಲಕ ಜಂಗಮನ ರೀತಿಯನ್ನು ಕೇಳಿ:

ಬಿರಬಿರನೋಡಿ ಪೋಗುತಿಹ ಬಾಲಕ ಜಂಗಮು ಮೇಘನಾದದಿಂ
ಬರಸಿಡಿಲೆದ್ದು ತೋರಲದ ಕಾಣುತೆ ತಗ್ಗುತೆ ಮುಚ್ಚಿಕಣ್ಗಳಂ
ಬಿರುದನಿಯಿಂದೆ ಕೈಗಳೆರಡಂ ಶಿರದಗ್ರಕೆಯೊಡ್ಡಿಕೊಂಡುವುಂ
ಮರೆಮರೆಯಿಂದ ಜಂಗಮರ ಸಂಪಣಿಯಿಂ ಬರುತಿರ್ದನಾಗಳುಂ (೫-೪೫)

ಇಲ್ಲಿ ಅನೇಕ ಮಳೆಗಾಲಗಳ ಅನುಭವ ಪಡೆದ ವೃದ್ಧ, ಆ ವಿಷಯದಲ್ಲಿ ಅನುಭವವಿಲ್ಲದ ಬಾಲಕ ಇವರಿಬ್ಬರ ಸ್ವಭಾವಗಳ ಸಹಜಚಿತ್ರಣದಲ್ಲಿ ಕವಿ ಬಹುಮಟ್ಟಿಗೆ ಯಶಸ್ವಿಯಾಗಿದ್ದಾನೆನ್ನಿಸುತ್ತದೆ. ಹಸಿದ ಸಿದ್ಧೇಶನಿಗೆ ಪ್ರಸಾದ ಕೊಡಿಸಬೇಕೆಂದು ರೋಹಿಣೀಖೇಡದ ಕುಂಬಳೇಶ ಜಂಗಮು ರೂಪತಾಳಿ ಆ ಊರ ಗೌಡನ ಕನಸಿನಲ್ಲಿ ಬಂದು ಹಸಿದಿದ್ದೇನೆ ಅನ್ನವನ್ನು ನೀಡೆಂದು ಹೇಳಿ ಮಾಯುವಾದನು. ಆಗ ಗೌಡ ಮತ್ತು ಅವನ ಹೆಂಡತಿಯ ಮಾತುಗಳಲ್ಲಿ ಇರುವ ಸಹಜತೆ ಒಂದು ಉತ್ತಮ ಉದಾಹರಣೆ:

ಎಚ್ಚತ್ತು ಗೌಡನಾಗಳೆ
ಬೆಚ್ಚುತ್ತಂ ತನ್ನ ಮಡದಿಯುಂ ಬಿಡದೆಬ್ಬಿಸಿ
ಇಚ್ಛೈಸಿದೆನೂಟಕ್ಕೆಂ
ದುಚ್ಚರಿಸಿದನೊರ್ವ ಚರಸ್ವಪ್ನದೊಳಂ (೩-೨೦)

ಎಂದು ಹೇಳಲು ಹೆಂಡತಿ :

ಇರುಳ್ತಿಳಿದಡಿಗೆಮಾಡಿಯು,
ಚರಲಿಂಗಕೆ ನೀಡಿಬಿಡುವ ಸುಮ್ಮನೆ ಮಲಗೆಂ
ದೊರೆದು ಮರೆದೊರಗೆ ಮತ್ತಂ
ಕರಹಸಿದೆನು ಬೇಗಲನ್ನವಂ ತೋರೆಂದಂ (೩-೨೧)

ಪುನಃ ತನ್ನ ಹೆಂಡತಿಯನ್ನು ಎಬ್ಬಿಸಿ ವಿಷಯದ ತೀವ್ರತೆಯನ್ನು ತಿಳಿಸುತ್ತಾನೆ. ನಮ್ಮೂರ ಕುಂಬಳೇಶ ನನ್ನನ್ನು ಮಲಗಗೊಡುತ್ತಿಲ್ಲ. ಒಂಭತ್ತು ದಿನದಿಂದ ಉಪವಾಸ ವಿರುವನಂತೆ. ಬೆಳಗಾಗುವವರೆಗೆ ಅವನೇ ಇರುವುದಿಲ್ಲವಂತೆ.

"....ಮನೆಯಲ್ಲಿರ್ದುದಂ ತಾಂ ಕುಂಬಳೇಶ್ವರಂಗೀಗಳೆಯುಪಹಾರವಿಟ್ಟು ಬಹೆನೆನೆಲು ಸತಿ ಕ್ರೋಧಂಮಾಡಿ, ನಾವೆಲ್ಲಮುಂಡು ಮಿಕ್ಕನ್ನವಂ ದೇವರಿಗುಪಹಾರಂ ಮಾಳ್ಪೆನೆನಲಹುದೆ? ಪಾಪಕ್ಕಂಜೆಯಲ್ಲಾ! ಎಂದು ಪತಿಯಂ ಧಿಕ್ಕರಿಸಿ ಮತ್ತಂ ಪ್ರಭಾತಕಾಲವಾದರೆ ನಾವೆಲ್ಲಂ ಮಿಂದು ದಂತಪಙ್ತಿಯಂ ಬೆಳಗಿ ಪೊಸದುಕೂಲಗಳನುಟ್ಟು ಪೊಸಭಾಂಡಂ ಗಳಿಂದಡಿಗೆಯಂಮಾಡಿ ಕುಂಬಳೇಶ್ವರಂಗೆ ಪಂಚಾಮೃತಾಭಿಷೇಕವಂ ಮಾಡಿಸಿ ಮಹಾನ್ನೈವೇದ್ಯಮಂ ಕೊಟ್ಟುಂ ಊರೊಳಗಿರ್ದ ಜಂಗಮ ದೇವರೆಲ್ಲರಂ ಬಿಜಯಂಗೈಸಿ ತಂದು ಷಡ್ರಸಾನ್ನಗಳಿಂ ತೃಪ್ತಿವಡಿಸುವ ನೀಂ ಈಗ ಸುಮ್ಮನೆ ಮಲಗು"

ಇಷ್ಟಾದರೂ ಕುಂಬಳೇಶ ಕೈಬಿಡಲಿಲ್ಲ. ಈಸಲ ದಂಪತಿಗಳಿಬ್ಬರ ಕನಸಿನಲ್ಲೂ ಬಂದ. ಅವರ ಮನೆಯಲ್ಲಿ ಏನೇನು ತನಗೆ ಬೇಕೆಂಬುದನ್ನೂ ಹೇಳಿಬಿಟ್ಟ. ಇವರ ಮನೆಯಲ್ಲಿ ಎಲ್ಲೆಲ್ಲಿ ಏನೇನು ಇದೆಯೆಂಬುದನ್ನೂ ಹೇಳಿಬಿಡಬೇಕೆ! ಇಷ್ಟೇ ಅಲ್ಲ ತಾನು ಗುಡಿಯಲ್ಲಿ ಎಲ್ಲಿ ಕುಳಿತಿರುತ್ತೇನೆಂಬುದನ್ನೂ ಹೇಳಿಬಿಟ್ಟ; ಹೇಳಲಿಲ್ಲ ಬಡಿದೇ ಎಬ್ಬಿಸಿದ.

"....ಸೂರ್ಯೋದಯಪಕ್ಕಂ ನಾಂ ತಾಳಲ್ಲಾರೆ ನೀವೀಗ ಮನೆಯಲಿಹ ಶಾಲ್ಯನ್ನಮಂ ಬೇಗದಿಂ ಬೆಟ್ಟತ್ತಾಗಿಪ್ಪ ಉಪ್ಪುಗಾಯಂ ಕೆನೆಮೊಸರನು-ಮೇಲಕ್ಕಿಯಿಂದುಳ್ಳಿಯುಂ ದೊ-ಳ್ಳಿತಪ್ಪೊಲ್ ಮಾಡಿ ಬೇಗಂ ತರುತೆಚರಕೆ ನೀಡೆಂದನಾನಂದದಿಂದಂ ನೆಲುವಿನ ಭಾಂಡದಲ್ಲಿ ಮೊಸರುಂಟು, ಜಂತದ ಪೆಟ್ಟಿಯಲ್ಲಿಯುಂ ವಿಲಸಿತದೇಲದಾ ನಿವಹ ಗಂಟೆನೊಳಿರ್ಪುವು; ನಿಂಬೆ ಪಣ್ಗಳುಂ ಎಲೆಮಡಗಿರ್ಪ ಭಾಂಡದ ಸಮೀಪದಲಿರ್ಪವುಮಾದ್ರ್ರಕಂ

> ಗಳುಂ ಜಲಘಟದೊತ್ತಿನಲ್ಲಿಹವು ದೀಪವ ಪೊತ್ತಿಸಿ ನೋಡಿಮೆಂದನುಂ
> ಹಸಿದೆನು ತಂಗುಳೋಗರವಿರುತ್ತಿಹುದು ಅಂತದ ಬೇಗ ತಂದುನೀಂ
> ಶಶಿಧರ ಕುಂಬಳೇಶ್ವರನು ನಾಂ ಚರವೇಷವ ತಾಳ್ದು ರಂಗಮಧ್ಯ ಸರುಸ
> ದೊತ್ತಿನಲ್ಲಿ ಬಲುಗಂಬವನೆಮ್ಮ ಕುಳಿತ್ತುಮಿರ್ಪೆನುಂ........"

ಇಷ್ಟಾದ ಮೇಲೆ ಗೌಡನ ಹೆಂಡತಿ ಎದ್ದು ಶಿವನು ಹೇಳಿದಂತೆ ಎಲ್ಲ ಪದಾರ್ಥಗಳನ್ನು ತುಂಬಿಕೊಂಡು ಹೋಗಿ ಚರಜಂಗಮಕ್ಕೆ ಊಡಿಸಿ ಬರುತ್ತಾಳೆ. ಸಹಜಸುಂದರ ಚಿತ್ರಣಕ್ಕೆ ಇದಕ್ಕಿಂತ ಬೇರೆ ಇನ್ನಾವ ಉದಾಹರಣೆಬೇಕು? ಜನಜೀವನವನ್ನು ಚೆನ್ನಾಗಿ ಅರ್ಥಮಾಡಿಕೊಂಡು, ಜಂಗಮನಾಗಿ ಅವರೊಡನೆ ಬೆರತು ಅನುಭವಿಸಿದ ಅನೇಕ ಅನುಭವಗಳು ಹೀಗೆ ಈ ಕಾವ್ಯದುದ್ದಕ್ಕೂ ಅಲ್ಲಲ್ಲಿ ಬಂದು, ತತ್ತ್ವಶಾಸ್ತ್ರಾದಿ ವಿಷಯಗಳಿಂದ ತುಂಬಿದ ಈ ಕಾವ್ಯದಲ್ಲಿ ಓದುಗರ ತಲೆಯಭಾರ ಕಡಿಮೆಮಾಡುತ್ತವೆ

## ಶೃಂಗಾರಕ್ಕೆಂಬಲ್ಲದ ಸಂವಿಧಾನ

ಸ್ತ್ರೀಯರ ಉಡಿಗೆತೊಡಿಗೆ ಇತ್ಯಾದಿ ವಿಷಯಗಳನ್ನು ಕವಿ ಅಲ್ಲಲ್ಲಿ ಮಾಡಿರುವನಾದರೂ ಶೃಂಗಾರ ರಸಭಾವಗಳು ಓದುಗರಿಗೆ ಉಂಟಾಗದಂತೆ ಆ ಪ್ರಸಂಗಗಳಿಗೆ ಭಕ್ತಿಯ ಬಣ್ಣ ಬಳಿದು ತೋರಿಸಿರುವುದೊಂದು ಈ ಕಾವ್ಯದ ಮೇಲ್ಮೆ. ಚಂಪೂ ಎಂದ ಮೇಲೆ ೧೮ ವರ್ಣನೆಗಳು ಇರಬೇಕೆಂಬ ಪ್ರಜ್ಞೆಯಿದ್ದರೂ ರತ್ಯಾದಿಸ್ಥಾಯಿಗಳಿಗೆ ಎಡೆಗೊಡದಂತೆ ನಾರೀಸಮೂಹವನ್ನು ಕಾವ್ಯದಲ್ಲಿ ತಂದ ಈ ವಿರಕ್ತನ ಮಾನಸಿಕ ಶುಚಿಗೆ ಮೆಚ್ಚುಗೆ ವ್ಯಕ್ತಪಡಿಸದೆ ಯಾರೂ ಇರಲಾರರು. ಕಾವ್ಯದ ಘನತೆಯೂ ಅಷ್ಟೇ ದೊಡ್ಡದು. ಕಾವ್ಯನಾಯಕ ನಿರಂಜನ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ. ಸಾಕ್ಷಾತ್ ಪ್ರಭುದೇವರ ವೈರಾಗ್ಯ, ಚನ್ನಬಸವಣ್ಣನ ಜ್ಞಾನ, ಬಸವಣ್ಣನ ಭಕ್ತಿಯೇ ಮುಪ್ಪುರಿಗೊಂಡು ಬಂದ ಅಯೋನಿಜ. ಇಂಥ ವೈರಾಗ್ಯ ಚಕ್ರವರ್ತಿಯ ಕಾವ್ಯದಲ್ಲಿ ರತ್ಯಾದಿಗಳಿಗೆ ಸ್ಥಾನವೆಲ್ಲಿ! ಅವನು ರತಿಪತಿಮದಮರ್ದನನಲ್ಲವೆ.:ಅವನ ಮಹತ್ತು-ಬೃಹತ್ತುಗಳ ಪ್ರಕಟಣೆಗೇ ತನ್ನೆಲ್ಲ ಶಕ್ತಿಮೀಸಲು. ಉಳಿದ ವ್ಯರ್ಥವರ್ಣನೆಗಳಿಂದೇನು ಪ್ರಯೋಜನವೆಂದು ಕವಿಯ ಮನೋಭಾವ. ಕಾವ್ಯವೆಂದಮೇಲೆ ಇಲ್ಲಿ ನವರಸಗಳೂ ಇರಬಹುದು. ಪ್ರಧಾನರಸ ಶಾಂತವೇ. ಉಳಿದುವು ಅದರ ಅಂಗರಸಗಳು·† ಮುಕ್ತಿಪಥಕ್ಕೆ ಯೋಗ್ಯವಸ್ತುವಾದ ಭಕ್ತಿರಸ ಕಾವ್ಯದ ಜೀವ* ಜೀವಾಳ. ವೀರಶೃಂಗಾರಗಳು ಪ್ರಧಾನವಾಗಿರಬೇಕೆಂಬ ನಿಯಮಗಳು ಅರ್ಥವಿಲ್ಲದವು. ಯಾವ ರಸವನ್ನೇ ಹೇಳಿ, ಆ ರಸಗಳೆಲ್ಲ ಭವಹರನನ್ನು ಹೊಗಳಬೇಕಲ್ಲದೆ

---

† ಪೊಸತಿದು ಕಾರ್ಯಮಿದುಂ ನವರಸಮುಳ್ಳದು " (೧–೯೧)

* ಭಕ್ತ್ಯಾಚಾರಮುಳ್ಳದು ಮುಕ್ತಿಪಥಕ್ಕಿರುವೆ ವಸ್ತು; ಭಕ್ತಿರಸಮುಳ್ಳಕಾವ್ಯಂ..." (೧–೧೨)

ಅನ್ಯರನ್ನು ಹೊಗಳಬಾರದು. ನಾನಂತೂ ಹಾಗೆ ಮಾಡುವುದಿಲ್ಲ. ಇಷ್ಟೇ ಅಲ್ಲ ಅಂಥ ಕವಿಗಳ ಹೆಸರನ್ನೂ ನನ್ನ ಕಾವ್ಯದಲ್ಲೆತ್ತಲಾರೆನೆಂದೇ ಕವಿಯ ಮನೀಷೆಯಿದ್ದ ಹಾಗೆ ತೋರುವುದು* ಈ ಪ್ರತಿಜ್ಞೆಗಳನ್ನು ಕಾವ್ಯದುದ್ದಕ್ಕೂ ಕವಿ ಈಡೇರಿಸಿ ಕೊಂಡಿದ್ದಾನೆ. ಚಂಪೂ ಕಾವ್ಯವಾದ್ದರಿಂದ ಚಂಪೂಕೃತಿಕಾರರ ತಂತ್ರ, ಸಂಪ್ರ ದಾಯಗಳಿಗೆ ಕವಿ ತಲೆಬಾಗಿರುವುದಂತೂ ನಿಶ್ಚಯ; ಉಳಿದ ಚಂಪೂಕಾರರಂತೆ ಪ್ರಸಂಗಗಳನ್ನು ಹರಿಬಿಡದೆ ಆ ತಂತ್ರದ ಮೇಲೆ ನಿಯಂತ್ರಣವಿಟ್ಟುಕೊಂಡು ತನ್ನ ಕಾವ್ಯದ ಮೂಲೋದ್ದೇಶ ಸಾಧನೆಯಲ್ಲಿ ಕವಿ ಕೃತಕೃತ್ಯನಾಗಿದ್ದಾನೆ. ಪ್ರಪಾಶಾಲೆ, ಕುಸುಮವಿಕ್ರಯ ಪಸರಗಳಲ್ಲಿ ಸಾಮಾನ್ಯವಾಗಿ ಎಲ್ಲ ಕವಿಗಳೂ ಶೃಂಗಾರಕ್ಕೆ ಸಂಬಂಧಿ ಸಿದ ಸ್ತ್ರೀಯರ ಲಲಿತಾವಯವಗಳ ಚೆಲುವು, ಅದಕ್ಕೆ ಮನಸೋಲುವ ಗಂಡಸರ ಚಿತ್ರಣ ಗಳನ್ನು ತರುವುದುಂಟು. ಇಂಥ ಸಂದರ್ಭಗಳನ್ನು ಕವಿ ತನ್ನ ಕಾವ್ಯದಲ್ಲಿ ತಂದರೂ ಅಲ್ಲಿಯೂ ಶೃಂಗಾರಕ್ಕೆ ಸಂಬಂಧಿಸಿದ ಮನೋವಿಕಾರದಿಂದನ್ಯವಾದ ಭಾವನಾವಿಶೇಷಕ್ಕೆ ಎಡೆಗೊಡುವ ಶುದ್ಧಿಯನ್ನು ಕಾಪಾಡಿಕೊಂಡಿದ್ದಾನೆನ್ನಬಹುದು. ಪ್ರಪಾಶಾಲೆಯ ಸ್ತ್ರೀಯರು ಸುರಲೋಕದ ಕನ್ನಿಕೆಯರು. ನರರಿಗೆ ಅಮೃತವನೆರೆದು ಅವರನ್ನು ರಕ್ಷಿಸಲೋಸುಗವೇ ನರರೂಪಿಂದ ಭೂಲೋಕಕ್ಕೆ ಬಂದು ಪ್ರಪಾಶಾಲೆಯಲ್ಲಿದ್ದರಂತೆ (೧-೮೧). ಕುಡಿಯುವ ಗಂಡಸರಾದರೋ 'ನಾಸಿಕ ತುದಿದೃಷ್ಟಿಗಳಿಂ ಉಸುರೆಡೆಯಾಟ ಗಳು ನಿಂತು ನಿಃಕಂಪನದಿಂದ ಒಸರ್ವಚಿದಮೃತವ ಸೇವಿಪ ಕುಶಲದ ಯತಿಯಂತೆ' ಅವರು ನೀರು ಕುಡಿಯುತ್ತಿದ್ದರು. (೧-೮೨). ಹೀಗೆ ವರ್ಣಿಸುವ ವರ್ಣನೆಯಲ್ಲಿ ಕವಿಯ ಮನೋಭಾವ ನಮಗೆ ಸ್ಪಷ್ಟವಾಗುತ್ತದೆ. ಇನ್ನಾವ ಕವಿಯಾದರೂ ಇಂಥ ಸಂದರ್ಭ ದಲ್ಲಿ ಶೃಂಗಾರ ಮೂಲವಾದ ಚೇಷ್ಟೆಯನ್ನು ಮಾಡದೇ ಬಿಡುತ್ತಿದ್ದಿಲ್ಲ. ಉಸಿರು ಬಂಧಿಸಿ, ನಾಸಿಕದ ತುದಿಯಲ್ಲಿ ದೃಷ್ಟಿಯಿಟ್ಟು, ಕಂಪನಗೊಳ್ಳದೆ ಧ್ಯಾನತತ್ಪರರಾಗ ಬೇಕೆಂಬುದು ಯೋಗಸಾಧನೆಯಲ್ಲಿ ಒಂದು ವಿಧಾನ. ಆ ವಿಧಾನವನ್ನು ಇಂಥ ಸಂದರ್ಭದಲ್ಲೂ ಹೇಳುವುದು ಚನ್ನವೀರನ ಮನೋಭಾವಕ್ಕೆ ತಕ್ಕ ಪ್ರತಿಮಾ ತಂತ್ರ ವಿಧಾನವೆನ್ನಬಹುದು. ಇದರಂತೆಯೇ ಅನೇಕ ಕಡೆಗಳಲ್ಲಿ ಸ್ತ್ರೀಯರ ಸಮೂಹಗಳ ವರ್ಣನೆಯ ಸಂದರ್ಭತರುವನಾದರೂ ಅದೆಲ್ಲ ಸಿದ್ಧಲಿಂಗೇಶನ ಸೇವೆ; ಭಕ್ತಿಜೀವಕ್ಕೆ ಮೀಸಲಾಗಿದೆಯಲ್ಲದೆ ಬೇರೆ ರೀತಿಯ ಭಾವನೆಗಳಿಗೆ ಎಡೆಗೊಡುವುದೇ ಇಲ್ಲ. ದೇವರಾಯಪಟ್ಟಣದಲ್ಲಿ ಸಿದ್ಧಲಿಂಗೇಶ್ವರನಿದ್ದಾಗ, ಹೊಳಲುಗುಂದದಲ್ಲಿದ್ದಾಗ ತಂಡ ತಂಡವಾಗಿ ಸ್ತ್ರೀಯರ ಗುಂಪು ಬಂದಿತೆಂದು ಹೇಳುತ್ತಾನೆ. ಆ ಎಲ್ಲ ಸಂದರ್ಭಗಳೂ ಸಿದ್ಧಲಿಂಗೇಶ್ವರನಲ್ಲಿ ಭಕ್ತಿಪ್ರಕಟನೆಮಾಡುವಷ್ಟಕ್ಕೆ ಸೀಮಿತವಾಗಿದೆ. ಹೀಗೆ ಶೃಂಗಾರದ ಬಗೆಗೆ ಕಾವ್ಯದಲ್ಲಿ ಕವಿ ಎಲ್ಲೂ ಅನಾದರತೋರಿ, ಶೃಂಗಾರ ಸಂದರ್ಭವನ್ನು ಭಕ್ತಿಯ

---

* 'ನವರಸಭಾವಾರ್ಥದೊಳಂ ಭವಹರನಂ ಪೊಗಳಲೊಲ್ಲದನ್ಯರ ಪೊಗಳುವ ಕವಿಗಳನೆನ್ನೀ ಕಾವ್ಯದೊಳು. ನೆನೆಯಲ್ಕೆ ಬರ್ಕುಮೇ....' (೧-೧೬)

ಉಡಿಗೆಯಿಂದಲೇ ಶೃಂಗಾರಗೊಳಿಸಿರುವುದು ಕವಿಯ ಮನೋಧರ್ಮವನ್ನು ಎತ್ತಿ ತೋರಿಸುವ ಒಂದು ಪ್ರಮುಖ ಅಂಶವಾಗಿದೆ.

## ಸಾಮಯಿಕ ತತ್ತ್ವಪಾಲನೆ

ಕವಿ ವೀರಶೈವ, ಅದರಲ್ಲೂ ವೀರವಿರಕ್ತ. ತನ್ನ ಸಮಯ ಧರ್ಮತತ್ತ್ವದ ಬಗೆಗೆ ಬಹು ಎಚ್ಚರಿಕೆಯಿಂದ ಕಾವ್ಯವನ್ನು ಬರೆದಿರುವುದು ಕಾವ್ಯದುದ್ದಕ್ಕೂ ನಮಗೆ ಸ್ಪಷ್ಟವಾಗಿ ಗೋಚರಿಸುತ್ತದೆ. ವೀರಶೈವದಲ್ಲಿ ಸ್ಥಾವರಲಿಂಗೋಪಾಸನೆಯಿಲ್ಲ; ಸಚೇತನ ವಸ್ತುವಾದ ಜಂಗಮವೇ ಪ್ರಾಧಾನ್ಯತೆ ಪಡೆದ ಮುಖ್ಯವ್ಯಕ್ತಿ. ಅವನು ಲಿಂಗಮುಖ ಲಿಂಗವಾದರೋ ಜಂಗಮಕ್ಕಾಗಲಿ, ಭಕ್ತನಿಗಾಗಲಿ, ಗುರುವಿಗಾಗಲಿ, ಸಂಬಂಧ ಕಲ್ಪಿಸುವ ಏಕಸೂತ್ರದ ಒಂದು ಆತ್ಮಚಿಚ್ಛಕ್ತಿಯ ಬಹಿರಂಗದ ಸಾಕಾರ. ಈ ರೀತಿಯ ಸಾಮಯಿಕ ಧರ್ಮ ಸಿದ್ಧಾಂತಾನುಯಾಯಿಗಳ ಉಪಾಸನೆಯಲ್ಲಿ ಸ್ಥಾವರಲಿಂಗಕ್ಕೆ ಸ್ಥಾನವೇಇಲ್ಲ. ಹಾಗಾದರೆ ವೀರಶೈವರ ಹತೋಟಿಯಲ್ಲಿ ಅನೇಕ ಶೈವಕ್ಷೇತ್ರಗಳು ಇವೆಯಲ್ಲಾ! ಎಂದು ಆಕ್ಷೇಪವೆತ್ತಬಹುದು. ಅದಕ್ಕೆ ವೀರಶೈವದಲ್ಲಿ ಉತ್ತರವಿದೆ. ಅದೊಂದು ಕಾಯಕ. ಶೈವಭಕ್ತಿಯಿಲ್ಲದಲ್ಲಿ ಶೈವಭಕ್ತಿಪ್ರಚಾರಸಾಧನ. ಶಿವಕ್ಷೇತ್ರ ಶಿವಲಿಂಗಗಳ ಮೂಲಕ ಶೈವಭಕ್ತಿಯ ಪ್ರಥಮಾಭ್ಯಾಸಮಾಡಿಸಿ ಅವನನ್ನು ವೀರಶೈವನನ್ನಾಗಿ ಪರಿವರ್ತಿಸುವ ಒಂದು ಕಾಯಕವೆನ್ನಬಹುದು. ಏಸಿದ್ದರೂ ಗುಡಿಯ ಶಿವಲಿಂಗ ಖಂಡಜ್ಞಾನದ್ಯೋತಕ; ದ್ವೈತಭಾವದ್ದು. ಇಷ್ಟಲಿಂಗ ಅಖಂಡಸಾಕ್ಷಾತ್ಕಾರ ಸಾಧನ; ಶಿವಾದ್ವೈತಬಾವದ್ದು. ಈ ಸಾಮಯಿಕ ಪ್ರಜ್ಞೆ ಚನ್ನವೀರ ಜಂಗಮನಲ್ಲಿ ಬಹುಜಾಣ್ಮೆಯಿಂದ ಪ್ರತಿಪಾದಿತವಾಗಿದೆ. ಮಹಾಜಂಗಮಮೂರ್ತಿಯಾದ ಸಿದ್ಧಲಿಂಗೇಶ್ವರನು ದೇಶಾಟನೆ ಮಾಡಿದುದು ದೇಶಮಧ್ಯದಲ್ಲಿರುವ ಶಿವಾಲಯಗಳಲ್ಲಿನ ಲಿಂಗಗಳ ಸಂದರ್ಶನಲಾಭಮಾಡಿಕೊಳ್ಳುವುದಕ್ಕಲ್ಲ; ಆ ಶಿವಲಿಂಗಗಳಿಗೆಲ್ಲ ತನ್ನ ದರ್ಶನ ಭಾಗ್ಯವನ್ನುಂಟುಮಾಡಲು ಮತ್ತು ಅವುಗಳಿಂದ ಸೇವೆ ಕೈಕೊಳ್ಳಲು ಮಾತ್ರ. ಈ ತತ್ತ್ವಪ್ರತಿಪಾದನೆಯ ಬೀಜ ನಮಗೆ ಅಳಿಲೇಶ್ವರ ಲಿಂಗವನ್ನು ಹರದರು ಸ್ಥಾಪಿಸಿದಲ್ಲಿಯೇ ನಿಕ್ಷಿಪ್ತಗೊಂಡಿರುವುದನ್ನು ಕಾಣಬಹುದಾಗಿದೆ.

ಹರದರು ಅಳಿಲೇಶ್ವರ ಲಿಂಗವನ್ನು ಹರದನಹಳ್ಳಿಯಲ್ಲಿ ಸ್ಥಾಪಿಸಿದ ಮೇಲೆ ಅಳಿಲೇಶ್ವರ ಲಿಂಗವು ಹರದರ ಕನಸಿನಲ್ಲಿ ಕಾಣಿಸಿಕೊಂಡು 'ತನಗೆ ಚರಪ್ರಸಾದವನುಪಾರವ ಮಾಡಿಸಲೋಸುಗಂ ಪುರಾತನಮತದಿಂದೆ ಜಂಗಮಕೆ ತೃಪ್ತಿಯನು ಮಾಡಿದಡೆನ್ನ ತೃಪ್ತಿಎಂದೆನುತ ಚರಕೆ ಮಠವಂ ಸದುಭಕ್ತಿಯೊಳು ಈವುದು ಎಂದು' (೨-೩) ಹೇಳುತ್ತಾನೆ. ಆಗ ಹರದರು ಅಳಿಲೇಶ್ವರನ ಮಾತನ್ನು ಒಪ್ಪಿ ಸಮಯಾಚಾರಕ್ಕೆ ಅವನ ಆಜ್ಞೆಯಂತೆಯೇ ಗೋಸಲೇಶ್ವರನನ್ನು ಅಲ್ಲಿ ಮಠಕಟ್ಟಿಸಿ ಇಡುತ್ತಾರೆ (೨-೬). ಇದೇ ಜಂಗಮಪ್ರಾಧಾನತೆಯ ಮುಖ್ಯ ತತ್ತ್ವದ, ವೀರಶೈವಸಮಯದ ತಿರುಳಾಗಿದೆ.

ಮುಂದೆ ಸ್ಥಾವರಲಿಂಗದ ಉದ್ದೇಶವನ್ನು ಕವಿ ಅಲ್ಲಗಳೆಯದಿದ್ದರೂ ಸ್ಥಾವರಲಿಂಗವೂ ಕೂಡ ಚರಲಿಂಗದ ಸೇವೆಗಾಗಿಯೇ ಎಂಬಂಶವನ್ನು ಕಾವ್ಯದುದ್ದಕ್ಕೂ ತತ್ತ್ವಮರ್ಮ ಹಾಳಾಗದಂತೆ ಕಾಪಾಡಿಕೊಂಡು ಬಂದಿರುವುದನ್ನು ಕಾಣುತ್ತೇವೆ.

ಸಿದ್ಧಲಿಂಗೇಶ್ವರನು ಪ್ರವಾಸ ಕೈಗೊಂಡಾಗಲೆಲ್ಲ, ಚರಲಿಂಗವೇ ಮೈದಾಳಿ ಬಂದು ಸೇವೆ ಮಾಡಿರುವುದನು ಕಾಣುತ್ತೇವೆ. ಒಂಬತ್ತು ದಿನಗಳಿಂದ ಪ್ರಸಾದವಿಲ್ಲದೆ ರೋಹಿಣಿಖಂಡದ ಶಿವಾಲಯದಲ್ಲಿ ಬೀಡುಬಿಟ್ಟದ್ದಾಗ ಇವನಿಗೆ ಪ್ರಸಾದದಿಂದ ತೃಪ್ತಿ ಪಡಿಸಲು ಆ ಶಿವಾಲಯದಲ್ಲಿದ್ದ ಕುಂಬಳೇಶ್ವರ ಶಿವಲಿಂಗವೇ ಚರಜಂಗಮ ವೇಷದಿಂದ ದೌತ್ಯವಹಿಸಿ ಬಂದು ವಂದಿಸಿ ಈಗಲೇ ಪ್ರಸಾದ ವ್ಯವಸ್ಥೆ ಮಾಡುತ್ತೇನೆಂದು ಹೇಳಿ ಆ ಊರಗೌಡನ ಕನಸಿನಲ್ಲಿ ಕಾಣಿಸಿಕೊಂಡು ಅವನಿಂದ ಪ್ರಸಾದ ತರಿಸಿಕೊಡುತ್ತಾನೆ. ಮಾಬಳೇಶ್ವರಲಿಂಗವು ಸಿದ್ಧಲಿಂಗೇಶ್ವರನನ್ನು ಪೂಜಾರಿಗಳು ತಿರಸ್ಕರಿಸಿದ್ದರಿಂದ ಮುಷ್ಕರವನ್ನೇ ಪ್ರಾರಂಭಿಸಿ ಅವನನ್ನು ಭಕ್ತಿಯಿಂದ ಕರೆದುಕೊಂಡು ಬಂದ ಮೇಲೆಯೇ ಪೂಜೆ ಕೈಗೊಳ್ಳುತ್ತಾನೆ ಉಳುವೆಯಲ್ಲಿದ್ದಾಗ ವೈಷ್ಣವನೊಬ್ಬನು ಸಿದ್ಧೇಶ್ವರನ ಮೇಲೆ ಅಭಿಚಾರ ಪ್ರಯೋಗಮಾಡಿ ಭೂತಗಳನ್ನು ಮೈಮೇಲೆ ಬಿಟ್ಟಾಗ ಅಲ್ಲಿನ ಶಿವ ಲಿಂಗವು ಐದುವರ್ಷದ ಜಂಗಮ ವಟುವಿನರೂಪ ಧರಿಸಿ ಬಂದು ಹೂಂಕರಿಸಿ ಓಡಿಸಿ, ಸಿದ್ಧೇಶನಲ್ಲಿಗೆ ಬಂದು ಸಂತೈಸಿ ಎಂದಿನಂತೆ ಲಿಂಗಾಕಾರವಾಗಿ ಕುಳಿತನು. ಗಾಳಿಪೂಜೆ ಬೆಟ್ಟದಲ್ಲಿ ಸಿದ್ಧೇಶ್ವರನು ಶಿವಯೋಗದಲ್ಲಿ ನಿರತನಾಗಿದ್ದಾಗ ಮಲ್ಲಿಕಾರ್ಜುನ ಲಿಂಗವು ಜಂಗಮವೇಷದಿಂದ ಬಂದು ಸಿದ್ಧೇಶನಿಗೆ ಪ್ರಸಾದ ತಂದಿತ್ತು ಅವನೊಡನೆ ತಾನೂ ಪ್ರಸಾದಸ್ವೀಕರಿಸಿದನು. ಕಗ್ಗೆರೆಯಲ್ಲಿದ್ದಾಗ ಬೇಡರು ಯತೀಶ್ವರನ ಸುಲಿಗೆ ಮಾಡಲು ಅವರು ವಾಸಮಾಡಿದ್ದ ಮನೆಗೆ ಮುತ್ತಿಗೆ ಹಾಕಲು ಶಿವನೇ ಘೋರ ಘಟಸರ್ಪವಾಗಿ ಬಂದು ಬೇಡರನ್ನೆಲ್ಲ ಹೆದರಿಸಿ ಓಡಿಸಿದನು. ಹೊಳಲುಗುಂದ ಗ್ರಾಮದಲ್ಲಿದ್ದಾಗ ಅಲ್ಲಿದ್ದ ಆದಿಶಕ್ತಿಯು ಬಂದು ಭಕ್ತಿಯಿಂದ ಸಿದ್ಧೇಶನನ್ನು ತನ್ನ ಮಂದಿರಕ್ಕೆ ಕರೆ ದೊಯ್ದು ಪಾದಪೂಜೆ ಮಾಡಿ ತೀರ್ಥ ಪ್ರಸಾದ ಸ್ವೀಕರಿಸಿದಳು. ಹೀಗೆಯೇ ಎಲ್ಲ ಕಡೆಗೂ ಚರಜಂಗಮಾಧಿಕ್ಯವನ್ನು ತೋರಿಸಿದ ಕವಿಯ ಜಾಣ್ಮೆ ವೀರಶೈವರಲ್ಲಿ ಜಂಗಮ ಕ್ಕಿರುವ ಪ್ರಾಧಾನ್ಯತೆಯನ್ನು ಎತ್ತಿಹಿಡಿಯುವಂತೆ ಮಾಡಿದೆ. ಸಿದ್ಧೇಶನು ಭಾರತದ ಸಮಸ್ತ ಶೈವಕ್ಷೇತ್ರಗಳಿಗೂ ಹೋಗಿ ಆ ಲಿಂಗಗಳಿಗೆಲ್ಲ ತನ್ನ ದರ್ಶನಕೊಟ್ಟು ಪಾವನ ಗೊಳಿಸಿದಂತೆ ಹೇಳಿರುವನಲ್ಲದೆ ತಾನು ಅವುಗಳ ದರ್ಶನ ತೆಗೆದುಕೊಂಡನೆಂದಲ್ಲ ಇದು ಅಪ್ಪಟ ವೀರಶೈವ ಸಮಯಾಚಾರದ ತಾತ್ತ್ವಿಕ ಹಿನ್ನೆಲೆಯನ್ನು ಕಾವ್ಯಮುಖದಲ್ಲಿ ಎತ್ತಿ ಹಿಡಿಯುವ ಸರಿಯಾದಮಾರ್ಗ. ವೀರಶೈವವು ಜಂಗಮಾಧಿಕ್ಯವನ್ನು ಹೇಳುವ ಒಂದು ಶೈವದ ಪ್ರಭೇದ. ಶೈವದಿಂದ ಇವನ್ನು ಬೇರ್ಪಡಿಸುವಲ್ಲಿ ಇದೂ ಒಂದು ಪ್ರಧಾನ ಅಂಶ. ಈ ದೃಷ್ಟಿಯಿಂದ ಚನ್ನವೀರ ಜಂಗಮನ ಷಟ್‌ಸ್ಥಲ ವಲ್ಲಭ ಗ್ರಂಥ ಉತ್ತಮಮಟ್ಟದ ವೀರಶೈವತತ್ತ್ವ ಪ್ರತಿಪಾದಕ ಗ್ರಂಥ. ಆದುದರಿಂದಲೇ ಏನೋ

ಕವಿ ಚರಿತ್ರೆಕಾರರು ಇದನ್ನು ವೀರಶೈವ ಸಿದ್ಧಾಂತ ಪ್ರತಿಪಾದಕ ಗ್ರಂಥವೆಂದಿದ್ದಾರೆ.* ಸಿದ್ಧಲಿಂಗ ಯತಿಯ ವಿಷಯಕವಾದ ಈ ಕಾವ್ಯವು ಒಂದು ದೃಷ್ಟಿಯಿಂದ ವೀರಶೈವ ಸಿದ್ಧಾಂತ ಪ್ರತಿಪಾದಕವೆನ್ನಲಡ್ಡಿಯೇನೂ ಬಾರದು. ಆದರೆ ವೀರಶೈವ ಸಿದ್ಧಾಂತ ವನ್ನೇ ಹೇಳುವ ಕಾವ್ಯವೆಂದೇನೂ ಹೇಳಲಾಗುವುದಿಲ್ಲ. ಒಟ್ಟಿನಲ್ಲಿ ಕವಿ ಶಿವಾದ್ವೈತ ದರ್ಶನ ಜ್ಞಾನದಲ್ಲಿ, ಶಿವಯೋಗದ ಪ್ರಕ್ರಿಯಾವಿಧಾನದಲ್ಲೂ ಉತ್ತಮ ಪರಿಣತಿ ಪಡೆದ ಮನುಷ್ಯನಾಗಿರಬೇಕೆಂಬುದರಲ್ಲೇನೂ ಅನುಮಾನವಿಲ್ಲ. ತನ್ನ ಈ ದರ್ಶನ ಮತ್ತು ಸ್ವಾನುಭಾವಗಳನ್ನೆಲ್ಲ ಚಂಪೂಮಾರ್ಗದ ಕಾವ್ಯವಿಧಾನದಲ್ಲಿಯೇ ಹೇಳಬೇಕೆಂಬ ತನ್ನ ಒಂದು ಉತ್ಕಟಾಭಿಲಾಷೆಯನ್ನು ನೆರವೇರಿಸಿಕೊಂಡಿದ್ದಾನೆ. ಆದರೆ ಆ ಮಾರ್ಗ ಇವನ ಅಭಿಲಾಷೆಯ ತೀವ್ರತೆಯಷ್ಟು ಎತ್ತರದ ಮಟ್ಟಕ್ಕೆ ಹೋಗದಿರುವುದನ್ನು ಕಾವ್ಯದುದ್ದಕ್ಕು ಕಾಣುವುದಂತೂ ನಿಜ.

ಸಹಗಮನ ಪದ್ಧತಿಯನ್ನು ಕವಿ ಸ್ಪಷ್ಟವಾಗಿ ತಿರಸ್ಕಾರಮಾಡಿದ್ದಾನೆ. ೮-೧೩ ನೆಯ ಪದ್ಯದನಂತರ ಬರುವ ಗದ್ಯದಲ್ಲಿ ಈ ಬಗೆಗೆ ಕವಿ ವೀರಶೈವ ಸ್ತ್ರೀ ಪತಿ ಸತ್ತಾಗ ಅಗ್ನಿಪ್ರವೇಶ ಮಾಡಬಾರದೆಂದು ತರ್ಕಬದ್ಧವಾಗಿ ಪ್ರತಿಪಾದನೆ ಮಾಡಿದುದು ಕಂಡುಬರುತ್ತದೆ. ಹುಲಿಯೂರಿನಲ್ಲಿ ಸಿದ್ಧೇಶನಿದ್ದಾಗ, ಗಂಡ ಸತ್ತನೆಂದು ತಿಳಿದ ಸತಿ ಚಿತೆಯೇರಲು ಹೊರಟಾಗ ಅವಳನ್ನು ಚಿತೆಗೇರಿಸುವುದರಿಂದ ವಿಮುಖಗೊಳಿಸಿದು ದರ ಹಿಂದೆ ಪವಾಡದ ಒಂದು ತೆರೆಯಿದ್ದರೂ ಸಹಗಮನ ಪದ್ಧತಿಯ ಸ್ಪಷ್ಟ ತಿರಸ್ಕಾರ ವೆಂಬುದನ್ನು ಮರೆಯಲಾಗದು.

## ಪೂರ್ವಕವಿ ಋಣ

ಈ ಕವಿಯ ಚಂಪೂಶೈಲಿಯ ಕಾವ್ಯದ ಮೇಲೆ ಮುಖ್ಯವಾಗಿ ಹರಿಹರನ ಪ್ರಭಾವ ಹೆಚ್ಚಾಗಿರುವುದು ಕಂಡುಬರುವುದು. ಅನೇಕ ಪದ್ಯಗಳು ಹರಿಹರನ ಗಿರಿಜಾಕಲ್ಯಾಣದ ಪದ್ಯಗಳ ಅಲ್ಪಸ್ವಲ್ಪ ಬದಲಾವಣೆಯಿಂದ ಇವನ ಕಾವ್ಯದಲ್ಲಿ ಪ್ರಯೋಗವಾಗಿರುವುದನ್ನು ಕಾಣುತ್ತೇವೆ. ಇವನು ಹೊಗಳಿರುವ ಕವಿಗಳು, ಮಾಯಿದೇವ, ಶಂಕರದೇವ, ಕೆರೆಯ ಪದ್ಮರಸ, ಕೇಶಿರಾಜ, ಪಾಲ್ಕುರಿಕೆ ಸೋಮನಾಥ, ಹರಿಹರ, ಕುಲ್ಮಠದ ಪ್ರಭುದೇವ, ಜಕ್ಕಣ್ಣ ಸಮಾಧಿಸೋಮ–ಇಷ್ಟೇ ಜನ. ಇವರನ್ನುಳಿದು ಇನ್ನಾವ ಕವಿ ಗಳ ಹೆಸರನ್ನೂ ಕವಿ ಹೇಳಿಲ್ಲ. ಈ ಎಲ್ಲರ ಕಾವ್ಯಗಳನ್ನು ಕವಿ ನೋಡಿರುವುದಂತೂ ಸಿದ್ಧ ವಿಷಯ. ಆದರೆ ಹರಿಹರನ ಗಿರಿಜಾಕಲ್ಯಾಣವೇ ಇವನ ಷಟ್‌ಸ್ಥಲ ವಲ್ಲಭದ ಗದ್ಯಪದ್ಯಗಳೆರಡರ ಮೇಲೂ ಅತ್ಯಂತ ಪ್ರಭಾವಬೀರಿದ ಗ್ರಂಥವೆಂದು ಹೇಳಬಹುದು.

† ಕವಿಚರಿತೆ ಭಾ. III, ತಿದ್ದಿದ ದ್ವಿತೀಯ ಮುದ್ರಣ ಅನು–ಪು. 5.

ಪ್ರಥಮತಃ ಕವಿ ಬಳಸಿರುವ ಎರಡು ಮಂಗಲ ಪದ್ಯಗಳೇ ಗಿರಿಜಾ ಕಲ್ಯಾಣದ ಮೊದಲ ಪದ್ಯದ ಅಲ್ಪಸ್ವಲ್ಪ ಬದಲಾವಣೆಯ ಪದ್ಯಗಳು. ಉದಾಹರಣೆಗೆ ಕೆಲವು ಹೋಲಿಕೆಗಳನ್ನು ಗಮನಿಸಬಹುದು.

ಷಟ್‌ಸ್ಥಲವಲ್ಲಭ :

ಶ್ರೀ ಮಚ್ಛೈಲೇಂದ್ರಪುತ್ರೀಮುಖ ಸರಸಿಜ ವಾಸಂತ ಹೇರಂಬತಾತಂ
ಸೋಮಂ ಶೈವಾಗಮಾಮ್ನಾಯನುತ ಮಹಿಮಧಾಮಂ ಮಹಾದೇವಶಂಭುಂ
ಹೈಮಾದ್ರೀಶಂ ವಿರೂಪಾಕ್ಷನ (ಭವನನಘಂ ಈಶ) ನಿಸ್ಸೀಮಧಾಮಂ
ರಾಮಂಭೂತೇಶ ರಕ್ಷಿಕ್ಕನವರತ ಶಿವಾದ್ವೈತವಿತ್ತೈನ್ನುವಂ ನೀಂ (೧–೧)

ಶ್ರೀಮತ್ ಹೈಮಾದ್ರಿಕನ್ಯಾಮುಖಮುರುತರ ಲಾವಣ್ಯವಾರಾಸಿ ಚಂದ್ರಂ
ನಾಮಾದಿಸ್ತುತ್ಯನಾಮಂ ಶರಣಜನಲಲಾಮಂ ಪರಬ್ರಹ್ಮಧಾಮಂ
ವ್ಯೋಮಾತ್ಮಾರ್ಕಕ್ಷ್ಮಾನಿಲಾಗ್ನೇಂದುರುತರಣಿಜಲವೆಂಬೆಂಟಕ್ಕಂ ಕಾರಣಾಂಗಂ
ಪ್ರೇಮಂ ಕೈಮಿಕ್ಕುಮೆನ್ನಂ ಸಲಹು ಗಿರಿಶ ಭೂತೇಶನಾನಂದದಿಂದಂ (೧-೨)

ಗಿರಿಜಾ ಕಲ್ಯಾಣ :

ಶ್ರೀ ಮಚ್ಛೈಲೇಂದ್ರಪುತ್ರೀ ಗುರುತರ ಸುರತಕ್ಷೀರವಾರಾಸಿ ಚಂದ್ರಂ
ವ್ಯೋಮಾರ್ಕೇಂದುಕ್ಷಮಾತ್ಮಾನಲ ಜಲಪವಮಾನಾಷ್ಟ ಮೂರ್ತಿಪ್ರಸಿದ್ಧಂ
ಪ್ರೇಮಂಬೆತ್ತೀಗೆ ಸದ್ಭಕ್ತಿಯನೆ ಮಗಮುರಾನೀಕ ಮಾಣಿಕ್ಯಮೌಳಿ
ಸ್ತೋಮಾಂಘ್ರಿಜ್ಯೋತಿ ಪಂಪಾಪುರದರಸ ವಿರೂಪಾಕ್ಷನಾನಂದದಿಂದಂ
(೧–೧)

–ಷಟ್‌ಸ್ಥಲ ವಲ್ಲಭದ ಎರಡು ಮಂಗಲ ಪದ್ಯಗಳು ಹರಿಹರನ ಮೊದಲಪದ್ಯದ ಎಲ್ಲ ಅಂಶಗಳನ್ನು ಒಳಗೊಂಡು ಹೇಗೆ ಮಾರ್ಪಾಟುಗೊಂಡಿರುವುವೆಂಬುದನ್ನೂ, ಹರಿಹರ ಒಂದು ಪದ್ಯದಿಂದ ಸಾಧಿಸಿದ ಅರ್ಥವ್ಯಾಪ್ತಿಯನ್ನು ಒಂದೇ ಪದ್ಯದಲ್ಲಿ ಕವಿ ತರಲು ಅಸಮರ್ಥತೆ ತೋರಿರುವುದನ್ನು ಏಕಕಾಲದಲ್ಲಿಯೇ ನಾವು ನೋಡಬಹುದು. ಹೈಮಾದ್ರೀಶನಾದ ಹಂಪೆಯ ವಿರೂಪಾಕ್ಷನ ಪ್ರಭಾವ ಈ ಕವಿಯಮೇಲೂ ಆಗಿರಬಹುದು ಅಥವಾ ಇವನ ಸ್ಫೂರ್ತಿಗೆ ಹಂಪೆ ಕಾರಣವಾಗಿರಬಹುದು.

ಷಟ್‌ಸ್ಥಲ ವಲ್ಲಭ :

ಕಂದಂಗಳ್ ಮೃದುವಾಕ್ಯದ
ವೃಂದಗಳು (ಮಿಮತನಿಯರಸಮುದುಕ್ಕುವ ಮಾ-
ಕಂದಂಗಳ್) ಲಿಂಗಾಂಗದ
ಬಂಧಂಗಳು ಸೊಗಯಿಸಿಪುವೀಮತ್ಕೃತಿಯೊಳ್ (೧–೯)

ಪೊಸತಿದು ಕಾವ್ಯಮಿದುಂ ನವ
ರಸಮುಳ್ಳದನರ್ಘ್ಯವಸ್ತುವೆಂಬೀ ಕ್ರಮದಿಂ
ರಸವತ್ಕಾವ್ಯಂ ತಾನಿದು
ಜಸವಡೆದುದು ಬ್ರಹ್ಮದೇವ ನೃಪಸಭೆಗಳೊಳಂ (೧–೧೧)

ಗಿರಿಜಾ ಕಲ್ಯಾಣ :

ಕಂದಂಗಳ ವೃತಲತಿಕಾ-
ಕಂದಂಗಳನೂನವಾಕ್ಯ ಫಲವಿಲಸನ್ಮಾ
ಕಂದಂಗಳ್ ತನಿರಸದು-
ಕ್ಕಂದಗಳ್ ಸೊಗಯಿಸಿರ್ಪುವೀಮತ್ಕೃತಿಯೊಳ್ (೧–೧೨)

ಪೊಸತಿದು ಪಾವನಮಿದು ರಂ
ಜಿಸುವ ಮಹಾನರ್ಘ್ಯಮಿಂತಿದೆಂಬೀ ಜಸದೊಳ್
ರಸವತ್ಕಾವ್ಯಂ ತಾಂ ರಾ-
ಜಸಭೆ ಬ್ರಹ್ಮಸಭೆ ದೇವಸಭೆಗೆಸೆದಿರ್ಕುಂ (೧–೧೪)

–ಹೀಗೆ ಅನೇಕ ಪದ್ಯಗಳ ತೌಲನಿಕ ಪಟ್ಟಿಯನ್ನು ಕೊಡಬಹುದು. ಹರಿಹರ ಕವಿಯ ನೂರಾರು ಪದ್ಯಗಳ ಈ ರೀತಿಯ ಛಾಯೆ ಷಟ್‌ಸ್ಥಲ ವಲ್ಲಭದಲ್ಲಿ ಕಾಣುತ್ತೇವೆ. ರಾಘವಾಂಕನ ಪ್ರಭಾವವೂ ಆಗಿದೆ. ವಚನಕಾರರಲ್ಲಿ ಮುಖ್ಯವಾಗಿ ಬಸವಣ್ಣನವರ ವಚನಗಳ ಕೆಲವು ಸಾಲುಗಳೂ ಅಲ್ಲಲ್ಲಿ ಪ್ರಯೋಗಗಳಾಗಿರುವುದು ಕಂಡುಬರುತ್ತದೆ. ಮುಖ್ಯವಾಗಿ ಹರಿಹರನು ಉದಿತ ಮಾರ್ಗಮಾರ್ಗದ ಬಗೆಗೆ ಕವಿಗೆ ಅಪಾರ ಗೌರವ ವಿದ್ದರೂ ಅವನ ಕಾವ್ಯನಿರ್ಮಾಣ ಶಕ್ತಿಯ ಶುದ್ಧಸಿದ್ಧಿಗಳು ದೊರೆಕೊಂಡಿಲ್ಲ. ಶಕ್ತಿ ಸಂಚಯನಗೊಂಡು ಬಂದು ಕಾವ್ಯಧರ್ಮದಲ್ಲಿ ಅಭಿವ್ಯಕ್ತಿಗೊಂಡಿಲ್ಲ. ಅಂತೆಯೇ ಮಾರ್ಗ ಕಾವ್ಯದ ನಿರ್ಮಿತಿಯ ಯಶಸ್ಸಿಗೆ ಕವಿ ಪಕ್ಕಾಗಲಿಲ್ಲವೆನ್ನಬಹುದಾಗಿದೆ. ಆದರೆ ಆ ಮಾರ್ಗದ ಬಗೆಗೆ ಅಪಾರ ಗೌರವಿದೆಯೆಂಬಷ್ಟೆ ಹೇಳಬಹುದು. ಆಡುಗನ್ನಡ ಭಾಷೆಯನ್ನು ಆದಷ್ಟು ಉಪಯೋಗಿಸಿ ಚಂಪೂಕಾವ್ಯವನ್ನು ಬರೆಯಬಹುದೆಂಬುದಕ್ಕೆ ಷಟ್‌ಸ್ಥಲ ವಲ್ಲಭ ಒಂದು ನಿದರ್ಶನವಾಗಿ ನಿಲ್ಲಬಹುದು.

## ೪. ಈ ಕೃತಿಯಲ್ಲಿ ಚಿತ್ರಿತವಾಗಿರುವ ಪವಾಡಗಳು

1. ರೋಹಿಣೀಖೇಡವೆಂಬ ಪಟ್ಟಣದಲ್ಲಿನ ಕುಂಬಳೇಶ್ವರ ಶಿವಾಲಯದಲ್ಲಿ ಒಂಬತ್ತು ದಿವಸಗಳಿಂದ ಉಪವಾಸ ಮಲಗಿರ್ದ ಸಮಯದಲ್ಲಿ ಕುಂಬಳೇಶ್ವರನು ಆ ಊರ ಗೌಡ ಮತ್ತು ಆತನ ಹೆಂಡತಿಯ ಕನಸಿನಲ್ಲಿ ಕಾಣಿಸಿಕೊಂಡು ಪ್ರಸಾದವನ್ನು ಸಿದ್ಧಲಿಂಗೇಶ್ವರನಿಗೆ ಕೊಡುವಂತೆ ಮಾಡಿದುದು.

2. ಮಹಬಳೇಶ್ವರ ಲಿಂಗಕ್ಕೆ ತಮ್ಮ ದರ್ಶನವನ್ನಿತ್ತಾಗ ಪೂಜಾರಿಗಳು ದೇವಾಲಯವು ಅಪವಿತ್ರವಾಯಿತೆಂದು ಶುದ್ಧೀಕರಣ ಕಾರ್ಯದಲ್ಲಿ ತೊಡಗಿದಾಗ ಶಿವನು ಆ ಪೂಜಾರಿಗಳಿಂದ ಪೂಜೆ ಕೈಗೊಳ್ಳದೆ ಸಿದ್ಧಲಿಂಗೇಶನನ್ನು ಕರೆತನ್ನಿರೆಂದು ಹೇಳಿಸಿದುದು, ಆದರಂತೆ ಪೂಜಾರಿಗಳು ಸಿದ್ಧಲಿಂಗೇಶನಲ್ಲಿ ಕ್ಷಮೆ ಕೇಳಿ ಕರೆತಂದು ದೇವಾಲಯವನ್ನು ಹೊಗಿಸಿದುದು, ಮಹಾಬಳೇಶ್ವರನಿಂದ ಒಂದು ತಿಂಗಳು ಪೂಜೆಯನ್ನು ಕೈಕೊಂಡುದು.

3. ಉಳುವೆಯ ಮಹಾಮನೆಯಲ್ಲಿರುವಾಗ ವೈಷ್ಣವನೊಡನೆ ವಾದಮಾಡಿ ವಿಷ್ಣುಪಾದದಿಂದ ಗಂಗೆಯುದ್ಭವವಾಗಿರುವಳೆಂಬ ಆ ವೈಷ್ಣವನ ವಾದವನ್ನು ಅಲ್ಲಗಳೆದುದು. ವೈಷ್ಣವನು ಸಿದ್ಧಲಿಂಗೇಶ್ವರನಮೇಲೆ ಭೂತಗಳನ್ನು ಬಿಡಲು ಶಿವನು ಐದು ವರ್ಷದ ಜಂಗಮ ಶಿಶುವೇಷ ಧರಿಸಿ ಬಂದು ಭೂತಗಳನ್ನು ಓಡಿಸಿದುದು.

4. ಕೆಳಕೊಂಕಣದ ದೊಪ್ಪೇಶ್ವರ ಗ್ರಾಮದಲ್ಲಿ ಭೈರವಸಿದ್ಧರು ವಾದಕ್ಕೆಳೆದು ಸಿದ್ಧೇಶ್ವರನ ಮೇಲೆ ಗತಿಸ್ತಂಭ ವಾಚ್ಯಸ್ತಂಭಾದಿ ಅಭಿಚಾರ ಮಂತ್ರ ಪ್ರಯೋಗಮಾಡಲು ಆ ಮಂತ್ರಗಳು ಹಿಂತಿರುಗಿ ಭೈರವಸಿದ್ಧರನ್ನೇ ಕಾಡತೊಡಗಿದಾಗ ಅವರು ಕ್ಷಮೆ ಕೇಳಿದುದು.

5. ಕಾರ್ಕಳದಲ್ಲಿ ಜೈನರಿಂದ ಸನ್ಮಾನ ಪಡೆದುದು.

6. ಗಾಳಿಪೂಜೆ ಬೆಟ್ಟದಲ್ಲಿ ಮಲ್ಲಿಕಾರ್ಜುನ ಲಿಂಗವು ಜಂಗಮವೇಷ ಧರಿಸಿ ಪ್ರಸಾದವನ್ನು ತಂದು ಸಿದ್ಧೇಶ್ವರನಿಗಿತ್ತು ತೃಪ್ತಿಪಡಿಸಿದುದು.

7. ಕಗ್ಗೆರೆಗೆ ಬಂದು ಆ ಊರನ್ನು ಬೇಡರು ಮುತ್ತುವರೆಂದು ಊರ ಗೌಡನಿಗೆ ಭವಿಷ್ಯ ನುಡಿದುದು.

8. ಕಗ್ಗೆರೆಯಲ್ಲಿ ಆರುವರೆ ತಿಂಗಳು ಶಿವಯೋಗಸ್ಥಿತಿಯಲ್ಲಿ ಕುಳಿತುದು, ಅವರ ಮೇಲೆ ಹುತ್ತ ಬೆಳೆದುದು. ಚಿತ್‌ಜ್ವಾಲೆಯಿಂದ ಶಿರಸ್ಸು ಹಿಸಿದು ಗುಳಿಬಿದ್ದುದು.

9. ಕಗ್ಗೆರೆಯಲ್ಲಿದ್ದಾಗ ಯತಿಗೆ ಭಕ್ತರು ಕೊಟ್ಟ ಕಾಣಿಕೆ ದ್ರವ್ಯವನ್ನು ಸುಲಿಯಲು ಬೇಡರು ರಾತ್ರಿ ಅವರಿದ್ದ ಗೃಹಕ್ಕೆ ಮುತ್ತಿಗೆ ಹಾಕಿದುದು, ಶಿವನು ಘಟಸರ್ಪ ರೂಪದಲ್ಲಿ ಅವನ್ನೆಲ್ಲ ಹೆದರಿಸಿ ಕಳಿಸಿದುದು, ಅವರಿಗೆಲ್ಲ ಮಂಕು ಕವಿಯಲು ಬಂದು ಸಿದ್ಧೇಶನಲ್ಲಿ ಕ್ಷಮೆ ಕೇಳಿದುದು, ಅವರು ಮೊದಲಿನಂತಾದುದು.

10. ಎಡೆಯೂರಿನಲ್ಲಿದ್ದಾಗ ಬೇಸಿಗೆಯ ಪರಿಣಾಮವಾಗಿ ಎಲ್ಲೆಲ್ಲೂ ನೀರಿಲ್ಲದಂತೆ ಆಯಿತು. ವಿಷಯವನ್ನು ಸಿದ್ಧೇಶನಿಗೆ ಅರಿಕೆ ಮಾಡಕೊಳ್ಳಲು, ತೊರೆ ತುಂಬಿ ಬರುವುದೆಂದು ಹೇಳಿದುದು, ಆದರಂತೆ ತೊರೆ ತುಂಬಿಬಂದು ಎಲ್ಲರ ದಾಹವನು ನೀಗಿದುದು.

11. ಹೊಳಲುಗುಂದ ಗ್ರಾಮದಲ್ಲಿರುವ ಮಾಯಾದೇವಿಯ ಗುಡಿಯ ಹತ್ತಿರದ ಹೆಬ್ಬಂಡೆಯ ಮೇಲೆ ಕುಳಿತಾಗ ಅತಿ ಭಯಂಕರವಾದ ಮಳೆಯ ಸೂಚನೆ ತಲೆದೋರಲು ದೇವಿಯು ಸ್ತ್ರೀರೂಪ ಧರಿಸಿ ತನ್ನ ಮಂದಿರದೊಳಗೆ ಕರೆದೊಯ್ದು ಪಾದಾರ್ಚನೆಮಾಡಿ ಪಾದೋದಕ ಧರಿಸಿದುದು.

12. ನಾಗಸಮುದ್ರದಲ್ಲಿ ಸಿದ್ಧೇಶನಿರುವಾಗ ಭಯಂಕರ ಮಳೆಗಾಲ ಪ್ರಾರಂಭ. ಆಗ ಕಲ್ಲಿನಾಥನ ದೇವಾಲಯದ ಬೀಗಮುದ್ರೆ ತನ್ನಿಂದ ತಾನೇ ತೆಗೆದು ಸಿದ್ಧೇಶ್ವರನನ್ನು ಆ ಕಲ್ಲಿನಾಥ ಬರಮಾಡಿಕೊಂಡುದು.

13. ಮಂಗಲವೆಂಬ ಊರಿನಿಂದ ಅದರ ಪಕ್ಕದ ಹಳ್ಳಿಗೆ ಸಿದ್ಧೇಶನು ಹೋಗುವಾಗ ದಾರಿಯಲ್ಲಿ ತುಂಬಿ ಹರಿಯುತ್ತಿದ್ದ ನದಿ ಸಿದ್ಧೇಶನಿಗೆ ದಾರಿ ಮಾಡಿಕೊಟ್ಟದು.

14. ಹುಲಿಯೂರಿನಲ್ಲಿ ಜನಕ್ಕೆ ಬಂದಿದ್ದ ಮಾಹೇಶ್ವರಜ್ವರವೆಂಬ ಕಾಯಿಲೆಯು ಸಿದ್ಧೇಶನು ಆ ಊರಿಗೆ ಪ್ರವೇಶಮಾಡಿದುದರ ಪರಿಣಾಮವಾಗಿ ಹೊರಟು ಹೋದುದು.

15. ಹುಲಿಯೂರಿಗೆ ಹೋಗುವಾಗ ದಾರಿಯಲ್ಲಿನ ಘೋರಾರಣ್ಯದಲ್ಲಿ ಶಿವನು ಬೇಡರ ವೇಷದಿಂದ ಬಂದು ಇವರನ್ನು ಸುಲಿಯಲು ಯತ್ನಿಸಿ ಇವರಿಂದ ಪಡೆದ ಎಲ್ಲ ವಸ್ತುಗಳನ್ನು ಅವರಿಗೇ ಭಕ್ತಿಯಿಂದ ಅರ್ಪಿಸಿ ಮಾಯವಾಗಿಹೋದುದು.

16. ಹುಲಿಯೂರಿನಲ್ಲಿದ್ದಾಗ ಸಿದ್ಧೇಶನನ್ನು ನೋಡಲಿಕ್ಕೆ ಬಂದ ಸ್ತ್ರೀಸಮೂಹದಲ್ಲಿ ಒಬ್ಬಳ ಮುತ್ತಿನ ಮೂಗುತಿಯನ್ನು ಕದ್ದ ಇನ್ನೊಬ್ಬ ಸ್ತ್ರೀ ತಾನು ಕದ್ದಿಲ್ಲವೆಂದು ಸಿದ್ಧೇಶನ ಮುಂದೆ ಬಲಗೈಯೆತ್ತಿ ಆಣೆಯಿಕ್ಕಲು ಎತ್ತಿದ ಕೈ ಹಾಗೆಯೇ ನಿಂತುದು. ಕದ್ದ ಮೂಗುತಿಯನ್ನು ಮರಳಿಕೊಟ್ಟಾಗ ಮೊದಲಿನಂತೆ ಕೈಯಾದುದು.

17. ಹುಲಿಯೂರಿನಲ್ಲಿದ್ದಾಗ ಒಂದು ದಿನ ಓರ್ವ ಸ್ತ್ರೀ ತನ್ನ ಗಂಡ ಯುದ್ಧದಲ್ಲಿ ಸತ್ತುದನ್ನು ಕೇಳಿ ಚಿತೆಗೆಬಿದ್ದು ಪ್ರಾಣಬಿಡಲು ತೆರಳುವಾಗ ಅವಳಿಗೆ ಸಿದ್ಧಲಿಂಗನು ಇನ್ನು ಮೂರುದಿನದಲ್ಲಿ ನಿನ್ನ ಗಂಡ ಬರುತ್ತಾನೆಂದು ಭವಿಷ್ಯ ನುಡಿದುದು, ಅದರಂತೆ ಅವಳ ಗಂಡ ಬಂದುದು.

18. ಬಂಡಿಹಳ್ಳಿಗೆ ಬರುತ್ತಿದ್ದಾಗ ಕ್ರೂರವಾದ ಸರ್ಪವೊಂದು ಸತ್ತುಬಿದ್ದಿರಲಾಗಿ, ಅದರ ಹೆಡೆಯ ಮೇಲೆ ಸಿದ್ಧಲಿಂಗೇಶನು ಪಾದವಿಟ್ಟೊಡನೆ ಅದಕ್ಕೆ ಜೀವಬಂದು ಭೋರ್ಗರೆಯಿತು. ಆ ಹಾವಿಗೆ ಇನ್ನುಮೇಲೆ ಯಾರನ್ನೂ ಕಚ್ಚಬೇಡ, ದೂರದಲ್ಲಿ ಯಾರಿಗೂ ಕಾಣದಂತಿದ್ದು ಬದುಕಿಕೋ ಹೋಗೆಂದು ಹೇಳಿ ಕಳಿಸಿಕೊಟ್ಟುದು.

19. ಬಂಡಿಹಳ್ಳಿಯಲ್ಲಿದ್ದಾಗ ಆ ಊರಿನ ಒಂದು ಮನೆಗೆ ಬೆಂಕಿಬಿದ್ದು ಸುಡುತ್ತಿರುವಾಗ ಅಲ್ಲಿ ಸತ್ತ ಬೆಕ್ಕಿನ ಮರಿಗಳಿಗಾಗಿ ಅಳುತ್ತಿದ್ದ ತಾಯಿ ಬೆಕ್ಕನ್ನು ಕಂಡು ಸತ್ತುಹೋದ ಮರಿಗಳು ಬದುಕಿ ಬರುವಂತೆ ಮಾಡಿದುದು.

20. ಹೆಬ್ಬೂರಿನಲ್ಲಿದ್ದ ಕಲ್ಲುಬಸವನ ಎದುರಿಗೆ ಓರ್ವ ಹೆಣ್ಣುಮಗಳು ತನಗೆ ಸಿದ್ಧೇಶನು ಕೊಟ್ಟ ಪ್ರಸಾದವನ್ನು ಇಟ್ಟು ಮುಖಮಾರ್ಜನೆಗೆ ತೆರಳಿದಾಗ ಕಲ್ಲುಬಸವನು ಆ ಪ್ರಸಾದವನ್ನು ತಿಂದು ಪುನಃ ಕಲ್ಲಾಗಿಬಿಟ್ಟುದು.

21. ಹೆಬ್ಬೂರಿನಲ್ಲಿ ಲಿಂಗಪ್ಪನೆಂಬುವನ ಹೆಂಡತಿ ಸಿದ್ಧಲಿಂಗೇಶ್ವರನ ಆರೋಗಣೆಗೆಂದು ತಂದಿದ್ದ ಬದನೇಕಾಯಿಯಲ್ಲಿ ಒಂದು ಕಾಯಿಕದ್ದು ತಿನ್ನಲು ಸುಡಹೋದುದು. ಅದು ಬೇಯದೆ ಇದ್ದಾಗ ಸಿದ್ಧೇಶನಲ್ಲಿ ಕ್ಷಮೆ ಕೇಳಿದುದು. ಸಿದ್ಧೇಶನು ಇನ್ನು ಮೇಲೆ ಬೇಯುವುದೆಂದೂ ಅದನ್ನು ತಿಂದು ಸಂತಾನ ಪಡೆ ಎಂದೂ ಹೇಳಿದುದು. ಅದರಂತೆ ಅವಳು ಸಂತಾನಭಾಗ್ಯ ಪಡೆದುದು.

22. ಗೂಳೂರಿನಲ್ಲಿ ಒಬ್ಬ ಬಡಭಕ್ತ ಸಿದ್ಧೇಶನನ್ನು ತನ್ನ ಮನೆಗೆ ಕರೆದೊಯ್ದು ಪೂಜೆ ಪ್ರಸಾದಕ್ಕೆ ಸಿದ್ಧಪಡಿಸಿದುದು, ಸಿದ್ಧೇಶನ ಪರಿವಾರಕ್ಕೆಲ್ಲ ಮನೆಯಲ್ಲಿ ತಟ್ಟೆಗಳ ಅಭಾವವಾಗಿದ್ದಾಗ ತಟ್ಟೆಗಳನ್ನು ತರಲು ಮನೆ ಮನೆಗಳಲ್ಲಿ ಕೇಳಲು ಆ ಮನೆಯವರು "ಇಲ್ಲ" ಎಂದು ಕದವಿಕ್ಕಿಕೊಳ್ಳಲು, ಆ ಬಡಭಕ್ತನು ನಡೆದ ಸಂಗತಿಯನ್ನು ಹೇಳಿದನು. ಸಿದ್ಧಲಿಂಗನು ಮತ್ತೊಮ್ಮೆ ಕದದ ಒತ್ತಿಗೆ ನಿಂತು ಕೇಳು ಎನ್ನುವನು. ಭಕ್ತನು ಹಾಗೆಯೇ ಮಾಡಿದನು. ಬಾಗಿಲುಗಳು ತಾವಾಗಿಯೇ ತೆರೆದುವು. ಆ ಮನೆಯವರು ನಾಚಿಕೊಂಡು ಪಾತ್ರೆಗಳನ್ನು ಕೊಟ್ಟುದು, ಕೊಡದಿದ್ದ ಸ್ತ್ರೀಯೊಬ್ಬಳ ಮನೆಯ ಪಾತ್ರೆಗಳು ಮಾಯವಾದುದು.

23. ಗೂಳೂರಿನಲ್ಲಿ ಸಿದ್ಧೇಶನು ಶಿವಪೂಜೆಯಲ್ಲಿದ್ದಾಗ ಮಲ್ಲನೆಂಬ ಒಬ್ಬ ಭಕ್ತನು ಯತೀಶ್ವರನಿಂದ ತೀರ್ಥವನ್ನು ಪಡೆದು ಅದನ್ನು ಒಂದು ಪಾತ್ರೆಯಲ್ಲಿಟ್ಟದ್ದು ಅನಂತರ ಮರವಿನಿಂದ ಅದನ್ನು ಚೆಲ್ಲಿದನು. ಅದರ ಪರಿಣಾಮವಾಗಿ ಅವನ ಇಷ್ಟಲಿಂಗ ಮಾಯವಾದದು, ಸಿದ್ಧಲಿಂಗೇಶ್ವರನಲ್ಲಿ ಮೊರೆಯಿಟ್ಟುದರಿಂದ ಮರಳಿ ಲಿಂಗ ಸಿಕ್ಕಿದುದು.

24. ಗೂಳೂರಿನ ಭಕ್ತರು ಸಿದ್ಧೇಶನಿಗೆ ಮಜ್ಜನಮಾಡಿಸುವಾಗ ಅವನ ಮಸ್ತಕದಲ್ಲಿರುವ ರಂಧ್ರ ಆರು ಕೊಳಗ ಹಾಲನ್ನು ಹೀರಿದುದು.

25. ತುಮಕೂರಿನಲ್ಲಿದ್ದಾಗ ವೈಷ್ಣವನೊಬ್ಬನಿಗೆ ಭಸ್ಮದ ಘುಟಿಕೆಗಳನ್ನು ಶಿವಲಿಂಗಗಳನ್ನು ಮಾಡಿ ತೋರಿಸಿದುದು. ಅವನು ವೈಷ್ಣವ ಮತಬಿಟ್ಟು ವೀರಶೈವನಾದುದು.

26. ತುಮಕೂರಿನ ಮಲ್ಲಕ್ಕ ಎಂಬುವಳು ಸಿದ್ಧಲಿಂಗನಿಗೆ ಆರು ಕೋಳಗ ಅಕ್ಕಿಯನ್ನು ಮೀಸಲು ತೆಗೆದಿಟ್ಟು ಅದರಲ್ಲಿ ಒಂದು ಪಡಿ ಅಕ್ಕಿಯನ್ನು ಅಡಿಗೆಮಾಡಿ ಉಂಡಳು. ಆಗ ಎಲ್ಲ ಅಕ್ಕಿಯೂ ಮಾಯವಾಗಿ ಹೋದುದು.

27. ತುಮಕೂರಿನಲ್ಲಿ ಇನ್ನೊಬ್ಬ ಭಕ್ತ ನಾಲ್ಕುನೂರು ಬೆಲ್ಲದ ಅಚ್ಚನ್ನು ಸಿದ್ಧೇಶನಿಗೆ ಹರಕೆಯೆಂದು ತೆಗೆದಿಟ್ಟು ಅದರಲ್ಲಿ ಒಂದು ಅಚ್ಚನ್ನು ಬಳಸಿಕೊಂಡುದಕ್ಕಾಗಿ ಉಳಿದ ಎಲ್ಲ ಬೆಲ್ಲದ ಅಚ್ಚುಗಳು ಮಾಯವಾದುದು.

28. ತುಮಕೂರಿನಲ್ಲಿಯೇ ಇನ್ನೊಬ್ಬ ಪ್ರಭುಸೆಟ್ಟಿಯೆಂಬ ಭಕ್ತನು ಏಳುನೂರು ಎಳೆ ನೀರನ್ನು ಸಿದ್ಧೇಶ್ವರನಿಗೆಂದು ಹರಕೆಯಾಗಿ ತೆಗೆದಿಟ್ಟಿದ್ದನು. ಬಾಲಕ ನೋರ್ವನು ಅಳುತ್ತಿದ್ದಾನೆಂದು ಅವನಿಗೆ ಒಂದು ಎಳೆನೀರನ್ನು ಅದರಲ್ಲಿ ಉಪಯೋಗಿಸಿದ ಫಲವಾಗಿ ಆ ಎಲ್ಲ ಕಾಯಿಗಳೊಳಗಿನ ನೀರೂ ಇಂಗಿಹೋಗಲು ಮೂರುಪಟ್ಟು ಎಳೆನೀರನ್ನು ದಂಡತೆರಬೇಕಾಯಿತು.

29. ತುಮಕೂರಿನಲ್ಲಿ ಓರ್ವಭಕ್ತ ಸವುಳು ನೀರನ್ನು ತಂದು ಚರಜಂಗಮಕ್ಕೆಡೆಮಾಡಿ ತಾನು ಸಿಹಿ ನೀರಿನ ತೀರ್ಥವನ್ನು ತೆಗೆದು ಇಟ್ಟಿರಲು ಅದು ಆ ಕ್ಷಣವೇ ಮಾಯವಾಯಿತು.

30. ತುಮಕೂರಿನ ಮುದ್ದಪ್ಪನೆಂಬ ಭಕ್ತನ ಹೆಂಡತಿಯು ಸಿದ್ಧೇಶನ ಪ್ರಸಾದ ಕುಸುಮಗಳನ್ನು ಎಲ್ಲ ಮಾಹೇಶ್ವರರಿಗೆ ಎರಡೆರಡು ಕೊಟ್ಟು ತಾನು ಒಂದು ಕಳಸಿಗೆ ತುಂಬ ಇಟ್ಟುಕೊಂಡಿದ್ದಳು. ಆಗ ಅವೆಲ್ಲ ಮಾಯವಾಗಿ ಎರಡು ಹೂಗಳು ಮಾತ್ರ ಉಳಿದುದು.

31. ತುಮಕೂರಿನ ಇನ್ನೊಬ್ಬ ಭಕ್ತನು ಸಿದ್ಧಲಿಂಗೇಶ್ವರನಿಗೆಂದು ಕುರಿತು ತಂದ ನೆಲ್ಲವರೆ ಕಾಯಿಯಲ್ಲಿ ಸ್ವಲ್ಪಭಾಗ ತಾನು ತಿನ್ನಲು ಆಸೆಪಟ್ಟು ಅಡಿಗೆಮಾಡಿಸಲು ಒಲೆಮೇಲಿಟ್ಟು ಬೇಯಿಸಲು ಅವು ಬೇಯದೇ ಇದ್ದುದು.

32. ತುಮಕೂರಿನ ಇನ್ನೊಬ್ಬ ಭಕ್ತ ಸಿದ್ಧಲಿಂಗೇಶನಿಗೆಂದು ತಂದ ಹೊಲದ ಅವರೆ ಕಾಯಿಗಳಲ್ಲಿ ಕೆಲವನ್ನು ತಾನು ತಿನ್ನಲಪೇಕ್ಷಿಸಿ ಎಷ್ಟು ಬೇಯಿಸಿದರೂ ಬೇಯಲಿಲ್ಲ. ಕೊನೆಗೆ ಬೇಯದ ಕಾಯಿಗಳನ್ನೇ ತಿನ್ನಹೋಗಲು ಅವೆಲ್ಲ ಕಹಿಯಾಗಿದ್ದವು.

33. ತುಮಕೂರಿನ ಹಲಿಗೆಸೆಟ್ಟರ ಮನೆಯಲ್ಲಿ ಸಿದ್ಧೇಶನು ಪೂಜೆಗೆ ಕುಳಿತಾಗ ದ್ರೋಣಪುಷ್ಪಗಳ ಸುರಿಮಳೆ ಸುರಿದುದು.

34. ತುಮಕೂರಿನಲ್ಲಿ ಶಿವಯೋಗಿಯು ಅನುಭವಗೋಷ್ಠಿಯಲ್ಲಿದ್ದಾಗ ಓರ್ವ ಸ್ತ್ರೀ ಕೆರೆಗೆ ನೀರು ತರಲು ಹೋಗಿ ಕೆರೆಯಲ್ಲಿ ಕೊಡವನ್ನಿಟ್ಟು ಮುಖಮಾರ್ಜನ ಮಾಡಿಕೊಳ್ಳುತ್ತಿದ್ದಳು. ಆಗ ಕೊಡವು ನೀರಿನಲ್ಲಿ ಬಹುದೂರ ತೇಲಿಹೋಯಿತು.

ಸಿದ್ಧೇಶನನ್ನು ಪ್ರಾರ್ಥಿಸಿದಳು. ಕೊಡವು ಇವಳ ಹತ್ತಿರಕ್ಕೆ ಬಂದಿತು. ಕೊಡವನ್ನು ತುಂಬಿ ಮೇಲೆತ್ತಹೋದಳು, ಎತ್ತಲಾಗಲಿಲ್ಲ. ಸಿದ್ಧಲಿಂಗನನ್ನು ಪುನಃ ಪ್ರಾರ್ಥಿಸಲು ತಾನೇ ಅವಳ ತಲೆಯಮೇಲೇರಿ ಕುಳಿತುದು.

35. ಸಿದ್ಧಲಿಂಗೇಶನನ್ನು ನೋಡಲು ತುಮಕೂರಿನಲ್ಲಿ ಪರಿಷೆ ಸೇರಿತು. ಓರ್ವ ಹರದನ ಒಂದು ದೊಡ್ಡ ಗೂಳಿ ಹಗ್ಗ ಹರಿದುಕೊಂಡು ರಾದ್ಧಾಂತವೆಬ್ಬಿಸಿತು. ಹರದನು, ಓಡಿದರೆ ಸಿದ್ಧಲಿಂಗನ ಆಣೆಯೆಂದು ಆಣೆಯಿಟ್ಟೊಡನೆ ಅವನ ಸಮೀಪಕ್ಕೆ ಬಂದಿತು.

36. ತುಮಕೂರಿನಲ್ಲಿ ಸಿದ್ಧೇಶನ ರಥೋತ್ಸವವಾಯಿತು. ಆ ದಿನ ತುಮಕೂರಿನಲ್ಲಿದ್ದ ಸಿದ್ಧೇಶನು ಕುಣಿಗಲ್ಲು ಮತ್ತು ದೇವರಾಯಪಟ್ಟಣಗಳಲ್ಲಿಯ ಭಕ್ತರಿಗೆ ಏಕಕಾಲದಲ್ಲಿ ಕಾಣಿಸಿಕೊಂಡನು.

37. ದೇವರಾಯಪಟ್ಟಣದಲ್ಲಿದ್ದಾಗ ಐದುನೂರು ಜಂಗಮರು ಶಿವಪ್ರಸಾದ ತೃಪ್ತರಾದರು. ಭಾಂಡಗಳೆಲ್ಲ ಬರಿದಾದವು. ಆ ವೇಳೆಯಲ್ಲಿ ಪಟ್ಟಣದ ಬಸವೇಶ್ವರ ದೇವರು ಬರಿದಾದಪ್ರಸಾದಭಾಂಡಗಳನ್ನು ನೋಡಲು ಅವೆಲ್ಲ ಪುನಃ ಆಯಾಯ ಪಾಕಗಳಿಂದ ಪೂರ್ಣಗೊಂಡವು.

38. ದೇವರಾಯಪಟ್ಟಣದಲ್ಲಿದ್ದಾಗ ಒಬ್ಬ ಹುಟ್ಟುಗುರುಡನಿಗೆ ಒಂದು ಕಣ್ಣನ್ನು ದಯಪಾಲಿಸಿದುದು.

39. ದೇವರಾಯಪಟ್ಟಣದಲ್ಲಿದ್ದಾಗ ನಡೆದ ಒಂದು ಪ್ರಸಾದ ವಿತರಣಾ ಸಮಾರಂಭದಲ್ಲಿ ಭಯಂಕರವಾದ ಮಳೆ ಬರುವುದನ್ನು ಸಿದ್ಧಲಿಂಗೇಶನು ತಡೆದು, ಎಲ್ಲರ ಪ್ರಸಾದ ಸೇವನೆ ಮುಗಿದಬಳಿಕ ಬಾರೆಂದುಹೇಳಿದ. ಅದರಂತೆಯೇ ಘಟಿಸಿದುದು.

40. ಎಡೆಯೂರಿನ ಸಿದ್ಧರಾಮಯ್ಯನೆಂಬ ಭಕ್ತನ ಬಿನ್ನಹದ ಮೇರೆಗೆ ಅವನ ಮನೆಗೆ ಹೋಗಿ ಎಲ್ಲಸ್ನಾನಕ್ಕಿಂತ ಭಸ್ಮಸ್ನಾನ ಶ್ರೇಷ್ಠವೆಂದು ಅಲ್ಲಿ ಭಸ್ಮಸ್ನಾನಮಾಡಿ ಶಿವಯೋಗದಲ್ಲಿ ನಿರತನಾದನು. ಮೂರುದಿನಗಳವರೆಗೆ ಸಮಾಧಿಸ್ಥಿತಿಯಲ್ಲಿದ್ದ ಸಿದ್ಧಲಿಂಗನನ್ನು ಶಿವಭಕ್ತಿಗೀತಾದಿಗಳಿಂದ ಎಚ್ಚರಗೊಳಿಸಿದರು. ಎಲ್ಲಭಕ್ತರೂ ಚರರೂ ಸಿದ್ಧಲಿಂಗೇಶ್ವರರು ಮೂರುದಿವಸ ಪರ್ಯಂತವಾಗಿ ಲಿಂಗದಲ್ಲಿ ಲೀಯವಾಗಿರ್ದುದನ್ನು ಕಂಡೆವೆಂದು ಆಶ್ಚರ್ಯಪಟ್ಟುದು.

41. ಬುರುಡುಗುಂಟೆನಗರದ ರಾಜನಾದ ಗಬ್ಬಿನಾಯಕನ ಮಗನ ಕುದುರೆ ಸಾಯಲು ಅದರ ಮೇಲೆ ಶಿವಯೋಗಿಯ ಪಾದತೀರ್ಥವನ್ನು ಚಿಮುಕಿಸಲು ಅದು ಬದುಕಿದುದು.

42. ಸಿದ್ಧೇಶನು ಗುರುಲಿಂಗದೇವರೆಂಬ ವಿಟಜಂಗಮಕ್ಕೆ ಸುವರ್ಣಚಿತ್ರಿತವಾದ ಕಂಥೆಯನ್ನೂ ನವರತ್ನಕಿರೀಟವನ್ನೂ ಕೊಟ್ಟು ಕಳಿಸಿದ್ದು.

43. ಕೇತಸಮುದ್ರದಲ್ಲಿ ಸಿದ್ಧಲಿಂಗೇಶನಿರುವಾಗ ಆತನನ್ನು ಕಾಣಲು ದ್ರಾವಿಡ ದೇಶದಿಂದ ಬಂದ ಚರಜಂಗಮನೊಬ್ಬನನ್ನು ಒಂದು ಹಾವು ಕಡಿಯಿತು. ಅವನು ಅಸುನೀಗಲು ಸಿದ್ಧೇಶ ಅವನಿಗೆ ಪ್ರಾಣದಾನಮಾಡಿದುದು.

44. ಕುಂತಳದೇಶದ ಓರ್ವ ಅಂಧಕ ಜಂಗಮನು ಸಿದ್ಧಲಿಂಗನಲ್ಲಿ ಬಂದು ತನ್ನ ಹೋದ ಕಣ್ಣನ್ನು ಕೊಡಬೇಕೆಂದು ಬೇಡಿದಾಗ ಅವನಿಗೆ ಕಣ್ಣನ್ನುಕೊಟ್ಟುದು.

45. ಹಲಕೂರಿನ ಭಕ್ತರು ಸಿದ್ಧೇಶನನ್ನು ಕಾಣಲು ಹೊರಟಾಗ 'ಹಲ್ಲಚಿಕ್ಕಯ್ಯ' ನೆಂಬ ಜೈನನು ಆ ಮನುಷ್ಯನನ್ನು ದೈವದೈವವೆಂದೇಕೆ ನೋಡಹೋಗುತ್ತೀರೆಂದು ಜರೆದಾಗ ಅವನ ಮನೆಗೆ ಬೆಂಕಿಬಿದ್ದು ಬೂದಿಯಾದರೂ ಎಡಬಲದ ಯಾವ ಮನೆಗಳೂ ಸುಡದೆ ಇದ್ದುದು.

46. ಕೇತಸಮುದ್ರದಲ್ಲಿ ಸಿದ್ಧೇಶನು ಒಂದು ಘೋರ ಬೇಸಿಗೆಯ ಮಧ್ಯಾಹ್ನ ಶಿವಾನುಭಾವಗೋಷ್ಠಿಯಲ್ಲಿದ್ದ. ಶಿವಾನುಭಾವಗೋಷ್ಠಿಯನ್ನು ಮುಗಿಸಿ ಮಜ್ಜನಕ್ಕೆ ಬಂದ. ಬಾವಿಯಲ್ಲಿ ನೀರೇ ಇರಲಿಲ್ಲ. ಇನ್ನೆಲ್ಲಿಯೂ ನೀರೇ ಇರಲಿಲ್ಲ. ಆಗ ಅನ್ನದಾನಿ ಮಲ್ಲಯ್ಯನೆಂಬುವನು ಸಿದ್ಧಲಿಂಗೇಶ್ವರನ ಮಜ್ಜನಕ್ಕೆಂದು ಭಕ್ತಿಯಿಂದ ಗಂಗೆಯನ್ನು ಬರಮಾಡಿಕೊಂಡನು. ಗಂಗೆ ಬಾವಿಯಲ್ಲಿ ತುಂಬಿನಿಂತಿತು. ಆಗ ಸಾವಿರಾರು ಕೊಡ ನೀರನ್ನು ಸೇದಿ ಸಿದ್ಧಲಿಂಗನಿಗೆ ಮಜ್ಜನ ಮಾಡಿಸಿದರು.

47. ಕೇತಸಮುದ್ರದಲ್ಲಿರುವ ಕೆರೆಯ ಕೆಳಗಿನ ಗದ್ದೆಯಲ್ಲಿ ಒಂದು ಗೂಳಿ ಮೇಯುತ್ತಿದ್ದಾಗ ಗದ್ದೆಯ ಕಾಪಿನಶೂದ್ರನೊಬ್ಬನು ಕೋಪದಿಂದ ಅದನ್ನು ಬೆನ್ನಟ್ಟಿ ಬಡಿದನು. ಕೋಪದಿಂದ ಅದು ಪಲಾಯನ ಮಾಡಿತು. ಆಗ ಇನ್ನೊಂದು ದೊಡ್ಡ ಗೂಳಿ ಹೊಕ್ಕು ತಿನ್ನತೊಡಗಿತು. ಅವನು ಕವಣೆಕಲ್ಲಿನಿಂದ ಅದನ್ನು ಹೊಡೆಯಲು ಕೋಪಗೊಂಡು ಅದು ಎಲ್ಲರನ್ನು ಬೆನ್ನಟ್ಟಿತು. ಹೆದರಿದ ಜನ ಸಿದ್ಧಲಿಂಗೇಶನಮೇಲೆ ಆಣೆಯಿಡಲು ಆಣೆಗೆ ಹೆದರಿದ ಗೂಳಿ ಮೇವು ನೀರುಬಿಟ್ಟು ಮಲಗಿಬಿಟ್ಟಿತು. ಆಗ ಸಿದ್ಧೇಶನು ಬಂದು ಅದು ಮೇಯುವಂತೆ ಮಾಡಿದುದು.

48. ದೇವರಾಯಪಟ್ಟಣದಲ್ಲಿ ಸಿದ್ಧೇಶನಿದ್ದಾಗ ಮಂಗಳವಾದದಿಂದ ಯತಿಯನ್ನು ನೋಡಲುಬಂದ ಭಕ್ತಕುಟುಂಬವೊಂದರ ಮೂರುವರ್ಷದ ಚಿಕ್ಕಮಗುವು ಮೃತವಾಗಲು ಅದಕ್ಕೆ ಪ್ರಾಣದಾನಮಾಡಿದುದು.

49. ದೇವರಾಯಪಟ್ಟಣದ ಮಲ್ಲಪ್ಪನೆಂಬ ಮೈಲಾರನಭಕ್ತನು ಸಿದ್ಧಲಿಂಗನನ್ನು ದರ್ಶನಮಾಡಲು ಹೆಂಡತಿಗೆ ಹೇಳಿದನು. ಆಕೆ 'ಮೈಲಾರ ದೇವರಮುಂದೆ

ಈ ಯತಿಯೇ ?' ಎಂದಳು. ಮಲ್ಲಪ್ಪನೊಬ್ಬನೇ ಯತಿಯ ದರ್ಶನ ಪಡೆದು ಯತಿಯಲ್ಲಿ ತನ್ನ ಹೆಂಡತಿಯ ವರ್ತನೆಯನ್ನು ಹೇಳಿದ. ಆಗ ಯತಿಯು 'ಅವಳೇ ಬರುತ್ತಾಳೆ' ಎಂದ. ಇದ್ದಕ್ಕಿದ್ದಂತೆ ಅವಳ ಪ್ರೀತಿಯ ಮೂವತ್ತೆರಡು ವರ್ಷವಯಸ್ಸಿನ ಎಮ್ಮೆ ಸತ್ತುಹೋಯಿತು. ಆ ಹೆಂಗಸು ಗಾಬರಿಯಾಗಿ ಸತ್ತ ಈ ಎಮ್ಮೆ ಬದುಕಿದರೆ ವ್ಯಭಿಚಾರವನ್ನು ಬಿಟ್ಟು ಯತಿಯ ಭಕ್ತಳಾಗುತ್ತೇನೆಂದು ಎಮ್ಮೆಗೆ ಸಿದ್ಧಲಿಂಗಪ್ರಸಾದವಾದ ಭಸ್ಮಹಚ್ಚಲು ಅದು ಬದುಕಿತು. ಆ ಮೇಲೆ ಎಮ್ಮೆಯ ಮೊಸಲು ತುಪ್ಪ ಸಮೇತವಾಗಿ ಸಿದ್ಧಲಿಂಗನಲ್ಲಿಗೆ ಬಂದು ಅವನ ಭಕ್ತೆಯಾದುದು.

## ೫. ಕೃತಿನಾಮವನ್ನು ಕುರಿತು

ಈ ಕೃತಿಯು ಮುಖ್ಯವಾಗಿ ಷಟ್‌ಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸುವುದಾಗಿದೆ. ಮೇಲೆ ಹೇಳಿದಂತೆ ಇದರಲ್ಲಿ ಸುಮಾರು ಐವತ್ತು ಪವಾಡಗಳ ಸುರುಚಿರ ವರ್ಣನೆಯೂ ಇವೆ. ಅವಕ್ಕೆ ಪ್ರಾಜ್ಞರಾದ ವಿಮರ್ಶಕರು ಎರಡನೆಯ ಸ್ಥಾನವನ್ನು ಕೊಡುವರು. ಸಾಮಾನ್ಯ ಜನತೆಯು ಬಹುಭಾಗ ಒಳ್ಳೆಯ ಮಾತಿಗೆ ಮಣಿಯುವುದಿಲ್ಲ; ಒಳ್ಳೆಯ ದಾರಿ ಹಿಡಿಯುವುದಿಲ್ಲ. ಅಂಥವರ ಉದ್ಧಾರಕ್ಕಾಗಿ ಜಗತ್ತಿನ ಎಲ್ಲಾ ಗುರುಗಳೂ 'ಪವಾಡ' ಎಂಬ ತಂತ್ರವನ್ನು ಬಳಸಿರುವುದುಂಟು. ಶ್ರೀ ಸಿದ್ಧೇಶ್ವರರು ಮಾಡಿರುವುದೂ ಅವನ್ನೇ. ಹಾಗೆಂದು ಈ ಕೃತಿಗೆ 'ಸಿದ್ಧಲಿಂಗೇಶ್ವರ ಪವಾಡ ಕಥನಂ' ಎಂದು ಕರೆಯುವುದಕ್ಕಾದೀತೆ ?

ಚೆನ್ನಬಸವಣ್ಣನವರು ಬಲ್ಲಿದರು ಬಡವರು ಹೆಂಗಸರು ಗಂಡಸರು ವಿದ್ಯಾವಂತರು-ಅರ್ಧವಿದ್ಯಾವಂತರು, ಅವಿದ್ಯಾವಂತರು - ಎಲ್ಲರಿಗೂ ತಿಳಿಯುವಂತೆ ಷಟ್‌ಸ್ಥಲ ಸಿದ್ಧಾಂತವನ್ನು ಬೋಧಿಸುತ್ತಿದ್ದರು. ಆದುದರಿಂದ ಅವರಿಗೆ 'ಷಟ್‌ಸ್ಥಲ ಚಕ್ರವರ್ತಿ' ಎಂದು ಕರೆಯುತ್ತಿರುವುದು ಉಚಿತವಾಗಿಯೇ ಇದೆ. ಶ್ರೀ ಸಿದ್ಧಲಿಂಗೇಶ್ವರರು ಉಪದೇಶ ಮಾಡಿದುದೂ ಷಟ್‌ಸ್ಥಲ ಸಿದ್ಧಾಂತವನ್ನೇ. ಅವರ ಶಿಷ್ಯರೂ ಪ್ರಶಿಷ್ಯರೂ ಪುರಾಣಗಳ ರೂಪದಲ್ಲಿಯೂ ವಚನಗಳ ರೂಪದಲ್ಲಿಯೂ ಅದೇ ಸಿದ್ಧಾಂತವನ್ನೇ ಪ್ರಚುರಪಡಿಸುತ್ತಾ ಬಂದರು. ಆದುದರಿಂದ 'ಷಟ್‌ಸ್ಥಲ ವಲ್ಲಭ' ಎಂಬ ಹೆಸರು ಈ ಕೃತಿಯ ನಾಯಕನಿಗೂ ಕೃತಿಯಲ್ಲಿ ಪ್ರತಿಪಾದಿತವಾಗಿರುವ ಪ್ರಧಾನ ವಸ್ತುವಿಗೂ ಒಪ್ಪುವುದಾಗಿರುತ್ತದೆ.



ಅನಾದಿ ನಿರಂಜನ ಜಗದ್ಗುರು
ಶ್ರೀ ತೋಂಟದ ಶ್ರೀ ಸಿದ್ಧಲಿಂಗೇಶ್ವರರ ನಿರ್ವಿಕಲ್ಪ ಸಮಾಧಿ, ಯಡೆಯೂರು.



ಹರದನಹಳ್ಳಿಯ ಆದಿ ದಿವ್ಯಲಿಂಗೇಶ್ವರ ದೇವಸ್ಥಾನದ ಭವ್ಯ ಮಹಾದ್ವಾರ



ಹರದನಹಳ್ಳಿಯ ಶ್ರೀ ಗೋಸಲ ಚೆನ್ನಬಸವೇಶ್ವರರ ಮಠ

# ಪ್ರಥಮಾಶ್ವಾಸಂ

## ದಿವ್ಯೇಶ್ವರ ಮಾಹಾತ್ಮ್ಯ ಕಥನಂ

ಸ್ರ. ವೃ.

ಶ್ರೀಮಚ್ಛೈಳೇಂದ್ರಪುತ್ರೀಮುಖ ಸರಸಿಜ ವಾಸಂತ ಹೇರಂಬತಾತಂ
ಸೋಮಂ ಶೈವಾಗಮಾಮ್ನಾಯಸುತಮಹಿಮಧಾಮಂ ಮಹಾದೇವ ಶಂಭುಂ
ಹೈಮಾದ್ರೀಶಂ ವಿರೂಪಾಕ್ಷನ [1](ಭವಸನಘಂ ಈಶ)[1] ನಿಸ್ಸೀಮನಾಮಂ
ರಾಮಂ ಭೂತೇಶ ರಕ್ಷಿಕ್ಕನವರತ ಶಿವಾದ್ವೈತವಿತ್ತೈನ್ನುವಂ ನೀಂ ೧

ಶ್ರೀಮತ್ ಹೈಮಾದ್ರಿಕನ್ಯಾಮುಖದುರುತರ ಲಾವಣ್ಯವಾರಾಶಿ ಚಂದ್ರಂ ।
ಸಾಮಾದಿಸ್ತುತ್ಯನಾಮಂ ಶರಣಜನಲಲಾಮಂ ಪರಬ್ರಹ್ಮಧಾಮಂ ।
ವ್ಯೋಮಾತ್ಮಾ[2]ಕ್ಷ್ಮಾನಿ[2]ಲಾಗ್ನೀಂದುರುತರಣಿಜಲವೆಂಬೆಂಟಕ್ಷ್ಣಂ ಕಾರಣಾಂಗಂ
ಪ್ರೇಮಂ ಕೈಮಿಕ್ಕುಮೆನ್ನಂ ಸಲಹು ಗಿರಿಶ ಭೂತೇಶನಾನಂದದಿಂದಂ ೨

ಶ್ರೀ ಗೌರೀಗೌರವಕ್ಷೋರುಹ ಸರಸಿಜಯುಗ್ಮಂ[3](ವಿಶಾಲೋರದಿಂದೊಂ)[3]
ದಾಗಲ್ಚಂದ್ರಾಂಕವಕ್ಷಂ ಗಜಮುಖ ಮುಖ ಸಂಜಾತ ಮೃದ್ವಾಕ್ಯಕಂ ತಾ
ನಾಗಾರಂ ನಿರ್ಮಲಾಂಗಂ ಭಯಂಕರ ಶಶಿಜೂಟಂ ವಿರಾಡ್ರೂಪ ಸಂಗಂ
ಗಂಗಾ[4](ಜೂಟಂ)[4] ನಿರೋಗಂ ಸಲಹನವರತಂ ಭಕ್ತಿಯನ್ನಿತ್ತುಮೆನ್ನಂ ೩

ಉ. ಮಾ. ವೃ.

ಶ್ರೀ ಗುರುಮೂರ್ತಿ ಮಂತ್ರಮಯ ಮದ್ಗುರುಮೂರ್ತಿ ಪವಿತ್ರಮೂರ್ತಿ ದಿ-
ವ್ಯಾಗಮಮೂರ್ತಿ ಸತ್ಯಮಯ ಸದ್ಗುರು[5](ಮೂರ್ತಿಸುಭದ್ರಮೂ)[5]ರ್ತಿ ಭ-
ಕ್ತ್ಯಾಂಗ ವಿಚಾರಮೂರ್ತಿ ಕರುಣಾಕರಮೂರ್ತಿ ವಿಲಾಸಮೂರ್ತಿ ಲಿಂ-
ಗಾಂಗ ಸುಸಿದ್ಧಲಿಂಗ ಘನಮೂರ್ತಿ[6](ಯ)[6]ದೀಗೆ ಮಹೋತ್ಸವಂಗಳಂ ೪

1. x (ಅಇ). 2. x (ಅ) ; ಕ್ಷನಿ (ಇ). 3. x (ಅಇ). 4. x (ಅ) ; ಧರಂ (ಇ). 5. x (ಅಇ). 6. x (ಅ) ; ಮ (ಇ).

ಸ್ರ. ವೃ.

ಇಂದ್ರಂಗೈಶ್ವರ್ಯಮಂ ಬ್ರಧ್ನನಿಗಖಿಳ ತೇಜಸ್ಸುಮಂ ಬ್ರಹ್ಮಂಗಂ ವಾ-
ಗಿಂದ್ರತ್ವಕ್ಕಂಗಮಂ ಕೃಷ್ಣನಿಗತುಳಕುಮಾರರ್ಕಳಂ ಕೊಟ್ಟ ಭರ್ಗಂ
ಭದ್ರಂ ತಾಂ ಸಿದ್ಧಮಲ್ಲೇಶಗುರುವರನುಮೆಂಬಾತನಂಘ್ರಿದ್ವಯಂ ನಿ-
ಹೃದ್ರಂಧ್ರಾಂಭೋಜದಲ್ಲಿರ್ಕೆಯನವರತ ನಿರ್ವಿಘ್ನ......† ೫

ಚಂ. ಮಾ. ವೃ.

ಬಸವಣ ರೇವಣೇಶನುಲಿಚೆಂದಯನಲ್ಲಮ ಮಿಂಡಸಂಗಯಂ
ಮುಸುಟಿಯ ಚೌಡನುದ್ಭಟ ಹಲಾಯುಧನೋಹಿಲ ಸಿದ್ಧರಾಮಯಂ
ಬಿಸಿಗೆಲಸಯ್ಯ ನಿರ್ವಿಷದ ಸಂಗಯ ನಾಗಯ ಸಿದ್ಧಬುದ್ಧಯಂ
ಹಸಿಯ ಸಿರಸ್ಸಯರ್ಕಳೆಮಗೀಗೆ ಸುಕಾವ್ಯವಚೋವಿಲಾಸಮಂ ೬

ವರಗುರು ಮಾಯಿದೇವವಿಭು ಶಂಕರದೇವ ತಟಾಕ ಪದ್ಮರಾ-
ಜರು ಘನಕೇಶಿರಾಜ ಶಿವ ಸನ್ನುತ ಪಾಲ್ಕು[1]ರಿ[1] ಸೋಮನಾಥನಂ
ಗುರು[2](ಹರಿದೇವನಂ ವಿಬುಧ ಕಲ್ಮ.)[2] ಠದ ಪ್ರಭು ಜಕ್ಕಣಯ್ಯನಂ
ನಿರುತಸಮಾಧಿಸೋಮರೆಮಗೀಗೆ ಸುಸಾರ ಸುಕಾವ್ಯದಿಂಪುಮಂ ೭

ಶಿವನ ಕುಲಂ ಸದಾಶಿವನ ಕೀರ್ತಿಬಲಂ ಶಿವನಾಯುಮುನ್ನತಂ
ಶಿವನ ಚಲಂ ಮಹಾಶಿವನ ಮೂರ್ತಿಸುಖಂ ಶಿವನೋರ್ಜಿತೋಜ್ವಲಂ
ಶಿವನ ಮುಖಂ ಶಿವಾಧವನ ಪೂತಮತಂ ಶಿವಭಕ್ತರೆನ್ನ ಕಾ
[3](ವ್ಯವನುರೆ)[3] ತಿರ್ದಿಪೊರ್ದಿ ನಲವಿಂ ಮಿಗೆ ಲಾಲಿಸಿ ತಾಳ್ವುದಕ್ಕರಿಂ ೮

ವಚನ. ಇಂತೆಂದು ಬೇಡಿಕೊಳುತ್ತಿರ್ಪಲ್ಲಿ.

---

† ಈ ಪದ್ಯ ಛಂದೋದೋಷದಿಂದ ಕೂಡಿದೆ. ಮತ್ತು ೪ನೆಯ ಪಾದದಲ್ಲಿ ಐದು ಅಕ್ಷರಗಳು ಬಿಟ್ಟುಹೋಗಿಜೆ. ಹಸ್ತಪ್ರತಿಯಲ್ಲಿದ್ದ ಹಾಗೆ ಕೊಡಲಾಗಿದೆ. ಶುದ್ಧರೂಪ ಹೀಗಿದ್ದರೆ ಆದೀತು; ಆದರೂ ಪ್ರಾಸ ಹೋಗುತ್ತದೆ.

ಇಂದ್ರಂಗೈಶ್ವರ್ಯಮಂ ಬ್ರಧ್ನನಿಗಖಿಗಳ ತೇಜಸ್ಸುಮಂ ಬ್ರಹ್ಮಗಂ ವಾ-।
ಗಿಂದ್ರತ್ವಮಂ ಮಹಾಕೃಷ್ಣನಿಗತುಳ ಕುಮಾರರ್ಕಳಂ ಕೊಟ್ಟಭರ್ಗಂ।
ಭದ್ರಂತಾಂ ಸಿದ್ಧಮಲ್ಲೇಶ ಗುರುವರನುಮೆಂಬಾತನಂಘ್ರಿ ದ್ವಯಂಮತ್।
ಹೃದ್ರಂಧ್ರಾಭೋಜದಲ್ಲಿರ್ಕೆಯನತ ನಿರ್ವಿಘ್ನದಿಂದಂ ನಿತಾಂತಂ॥

1. x (ಅ); ರಿಕೆ (ಇ). 2. x (ಅಇ). 3. x (ಅ); ಮನು (ಇ).

ಕಂ. ಕಂದಂಗಳ್ ಮೃದುವಾಕ್ಯದ
ವೃಂದಂಗಳು [1](ಮಿವುತನಿಯರಸಮುದುಕ್ಕುವ ಮಾ-
ಕಂದಂಗಳ್)[1] ಲಿಂಗಾಂಗದ
ಬಂಧಂಗಳ್ ಸೊಗಯಿಸಿರ್ಪುವೀ ಸತ್ಕೃತಿಯೊಳ್ ೯

ವೃತ್ತಂಗಳು ಶಿವಲಿಂಗದ
ವೃತ್ತಂಗಳ್ ಪರಬೊಮ್ಮದ ವೊತ್ತಂಗಳ್ ಶಿವ
ಭಕ್ತಿಯ ಚಿತ್ತಂಗಳ್ಸ
ದ್ವೃತ್ತಂಗಳ್ಸೊಗಯಿಸಿರ್ಪುವೀ ಸತ್ಕೃತಿಯೊಳ್ ೧೦

ಪೊಸತಿದು ಕಾವ್ಯಮಿದುಂ ನವ
ರಸಮುಳ್ಳುದನರ್ಘ್ಯವಸ್ತುವೆಂಬೀ ಕ್ರಮದಿಂ
[2](ರ)[2]ಸವತ್ಕಾವ್ಯಂ ತಾ[3](ನಿದು
ಜಸವಡೆದುದು ಬ್ರಹ್ಮ)[3] ದೇವನೃಪಸಭೆಗಳೊಳುಂ ೧೧

ಭಕ್ತ್ಯಾಚಾರಗಳುಳ್ಳುದು
ಮುಕ್ತಿಪಥಕ್ಕಿದುವೆ ವಸ್ತುವೆಂಬೀತೆರದಿಂ
ಭಕ್ತಿರಸಮುಳ್ಳ ಕಾವ್ಯಂ
ಭಕ್ತ ಸಭಾಂತರದೊಳಿರ್ಕೆ ಶಿವನಿರ್ಪನೆಗಂ ೧೨

ವ. ಅದು ಕಾರಣದಿಂ

ಮ. ವಿ. ವೃ.

ಪೊಸಭಾವಂ ಸಮರೀತಿ ಜಾತಿಯುಪಮಾನಂ ಲಕ್ಷಣಂ ಜಾಣ್ಸುವಾ-
ಕ್ಯಸಮಾಸಕ್ರಮ ದೇಶಿ ಸಂಧಿ ಪದಸತ್ಪ್ರಾಸಂ ವಿಚಿತ್ರಾರ್ಥಯು-
ಕ್ತಸುಖಾ[4](ಗಾರಮು ಮಾಗೆ ಪೇಳ್ವುದು)[4] ಬುಧರ್ ಅಂತಲ್ಲದೇಪೇಳ್ವರೇ
ಪಸೆಯಿಂದನ್ಯರ[5](ಕೇಳ್ಪುಕೇಳ್ಪು)[5]ಕೊನೆವರ್ ಚಾಂಡಾಲಕಾಕಬ್ಬಿಗರ್ ೧೩

ದಶದಿಕ್ಕುಂ.........† ೧೪

---

1. x (ಅ) ; ಮುಕಂ........ ವೃಂದಂದೊಂದಕಂದೊಂದೋದವ (ಇ). 2. x (ಅ) ; ಜ (ಇ) ; 3. x (ಅ) ; ಗಿ........ 4. x (ಅ) ; ........ಪೇಳ್ವುದೀ (ಇ). 5. x (ಅ) ; ನೆಕೆಳೆಗೊಂಡು (ಇ). † ಲುಪ್ತ

ಕಂ. –ಕರಿಯಂ ಗಿರಿಯಂ ಧರೆಯಂ
ದೊರೆಯಂ[1](ಉರುಜೂದು ಬೇಂಟೆಯುಜ್ಜುಗಮುಂ ಕಾ-)[1]
ಡುರಿಯಂ ದರಿಯಂ ಸಿರಿಯಂ
ಸರಸಿಜಮಂ ಪೊಗಳ್ವಕವಿತೆ ತಾನೆನಿತಕ್ಕುಂ ೧೫

ನವರಸ ಭಾವಾರ್ಥದೊಳಂ
ಭವಹರನಂ ಪೊಗಳಲೊಲ್ಲದನ್ಯರಪೊಗಳುವ
ಕವಿಗಳನೆನ್ನೀಕಾವ್ಯದೊ
ಳವರಂ ನೆನೆಯಲ್ಕೆ ಬರ್ಕುಮೇ ಶಿವಕೃತಿಯೊಳ್ ೧೬

ಅಳಿಯಂ ಗಿಳಿಯಂ ಕೊಳನಂ
ಪೊಳೆಯಂ ಮಳೆಯಂ ಪುಳಿನಸ್ಥಳಮಂ ವಳಿಯಂ
ಮೊಳೆಯಂ ಪೆಳೆಯಂ ಪೇಳದೆ-
ಯಳಿಕಾಕ್ಷನ ಪೊಗಳ್ವವರ್ಗೆನಾಂ[2](ನತನಪ್ಪೆಂ)[2] ೧೭

ಷಟ್‌ಸ್ಥಲವಲ್ಲಭವೆಂಬುದ
ಷಟ್‌ಸ್ಥಲಿಗಳ್ಮೆಚ್ಚೆ ಪೇಳ್ವೆಪಿರಿಯರ್ ಸುಜನರ್
ಷಟ್‌ಸ್ಥಲದಾಗಮವಂತರ್
ಷಟ್‌ಸ್ಥಲಿಗಳು ಕೇಳ್ವುದೀಪ್ರಬಂಧೋನ್ನತಿಯಂ ೧೮

ಎಂತೆನೆ ಧಾತ್ರೀಕಾಂತೆಯ
ಸಂತತ ಸೌರಂಭವೆಸೆವ ನಾಭಿಸರೋಜದೊ-
[3](ಳ್ಕಾಂತಿಯ ಕರ್ಣಿಕೆಯಂತ-
ಪ್ಪಂ)[3]ತಿಹ ವರ ಮೇರುಗಿರಿಯ ಮೂಡಣದೆಸೆಯೊಳ್ ೧೯

ಹರಹರ! ಭೂನಾರಿಗೆ ಮಿಗೆ
ಹರುಷದಿ ತೊಡಿಸಿರ್ದ ನೀಲಮೇಖಲೆಯಂಬಾ
ದರದಿಂದೊಪ್ಪುವುದ[4](ದು ಸುರು-
ಚಿರ ಜಲವ)[4]ರ ರತ್ನಪೂರ ಪಾರಾವಾರಂ ೨೦

---

1. x (ಅ) ; ........ಮಂಕಾ (ಇ). 2. x (ಅ) ; ತು........(ಇ).
3. x (ಅ) ; ಳಾಂತಿಯ ಕನ್ನಿಕೆಯಂತೊಪ್ಪು (ಇ). 4. x (ಅ) ; ದು....ರರತ್ನ (ಇ).

ಚಂ.

ಅನಿಮಿಷರಂತೆ ಮೀನ್ಗಳ ಸಮೂಹಗಳಿಂದ ಸುರಾನ್ವಯಂಗಳಂ
ತನುಮಕರಾಳಿಯಿಂ ತರಣಿಮಂಡಲದಂತೆಯು ನೌಕುಲಂಗಳಿಂ
ಮನುಜರ ಮೊತ್ತದಂತೆ ಜಲಮರ್ತ್ಯರ ಸಂಚರದಿಂದಲಾವಗಂ
ಅನುವಿಡಿದೊಪ್ಪುತಿರ್ದುದುಮಪಾಂಪತಿ ಸಂಭ್ರಮದಿಂದಲಾವಗಂ ೨೧

ಮ. ನಿ. ವೃ.

ನೊರೆಯಿಂ ನಕ್ರನಿಕಾಯದಿಂ ಹಡಗಿನಿಂ ನೀರಾನೆಯಿಂ ರತ್ನದಿಂ
ತೆರೆ[1](ಯಿಂ ಬುದ್ಬುದದಿಂದೆ)[1] ಮೀನ್ಗಳ ಮಹಾಸ್ತೋಮಂಗಳಿಂ ಕಂಬುವಿಂ
ಕರೆಯಿಂ ಶುಕ್ತಿನಿಕಾಯದಿಂ ಪವಳದಿಂ ಕೂರ್ಮಂಗಳಿಂ ತುಂತುರಿಂ
ಗಿರಿಯಿಂ ಕರ್ಕಟ[2](ದಿಂದೆ ಭೀಕರರವಂಗೊಂಡಿ)[2]ತ್ತು ರತ್ನಾಕರಂ ೨೨

ಕಂ. ಆ ಸಾಗರದಿಂ ಪಡುವಣ
ದೀಸಾಗರಮಂ [3](ಪಳಿಂಚಿ)[3] ತನ್ನಯ ಪೆಂಪಿಂ-
ದೋಸರಿಸದುದ್ದವಾಗಿಯೆ
ರಾಶಿಯವೋಲ್ತೋರುತಿರ್ದುದಾ ಹಿಮಶೈಲಂ ೨೩

ಚಂ.

ಗವಿ ಕಿವಿಗಳ್ ಬಿಲಂಗಳುರು ನಾಸಿಕ ಭೂಜಬಿಳಿಲ್ಜಟಾಸಮೂ-
ಹ ವಿದಳಮಾದ ನೀಳರೆ ವಿಶಾಲದ ಜಿಹ್ವೆ ಸುಶಾಮವ[4](ರ್ಣಗುಂ)[4]
ಡುವಿಸರ ಲೋಚನಂಗಳು ಸುಕಂಧರ ಕಂಧರ ನೀಳಮಾದಕ-
ಲ್ಗವಿ[5](ರಳ)[5] ತೋಳ್ಗಳಿಂದೆತಿಯೊಲೊಪ್ಪಿತು ಪರ್ವತಪಾದ ಪಾದದಿಂ ೨೪

ಘನ ಗುಹೆ ಗಹ್ವರೋಜ್ಜ್ವರ ವಿಶಾಲಬಿಲಾದಿಯ ಧಾತು ಧಾತು ನಿಂ-
ದನವರತಂ ವಿರಾಜಿಸುವ ಮಂಜುಲದಾಮಲ ಶೃಂಗಶೃಂಗದಿಂ-
ದನುಗುಣದಿಂದಲಾವಗ ಸುಸಾರ ಸುಕಾಂತಿಯು ಗೋತ್ರಗೋತ್ರದಿಂ
ಘನಮುಗಿಲುಪ್ಪಕಂ ಬೆಳೆದು ರಾಜಿಸೆ ಸೋಂಕುವುದದ್ರಿಯದ್ರಿಯಂ ೨೫

ಕಂ. ಕಾಂತಮಯಸ್ಕಾಂತ ಸೂರ್ಯ
ಕಾಂತಂ ಉಡುಪತಿಕ್ಷಾಂತಕ್ಷತರುಹ ಕಾಂತಿಯು
ಕಾಂತಂಗಳನುಶ್ರಾಂತ
ಸ್ವಾಂತತೆಯಂ ತಳೆದು ಮೆರೆಯಿತಾ ಹಿಮಶೈಲಂ ೨೬

---

1. x (ಅ) ; ಯಿಂಮುಪ್ಪೃದಿಂತೀ........ಮಹಾ (ಇ). 2. x (ಅ) ; ದಿಂಗಳ ಭೀಕರರ ವದಿಂದೊಪ್ಪಿ (ಇ). 3. ಕೂಡಿ (ಅಇ). 4. ರ್ಣಗಂ (ಅಇ).
5. ದಿರಳ (ಅ) ; ದಿರ (ಇ).

ಪರುಷದರೆ ನಿವಹದಿಂದಂ
ವರಚಿಂತಾಮಣಿಯ ವೊರಡಿ ಸುರಧೇನುಗಳಿಂ
ಸುರಕುಜಹಂತಿಗಳಿಂದಂ
ಧರಣೀಧರರತ್ನಸಾನು ತಾನೊಪ್ಪಿರ್ಕುಂ ೨೭

ಮ. ಸ್ರ.
ಹಿಮಶ್ಶೈಲೇಂದ್ರಕ್ಕೆ ತೆಂಕಲ್ ಪ್ರಯುಗಮದಕ್ಕೆ ತೆಂಕಲ್ ವಾರಣಾಸಿಯಾ ವಿ-
ಶ್ವಮಹೇಶಂಗಂ ನಿಶೇಶಾಶ್ರಯನದಿಗುವಿನೊಳ್ ಪರ್ವಶೇಶಂ[1](ಅದಕ್ಕಿಂ)[1]
ದೆಮನೊಳ್ ಹೇಮಾದ್ರಿಯಲ್ಲಿಂದೆಮನಕಡೆಕಕುಚ್ಛೈಲಮಲ್ಲಿಂ ಗಜಾರ-
ಣ್ಯಮಲಿಂ[1](ತೆಂಕಕ್ಕೆ)[1]ದಿ[2](ವ್ಯೇಶನ)[2]ನವರತಲೊಪ್ಪಿರ್ಪನಾನಂದದಿಂದಂ ೨೮

ಕಂ. ಗುಡಿಗೋಪುರಮುನ್ನಿಲ್ಲಂ
ಅಡವಿಯೊಳಿಮ ಲಿಂಗಮೆಂದುಮಾರುಂ ಅರಿಯರ್
ಅಡವಿಯೊಳೊಬ್ಬನೆಯಿರ್ದಂ
ಮೃಡನಿರವಂ ಬಲ್ಲರಾರು ಜಗತೀತಳದೊಳ್ ೨೯

ವ॥ ಆ ದಿ[2](ವ್ಯೇಶ್ವರ ಲಿಂಗಕ್ಕಂ)[2] ದೇವಗಂಗೆಯುಂ ತಂದು ಮಜ್ಜನಕ್ಕೆರೆವ ಮೇಘಂಗಳಿಂ, ತುಷಾರೋದಕಂಗಳಿಂ ನೆನೆದು ಮುದ್ದೆಗಟ್ಟಿ ಲಿಂಗದಮಸ್ತಕಾಗ್ರದೊಳ್ ಬೀಳ್ವ ಕುಸುಮ ಸಂಚಯ[3]ದ ಗಂಧಪಿಂಡದಿಂ, ಮಸುತನಿಂ ತೊಟ್ಟೊಡೆದು ಲಿಂಗ ಶಿರಸ್ಸಿನ ಮೇಲಣ ಗಂಧಾಗ್ರದೊಳ್ ಬೀಳ್ವ ಸಣ್ಣ ಮಿಡಿಗಾಯ್ಗಳಕ್ಷತೆಗಳಿಂದಂ, ಗಂಧವನಿಂ ಚಲಿಪ ಕುಜಂಗಳೊಳ್ ಕಳಲ್ದು ಬೀಳ್ವ ಪೂಗೊಂಚಲ ಸಂಚಯಂ[3]ಗಳ ದಂಡೆಗಳಿಂ, ಶೈತ್ಯಸೌರಭ್ಯಮಂ ಕೂಡಿಕೊಂಡು ನಲವುಣ್ಮಿ ಸುಳಿಸುಳಿದು ತೀಡುವ ಮಂದ ಮಾರುತವ್ಯಜನಂಗಳಿಂ, ತಂತಮ್ಮ ಕಿರಣಪುಂಜದಿಂ ದಶದಿಕ್ಕುಮಂ ಬೆಳಗುವ ಚಂದ್ರಾರ್ಕ ಜ್ಯೋತಿಗಳಿಂದಂ ದಶದಿಕ್ಕುಮನಾ[4](ವ)[4]ರಿಸಿಕೊಂಡಿರ್ದ ಮಂಜುಲ ಮ[5]ಂಜಿ[5]ನಪುಂಜ ಧೂಪಧೂಮ್ರದಿಂದಂ, ಹಿಂದು ಮುಂದೆಡಬಲದೊಳ್ ಸಂಚಲಿಪ ಮಿಂಚುವ ಮಿಂಚಿನ ಸಂಚಯದ ಮಂಗಲಾರತಿಗಳಿಂ, ಎಡಬಲದಿ ನಳನಳಿಸಿ ಬೆಳೆದ ಕೋಮಲ ಲತೆ ಪುಲ್ಗಿಡುಗಳ ಪೊದರಿನೊಳ್ ಬಿರುಗಾಳಿ ಪೊಕ್ಕು ತಿರುಗಲ್ಕಂಪಿಸುವ [6](ಯೆಳೆ)[6] ಲತೆಗಳ ಸೀಗುರಿ ಚಮರಂಗಳಿಂದಂ ಸೊಗಸಿನಿಂ ಬೆಳೆದು ಪಸರಿಸಿ ಕತ್ತಲಿಸಿ ಪಿಡಿದ ಶಶಿಕುಜದ ಸತ್ತಿಗೆಗಳಿಂ,ಕುಜಾಗ್ರದಿಂ ಬೀಗಿಬೆಳೆದು ರಸಬಲಿದು ತೊಟ್ಟುಕಳೆದು

1. ತೆಂಕ (ಅಇ). 2. ವೈಸನ (ಅಇ). 2. ವ್ಯಾಶ್ವರ.......(ಅಇ). 3. x (ಇ).
4. x (ಅಇ). 5. x (ಇ). 6. ಮೇಳೆಳೆ (ಅಇ).

ಬೀಳ್ವ[1]ಪಣ್ಗಳ್[1] ನೈವೇದ್ಯದಪಸರಂಗಳಿಂದಂ, ನವಪೂಗ ನಾಗವಲ್ಲೀದಳಂಗಳ್ತಾವೆ ತೊಟ್ಟುಕಳಲ್ದು ಮುಂದಿರ್ದ ಚೂರ್ಣಶಿಲಾಗ್ರದೊಳ್ ಬಿರ್ದುಮರ್ಪಿತಮಪ್ಪ ತಾಂಬೂಲ ಪ್ರಜಂಗಳಿಂ, ನಲಿದುರ್ವಿಕೊರ್ವಿಪರ್ವಿ ಕುಣಿವ [2]ನವಿಲ್ಗಳ ನರ್ತನದಿಂದಂ ಉನ್ನತ ಸ್ವರದಿಂ ಕೂಗುವ ಕೋಗಿಲೆಗಳ ಗಾನರಸದಿಂ[2] ಚಪ್ಪರಿಪ ಗಿಳಿನುಡಿಗಳ ತಾಳದುಗ್ಘಡಣೆಯಿಂದಂ, ಮೇಘನಾದಂಗಳ ವಾದ್ಯರವಂಗಳಿಂದಂ, ಆವಗಂ ಎಡೆವಿಡದಿಕ್ಕೈಗೊಂಡು, ಅಲ್ಲಿಯೆ ಕಾದಿರ್ಪ ಮೃಗಸಮೂಹದ ಪೂಜಾರಿಗಳಿಂದಂ – [3]ಇಂತಡವಿಯೊಳ್ ನಾನಾ ತೆರದ ಪೂಜೆ[3]ಗೊಪ್ಪಂಬೆತ್ತು ದೀವ್ಯೇಶ್ವರಂ ಇರೆಯಿರೆ ೩೦

ಕಂ. ಅಡಕೆಯು ಹೇರ್ಗಳ ತಂದೀ
ಮ್ಮಡನೊತ್ತಿನೊಳ್ಕೆಡಹಿ ಪಥಿಕ ಪರ[4](ದರಿರೆ ತಾಂ)[4]
ಅಡಲೆಂದುಮೆರಡುಗುಂಡಂ
ಮಡಗಿದರೊತ್ತಿನೊಳು ಲಿಂಗಮೆಂಬುದನರಿಯು[5](ರ್)[5] ೩೧

ಗುಂಡಿನಂತಿರ್ದ ಲಿಂಗದ
ಮಂಡೆಯೊಳೋಗರದ ಗಡಿಗೆಯಂ ತಾವಿಟ್ಟುಂ
ಖಂಡಿಸಿ [6]ಸಮಿದೆಯ[6] ನಿಡುತ್ತುಂ
ಕೆಂಡವನಿರಿಸುತ್ತಲೂದಿದರು ಬಲುಹಿನೊಳಂ ೩೨

ಪೊಗೆಯೆಳ್ದುರಿ ಕುಡಿವರಿದುಂ
ಧಗಿಲೆಂದುರಿಯೆಳ್ದು ಚುಯಿ[7](ಚುಟಿಲ್ಲೆಂ)[7]ದೆನುತುಂ
ಭುಗಿಲ್ದನಿ ಭೋರನೆ ಮೊರೆವುತ
ಮಿಗೆವುರಿ ವು[8](ತಲಿ)[8]ರ್ದುದಗ್ನಿ ಬಹಳೋಷ್ಣತೆಯಿಂ ೩೩

ಉರಿವಾಗ ಲಿಂಗ ಶಿರದೊಳ್
ಸುರಿವುತ್ತಿರಲಮೃತವದನು ಕಂಡಾ ಪಚಕಂ
ಮುರುಡುಗಲ್ಲೊಸರಿ ಕಿಚ್ಚಿನ
[9](ಉರಿನಂದುತ್ತಿದೆ)[9]ಕೊ ಯಿದರ ಪರಿಯೇನೆಂದಂ ೩೪

1. x (ಇ). 2. x (ಅ). 3. x (ಅ). 4. ಘಾರ್ಣಂ (ಅಇ). 5. ದೇ (ಅಇ).
6. ಸಮಿಯುವೆ (ಅಇ). 7. ಚುರ್ಚಿಲೆಂ (ಅಇ). 8. ತಿ (ಅಇ). 9. x (ಇ).

ಕಲ್ಲೊಸರುತ್ತಿದೆ ಚೋದ್ಯಂ
ಎಲ್ಲರು ನೋಡುವೊಡೆ ಬನ್ನಿ[1]ಯೆನಲಾ[1]ಪಚಕನ
ಸೊಲ್ಲಂ ಕೇಳುತ್ತಾಗಂ
ನಿಲ್ಲದೆ ಬಂದೆಲ್ಲ ಕಂಡು ಚೋದ್ಯಂಬಡುತಂ ೩೫

ಓಗರದೆಸರೊಗಲಿಲ್ಲಂ
ಹಾಗಾಗಿಯು ಗಡಿಗೆ ತಾನು ಮುನ್ನೊಸರಿಲ್ಲಂ
ಸಾಗಿತು ನೀರೊಲೆಗೆನುತುಂ
ಬಾಗಿಯೆ ನೋಡುತ್ತೆ ಕಂಡರಾ ಲಿಂಗದೊಳಂ ೩೬

ಕಂಡರು ಲಿಂಗದೊಳಮೃತವ
ಕೆಂಡವನಿಬ್ಬಗೆಯ ಮಾಡಿ ತೆಗೆದರ್ಗಡಿಗೆಯ
ಖಂಡೇಂದುಧರನುಮೆನುತಂ
ಮಂಡಲಕಮೃತೇಶನೆಂದು ವಂದಿಸಿ ಕರೆದರ್ ೩೭

ಎಲ್ಲರು ತಮ್ಮೊಳು ಚೋದ್ಯವ
ನಿಲ್ಲದೆ ಮಾಡುತ್ತಲಾದ ಓಗರವುಂಡುಂ
ಕಲ್ಲೆದೆಯರು ಅಡಕೆಗಳಂ
ಮೆಲ್ಲುವೆ[2](ಪೆ)[2]ಂಪೆಲ್ಲ ಹಡಪದೊಳ್ ಕಯ್ಯಿಕ್ಕಲ್ ೩೮

ಅಡಕೆಗಳಭಯ ಫಲಂಗಳ್
ದೃಢದಿಂದಾಗಲ್ಕೆ ಕಂಡು ತಡಬಡಗೊಂಬುತ
ಹಡಪಗಳ ನಿರಿಸಿ ಕಡೆಯಲಿ
ಅಡಕೆಯ ಹೇ[3](ರುಗಳ ಬಿಚ್ಚಿ ನೋಡುತ್ತಿರಲುಂ)[3] ೩೯

ಕುರುಹಿನ ಅಡಕೆಗಳೆಲ್ಲಂ
ಬಿರಿಸಾಗಿರ್ದಭಯಫಲಮುದಾಗಿರೆ ಕಂಡುಂ
ಮರೆದರು ತಮ್ಮಯ ದೇಹವ
ನರಿಯದೆಯವರಂತೆ ತಾವು ಬೆರಗಾಗಿರ್ದರ್ ೪೦

---

1. ಯನಾ (ಅಇ). 2. ನೆ (ಅಇ). 3. x (ಇ).

ಮೆಲ್ಲನೆಯೆಚ್ಚರು ಪುಟ್ಟಿಯು
ಸೊಲ್ಲಿದರೊಂದೊಂದು ಮಾತ ಕಳವಳಗೊಳುತುಂ
ಎಲ್ಲರ ಮೌಲ್ಯವು ಕೆಟ್ಟಿತು
ಇಲ್ಲಿಯೆ ಬಯಲಾಯಿತೆಮ್ಮ ಬದುಕುಗಳೆಲ್ಲಂ ೪೧

ಮುನ್ನೀ ಲಿಂಗವನರಿಯದೆ
ಯನ್ಯಾಯದೊ[1]ಳುಯಗ್ಗಿವಟ್ಟ ಓಗರ[1]ಪಟ್ಟೆವು
ಇನ್ನಾವುದೆಮಗೆ ತೆರನೆಂ
ದುನ್ನಿಸುತಂ ಕೆಟ್ಟೆವೆಂದು ನುಡಿದರ್ ಪರದರ್ ೪೨

[2](ಹೆತ್ತೆಣ್ಬಾಸಿರ ಮೌಲ್ಯಂ)[2]
ಬೆತ್ತಡಕೆಗಳೆಲ್ಲವಳಿಲೆ ಕಾಯಿಗಳಾದವು
ಮತ್ತ ಚಿತ್ತರುಗಳಾದೆವು
ಮಿತ್ತೆರದಿಂ ಕೆಟ್ಟೆವೆಂದು ಮತ್ತಿಂತೆಂದರ್ ೪೩

ಅಭಯ ಫಲವಡಕೆಯೊಗ
ಲ್ವಿಭವದೊಳವ ಮಾರಿ ಮಿಕ್ಕ ಲಾಭಗಳೆಲ್ಲಂ
ಅಭವಗೆ ಗೋಪುರ ಶಿಖರವ
ಸಭೆಯೆಲ್ಲಂ [3]ಮಾಡಿ ತೇರನೆಳಸುವೆವೆಂದರ್[3] ೪೪

ಇಂದುಧರ ನಿಮ್ಮ ನಾವುಂ
ಮುಂದರಿಯದೆ ಕಿಚ್ಚಿನಿಂದ ಸುಟ್ಟಪರಾಧಕೆ
ಮಂದಿರುವೊಂದಂ ಕಟ್ಟಿಸಿ
ಚಂದದಿ ಪರ್ವಗಳ [4](ನೆರೆಪೆವೆಂದೊಂದಿಸಿದರ್)[4] ೪೫

ವ॥ ಇಂತು ಕಂದಿಕುಂದಿ ಬಳಲ್ದು ಬಾಯಾರಿ ಪಲ್ಗಿರಿದು ಹರಕೆಗಳಂ ಹರಸಿಕೊಂಡು ದೈನ್ಯದಿಂ ಬೇಡಿಕೊಂಬ ಪರದರ್ಗಂ ಅಮೃತೇಶ್ವರ ಕರುಣವಾಗಿ ಹೇರುಗಳೊಳಗಿರ್ದಳಿಲೆ ಕಾಯ್ಗಳಂ ಮುನ್ನಿನಂತಡಕೆಗಳಾಗುವಂತೆ ನಿಯಾಮಿಸೆಯುವೆಲ್ಲಂ [5]ಅಡಕೆಗಳಾಗಿರ್ದುದಂ[5] ಕಂಡು ಪರದರ್ ಹರುಷದಿಂ ಪರವಸಂಬೋ [6](ಗ)[6]ಯೆಚ್ಚತ್ತು

1. x (ಇ). 2. ಹತ್ತೆಂಟು ಸಾಸಿರ್ ಮೌಲ್ಯವ (ಅಇ). 3. x (ಇ). 4. ನೆರಸುವೆಂ ವಂದಿಸಿದರ್ (ಅಇ). 5. x (ಇ). 6. ಯೆ (ಅಇ)

ಕಣ್ದೆರೆದು ಸಂತಸಗೊಂಡಕ್ಕುರಿಂ ಪಂದಸಂಗೈದು ಕೊಂಡಾಡಿ ಅಮೃತೇಶ್ವರನಂ ಬೀಳ್ಕೊಂಡು ಭಂಡಮಂಕೊಂಡೊಯಿದು ವಿಕ್ರಯಿಸಲೊಂದಕ್ಕಂ ಪದಿನಾರು ಮಡಿಲಾಭಮಾಗಲಾ ಪರದರೆಲ್ಲಂ ಮರಳಿಬಂಪು ಅಮೃತೇಶ್ವರಂಗಂ ತುಳಿಲ್ಗೈದು ಕಲುಗೆಲಸಿಗಳಂ ಕರ್ಬೊನ್ನ ಕೆಲಸಿಗಳಂ ಬಡಗಿಗಳಂ ಮಣ್ಗೆಲಸದವರ್ಮೊದಲಾದ ನಾನಾ ಕೆಲಸದಲ್ಲಿ ಕುಸಲಿಗ[1]ರನೇಕರಂ ಕರೆಸಿ ಬಹುದ್ರ[1]ವ್ಯಂಗಳಂ ಕೊಟ್ಟು ಕೌಶಲ್ಯಮಾದ ಗುಡಿ ಶಿಖರ ಗೋಪುರ ಮಂಟಪ ಬಾಗಿಲ್ವಾಡ ಪ್ರಾಕಾರ ದೀಪಮಾಲಾಸ್ತಂಭಮುಗ್ರಾಣ ಮಹಾನಸವೇಕಾಂತ ನಿಕೇತ ಮೊದಲಾದವೆಲ್ಲವಂ ಕಟ್ಟಿಸಿ ಅದಕ್ಕಂ ಹರದರಹಳ್ಳಿಯೆಂಬ ನಾಮಂಗೆಯಿದು ದೇವರಿಗೆ ಪುರವಾಗಿ ಕೊಟ್ಟು, ಪಾತ್ರಂ ಮೊದಲಾದ [1](ನಿಯೋಗಮಂ ನಿಯಾಮಿ)[1]ಸಿ ಸ್ಥಾನಿಕರಂ ಕಲ್ಪಿಸಿ, ಪೂಜೆಯಂ ಮಾಡಿಸಿ, ತೇರಂ ಕಟ್ಟಿಸಿ, ಪರುಷೆಯಂ ನೆರೆಯಿಸಿ, ಅಮೃತೇಶ್ವರಂಗೆ ಆಳಿಲೇಶ್ವರನೆಂಬ ಪೆಸರಂ ಕೊಟ್ಟುಂ ಮತ್ತಂ ಸಮಸ್ತ ದೇಶದ ಜನರೆಲ್ಲಂ ಬಂದು ದಿಬ್ಬಿಗಳಂ ತುಡುಕಿ ಗೆಲುತ್ತಿರೆ ದಿಬ್ಬೇಶ್ವರನೆಂಬ ಮುನ್ನಿನ ಪೆಸರೆ ಸಹಜಮಾಗಿರೆ ತಾವೆಲ್ಲಂ ಆ ಹರದನಹಳ್ಳಿಯಲ್ಲಿಯೆಯಿರ್ದು ಸಾಲು ಮೂಲೆಸೆಟ್ಟಿ ಪಟ್ಟಣಸ್ವಾಮಿ ಮೊದಲಾದ ನಾನಾತೆರದ ಹಲರೆಲ್ಲಂ ಕೂಡಿ ಪೇಟೆಯಂ ಕ[2]ಟ್ಟಿಸಿ[2] ತಾವುಂ ಬಣಜಿಸಿಕೊ[3]ಂಡುಮಿರುತಿರ್ದರಂತುಮಲ್ಲಿಯ ದೇಶವೆಂತೆಂದೊಡೆ– ೪೬

ಚಂ. ವೃ.

ಸುರತರುಮುಳ್ಳ ದೇಶ ಮನದಿಚ್ಚೆಯ ನೀವ ಸುದೇಶ ಭಕ್ತಿಯು
ಕ್ತ [4](ರುಯಿಹ)[4] ದೇಶ ಕಾಗಣಿಕ ದೇಶ ವಿಲಾಸದ ದೇಶ ನೋಡುವ
ಗರ್ರಿದಿನ ದೇಶ ಸಜ್ಜನರ ದೇಶ ಸುಜಾಣರ ದೇಶಮಾವಗಂ
ಗುರುಚರರಿಪ್ಪದೇಶ ವರ ಚೆಲ್ಪಿನ ಕನ್ನಡ ದೇಶವೊಪ್ಪುಗುಂ ೪೭

ಘನತರ ಲಿಂಗವಂತರಿಹ ದೇಶ ವಿಚಾರಿಗಳಿಪ್ಪ ನಿಃಪ್ರಪಂ
ಚಿನರಿಹದೇಶ ಪುಣ್ಯಮಯದೇಶ ಸುಶಾಸ್ತ್ರಿಕರಿಪ್ಪ ದೇಶವುಂ
ಮುನಿಜನರಿಪ್ಪ ದೇಶ ಶಿವಭಕ್ತಿಯ ದೇಶ ಸು[5]ಧರ್ಮ[5]ದೇಶ ಲೇ
ಸಿನ ಗುಣಮೀವ ದೇಶ ಘನಸೌಖ್ಯದ ಕನ್ನಡದೇಶವೊಪ್ಪುಗುಂ ೪೮

ಅಗಣಿತ ಖೇಡ ಖರ್ವಡ ಮಡಂಬ ಪುರಂ ನಗರೀವ್ರಜಂಗಳಿಂ
ದಗಲಕೆ ಕೊರ್ವಿ ಪರ್ವಿ ಪರಿದೆಯ್ದುವಪಾರ ನದೀನದಂಗಳಿಂ
ದೊಗುಮಿಗೆಯಾಗಿ ತುಂಬಿ ಬೆಳಸಾವಗಮೀವ ತಟಾಕದೌಘದಿಂ
ಸುಗುಣ[6]ದಿ ಕಂ[6]ಪನೀವ ವನದಿಂದಲು ಕನ್ನಡದೇಶವೊಪ್ಪುಗುಂ ೪೯

1. x (ಅಇ). 2. ಟ್ಟ (ಅ). 3. x (ಇ). 4. ರಿ (ಅಇ). 5. ಧರ್ಮದ (ಅಇ).
6. x (ಇ).

ಕಂ. ನದಿಯೆಲ್ಲಂ ಸುರನದಿಗಳ್
ಕುಧರ [1](ಮ)[1]ವೆಲ್ಲಂ ಕಾಂಚನಗಿರಿಸಮುದಯ ಮುಂ
ದೊದವಿದ ಮನವೆಲ್ಲಾ[2]ಷಧಿ[2]
[3]ಮದಗಜ ವೈರಾವತಂಗ[3]ಳಾನಾಡಿನೊಳಂ ೫೦

ಕುತ್ತದ ನುಡಿ ದಯೆಗೆಯ್ಯೊಳ್
ಬತ್ತಂ ತೀವಿರ್ದ ಹಳದಿ ಹಗೆನುಡಿಯಕ್ಕುಂ
ಇತ್ತಲೆಗಂ ಪಾವಿನೊಳಂ
ಮುತ್ತೆಂಬುದು ಮಣಿಯೊಳಲ್ಲದಿಲ್ಲಾನಾಡೊಳ್ ೫೧

ಮುಂಡಂ ತರಿದಿಹ ಕುಜದೊಳ್
ದಂಡಿಯೊಳಾತಂಕವೆಂಬ ನುಡಿ ಡೌಡೆಯೊಳು
ದ್ದಂಡದ ನುಡಿ ಮನುಜಪೆಸರೊ
ಳ್ಬಂಡಂ ವಿಕ್ರಯದೊಳಲ್ಲದಿಲ್ಲಾ ನಾಡೊಳ್ ೫೨

ಅಂಧಕನಾಮಂ ಜಲದೊಳ್
ಕಂದೆಂಬುದು ರಂಭದಲ್ಲಿ ಶೋಕಂ ಯತಿಯೊಳ್
ಕುಂದದೋಷಂ ರಾತ್ರಿಯೊಳ್
ಕುಂದೆಂಬುದು ಮೊಲ್ಲೆಯೊಳಲ್ಲದಿಲ್ಲಾ ನಾಡೊಳ್ ೫೩

ವ || ಮತ್ತಮಾ ದೇಶದಲ್ಲಿಯ ಬೆಂಚೆಗಳೊಳಿಪ್ಪ ತಿಳಿನೀರ್ಗಳೊಳ್ನಲವುಣ್ಮಿ ಪೊಣ್ಮಿಯಂಕುರಿಸಿ ಪಲ್ಲವಿಸಿ ಕೋರಕಂ ಬಿಟ್ಟು ಮುಗುಳ್ಬಲಿದರೆಬಿರಿದ ಕೆಂದಾವರೆ ಹೊಂದಾವರೆ ಬೆಳ್ದಾವರೆ ಕನ್ನೈದಿಲ್ ಹೊನ್ನೈದಿಲ್ ಬಿಳಿಯ ನೈದಿಲ್ ಚೆಂಗಣೆಗಿ ಲಾಬುಲ್ಕುಂತಾದ ನಾನಾತೆರನಾದ ನೀರ್ವೂಗಳೊಳಂ ಬಂಡುಂಡು ದಣಿದು ಮರಿಗಳ್ಗೆ ಕುಟುಕನೊಯ್ವ ಬಾಣಂತಿದುಂಬಿಗಳ ಗೊಂದಣದಿಂ, ಮತ್ತಂ ಕುಸುಮ ದೆಸಳ ಮರೆಗಳೊಳ್ತಮ್ಮಸಲ್ಲಳಂ ಸ್ಮರಕ್ರೀಡಾವಿನೋದದಿಂದಾಲಿಂಗಿಸಿಕೊಂಡಗಲ ದಿರ್ಪ ದಂಪತಿರೋಲಂಬನಿಕುರುಂಬಂಗಳಿಂ, ಮತ್ತಮಾ ಕುಸುಮರಸಮಂ ಕುಡಿದು ದಣಿವೆಯ್ದದೆಯಾ ಪೂವಂ ಬಿಟ್ಟುರ್ವಿ ನೆಗೆದು ಮರಳಿ ಮತ್ತೊಂದು ಕುಸುಮಕ್ಕೆರಗಿ

1. x (ಅಇ) 2. ವೃಷಧಿಗ (ಅಇ). 3. ಳ್ಮದಗಜಗಳೈರಾವತಗ (ಅಇ).

ಪರಾಗಮಂ ಕುಡಿವಲ್ಲಿ ಸುಳಿಗಾಳಿಬೀಸಿ ಕುಸುಮ ರಜ ಬಾಯ್ಗೆಬಾರದೆ ಮರುತ ಬೆಂಬಳಿಯಿಂ ಪೋಗೆ ಕೋಪದಿಂ ಮೊರೆದೆದ್ದು ಮೇಲಕ್ಕೆ ನೆಗೆದು ಸಾಲ್ವಿಡಿದೆಯ್ದುವ ಮರಿದುಂಬಿಗಳ ಸಾಲು ಬೆಂಚೆಯೆಂಬ ವನಿತೆ ಪುಷ್ಪಿತೆಯಾಗಿ ತನ್ನ ನೀಲರತ್ನ ಹಾರಮಂ ತೆಗೆದುಮಾಕಾಶಗಂಗೆಯೊಳ್ ಮಡಗಕೊಟ್ಟಪಳೆಂಬಂತಿರ್ದ ಸಾಲ್ವಿಡಿದ ಮರಿದುಂಬಿಗಳ ಗೊಂದಣದಿಂ, ಮತ್ತಮಾ ಪೂದೊಡಂಬೆಯೊತ್ತಿನೊಳ್ ಮೆಲ್ಲಮೆಲ್ಲನೆ ಹೆಜ್ಜೆಯಿಟ್ಟು ನಡೆದಾಡುವರಸಂಚೆವರಿಗಳ ಸಂಚವ ನಲ್ಲಳಂ ಕೂಡಿಯೆಡೆದೆರಹಿಲ್ಲದೆ ಸುಖಿಸುತಿರ್ಪ ರಾಜಮರಾಳಂಗಳಿಂ, ಜೋಡಗಲದಿರ್ಪ ಚಕ್ರಮಿಥುನಂಗಳಿಂದೊಪ್ಪು ಬೆತ್ತ ಬೆಂಚೆಗಳಿಂದಲುಂ, ಮತ್ತಂ ಅಂಕುರದಿಂ ಪಲ್ಲವದಿಂ ಪಸುರೆಲೆಯಿಂ ದೊಡ್ಡ ಕಾಯ್ಗಳಿಂ ದೋರೆವಣ್ಗಳಿಂ ತನಿವಣ್ಗಳಿಂ ಸೊಗಸುತ್ತ ಕೊನೆಗಳೊಳಡರಿರ್ಪ ಕೋಗಿಲೆಗಳಿಂ ಭ್ರಮರಂಗಳಿಂ ಗಿಳಿಗಳಿಂ, ತಂಪಿಂ ಸೊಂಪಿಂ ನೆಳಲಿಂದಲಂಕೃತಮಾದ ಮಾವು ನೇರಿಲಶೋಕ ಪಲಸು ಮುಂತಾದ ನಾನಾತೆರದ ವೃಕ್ಷಸಮೂಹಂಗಳಿಂದಲುಂ, ಮತ್ತಂ ದೇವಮಾತೃಕ ನದೀಮಾತೃಕಸಂಚಯದಿಂದಂ ನೊರೆಯಿಂ ತೆರೆಯಿಂ ಬುದ್ಬುದದಿಂ ಕಾಣಾವಳಿಯಿಂ ನಕ್ರನಿಕಾಯದಿಂ ಕಮಠಮತ್ಸ್ಯಂಗಳಿಂ ಮೌಕ್ತಿಕ ಶುಕ್ತಿಯಿಂ ಕಂಬುವಿಂ ನೀರ್ಮನುಜರಿಂ ನೀರಾನೆಯಿಂ ಗಭೀರತೆಯಿಂ ಮೊರಹಿಂ ನಿರ್ಮಲೋದಕದಿಂ ಸಮುದ್ರಕ್ಕೆ ಸರಿಯಾಗಿ ಪೆರ್ಮೆವೆತ್ತಿರ್ಪ ತಟಾಕವ್ಯೂಹಂ ಗಳಿಂದಂ, ಮತ್ತಂ ಕೆರೆ ತೊರೆ ನದಿ ಗುಯ್ಯಲೇತ ತಲೆಪರಿ ಮುಂತಾದವರಿಂದಾದ ಕಾಲುವೆಗಳ್ ತೊರೆ ಪರಿವಂತೆ ಭೋರೆಂಬ ಮೊರಹಿಂ ಪರಿವ ಹೆಗ್ಗಾಲುವೆಗಳ ಸೀಳಿದ ಕಿರುಗಾಲುವೆಗಳಿಂ ಪರಿವ ನೀರಿಂ ಬೆಳೆದು ಮನೋಹರಮಾಗಿ ಸೊಗಸುವಡೆದ ಕರ್ಬು ದೋಟ ರಂಭಾತೋಂಟ ಕುಸುಮತೋಂಟ ನಾಗವಲ್ಲೀಲತಾತೋಂಟ ಪೂಗದ್ರುಮ ಮುಂತಾದ ಆಗರಗಳಿಂದಲುಂ, ಮತ್ತಮಾ ತೋಂಟದಲ್ಲಿಯ ಪಲಸು ವೃಕ್ಷಂಗಳಲ್ಲಿಯ ಪಣ್ಗಳ್ಬಿರಿದು ತೊಳೆತೊಳೆಗಳೊಳಗಿರ್ದ ರಸಂ ಸುರಿದು ಮಡುಗಟ್ಟಿ ಪರಿವ ಕಾಲುವೆಯಿಂ ಬೆಳೆದು ಪಸುರುವಟ್ಟೆಯ ಸೀರೆಯಂ ಭೂನಾರಿಗುಡಿಸಿದಂತೆ ಪಸುರೇರಿ ಕೋಮಲವಾಗಿ ಹಾಲುದುಂಬಿ ಬಾಗಿದ ತೆನೆಗಳಿಂ, ತಿನಲೆಯ್ದಿದ ಗಿಳಿಗಳ ಸೋಹುವ ಮತ್ತಗಜಗಮನದ ಪಾಮರಿನಿತಂಬಿನಿಯರಿಂ, ರಮ್ಯವಾದ ಕಳಮಕ್ಷೇತ್ರಂಗಳ ನಿವಹದಿಂ, ಜಂತೆಗಳಿಂ ಕಸ್ತೂರಿಯ ಮೇಲ್ಮೃದ್ದೆಯಿಂ ಪೊಂಗೇದಗೆಯೆಸಳದೋಣಿಗಳಿಂ ಮತ್ತಂ ಶ್ರೀಗಂಧಭಿತ್ತಿಯಿಂ ಪುಂಡ್ರೇಕ್ಷುವೊಪ್ಪಂಬೆತ್ತ ಮಾಳಗೆಯೊಳು ಸುವರ್ಣ ಘಟಂಗಳಿಂ ತೀವಿರ್ದ ಪನ್ನೀರುಮಂ ಚಂದ್ರಕಾಂತದ ಕರಗಗಳಿಂ ಮೊಗೆದೆರೆವ ಕೋಮಲಾಂಗಿಯರಿಂದೊಪ್ಪವೆತ್ತ ಅರವಟಿಗೆಗಳ ಗೊಂದಣದಿಂ, ದುರ್ಗಂಗಳಿಂ ನಗರಂಗಳಿಂ ಗ್ರಾಮಂಗಳಿಂ ಪುಣ್ಯಕ್ಷೇತ್ರಂಗಳಿಂ ಪುಣ್ಯತೀರ್ಥಂಗಳಿಂ ಯತಿಗಳಾ ಶ್ರಮಂಗಳಿಂ ಯೋಗಿಗಳಿಂ ಶಾಸ್ತ್ರಜ್ಞರಿಂ ಧನಾಢ್ಯರಿಂ ಷಟ್‌ಸ್ಥಲ ಬ್ರಹ್ಮಿಗಳಿಂ ರಾಜಿಸು ತಿರ್ದ ಕನ್ನಡ ದೇಶ ಮಧ್ಯದಲ್ಲಿ– ೫೪

ಚಂ. ವೃ.
ಹರನ ವಿಲಾಸವೋ ಸುಗುಣವೋ ಶುಭವೋ ಜಸವೋ ವಿಚಾರವೋ
ಕರುಣ ಸಮೂಹವೋ ಶಿವನ ಮಂದಿರವೋ ಶಿವನಾಯುವೋ ಸುಧಾ
ಕರಧರ ಭಕ್ತಿರತ್ನ ನಿಧಿಯೋ ಶಿವತತ್ತ್ವ ಸಮೂಹವೆಂಬೊಲುಂ
ಹರದನಹಳ್ಳಿಯೆಂಬ ಪುರವೊಪ್ಪಿಹುದಾವಗಲೇನನೆಂದಪೆಂ ೫೫

ಉ. ವೃ.
ಶ್ರೀ ಗಿರಿಯಿಂದ ನಾಲ್ವಡಿ ಕಕುದ್ಗಿರಿಗೈವಡಿ ಕಾಂಚಿಗಗ್ಗಳಂ
ಆ[1]ಗ[1] ಸಿತಂಬರಕ್ಕೆ ಗಯೆ ಕಾಶಿ ದಿವಾಕರಶೈಲಕಿಂತಲುಂ
ಅಗ್ಗಳವಾಗಿ ಸೊನ್ನಲಿಗೆಗಂ ವರ ಮಂಗಳವಾಡಕಂ ಸಮಾ
ನಂಗಡವೆಂಬ ಯುಕ್ತಿಗಳಿಗಾಶ್ರಯವಾ ಪುರವೇನನೆಂದಪೆಂ ೫೬

ಚಂ. ವೃ.
ಘನತರ ಭಕ್ತರಿಂ ಘನಗುಣಾನ್ವಿತರಿಂ ಘನಲಿಂಗ ನಿಷ್ಠರಿಂ
ಘನಗುರು ಭಕ್ತರಿಂ ಶರಣರಿಂ ಘನಜಂಗಮ ಭಕ್ತಿಯುಕ್ತರಿಂ
ಘನಭಸಿತಾಂಗರಿಂ ಘನದಯಾಪರರಿಂ ಘನಶಾಂತರಿಂ ಸದಾ
ಘನಬಲರಿಂ ಸುಧರ್ಮ ಪರರಿಂ ಪುರಮಿಪ್ಪುದದೇನನೆಂದಪೆಂ ೫೭

ಅನುಭವ ಮಂಟಪಂಗಳ ಸಮೂಹಗಳಿಂ ಬುಧರಾಲಯಂಗಳಿಂ
ಮಿನುಗುವ ರತ್ನಕಾಂತಿಯ ಸಮೂಹವನುಳ್ಳ ಶಿವಾಲಯಂಗಳಿಂ
ಅನುವಿಡಿದಾಗಮಂಗಳನು ಪಾಠಿಸುತಿರ್ಪ ನಿಕೇತನಂಗಳಿಂ
ಜಿನುಗುವ ಸಂಚರೀಕನವೊಲಿರ್ದುದು ಪಟ್ಟಣವೇನನೆಂದಪೆಂ ೫೮

ವ॥ ಮತ್ತಮಾ ಪುರದಲ್ಲಿ ಬಹಿರ್ವಳಯದುದ್ಯಾನವನಮಿರ್ಪುದದೆಂತೆಂದೊಡೆ-

ಉ. ವೃ.
ದಾಡಿಮಚೂತಬಿಲ್ವ ಸುರಹೊನ್ನೆಯಶೋಕೆ ಸುಕರ್ಣಿಕಾರ ತೂ-
ಗಾಡುವ ಕೌಂಗು ತೆಂಗು ಪನಸಂಗಳು ಪಾದರಿ ಪಾರಿಜಾತ ರೋ-
ಡಾಡುವನೇರಿ [2](ಲಂಗಳರ)[2] ಚಂಪಕ ವೀಳೆ ಬಾಳೆಯಿಂ
[3]ದೀಡಿರಿ[3]ದಿರ್ದ ತಣ್ಪಿನ ವಿಲಾಸ [4](ದೊಳೊ)[4]ಪ್ಪುವುದಾವಗಂ ಬನಂ ೫೯

1. ಗ (ಇ). 2. ಲರ (ಅಇ). 3. ದೀಡಿಕಿ (ಅಇ). 4. ಮೊ (ಅಇ).

ಗಂಧವ ಭೂಜಸಂಚಯದ ಕರ್ಪೂರವಾಳೆಯ ವೊತ್ತದಿಂದಲುಂ
ಬಂಧುಕ ದೌಘದಿಂದಲರ ನೆಲ್ಲಿಯ ಸಂಚಯದಿಂದ ನಿಂಬೆಯಿಂ
ಮಾದಲ ಯೂಥದಿಂದಲುರುವೊಂದುಳಿ ಕಿತ್ತಿಳೆರಾಜಿ ರಾಜಿಯಿಂ
ದೊಂದಿದ ಖರ್ಜುರಂಗಳ ಸಮೂಹದಿನೊಪ್ಪುವುದಾವಗಂ ಬನಂ ೬೦

ಕಂ. ತಳಿರಿಂ ಫಳದಿಂದಲರಿಂ
ಪುಳಿನ ಸ್ಥಳ [1](ಕೊಳದಿ ನೆಳಲಿನಿಂ ಗಳಿಯಿಂದಂ)[1]
ಅಳಿಯಿಂ ವಿಳಸಿತಮಾಗಿಹ
ಎಳೆವರಗಳ ಸಾಲಿಂದಿಹುದುದ್ಯಾ[2](ನವನಂ)[2] ೬೧

ಪಸುರೆಲೆ ಪಲ್ಲವ ಪೂವಿಂ
ದೆಸೆವಾಮ್ರದೊಳಿಪ್ಪಳಿ ಕೋಗಿಲೆಗಳ ಗಿಳಿಗಳ
ಸ್ವರದ ಜಿನುಗಿನ ಕೂಗಿನ ಚ-
ಪ್ಪರಣೆಯಗಳ ಬಳಗ [3](ಮಿಹುದು ತಾನುಪವನದೊಳ್)[3] ೬೨

ಕೆಂದಳಿರಿನ ಸಹಕಾರಂ
ಕೆಂದಾವರೆಯೆಸಳ್ಗ[4](ಳಿಂದ ಲತಿಶಯ)[4] ನವಿಲಂ
ದೊಂದಿ ವಸಂತಂ ಮದನಗೆ
ಯಂದದಿ ಪಿಡಿದಿರ್ದ ಚತ್ರವೆನಲೆಸೆದಿರ್ಕ್ಕುಂ ೬೩

ತಳಿರ್ಗಳ ಪೂಗಳ ಫಲಗಳ
ವಿಳಸದ ಶಾಖಾಗ್ರವ[5]ಡೆದಿರ್ದ[5], ದ್ರಾಕ್ಷಾಲತೆಗಳ
ನೆಳಲುಂ ಕಳ್ತಲಿಸುತ್ತಿ[6](ರ)[6]
ಲೊಳಪೊಗಲಂಜುತ್ತ, ಸೂರ್ಯಕಿರಣಗಳಿರ್ಕುಂ ೬೪

ಸರಸಿಜ ಕುಸುಮದ ರಜದಿಂ
ಸರಸಿಯೊಳುಂ ಪರೆದು ಕನಕವರ್ಣಮದಾಗಿ
ಪ್ಪುರುಜಲವೆಳೆವಿಸಿಲೊಳ್ಪಂ
ಉರುತರದಿಂ ಕರೆವುತಿರ್ಕ್ಕುಮುದ್ಯಾವನದೊಳ್ ೬೫

---

1. ದಿಂ ಕೊಳದಿಂ ನೆಳಲಿಂ ಗಿಳಿಯಿಂ (ಅಇ). 2. ವನಮುಂ (ಅಇ). 3. ದಿಂ ವಿಹುದು ಪವನದೊಳ್ (ಅಇ). 4. ಳಿಂದ (ಅಇ). 6. ಹ (ಅಇ).

ಚಂ. ವೃ.
ಪೊಸಜಡಮಿರ್ದು ಜಾಡ್ಯಗುಣಮಿಲ್ಲ ವಿಚಾರಿಸಿ ಪತ್ರಮಿರ್ದು ಪ-
ತ್ರಸಮಿತಿಯಿಲ್ಲಮಾರಡಿ[1](ಯದಿ)[1]ರ್ದುವು ಮಾರಡಿಯಿಲ್ಲವೆಲ್ಲಿಯುಂ
ಮಿಸುಪ ರಥಾಂಗಮಿರ್ದು ರಥದಂಗವುಮಿಲ್ಲವು ಮಬ್ಜ ಸಂಕುಳಂ
ಪಸರಿಸುತಿರ್ದುಬ್ಜ ಕುಲಮಿಲ್ಲದೆಯಿರ್ದುಮದೇಸು ಚೋದ್ಯಮೋ ೬೬

ಮದನನ ಬತ್ತಳಂತೆ ರಥದಂತೆ ಕುಲಾಲನ ಚಕ್ರದಂತೆ ಕುಂ-
ಮೊದಗದ ಚಂದ್ರನಂತೆ ದಿನದಂತೆ ವಿಹಾಯಸರಂತೆ ಶೌರಿಯುಂ
ತದುಭುತರಾಹುವಂತೆ ಮುನಿಯಂತೆ ಸುರಾಶಿಯುಗಂಗಳಂತೆ ಭಂ
ಗದಿ ಬಹರಂತೆ ಮಂತ್ರಿಕುಲದಂತೆ ವಿರಾಜಿಸು[2]ವಾ[2] ಕೊಳಾಂತದೊಳ್ ೬೭

ಅನುಮಿಷದೃಷ್ಟಿ[3]ಯಿ[3]ರ್ದ ಮುಖಕುಂಡಲಿ ತುಂಬಿಯು ಘೋಷದಿಂದ ಜೀ-
ವನಗುಣಪೊರ್ದದೂರ್ಧ್ವದಳಮಾಗಿಹ ಕಂಜದೊಳಿರ್ಪ ಹಂಸನಿಂ
ಘನಪರಿಪೂರ್ಣದಿಂ ಸ್ಥಿರವಹಾಸನದಿಂ ವನವಾಸಿತತ್ತ್ವದಿಂ
ಘನತರ ಶಾಂತಿಯಿಂದೆತಿಯೊಲಿರ್ದು[4](ದ)[4]ದಾವನಪೂಗೊಳಂ ವಲಂ ೬೮

ಕಂ. [5](ದ್ರುಮ)[5]ಗಳ ಪೊದ[6](ರುಗಳೊಳಗಂ)[6]
ಅಮಳ್ವಕ್ಕಿಗಳಿರ್ದು ತಮ್ಮ ಮರಿಗಳನರಸುತ
ವಿಮಲೋದಕದೊಳ್ ತಮ್ಮಯ
ಪ್ರಮುದಿತ ನೆಳಲಿಂಗೆ ತಾವು ಕುಟುಕಿಡುತಿ[7](ರ್ಕುಂ)[7] ೬೯

ಸ್ಮರದೇವ ತನ್ನ ಬಿಲ್ಲಂ
ಕರದಿಂ ಜೇವಡಿಸಿದಂತೆ ನೀರ್ವೂವಿನೊಳುಂ
ವರಮಧುಕರಮಧುಗುಡಿದುಂ
ಪೊರಡುತ್ತಂ ಮೊರೆದುದಾಗ ಭ್ರಮರಂ ಭ್ರಮದೊಳ್ ೭೦

ಹಂಸದಳಂಗಳ ಮಧ್ಯದಿ
ಹಂಸಂಗಳ್ ತಮ್ಮ ಶಿಶುಗಳಂ ತಂದಿರಿಸಿಯೆ
ಹಂಸರುಚಿಗಂಗವೊಡ್ಡಿಯೆ
ಹಂಸಶುಚಿ ಪಕ್ಕವ ಹಂಸದೊಳ್ ಕೆದ[8](ರಿರ್ಕುಂ)[8] ೭೧

---

1. ಯಿ (ಅಇ). 2. ಗಾ (ಅಇ). 3. ಯು (ಅಇ). 4. x (ಅಇ). 5. ಮಂ (ಅ) ; ಮರ (ಇ). 6. ರಿನೊಳಂ (ಅಇ). 7. ರ್ದವು (ಅಇ). 8. ರಿರ್ದವ್ (ಅಇ).

ಕಮಳಮುಖ ಕುಮುದನೇತ್ರಂ
ವಿಮಳೋದಕಮುಟ್ಟ ಸೀರೆ ತೆರೆಗಳ್ ನಿರಿಗಳ್
ಪ್ರಮುದಿತ ಚಕ್ರಂ ಕುಚಗಳು
ಅಮಳಿನ ವನಮಾತೆಯಂತೆ ಕೊಳವೆಸೆದಿರ್ಕ್ಕುಂ ೭೨

ವಚನ ॥ ಮತ್ತಮಾವನಂ ಅಖಿಲೇಶ್ವರಂಗೆ ಓಲಗಮಂ ಮಾಡಲ್ವೇಳ್ಕೆಂದು ಮದನರಾಜಂ ಬಂದು ಬೀಡುಬಿಟ್ಟು ಕೆಂಪಿನ ಗೂಡಾರಮಂ ಪೊಯಿಸಿದನೋ ಎಂಬಂತಿರ್ದ ಕೆಂದಳಿರಿಂ ಕಾಂತಿವೆತ್ತಶೋಕದ್ರುಮಸಂಚಯಪಂತಿಗಳಿಂದಲುಂ, ಗರುತ್ಮಂ ತನ್ನ ತಾಯ ಸೆರೆಯ ಬಿಡಿಸಲೆಂದು ಸುರಪನೊಳ್ಕಾಳಗಮನೆಯ್ದಿಯಮೃತಮಂ ತಂದು ತನ್ನ ದಾಯಾದ್ಯರಪ್ಪ ಕರ್ಕೋಟಕ ಕುಳಿಕ ಪದ್ಮಕ ಮುಂತಾದ ಸರ್ಪರಾಜರುಗಳ್ಗಂ ಕೊಟ್ಟು ತನ್ನ ತಾಯಂ ಸೆರೆವಿಡಿಸಿಕೊಂಡು ಪೋದಾಕ್ಷಣದಲ್ಲಿ ಸುರಪಂ ಬಂದಾ ಅಮೃತಮಂ ಸರ್ಪಂಗಳ್ಕಾಣದಂತೆ ಕೊಂಡೊಯಿದು ಪೊಂಬಣ್ಣದ ಕಿರುವರಣಿಗಳೊಳ್ತುಂಬಿ ಮತ್ತಮಾ ಬರಣಿಗಳಂ ಪೊರೆಗಟ್ಟಿ ಮೇಲೆ ಮುಳ್ಗಳಂ ಕಟ್ಟಿ ವೃಕ್ಷಂಗಳ ಬೇರುಗಳೊಳಂ ಶಾಖೆಗಳೊಳಂ ಕಟ್ಟಿರಿಸಿದನೆಂಬಂತಿರ್ದ ಪಕ್ವಫಲಭರಿತಮಾದ ಪಲಸದ್ರುಮರಾಜಿಗಳಿಂದಂ, ಮತ್ತಂ ಅಮೃತಸಾಗರಮಂ ಮಥಿಸಿದ ವೇಳೆಯಲ್ಲಿ ಅಮೃತಮಂ ಸುರರೆಲ್ಲರ್ಗಂ ಹಂಚುವಲ್ಲಿ ರಾಕ್ಷಸರ್ಬಂದು ಸುರರಂ ಕೊಲ್ಲುತ್ತಿರಲು ಸುರರೋಡುವಲ್ಲಿ ತಮ್ಮ ತಮ್ಮ ಪಾಲಿಗೆ ಬಂದಮೃತಮಂ ತಾಮ್ರದ ಭರಣಿಗಳೊಳಂ ತುಂಬಿ ಕುಜಂಗಳ ತುದಿಗಳೊಳ್ ಮಡಗಿ ಪೋದರೋ ಎಂಬಂತೆ ಜೋತೊರಗುವ ಕೆಂಪುವರ್ಣದೆಳೆನೀರ್ಗಳಿಂ ಭರಿತಮಾದ ಚೆಂದೆಂಗಳನಿವಹದಿಂ, ಸುರರ್ಗೆಲ್ಲಂ ಅಮೃತಮಂ ಕೊಟ್ಟು ಅಮೃತಕಲೆ ಬಯಲಾದ ಬಳಿಕ್ಕಲೆಮಗಮೃತವಿಲ್ಲೆಂದು ಮುನ್ನವೆಯೊಳಾಳೋಚನಂಗೈದು ಮೊದಲಾದಮೃತಮಂ ತೆಗೆದು ಕಿರಿದಾದ ಭರಣಿಗಳೊಳ್ತುಂಬಿ ತನ್ನಕಲಂಕಂಕುರುಹಾಗಿ ಭರಣಿಗಳಗ್ರುದಿ ಮುದ್ರಿಸಿ ವೃಕ್ಷಂಗಳ ಶಾಖಾಗ್ರದೊಳ್ಸಂಚಮಾಗಿ ಮಡಗಿದನೊ ಚಂದ್ರನೆಂಬಂತೆ ಅಮೃತರಸಂಗಳಂ ತೀವಿರ್ದ ಕಳಿತ ಫಳಂಗಳೊಳ್ ಜೋತೊರಗುವ ಜಂಬುನೇರಿಳ ವೃಕ್ಷಯೂಥಂಗಳಿಂದಂ, ಮತ್ತಂ ಮರ್ಕಟಂಗಳು ಬೀಗಿ ಬೆಳೆದಿರ್ದ ಚೆಂದೆಂಗಿನ ವೃಕ್ಷಂಗಳನ್ನಡರಿ ಮುಂದಿರ್ದ ಪೊಂಬಾಳೆಯಂ ಮುರಿದು ಮೂಸಿನೋಡಿ ಬಾಯೊಳಿಕ್ಕಿಕೊಂಡಗಿದುಗಿದು ಕೈಯೊಳಿರ್ದುದಂ ನೆಲಕ್ಕೆತೊಪ್ಪನೆ ಬಿಸುಟು ಮಟ್ಟೆಗಳ ತಾಳೊಳು ಕುಕ್ಕಿರಿಸಿ ತುಳುಕುವೆಳೆನೀರ್ಗಳಂ ಮುರಿದು ತೊಟ್ಟುಗಳಂ ಜಿಹ್ವೆಯಿಂ ಕಡಿದು ಕಳೆದು ವೊಳಗಿರ್ದ ನೀರಂ ಕುಡಿದು ದಣ್ಣನೆ ದಣಿದು ಮತ್ತಮೆಳೆನೀರ್ಗಳಂ ಕೊಯಿದು ತೊಟ್ಟಂ ಕಳೆದು ನೀರಂ ಕುಡಿಯಲಾರದೆಯೆಳೆನೀರಂ ಎವೆಯಿಕ್ಕದೀಕ್ಷಿಸಿಯದರೊಳ್ತನ್ನ ಮುಖಮಂಡಲದ ನೆಳಲಂ ಕಂಡು ತನ್ನ ಸೌಕುಮಾರ್ಯಕ್ಕಂ ತಲೆದೂಗಿ

ತನ್ನತಾಬೆಬ್ಬನೆ ಬೆರೆತು ಹರ್‍ರೆಂದು ಪಲ್ಗಿರಿದು ಹುಬ್ಬಂ ಬಿಗಿದು ಕಣ್ಣಮೆಳ್ಳಿಸಿ ನಾಲಗೆ
ಯಂ ನೀಡಿ ಕಿರ್‍ರೆಂದು ದನಿಮಾಡಿ ತನ್ನ ಬಳಗವನೋಡಿ ಭುಜಗಳನುಬ್ಬಿಸಿ ಶರೀರಮ
ನಲುಗಿಸಿ ನೀತುರ್ಗಳುಕಿ ತನ್ನ ನೆಳಲ್ಕಾಣಿಸದಿರೆ ಪ್ರತಿರೂಪಂ ಪಿಡಿವೆನೆಂದು ಕರವಂ
ಬಲುಹಿಂದಿಕ್ಕೆ ಸಿಕ್ಕಿದ ಕ್ಕೆಯಂ ತೆಗೆಯಲಾರದೆ ಹರ್‍ರೆಂದು ಬೆದರಿವೊಂದು ಕೈಯಿಂ
ಮರನ ತಬ್ಬಿ ಒಂದು ಕೆಯ್ಯ ಬುರುಡೆ ಮರನ ತಾಗಿ ಲೊಟಲೊಟೆಂಬುತ್ತಿರೆ ಬೆದರುತ್ತಂ
ಪಲ್ಗಿರಿವುತ್ತಂ ತಲೆಕೆಳಗಾಗಿಳಿವ ಮರ್ಕಟಂಗಳಂ ಕಂಡು ನಗುವಂತರೆವಿರಿದ ಫಲಂಗಳ್
ಜೋತೊರಗುವ ದಾಡಿಮವೃಕ್ಷರಾಜಿಗಳಿಂದಂ, ಮತ್ತಂ ರಂಭೆಯೆಂಬ ದೇವನಾರಿ
ಅಮೃತವ ಮುದ್ದೆಯಂ ಪೊಂಬಣ್ಣದ ಚೀಲಂಗಳೊಳ್ ಬಿರಿವನ್ನಕ್ಕಂ ತುಂಬಿ ಆಚೀಲಂ
ಗಳಂ ಸಾಲುಸಾಲಾಗಿ ವೃಕ್ಷಗಳ ತುದಿಶಾಖೆಯೊಂದಕ್ಕಂ ಕಟ್ಟೆರಿಸಿ ಆ ವೃಕ್ಷಕಂ ತನ್ನ
ಪೆಸರ ಕಾವಲಂ ಕಟ್ಟೆರಿಸಿದಳೋ ಎಂಬಂತೆ ಫಲಭರಿತಮಾಗಿ ಬಾಗಿರ್ಪ ರಂಭಾದ್ರುಮ
ಪಂತಿಗಳಿಂ, ಮತ್ತಂ ಕೈಲಾಸಪರ್ವತಮಂ ಪ್ರದಕ್ಷಿಣವಾಗಿ ಖೇಚರದಿಂ ತಿರುಗುವ
ಸಮಸ್ತ ದೇವತಾ ಸಮುದಯಂ ಬಳಲಿಪರೆಂದು ಭೂನಾರಿ ಕಸ್ತೂರಿಯಂ ಕುಸುಮಂ
ಗಳೊಳ್ತೀವಿ ಕೈಯೆತ್ತಿ ಕೊಡುತಿರ್ದಪಳೋ ಎಂಬಂತೆ ಕಸ್ತೂರಿ ಹೊಂಬಾಳೆಗಳ್ಭರಿತ
ಮಾದ ಪೂಗಪಾದಪ [1](ಸಂ)[1]ಚಯದಿಂದಂ, ಮತ್ತಂ ಭೂಲಕ್ಷ್ಮಿ ತನ್ನಲ್ಲಿಯ ಅಮೃತ
ಸಾರಮಂ ತೆಗೆದು ಸುವರ್ಣದ ಪೊಟ್ಟಣಂಗಳೊಳ್ಕಟ್ಟಿ ಕುಜಂಗಳ ಶಾಖೆಗಳಿಂ ಹೊತ್ತೆತ್ತಿ
ಳಿದಳೋ ಎಂಬಂತೆ ರಸಬಲಿದು ಪಕ್ವವಾಗಿ ಹೊಂಬಣ್ಣವೇರಿರ್ದ ಫಲಂಗಳಂ ಹೊರ
ಲಾರದೆ ತೂಗಿಬಾಗುವ ಕಿತ್ತಳೆಗಳ ನಿವಹಂಗಳಿಂ, ಮತ್ತಂ ಸಮಸ್ತಜನರ ಭೋಜನ
ಹಿತಾರ್ಥಮಾಗಿ ಬ್ರಹ್ಮದೇವಂ ಅಮೃತಸಾರಮಂ ತುಂಬಿ ವೃಕ್ಷಶಾಖೆಗಳೊಳ್ ಕಟ್ಟೆರಿಸಿ
ದನೋ ಎಂಬಂತೆ ಫಳಂ ತೀವಿಬೆಳೆದ ಹೇರಿ[2]ಳಿ[2]ಗಳುಂ, ತಮ್ಮಂ ಸಲಹಿದ ಜನರ್ಗೆ ತಾವು
ಸಹಕಾರಮಾಗಿ ಫಲಮಂ ಕೊಡುವುದಕ್ಕೆ ಪ್ರತ್ಯಕ್ಷ ದೃಷ್ಟಮಂ ತೋರ್ಪೆನೆಂಬಂತೆ ಪಕ್ವ
ಫಳಭರಿತಮಾದ ಸಹಕಾರ ದ್ರುಮರಾಜಿಗಳಿಂ, ಮತ್ತಂ ಮಾಮರದೆಳೆವರಂಗಳೊಳಗಣ
ಉತ್ತಳಿಕೆಗಳಿಂ ಸಂಚುವಿಂ ಮುರಿದು ಮೇಲಕ್ಕೆ ಜಿಗಿದು ಪಾಯ್ವ ನಸುರ್ಗಂ ನಾಲಗೆಯ
ನೊಡ್ಡಿಯದಂ ಸವಿಸವಿಯೆ ಗಂಟಲಿಗಂ ನಸುತಾರ್ಗಿರೆ ಕಣ್ಗಳನರೆಮುಗಿದು ಜಿಹ್ವೆಯಂ
ಚಪ್ಪರಿದು ನಸುರಂ ಕುಡಿದು ದಣ್ಣನೆದಣಿದು ಪಕ್ವವನರೆಗೆವರಿ ಕೆಂದಳಿರಹೊದರಿನ
ಹೊಸ ಕೊನೆಗೆ ನೆಗೆನೆಗೆದು ಬಂದು ಕುಳಿತು ಶರೀರಮಂ ಬಾಗಿಸಿ ಕೊರಲ ನುಣ್ಚರಕೆತ್ತಿ
ಅಖಿಲೇಶ್ವರನಂ ಓಲೈಸಲೆಂದು ಮದನರಾಜಂ ಬಂದು ಪುರದುದ್ಯಾನದೊಳ್ ಬೀಡು
ಬಿಟ್ಟದಾನೆ ವಿಯೋಗಿಗಳಿತ್ತ ಹೊದ್ದದಿರೆಂದು ಪೇಳ್ವಂತೆ ಸುಸ್ವರದಿಂ ಕೂಗುವ
ಗಂಡುಗೋಗಿಲೆಗಳ ತಂಡಂಗಳಿಂದಂ, ಮತ್ತಂ ಸೌರಭ ಶಾಖಾಗ್ರದ ತನಿವಣ್ಣಂ
ಕಾಲೊಳಿರುಂಕಿಕೊಂಡು ಚಂಚುವಿಂ ಕರ್ದುಂಕಿದಾಗ ತನಿವಣ್ಣಿನರಸಂ ಮುಖದ

1. ಸಲಾ (ಅಇ). 2. ಳೆ (ಇ).

ಮೇಲಕ್ಕೆ ಚಿಲ್ಲನೆಚಿಗಿದು ಪಾಯೆಯದಕ್ಕೆ ನಾಲಗೆಯಂ ಒಡ್ಡಿ[1](ಸೀಪ)[1]ರಿಸುತ್ತುಂ ಅರೆಗಣ್ಗಳಂ ಮುಗಿದು ಪಕ್ಕವನರೆಗೆದರಿ ಮೈಪುಳುಕಿತಮಾಗಿ ಚಪ್ಪರಿದು ದಣಿದು ಹರ್ಷಂಗೂಡಿ ನಲವಿಂ ಚಪ್ಪರಿಪ ರಾಜಕೀರಂಗಳ ಸಂದಣಿಯಿಂ, ಅಶೋಕ ದ್ರುಮಂಗಳ ತಳಿರತೊಡಂಬೆಯು ತಣ್ಣೆಳಲ ತಂಪಿನ ಸೊಂಪಿನ ಸೊಬಗಿನೊಳುಂ ಪಕ್ಕಂಗೆದರಿ ನಲವುಣ್ಮಿಪ್ರೊಣ್ಮಿ ಜಾರಿವರಿದು ಕುಣಿದಾಡುವ ಸೋಗೆನವಿಲ ನಿವಹಂಗಳಿಂದಂ, ದಾಳಿಂಬದ ಪಣ್ಗಳೊಡೆದು ರಸಂಗಳ್ಕೂಡಿ ಬೋರೆಂದು ಪರಿವ ಕಿರುದೊರೆಗಳಂ ದಾಂಟಿಸಲೆಂದುಂ ಕೆಂದಾವರೆಯೆಸಳ್ಗಳ ರತ್ನದೋಣಿಗಳಿಂ ಮಡಗಿಯವರೊಳ್ತಮ್ಮ ಶಿಶುಗಳಂ ಒಯ್ಯಾರದಿಂದಿರಿಪಿ ದೋಣಿಗಳ ತುದಿಯಂ ಕಚ್ಚಿ ಮೆಲ್ಲಮೆಲ್ಲನೆಳೆದೊಯ್ವಾಗಂ ಜಾದಿಸಂಪಿಗೆಹೊಂಗೇದಗೆದವನಮಲ್ಲಿಗೆಕಸ್ತೂರಿಮೊಲ್ಲೆ ಕರ್ಪೂರವಾಳೆಗಳ ಪರಿಮಳದೊಡಗಲಸಿದ ಮಂದಮಾರುತಂ ಮೆಲ್ಲನೆ ಸುಳಿಹುದೋರೆಯೆಳೆದೊಯ್ವ ದೋಣಿವೋರೆಯಾಗಲ್ ಜೀವಂ ಹಮ್ಮನೆ ಹಾರಿದಂತಾಗಿ ಬೆಪರುತ್ತುಂ ಆ ತಂಬೆಲರಿಗೆ ತಮ್ಮ ಪಕ್ಕಂಗಳಿಂ ಮರೆಮಾಡಿಕೊಂಡು ಮೆಲ್ಲಮೆಲ್ಲನಾಚೆಯದಡವುಂ ಸೇರಿ ತಮ್ಮ ಶಿಶುಗಳಂ ಕರಕೊಂಡು ಪುಳಿನಸ್ಥಳಂಗಳೊಳುಂ ನಡೆಗಲಿಸುವ ರಾಜಹಂಸ ಮಲ್ಲಿಕಾಕ್ಷ ಧೃತರಾಷ್ಟ್ರಂಗಳಿಂದೊಪ್ಪಂಬೆತ್ತಿರ್ಪುದ್ಯಾನವನದಲ್ಲಿ ೭೩

ಕಂ. ಕಪಿಗಳ್ಕುಡಿಸುತ್ತೊಗಿಸುವ
ಉಪರಿತವಾಗಿಪ್ಪ ತೆಂಗಿನೆಳೆ ನೀರುಗಳಿಂ
ದೊಪ್ಪುವ ಮಡುಗಳ ಕಾಲುಗ
ಳಪರಿಮಿತದ ಕಳಮ ಕ್ಷೇತ್ರಂ ತಾ [2](ನೆಸೆಗುಂ)[2] ೭೪

ಪಚ್ಚೆಯ ಪದಕವ ಭೂಮಿಗೆ
ಯಚ್ಚಳಿಯದೆ ತೊಡಿಸಿಯೊಪ್ಪವಿಟ್ಟರೊಯೆಂಬಂ
ತಚ್ಚುಗವಿಲ್ಲದೆ ಬೆಳೆದಿಹು
ಮುಚ್ಚಾವಚಮಪ್ಪ ಕಳಮಕ್ಷೇತ್ರಂ ಮುದದಿಂ ೭೫

ತಳಲೋಕದೊಳಿಪ್ಪಮೃತವ
ವಿಳಸದಿ ಭೂನಾರಿ ತೃಣದಿ ಹೊತ್ತೆತ್ತಿದಳೆಂ
ಬಳವಿಯ ತೆನೆಗಳ ತಿನುತಿಹ
ಗಿಳಿಗಳ ಸೋಹುತ್ತಲಿರ್ಪರಂಗನೆಯರ್ಕಳ್ ೭೬

1. ಸಿಕ (ಇ) ; x (ಅ). 2. ನೆನದಿರ್ಕುಂ (ಅ೧).

ಜಲದೇವತೆಯತರ್ಾವುಂ
ಸಲಹಿದ ಕಳವೆಗಳ ತಿಂಬ ಗಿಳಿಗಳ ಬಳಗವ
ಕೊಲಲುಂ ಲಲನಾ ರೂಪಿಂ
ದಿಳೆಯೊಳ್ಬಂ [1](ದಂತಿರುತಿಹ)[1] ಪಾಮರಿಯರ್ಕಳ್ ೭೭

ಪದ್ಮಮುಖ ಪದ್ಮ ನೇ [2](ತ್ರದ)[2]
[3](ಪ)[3]ದ್ಮದ ಸೌರಭದ ಗಂಧಿಯರ್ಕರ ಪದ್ಮದಿ
ಪದ್ಮಾಕರದಿಂ ಜನಿಸಿಹ
ಪದ್ಮಂಗಳ ತಿರಿದು ಗಿಳಿಗಳಂ ಇಡುತಿರ್ದರ್ ೭೮

ಚಂ.ವೃ. ಕಳಮುವನಂಗಳೊತ್ತಿನೊಳು ತಣ್ಣದಿರಂ ಇರುತಿರ್ಪ ಮಂಟಪಂ
ಗಳ ಸಮುದಾಯವೆಂಬೊಲು ವಿಶಾಲ ವಿಚಿತ್ರದಿಗ್ಯೈದು ಸಾಗರಂ
ಗಳ ಸೊಗಸಿಂದಲಿರ್ಪ ಜಲಶಾಲೆಗಳಲ್ಲಿ ಸುವರ್ಣ [4](ಕುಂಭಕಂ)[4]
ಗಳೊಳು ಹಿಮಾಂಬುವಂ ಪುಡಗಿಕೊಂಡೆರೆವುತ್ತಿಹರೇನನೆಂದಪೆಂ ೭೯

ಉ.ವೃ. [5](ಬಿಂಬವಪೋಲ್ವ ಚೆಂದುಟಿ)[5]ಯರಗ್ಗದ ವೃತ್ತಕುಚಾಗ್ರಹಾರದಾ
ಬೆಂಬಳಿಯಿರ್ಪ ಪಂಚಸರ ಚೆನ್ನಸರಂ ತ್ರಿಸರಂಗಳಿಂದಲುಂ
ಇಂಬುವಡರ್ದುರಾಜಿಸುವ ಕಾಮಿನಿಯರ್ಕಳ ಗುಂಪಿನಿಂದಲಾ
ಶಂಬರ ಶಾಲೆಯೊಪ್ಪಿದವು ತಣ್ಪಿನ ಸೊಂಪಿನಯಿಂಪಿನಿಂದಲುಂ ೮೦

ಕಂ. ಸುರಲೋಕದ ಕನ್ನಿಕೆಯರು
ನರರ್ಗಮೃತವನೆರೆಪು ತಾವು ರಕ್ಷಿಸಲೋಸುಗ
ನರರೂಪಿಂದಮೃತವನುಂ
ಹರುಷದೊಳೆರೆವಂತೆಯೆರೆವರು [6](ರೆಸೀರ್)[6]ಗಳನುಂ ೮೧

ನಾಸಿಕ ತುದಿದೃಷ್ಟಿಗ[7](ಳಿಂ)[7]
ದುಸುರೆಡೆಯಾಟಗಳು ನಿಂದು ನಿಃಕಂಪನದಿಂ
ದೊಸರ್ವಚಿದಮೃತವ ಸೇವಿಪ
ಕುಶಲದ ಯತಿಯಂತೆ ನೀರನೀಂಟಿದನೊರ್ವಂ ೮೨

---

1. x (ಅ); ದಿಪಂತಿರ್ಪ (ಇ). 2. x (ಅ) ನೇತ್ರಯ (ಇ). 3. x (ಅ); ಪ್ರ (ಇ). 4. x (ಅ); ಬಂಧಂ (ಇ). 5. x (ಅ); ಬಿಂಬಫರಂಭ....ಂಬಕಿ(ಇ). 6. x (ಅಇ). 7. ಳುಂ (ಅಇ).

ವ|| ಇಂತಪ್ಪುರವಟ್ಟಗೆಯೊತ್ತಿನೊಳುಂ ಗಜಶಿಕ್ಷಕರಿಂದಶ್ವಶಿಕ್ಷಕರಿಂ ಎಳಗನಿವಹ ಮನೇರಾಡುವ ಜಾತಿಕುವರರ ಸಂವಣಿಯಿಂದೊಪ್ಪುವ ವೈಹಾಳಿಯು ಬಯಲ ಸಮೀಪ ದಲ್ಲಿರ್ಪ ನಾನಾ ಕುಶಲ ಗತಿಗಳಿಂ ಶೃಂಗಾರಂಬೆತ್ತ ಗರುಡಿಯ ಗೃಹಂಗ[1](ಳೊ)[1] ತ್ತಿನೊಳಾ ಪುರದಗಳಿರ್ಪುದು ೮೩

ಕಂ. ಪುರವನಿತೆಯ ಕಂಧರದೊಳು
ಹರುಷದಿ ಕಟ್ಟಿರ್ದ ಕಾಂಚಮಣಿಸರವೆಂಬಂ
ತುರುತರ ಜಲ ತೀವಿರುತಿಹ
ಪುರದಗಳಿನ ಘಾತದಿರವನೇನೆಂದುಸುರ್ವೆಂ ೮೪

ಖಗರಾಜ ತನ್ನ ತಾಯುಂ
ಮಿಗೆತೊಳ್ತಂ ಮಾಡಿಯಾಳ್ವ ಫಣಿಗಳ ಕೊಲಲುಂ
ದುಗುಡದಿ ಪಾತಾಳಕ್ಕಂ
ಮಿಗೆ ಘುಮುಕಿದ ಮಾರ್ಗವವೊಲ್ ಪುರದಗಳಿರ್ಕುಂ ೮೫

ಉ. ವೃ. ಸೂರ್ಯನ ಸೋಂ[2](ಕುತಿ)[2]ರ್ಪ ಘನ ಕೋಂಟೆಯ ಕೊತ್ತಳ ಟೆಕ್ಕೆಯಂಗ ೪೦
[3]ಸಾರಗೆ ಗುಂಡು ಬುರ್ಜು[3] ಪೆಟಲಂಬಿನ ಕಂಡಿಗಳೊತ್ತಿನಲ್ಲಿಯಾ
ಳ್ಸೇರಿಯು ಮೇಲೆ ನಟ್ಟ ಮುಗಿಲಟ್ಟಣೆ ಕಟ್ಟಿದ ಭೂತ ಕೈಗಳಿಂ
ತೂರ್ಯರವಂಗಳಿಂದ ಭಟರಿಂದಲುಮೊಪ್ಪುವುದೇನನೆಂದಪೆಂ ೮೬

ಕಂ. ಮುತ್ತಿನ ಮಣಿ ಸಂಚಯುಗಳ
ಸುತ್ತಂ ಕೆತ್ತಿಸಿದ ಸೌಧಕಾಂತಿಗಳಿಂದಂ
ಬಿತ್ತಂಗಳ ಕೀಳ್ಪಡಿಸುತೆ
ಬಿತ್ತರದಿಂದೆಸೆವ ಚಂದ್ರವೀಥಿಗಳದರೊಳ್ ೮೭

ರತ್ನಂಗಳನು ಕುಶಲಪ್ರ
ಯತ್ನದಿ ಕೆತ್ತಿಸಿದಹರ್ಮ್ಯಶೋಭೆಗಳಿಂದಂ
ನೂತ್ನರವಿ[4](ಛವಿ)[4]ಯ ಜರೆವೊಲ್
ಪ್ರತ್ನದ ವೀಥಿಗಳು ಮೆರೆವುವಾ ಪುರವರದೊಳ್ ೮೮

1. x (ಅಇ). 2. x (ಅ) (ಇ) ಕಿ. 3. x (ಅ) ; ಸಾರಿ........ಂಡುಬಿಬಿರ್ (ಇ).
4. x (ಅ) ; ಪ್ರಭೆ (ಇ).

ನೀಲದಿ ಪಚ್ಚೆಯ ಪವಳದಿ
ಮೇಲೆನಿಸುವ ರತ್ನಮುತ್ತು ಜಾತಿಗಳಿಂದಂ
ನೀಲಾಂಬರ ಮುಸುಕಿಂದಂ
ಜಾ[1](ಲದ ವೊಲ್ತೋ)[1] ರ್ಕು ರನ್ನವಸರಂ ಪುರದೊಳ್ ೮೯

ದಿಳಿಪನ ಸುತನಂ ಕೌಸ್ತುಭ
ಮುಳಿಸಿಂದಂ ಬೇಡಲದನು ಧನಪತಿಯೆರೆದುಂ
ಕಳುಹಿದ ಪೊಂಗಳ ರಾಸಿಗ
ಳಿಳೆಯೊಳ್ತೋರ್ಪಂತೆ ಚಿನ್ನವರದರ ಪಸರಂ ೯೦

ಪುರವನಿತೆಯ ಮುಖಕಮಲವ
ಹರುಷದಿ ಸಿಂಗರಿಸಲೆಂದು ಮುತ್ತಿನ ಬೊಟ್ಟಂ
ಪರದರು ತಂದರೊಯೆಂಬಂ
ತುರುತರದಿಂ ಕಂಚುಗಾರವಸರಂ ಪುರದೊಳ್ ೯೧

ಧರೆಯೊಳ್ ಜನಿಸಿದ ಧಾನ್ಯಂ
ಧರೆಯೆಲ್ಲರ ಸಲಹುತಿರ್ದು ಖಚರರ ಸಲಹಲ್
ವರಗಗನದುದ್ದಮಾದಂ
ತುರುತರದಿಂ ದವಸರಾಸಿವಸರಗಳಿರ್ಕುಂ ೯೨

ಗಿರಿಗಳ್ಸುರಪಂಗಂಜುತ
ಭರದಿಂ ತಾವೆಲ್ಲ ಬಂದು ಪುರವಂ ಪೊಕ್ಕಿ
ರ್ದುರವಣಿಸಿರ್ದಪವೆಂಬಂ
ತರಳೆಯ ಮಳಮೆಗಳವಸರ ಪಸರಿಸಿತೋರ್ಕುಂ ೯೩

ಮದನನ ಧರ್ಮುವನೆಲ್ಲವ
ಸದುಹೃದಯರು ಪೊರೆಯ ಕಟ್ಟಿಮಾರುವರೆಂಬೊ
ಲ್ಮುದದಿಂ ಕಬ್ಬಿನ ಪೊರೆಗಳ
ಸದರದಿ ಬೆಲೆಗೆಯ್ವ ಯಿಕ್ಷುವಸರಗಳಿರ್ಕುಂ ೯೪

1. x (ಅ) ; ಲಾದಿಯೊಳ್ತೋ (ಇ).

ಮರುಗದ ದವನದ ಪಚ್ಚೆಯ
ಇರುವಂತಿಯ ಜಾತಿಸುರಗಿ ಹೊನ್ನೆಯ [1](ಅಲರಿಂ)[1]
ಪರಿಪರಿಯ ದಂಡೆಯಿಂಡೆಯ
ಹರುಷದಿ ಬೆಲೆಗೀವ ಕುಸುಮವಸರಗಳಿರ್ಕುಂ ೯೫

ವ|| ಕುಸುಮವಿಕ್ರಯ ವಸರದೊಳ್ ಓರ್ವ ಕವೀಶ್ವರಂ ಪೋಗುತ್ತಿರಲೊರ್ವ ಮಾಲೆಗಾರ್ತಿ ಪೂಸರಂಗಳಂ ಪಿಡಿದು ಮೇಲಕ್ಕೆ ನೆಗಹಿ ತೋರುತಿರ್ದಳದೆಂತೆಂದೊಡೆ-

ದ್ವಿಸಂಧಾನ ಚಂ. ವೃ.

ಸುರಪತಿ ಸೋಲ್ತನರ್ಕಮನವಿಟ್ಟ ಸುಧಾಕರ ಸೋಲ್ತ ಮತ್ತೆ ಮಾ
ಠರರುಗಳೊಪ್ಪೆ ಮೂವ[2]ರುಗಳೊ[2]ತ್ತಿನೊಳಗ್ನಿಯು ಸೋಲ್ತರೆಲ್ಲರುಂ
ವಿರತಸು ಸೋಲ್ತನೊಮ್ಮೆ ಪದಿಮೂರನೆ ಪೂವಿಗೆಯೆಂಬುತಾಗ ಪೂ
ಸರವನುಯೆತ್ತಿ ತೋರಿದಳು ಚಂಪಕಮಾಲೆಯ ಮಾಲೆಗಾರ್ತಿಯುಂ ೯೬

ದ್ವಿಸಂಧಾನ ಉ. ವೃ.

ಎತ್ತಿದುದೊಂದು ಪೂಸರಕೆ ಚಂದ್ರನುಮಗ್ನಿಸುರಾಧಿಪರ್ಕಳುಂ
ಚಿತ್ತವನಿತ್ತುದಲ್ಲದೆಯು ಮತ್ತೆ ಸುಧಾಕರನಿಮ್ಮೆಯಗ್ನಿಯೊ
ಮ್ಮಿಂತಿರಲಂತ್ಯದೊಳ್ ಹರಿಹರಾದಿಗಳಾಸೆ ನಿರಾಸೆ [3](ಯೆಂದವಳ್)[3]
ದಂತದ ಪುಷ್ಪ[4](ಕಂದೆ)[4] ನುಡಿಮುತ್ಪಲಮಾಲೆಯ ತೋರುತಿರ್ದ[5] (ಪಳ್)[5]
೯೭

ದ್ವಿಸಂಧಾನ ಮಲ್ಲಿಕಾವೃತ್ತ.

ವೀತಿಹೋತ್ರನ ವಾಯುಮಾಠರರಿಬ್ಬರಿಂ ಶಶಿಯೊಬ್ಬನಂ
ಮತ್ತೆಯುಂ ಜಲನಂ ಇವೆಲ್ಲರ ಕಾಂತಿಯಂ ಸರಿಗೂಡಿತಾಂ
ಪೂತವ[6](ರ್ಚಿತ)[6] ಪಾದಪೂಸರದಲ್ಲಿ ತಾಪಸನಂಟರೊಳ್
ಪ್ರೀತಿಮಾಡಿದ ಮಲ್ಲಿಕಾವಗ ಮಾಲೆಯೆಂಪುರೆ ತೋರ್ದಳುಂ ೯೮

ವ|| ಮತ್ತೊರ್ವ ಮಾಲೆಗಾರ್ತಿ ಕುಸುಮದ ಗೊಂಚಲಂ ಲತೆಸಮೇತವಾಗಿ ತೋರುತಿರ್ಪಳದೆಂತೆಂದೊಡೆ- ೯೯

---

1. x (ಅ) ; ಳಲರಿನ (ಇ). 2. x (ಅ) ; ತೊ (ಇ). 3. x (ಅ) ; ರು (ಇ).
4. x (ಅ). 5. x (ಅ) ; ಳುಂ (ಇ). 6. x (ಅ) ; ರ್ಜ್ಯ (ಇ).

ಕುಸುಮಿತಲತಾವೃತ್ತ ದ್ವಿಸಂಧಾನ.

ಭೂನಾರೀ ವಕ್ಷಸ್ಥಳದೊಳಗೆ ಪುಟ್ಟೀ ಲತಾಂತಂ ನಭಕ್ಕಂ
ಚೆನ್ನಿಂ ಬಾಯ್ಬಿಟ್ಟರ್ಪಲರಿಗೆ ಬಿಡೌಜಂ ತ್ರಿವಾರಂ ಅಪಾರಂ
ಪಾನೀಯಂಗಳ್ ನೀಡಿ ಸಲಹಿದ ಮ[1](ತ್ರಂದಲೀರ್ಯೈದುವಾರಂ)[1]
ಮುನ್ನಿಲ್ಲಿ [2](ದುರ್ದೈಕು)[2] ಸುಮಿತಲತಾವಲ್ಲಿಯೆಂ[3](ದೆಂದ)[3]ಳಾಗಂ ೧೦೦

ವಿದಳಿತ ಸರಸಿಜವೃತ್ತ (ನಿರೋಷ್ಠ ದ್ವಿಸಂಧಾನ).

ದಿವಿಜರಿಗೆರೆಯನು ವಸುಗಣನೆಯೊಳಿದ ಹಿಡಿದನು ಯತಿವರನೂ
ರವಿಗಣನೆಯೊಳಿಹಯೆಸಳುವ ಕುರಿತನು ಕಡೆಯೊಳು ಹರನೆನೆದಾ
ನವವಿದಳಿತ ಸರಸಿಜವಿವೆಯೆನುತವನಿದಿರೊಳಗಿರಿಸಲು ತಾ
ಸವಿನಯದೊಡವೆರಸಿದ ಗಡಣದಿ ನುಡಿದಳು ಸತಿಕುಲವರಸೀ ೧೦೧

ವ || ಕುಸುಮವಿಕ್ರಯದೋಸರದೊತ್ತಿನಲ್ಲಿ–

ಉ. ವೃ.

ಗಂಧದ ಕಲ್ಗಳಂ ತೊಳೆದು ಕಂಮುಗಳಂ ಪಿಡಿದೌಂಕು [4](ತಂಮೊದಲ್)[4]
ತಂದಹಿಮಾಂಬುವಂ ಬಿಡುತೆ ತೇಯಲು ಹಸ್ತಗಳತ್ತಲಿತ್ತಲುಂ
ಬಂದಿರೆ ತೋಳಬಂದಿ ಹೊಳೆದಾಡೆ ಕುಚಾಗ್ರದ ಸೀರೆ ಜಾರಲಾ
ಚಂದನಮುತ್ತಿನೋಲೆ ಮಿನುಗುತ್ತೆ ಮುಗುಳ್ನಿದರಿಂದುವಕ್ತ್ರೆಯರ್
೧೦೨

ಕಂಕಣನಾದವುಣ್ಮೆವುಸುರುಬ್ಬಸವುಣ್ಮಲು ದಾಹವುಣ್ಮಲುಂ
ಭೊಂಕನೆಸ್ವೇದವೊಣ್ಮೆ ಮುಡಿ ಜಾರಿ ಕುಚಂ ಕುಣಿದಾಡೆ ಹಾರವುಂ
ಕೌಂಕುಳೊಳೌಂಕಿ ಕಂಪಿಸೆ ನಡುಂ ಚಲಿಸಾಡಲು ನಾಸಿಕಾಗ್ರದಾ
ಮೂಕುತಿಮುತ್ತು ಕಂಪಿಸೆ ಮುಗುಳ್ನಿದರಗ್ಗದ ಗಟ್ಟಿವಳ್ತಿಯರ್ ೧೦೩

ಕಸ್ತುರಿ ಸಾದು ಕುಂಕುಮ ಜವಾದಿ ಹಿಮಾಂಬು ಸುಧೂಪ ಧೂಪದಾ-
ಸುಸ್ತರ ತೈಲದಿಂದಗಿಲು ಕಾಂಗಿ[5]ಲು ಹೈ[5]ಮದ ಗಂಧ ಗಟ್ಟಿಯಿಂ
ವಿಸ್ತರದೆಕ್ಷಕರ್ದಮುಕುಲಂ ಮುಖವಾಸನೆ ಸಂಚಯಂಗಳಿಂ
ಸ್ವಸ್ತದೊಳಿಪ್ಪುವೀ ಪರಿಮಳಂಗಳಿನಂಗಡಿ ವೀಥಿ ವೀಥಿಯಿಂ ೧೦೪

1. x (ಅ) ; ಮತ್ತೊ ಚಿತ್ತೀ ಕೈದುಬಾರಿ (ಇ). 2. x (ಅ) ; ದೋರ್ಯೈದ್ಸು (ಇ).
3. x (ಅ) ; ದಳ್ದ (ಇ). 4. x (ಅ) ; ತಂ........(ಇ). 5. x (ಅ) ; ಲುಂಹಿ (ಇ).

ಮ. ಸ್ರ.

ಶ್ರುತಿಘೋಷಂ ಮಂತ್ರಘೋಷಂ ಯತಿಗಳ ಜಯಘೋಷಂ
ಮಹಾಯಜ್ಞಘೋಷಂ
ನುತಿಘೋಷಂ ಶಾಸ್ತ್ರಘೋಷಂ[1]ಗಳುರು ನಿಜಯಜ್ಞಾನ ಸಂವಾದ ಘೋಷಂ[1]
[2]ಸತತೋತ್ಸಾಹದ ಪ್ರಘೋಷಂ ಪುರಹರವರಗೇಹಾಳಿ ವಾದ್ಯಘೋಷಂ[2]
ಕೃತಿಘೋಷಂ ಗೀತಘೋಷಂ ಇಹುದನವರತಂ [3]ಶಂಖವಾದ್ಯಾದಿ ಘೋಷಂ[3] ೧೦೫

ಸ್ಮರತಂತ್ರಾಸಕ್ತ ನಾರೀಕುಲಪದಹತಿ ಸಂಜಾತ ಮಂ[4](ಜೀರ)[4]ನಾದಂ
ವರಕಾಂಚೀದಾಮ ಸಂಯುಕ್ತ ಜಘನ ವಿಲಸತ್ ಕ್ಷುದ್ರಘಂಟಾನಿನಾದಂ
ಕರಿಹಸ್ತಾಗ್ರಾಂತ ಪೂರ್ಣೋದಕ ಚಪಲಬಹಿರ್ರೇಚಸಂಭೂತ ನಾದಂ
ಇರುತಿರ್ಕ್ಕಾನಂದದಿಂ ರಾಜಕುವರನುತಿ ವೈತಾಳಿಕಾನಿಕರನಾದಂ ೧೦೬

ಕಂ. ರಾಜಿಪ ದೇವಾ[5](ಲಯದಿಂ)[5]
ಪ್ರಜೆಗಳಿ[6](ಗನುಕೂಲ)[6] ಮಾದ ಗೃಹತತಿಯಿಂದಂ
ರಾಜರರಮನೆಗಳಿಂದಂ
ಓಜೆಯೊಳಿಂತಿರ್ಕು ವೈಶ್ಯಪುರ ಸಂತಸದಿಂ ೧೦೭

ಇಂತಪ್ಪ[7](ಪುರದ)[7] ಮಧ್ಯದಿ
ಸಂತತಮಿರುತಿರ್ಪ ಗಿರಿಶನರಮನೆ ಬಾಗಿಲ್
ಮುಂತ[8](ಣದು)[8]ಪ್ಪರಿಗೆಗಳಾ-
ತಿಂತಿಣಿ ರಜತಾದ್ರಿಗ[9](ಳವೊಲು)[9]ನ್ನತವೆಸೆಗುಂ ೧೦೮

ಸ್ವರ್ಣದ ಭಿತ್ತಿಗಳೊಳು ನವ
ವರ್ಣದ ಮಣಿಯಂತೆ ತೆತ್ತಿಸಿ[10](ಹ)[10] ಪ್ರಮಥರ್ಕಳ
ವರ್ಣದ ಚಿತ್ರದ ರೂಹಿನ
ಅರ್ಣವಭವಧರ [11](ನಿವಾಸ)[11] ತಾನೆಸೆದಿರ್ಕುಂ ೧೦೯

---

1. x (ಅ) ಸಂವಾದಮುರುನಿಜಯದ ಘೋಷಂಗಳ (ಇ). 2. x (ಅ) ಸತತೋತ್ಸಾಹದ ಪ್ರಘೋಷಂ ತತ್ಸಾರ್ಥಘೋಷಂ ಪುರಹರವರಗೇಹಾಳಿವಾದ್ಯಘೋಷಂ (ಇ). 3. x (ಅ) ಶಂಕಾದಿಘೋಷಂ. 4. x (ಅ ಇ). 5. x (ಅ); ಲ್ಯಗಳಿಂದಾ (ಇ). 6. x (ಅ); ಗೆಕುಸಲ (ಇ). 7. x (ಅ ಇ). 8. x (ಅ); ಣು (ಇ). 9. x (ಅ) ಳೊಲ್ಲು (ಇ). 10. x (ಅ); ರ್ದ (ಇ). 11. x (ಅ); ಸವಾಲ್ಯ (ಇ).

ಮುಂದಿಹ ನಂದಿಯ ಸಿಂಗರ
ದಂಪವ ನೆರೆನೋಡಿನೋಡಿ ಹರುಷಂದಾಳುತ
ಲಿಂದುಧರ ತನ್ನ ಸೇವಿ[1](ಪ)[1]
ಮುಂದಿಪು ನೋ[2](ಡುತೆ)[2] ಗೃಹಾಂತರಾಳದೊಳಿರ್ದಂ ೧೧೦

ವ ॥ ಆ ಸಮಯದಲ್ಲಿ ದಿವ್ಯೇಶ್ವರನ ಓಲಗದವರೆಲ್ಲಂ ಓಲೈಸಲೆಂದು ಬರುತಿರ್ದ ರದೆಂತೆಂದೊಡೆ–

ಉ. ವೃ.
ಅಂಬುಜಪತ್ರನೇತ್ರೆಯಳಿಕುಂತಳೆಯುತ್ಪಲಗಂಧಿಗಂಧಿ ಸ-
ದ್ಬಿಂಬಫಳಾಧರೇಂದುಮುಖಿ ಚಂಪಕನಾಸಿಕ ಕಂಬುಕಂಠಸೌ-
ರಂಬದಿ ಬಂದಳೊತ್ತಿನ ವಿಳಾಸಿನಿಯರ್ಕಳ ಕೈಯ ವೀಣೆಯಿಂ
ದಿಂಬುವಡರ್ದ ಸತ್ತಿಗೆಯು ತಣ್ಣೆಳಲಿಂದಲುವಾಗಲೊರ್ವಳುಂ ೧೧೧

ಚಂ. ವೃ.
ಕಳಸಮುರೋಜ ಹಂಸಗತಿ ಚಂಪಕಗಂಧಿ ಚಮೂರುನೇತ್ರೆಕೋ-
ಕಿಲರವ ಪಲ್ಲವಾಧರೆ ಲತಾಂಗಿ ಮನೋಜನ ಮಿತ್ರೆನೀಲಕುಂ-
ತಳೆಯಳಿಲೇಶನಲ್ಲಿ ವರ ಚಾಮರವಿಕ್ಕುವ ವೇಳೆಯೆಂಬುತಂ-
ದಳದೊಳು ಬಂದಳಾಳಿಯರ ವಂಗಡದಿಂ ರತಿದೇವಿಯಂದದಿಂ ೧೧೨

ಮತ್ತೇಭ.
ಮುಡಿಯಿಂ ಜೋಲ್ವಲರಿಂ ಮದೇಭಗತಿಯಿಂ ಕೈಯೊಾರಮಂ ತಾಳ್ದು ತಾಂ
ಗಿಡಿದಾಗಿರ್ಪಕರಂಗಳಿಂ ಪಿಡಿದ ಪೊಂದಾಳಂಗಳಿಂ ರಂಜಿಪಾ-
ಕಡುಚೆಲ್ವಾಳಿಯರೌಘದಿಂ ಪೊಡೆವ ನಾನಾವಾದ್ಯದಿಂ ಮುತ್ತಿನಾ
ಕೊಡೆ ಕಾಳಂಜಿಗಳಿಂದೆ ಬಂದರು ಮಹಾಪಲ್ಲಕ್ಕಿಯೊಳ್ ನಾರಿಯರ್ ೧೧೩

ವರಜಯ ಗಂಟೆ ಗಂಟೆ ಕಿ[3](ರು ಪೀಪಿನ ಪೂರಿ)[3] ಬುರುಂಗವಾಸಕಿ-
ನ್ನರಿಸರವೀಣೆವೀಣೆ ಡಮರುಂ ವರತಾಳಮುತಾಳಮುಂಚ ತಿ-
ತ್ತಿರಿಘನಭೇರಿಭೇರಿ [4](ರವದಿಂದೆ)[4] ಕರಂಡೆಕರಂಡೆ ನಿಸ್ಸಳಂ
ಮುರಜೆ ಮೃದಂಗ ಮೌರಿಯುಮವೈದಿದರೀಶನ ವಾಸದಲ್ಲಿಗಂ ೧೧೪

---

1. x (ಅ); ಸುವ (ಇ) 2. x (ಅಇ). 3. ರುಪಿನಪೀರಿ (ಅ); ರುಪಿರಿ (ಇ).
4. ವರದೊಳು (ಅಇ).

ಕಂ. ಪಚ್ಚೆಯ ರತ್ನದ ಚಕ್ರದ
ನಿಚ್ಚೆಯ ನೆಳಲಲ್ಲಿ ಬಪ್ಪವನಿತೆಯರಿಕ್ಕಿದ
ಪಚ್ಚೆಯ ಪದಕದ ಕಾಂತಿಗ
ಳು[1](ಚ್ಚಯಿ)[1] ಸಲ್ವೀಥಿಹರಿತ ಪಟದಂತೆಸೆಗುಂ ೧೧೫

ಕೆಂಬವಳ ಚತ್ರನೆಳಲಿಂ
ಹೊಂಬಣ್ಣದ ಸೀರೆಯುಟ್ಟ ಕಾಮಿನಿ ನಡೆತಹ
ಬೆಂಬಳಿಪಥ ಕುಂಕುಮ[2](ಮೆಂ)[2]
[3](ಬಿಂಬಿಂ)[3] ಪರಕರಿಸೆ ಬಂದಳೋಲಗದೆಡೆಗಂ ೧೧೬

ಕಂಕಣ ಕಟಿಸೂತ್ರಂಗಳ
ಕಿಂಕಿಣಿ ನಾದಂಗಳ ಜತಿಗ [4](ಳು)[4] ಝುಂಕಿಸುತಿರೆ
ಶಂಕರನೋಲಗದೆಡೆಗಂ
ಭೋಂಕನೆ ಬಂದಿರ್ಪಖಿಳ ನಾರಿಯರೆಲ್ಲಂ ೧೧೭

ವಚನ: ಮತ್ತಮಾ ಅಖಿಲೇಶ್ವರನ ಸಭಾಸ್ಥಾನವೆಂತಿರ್ದುದೆಂದಡೆ ಜಡೆಗಳಂ ಸುತ್ತಿರ್ದ ಮಕುಟಂಗಳಿಂ ಯೋಗಪಟ್ಟಿಕೆಗಳಿಂ, ಶಿರಕೊರಲುರದೊಳ್ಧರಿಸಿರ್ಪಾರುದ್ರಾಕ್ಷ ಮಾಲಿಕೆಗಳಿಂ, ಸರ್ವಾಂಗ ಧೂಳನವಾದ ವಿಭೂತಿಯ ಕಾಂತಿಗಳಿಂ, ಕಾಂತಿವೆತ್ತ ಸುಲಿಪಲ್ಗಳಿಂ, ಸೊಗಸುವಡೆದ ಮುಖಮಂಡಲದಿಂ, ಗಂಡಸ್ಥಲವಚುಂಬಿಸುತಿರ್ಪ ರುದ್ರಾಕ್ಷಕುಂಡಲಂಗಳಿಂ, ಕಮಂಡಲ ದಂಡವಿಭೂತಿ ಗುಂಟಿಕೆಗಳಿಂ, ನಾರಸೀರೆಯ ಕೋವಣಂಗಳಿಂದೊಡ್ಯಾಣಂಗಳಿಂ, ಪೊರ್ದ ಪುಲಿಚರ್ಮಂಗಳಿಂ, ಶಿವಂ ಯತಿವೇಷಂಗಳಿಂ ಬಂದಂತೆ, ಕಾಶಿಕೇದಾರಗಯೆಶ್ರೀಶೈಲ ಮುಂತಾದ ಶಿವಕ್ಷೇತ್ರ [5]ಲಿಂಗಂ[5]ಗಳಿಂಗಂ ತಮ್ಮ ದರ್ಶನವನಿತ್ತು ದಿವ್ಯೇಶ್ವರಂಗೆ ದರ್ಶನವ ನೀಯಲೆಂದು ಬಂದ ಅಂಗಲಿಂಗದ ಸಮೀಪದಲ್ಲಿ ಮೃದುಗದ್ದಿಗೆಯಂ ಕುಳಿತು ತಮ್ಮ ತಮ್ಮ ಕರಸ್ಥಲದಲಿರ್ಪ ಲಿಂಗಂಗಳಂ ಜಾನಿಸುತಿರ್ಪ ಯೋಗೀಶ್ವರ ವೃಂದಂಗಳಿಂ, ನವರತ್ನಂಗಳಿಂ ತರತರವಾಗಿ ರಾಶಿಗಳಂ ಸುರಿದರೋ ಎಂಬಂತೆ ನವರತ್ನಖಚಿತಕೋಟಿಗಳ್ಮೆರೆಯೆ ಬಹುರತ್ನಯೂಥಪ್ರಭೆ ಮಂಡಲಿಸಿ ಪರಿವೇಷಂಗೊಂಡ ಮಾರ್ತಾಂಡಮಂಡಲದ ಗೊಂದಣದಂತೆ, ಕರಕಮಲಂಗಳಿಂ ಮುಗಿದು ಕಿಕ್ಕಿರಿದು ನಿಂದ ಚೋಳ ಗೌಳ ಲಾಳ ಪಾಂಚಾಳ ವರಾಟ ಕರ್ನಾಟ- ಮೊದಲಾದ ರಾಜಪುತ್ರಪ್ರಜಂಗಳಿಂ, ಮತ್ತಂ ಮಂತ್ರಿದಂಡನಾಥಯೂಥಂಗಳಿಂ,

1. ಚ್ಛ (ಅಇ). 2. ಸುಂ (ಅಇ). 3. ಬಿಂಬಿಂ (ಅಇ). 4. ಳಂ (ಅಇ).
5. x (ಇ).

ಮತ್ತಂ ಗದ್ಯಪದ್ಯ ಕಾವ್ಯ ಕಲಾಪ್ರೌಢಿಯೊಳ್ಪೆಸರ್ವಡೆದಿರ್ದ ಸರಸ ಕವಿವ್ಯೂಹಂಗಳಿಂ, ಆಸ್ಥಾನಮನಾಶ್ಚರ್ಯರಸದೊಳ್ಕರುವಿಟ್ಟಂತಿರಿಸುವ ಸಾಹಸವನೊಳಕೊಂಡ ಗಮಕಿಗಳಿಂ ಶಬ್ದಖಂಡನವನು ಮಾನಖಂಡನಮರ್ಥಖಂಡನವೆಂಬ [1]ತರ್ಕತಂತ್ರ[1] ಕೋವಿದರಪ್ಪ ವಾದಿಗಳಿಂ, ಪೊಸಪೊಸನುಡಿಗಳಂ ಮಾಧುರ್ಯಮಾಗಿ ಕರ್ಣರಸಾಯನವ ಕೇಳ್ವ ಸಭೆ ಗೀತವಾಗ್ಮಿಗಳಿಂ, ನಲ್ಲರೊಳ್ ಕೂರ್ಮೆಯಿಂ ಬೆರಸಿ ಹಗಲಿರುಳೆಂದರಿಯದೆ ಅಗಲಲಾರದೆ ಜಕ್ಕವಕ್ಕಿಯಂತೆ ಕೂಡಿರ್ದ ವೇಳೆಯೊಳ್ಸೂಳಾಯತನ ಮಾತಕೇಳ್ಪ ಸಿಡಿಲ ದನಿಯಂ ಕೇಳ್ದ ರಾಜಮರಾಳನಂತೆ ಬೆದರಿ ಮನವಗಲದೆ ತೆಕ್ಕೆ ಸಡಿಲಿ ತಡಬಡದಿಂ ಸಿಂಗರಿಸಿ ಕೊಂಡು ಬಂದು ದಿವ್ಯೇಶ್ವರಂಗೆ ಕರಾಬ್ಜಂಗಳಂ ಮುಗಿದು ಸಾಲ್ಗಿಡಿದು ನಿಂದಿರ್ಪ ವಾರಾಂಗ[2]ನೆಯರ[2] ಮೊತ್ತಂಗಳಿಂದಂ, ಉಟ್ಟ ಪೊಂಬಟ್ಟೆಯ ತೋರಮುರುಂಬಿನ ಕಂಜ ದಳಾಕ್ಷದ ಘಟಕುಚಯುಗದ ಮುತ್ತಿನೇಕಾವಳಿಯ ಕೀಲಕಂಕಣದ ಕಾಂಚೀದಾಮದ ಕನ್ನಿಕೆಯರು ಕೊಂಕಿನಿಂದು ಚಂದ್ರನ ಕಿರಣಂಗಳಿಂ ಪೊರೆಗಟ್ಟಿ ಪೆಗಲೊಳಾಂತಿರ್ದ ಪರೋಯೆಂಬಂತಿರ್ದ ಚಾಮರಗ್ರಾಹಿಣಿಯರ ಮೊತ್ತಂಗಳಿಂ, ಕರ್ಣಂಗಳೊಳ್ತುಂಬಿದ ಪುಣಗುಗಳಿಂ ಕೊರಳೊಳ್ ಧರಿಸಿದ ಮಲ್ಲಿಕಾಗಂಧವನುಳ್ಳಗಿಲಗಂಧಂಗಳಿಂ ಲಲಾಟ ದೊಳ್ಧರಿಸಿದ ಕ[3](ರ್ಪೂರಮಿ)[3]-ಶ್ರಿತ ಭಸ್ಮತ್ರಿಪುಂಡ್ರದಿಂ, ಕಕ್ಷಸ್ಥಲಂಗಳೊಳ್ಧರಿಸಿದ ಯಕ್ಷಕರ್ದಮಂಗಳಿಂ, ವಕ್ಷಸ್ಥಳಂಗಳಲ್ಲಿ ಉನ್ನತಕುಚಮಂಡಲಂಗಳಲ್ಲಿಯ ಮಧ್ಯದೊಳೊಟ್ಟಿದ್ದ ಕುಂಕುಮದೊಡವೆರೆದ ಶ್ರೀಗಂಧಂಗಳಿಂದಂ ಸಿರಿವಿಡಿದುಟ್ಟ, ದೇವಾಂಗ ವ್ರಜಂಗಳಿಂ, ಜಘನಂಗಳೊಳ್ ರಂಜಿಪ ಕಾಂಚೀದಾಮಂಗಳಿಂ ಹಾರಹೀರಾವಳಿ ತ್ರಿಸರ ಪಂಚಸರ ಭುಜಕೀರ್ತಿ ಕೇಯೂರ ರತ್ನಕಂಕಣಂಗಳಿಂದಲಂಕರಿಸಿ ಪರಿಮಳಪಧಿದೇವತೆಯರೆಂಬಂತೆ ಮುತ್ತಿನ ಸೀಗುರಿಯಂ [4]ಪಿಡಿದು ನಿಂ[4]ತಿರ್ಪ ವಾಮಲೋಚನೆಯರ ಗೊಂದಣದಿಂ, ಮುತ್ತಿನ ಸೀಸಕಂಗಳಿಂದಲಂಕೃತಮಾಗಿ ರತ್ನತಾಲವೃಂತಂಗಳಂ ಪಿಡಿದಿರ್ಪ ಕುಮುದನೇತ್ರೆಯರ ಪಂತಿಗಳಿಂ, ಅಳಿಗುರುಳ ತಿಳುವಸುರಸಳಿತೋಳ ಚಕೋರ ನಯನದ ಮರಾಳಗಮಕದ ಚಂಪಕನಾಸಿಕದ ಪಲ್ಲವಾಧರದ ಗಿಳಿಯನುಡಿಯ ಕಳಶಕುಚದ ತೋರಹಾರದ ರತ್ನದೋಲೆಯ ಕೀಲಕಂಕಣದ ಸಿರಿವಿಡಿದುಟ್ಟ ಮೇಘ ವರ್ಣದ ಪಟ್ಟುಸೀರೆಯ ಕಟಿಸೂತ್ರಕಿಂಕಿಣಿ[5]ಯ[5] ಪಾಯಪಟ್ಟದ ಇಂದುಮುಖಿಯರು ವಜ್ರಮಣಿ ತೆತ್ತಿಸಿದ ವೇತ್ರಂಗಳಂ ಪದ್ಮರಾಗಮಣಿತೆತ್ತಿಸಿದ ವೇತ್ರಂಗಳಂ ನವರತ್ನ ಖಚಿತ ಸ್ವರ್ಣದಂಡಂಗಳಂ ವಿದ್ರುಮದಂಡಂಗಳಂ ಪಿಡಿದು ನವರತ್ನ ಖಚಿತ ಕಿರೀಟಂಗಳಂ ಧರಿಸಿರ್ದ ರಾಜಕುವರನಂ ಪೊಡೆಪವಲಿಸಿ ನೂಂಕಿ ಸಂದಣಿಸದಿರಿ ಒತ್ತರಿಸದಿರಿ ಇಬ್ಬರೊಂದಾಗಿ ನುಡಿಯದಿರಿ ಸನ್ನೆಗೆಯ್ಯದಿರಿಯೆಂದು ಝಡಿದು ಝಂಕಿಸಿ ಮತ್ತಂ ಹೊಸತಾಗಿ ಬಂದು ಕಾಣ್ಬವರಂ ಅಖಿಲೇಶ್ವರನಂ ಕಾಣಿಸುವ ಕಂಚುಕಿಯರ ಮಂಗಡ

---

1. x (ಇ). 2. x (ಇ). 3. x (ಇ). 4. x (ಇ). 5. x (ಇ).

ದಿಂದೊಪ್ಪುವ ಸಭಾಮಂಟಪದೊಳಖಿಲೇಶ್ವರನನಂತ ಸೌಖ್ಯದಿಂದನಂತೋತ್ಸವದಿಂದನಂತ ಗಂಭೀರದಿಂದನಂತ ಜಸದಿಂದಿರ್ದನಂತುಮಲ್ಲದೆಯುಂ— ೧೧೮

ಮ. ವಿ. ವೃ.

ಪರಮೇಶಂ ಗಿರಿಶಂ ಸುಧಾಕರಧರಂ ಕಾಲಾಂತಕಂ ಶಂಕರಂ
ಉರಗೇಂದ್ರಾಭರಣಂ ವಿನಾಯಕ ಪಿತಂ ಗಂಗಾಧರಂ ಕಾಮಸಂ-
ಹರ ಸೌಖ್ಯಾಕರ ರಕ್ಷಿಕೆಮ್ಮನನು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮ [1]ಜಟಾ[1]ಧರಂಪುರಹರಂ ಭರ್ಗಂ ಶಿವಾವಲ್ಲಭಂ ೧೧೯

ವಚನ || ಇದು ಸಕಲ ಸುರಗಣಮಣಿಮುಕುಟರಚಿತ ದ್ಯುಮಣಿಪ್ರಭಾಧಿಕ್ಯ ದ್ಯುತಿ ಪುಂಜ ಮಂಜುಲ ರಂಜಿತ ಸಂಪಚ್ಚರಣನೆನಿಪ ಭೂತೇಶ್ವರ ಶ್ರೀಪಾದ ಪಯೋಜ ಮಕರಂದರೋಲಂಬಮಾನ ಚೆನ್ನವೀರೇಶ್ವರಾಭಿಧೇಯ ವರಜಂಗಮದೇವಂ ವಿರಚಿತ ಮಪ್ಪ ಷಟ್ಸ್ಥಲವಲ್ಲಭ ಮಹಾಪ್ರಬಂಧದೊಳ್ ದಿವ್ಯೇಶ್ವರಮಾಹಾತ್ಮ್ಯ ಕಥನಂ ಪ್ರಥಮಾಶ್ವಾಸಂ ಸಂಪೂರ್ಣಂ

---

1. x (ಇ).

## ದ್ವಿತೀಯಾಶ್ವಾಸಂ

# ಗುರುಪೂಜಾ ಮಾಹಾತ್ಮ್ಯಂ, ದೇಶಾಂತರ ಕಥನಂ.

ಕಂ. ಶ್ರೀಮತ್‌ಶರ್ವಂ ಶಂಕರ
ಸೋಮಧರಂ ಶರಣಹೃತ್ಸರೋಜನಿವಾಸಂ
ಪ್ರೇಮಂ ಕೈ[1]ಮಿಕ್ಕುತ್ತು[1]–
ದ್ದಾ[2]ಮಂ[2] ಭೂತೇಶ ರಕ್ಷಿಕೆನ್ನನವರತಂ ೧

ಸ್ರ. ವೃ.
ಭೂತೇಶಂ ಸ್ಕಂದತಾತಂ ಗಿರಿಶನಖಿಲ ಭೋಗಂಗಳಿಂದಿರ್ದು ಸರ್ವ
ಜ್ಞಂ ತನ್ನೊಳ್ತಾನೆ ಮತ್ತೊಂದ ನೆನೆದು ಚರಲಿಂಗೌಘಮಂ ಭಕ್ತಿಯಿಂದ
ಶ್ರಾಂತಂನಾಂ ಪೂಜಿಸುತ್ತಂ ಇರದಿರೆ ಧರೆಯೊಳ್ ಭಕ್ತಿಯುಂಟಾಗದೆಂದುಂ
ನಿತ್ಯಾನಂದಾಮೃತಂ ತಾಂ ಉರುತರಚರಸದ್ಭಕ್ತಿಗುದ್ಯುಕ್ತನಾದಂ ೨

ಚಂ. ವೃ.
ತನಗೆ ಚರಪ್ರಸಾದವನುಪಾರದ ಮಾಡಿಸಲೋ[3]ಸುಗಂ[3] ಪುರಾ
ತನಮತದಿಂದೆ ಜಂಗಮಕೆ ತೃಪ್ತಿಯ ಮಾಡಿದಡೆನ್ನ ತೃಪ್ತಿಯೆಂ
ದೆನುತ ಶಿವಂ ಚರಕ್ಕೆ ಮಠವಂ ಸಮಭಕ್ತಿಯೊಳೀವುದೆಂದು ತಾಂ
ಕನಸಿನೊಳಿರ್ದು ಪೇಳ್ದ ಜನರೆಲ್ಲರೊಳಂ ಘನದಿವ್ಯಲಿಂಗನುಂ ೩

ಪುರಹರ ತನ್ನ ನಚ್ಚಿ[4]ಹ[4] ಯತೀಶ[5]ನೊ[5]ಳಂ ಸತತಂ ಷಡಂಗದಿಂ
ವರಗಳ ಬೇಳ್ಪ ಭಕ್ತರ ಮನಂಗಳೊಳಂ ಸತತಂ ವಿಚಾರದಾ
ತುರದಿ ಭಜಿಪ್ಪ ನಂಬಿದ[6]ರೊ[6]ಳಂ ವರರಾಜರೊಳಂ ವಿಲಾಸದಿಂ
ದುರುತರ ಗೋಸಲೇಶ ಚರಮೂರ್ತಿಗೆ ಬಿನ್ನಹಮಾಡಿಯೆಂದನುಂ ೪

ಅರಿದರು ಸರ್ವರೆಲ್ಲರು ಹರಂ ನುಡಿದಂದವ [7](ಯೋಚಿಸುತ್ತಿತ-
ಮ್ಮರಿವಿಗ)[7] ಮೂಲ್ಯವಾದ ವರಗೋಸಲ ದೇವರಿಗಂ ಸುಬಿನ್ನಹಂ
ಮರೆಯದೆ ಮಾಡಿಯುಂ ಮಠವ ಕಟ್ಟಿ[8]ದ[8] ರಾಗಳನಂತ ಚೆಲ್ವಿನಿಂ
ಕರೆಗೊರಲಂಗೆ ಸಂತಸವನೀವುತ ಜಂಗಮಮೂರ್ತಿಯಿರ್ದನುಂ ೫

1. ಮಿಕ್ಕು. (ಅಇ). 2. ಮಂಮಾಂ (ಅಇ). 3. ಕ್ಸರಂ (ಅಇ). 4. ಹೆ (ಅಇ)
5. ದೊ (ಅಇ). 6. ಯ (ಅಇ). 7. ತಮ್ಮೊಳೋಚಿಸುತ್ತಿರುವಿಗೆ (ಅಇ) 8. ದಿ (ಅಇ).

ಉ. ವೃ.

ಕೇತರ ಕಾಶಿ ಪರ್ವತ ಕಕುದ್ಗಿರಿ ಕುಂಭವು ಮೂಡಲಾದ್ರಿ [1]ಮು-
ಸ್ನೇ[1]ತರ ಪುಣ್ಯಕ್ಷೇತ್ರ ಮೊದಲಾದವರಲ್ಲಿಯ ಸಿಂಹಪೀಠಸಂ
ಘಾತಕನಂತ ಮುನ್ನಮೆನಿ[2]ಪಾವರ[2]ಗೋಸಲದೇವರಿರ್ಪ‍ಯು-
ತ್ಯುತ್ತಮ ಸಿಂಹಪೀಠಸತತಂ ವರ ಶೋಭನದಿಂದಲೊಪ್ಪುಗುಂ ೬

ಆಗಮವೋದುತಿರ್ಪ ಶಿವತತ್ತ್ವವಿಚಾರವ ತೋರುತಿರ್ಪಲಿಂ
ಗಾಂಗದ ಸಂಗದಾಚರಣೆಯಂ ವರಶಿಷ್ಯರಿಗೀವುತೀರ್ಪ ಮಾ-
ತುಂಗಜಟಾಸಮೂಹವನು ಮರ್ದಿಸುತಿರ್ಪ ಪಿನಾಕಪಾಣಿಯಂ
ಸಿಂಗರ ಮಾಡುತಿರ್ಪ ಚರಸಂಚಯಮಿರ್ಪುದು ಸಿಂಹಪೀಠದೊಳ್ ೭

ಶ್ರೀಗುರು ಗೋಸಲೇಶ ಕರಕಂಜಜ ಚಿದ್ವರರೂಪ ಶಾಂತವೀ-
ರಾಗಮವಂತ ಚನ್ನಬಸವೇಶ್ವರ ಷಟ್‌ಸ್ಥಲಕಾರ್ಯಕಾರಣಂ
ಮಂಗಲಲಿಂಗಸಂಗಶುಭಗಂ ಕರುಣಾಕರಕಾಲಸಂಹರಂ
ಆಗಿ ಸದಾಶಿವಾದಿಗಳ ಪುಟ್ಟಿಪ ತತ್ತ್ವದೊಳಿರ್ದನೊಪ್ಪದಿಂ (ದ್ವಿಸಂಧಿ) ೮

ಧರೆಯೊಳ್ ಕವಿದಿಹ ದೋಷಮ
ಪರಿಹರಿಸಿಯೆಯಂಗರುಚಿಯ ಪಸರಿಸುತಿರ್ಪ ಅ-
ಪರಿಮಿತ ರೂಪಿನ ಹಂಸನ
ಸರಸದಿ ಪಡೆವಚಲರೂಪತಾನೊಪ್ಪಿರ್ದಂ ೯

ನಿಃಕಲ ಪರಬ್ರಹ್ಮ[3]ನುತಾ[3]ಂ
ಸತ್ಕಲೆಯಂ ಮಾಡಿ ತನ್ನ ಕರಪದ್ಮದೊಳುಂ
ಚಿತ್ಕಲೆ ರೂಪಿನ ಶಿಶುವಂ
ಸತ್ಕಾರದಿ ಪಡೆದ ವಸ್ತು ತಾನೊಪ್ಪಿರ್ದಂ ೧೦

ವ || ಇಂತು ಗೋಸಲದೇವರ ಕರಕಮಲಸಂಜಾತ ಚೆನ್ನಬಸವೇಶ್ವರಂ ಶಿವಾನುಭವ ಸುಖದಿಂದಿರ್ದು ಒಂದಾನೊಂದು ದಿವಸದಲ್ಲಿಯೊರ್ವ ಶಿಷ್ಯನಂ ಪಡೆವೆನೆಂದು ಮನದಲ್ಲಿ ಪರಮೇಶ್ವರಂ ಷಣ್ಮುಖನಂ ಪಡೆಯುವೇಳ್ಕೆಂದು ನೆನೆವಂತೆ ನೆನೆವುತಿರ್ದಂ ೧೧

1. ಮನ್ನೆ (ಅಇ). 2. ಪ್ಪಪದು (ಅಇ). 3. ವನುಂ (ಅಇ).

ಕಂ. ಜಗವಂ ಸೃಷ್ಟಿಸುವುದಕಂ
ಮಿಗೆಮಾಹೇಶ್ವರನ ಪಡೆವೆನೆಂದುನ್ನಿಸುತಿಹ
ನಗೆಮೊಗದ ಸದಾಶಿವನೊ-
ಲ್ಮೆಗೆ ಶಿಷ್ಯನ ಪಡೆವೆನೆಂದು ಚಿಂತಿಸುತಿರ್ದಂ ೧೨

ಭೂಗರ್ಭದೊಳಿಹ ಶಿಶುವಂ
ಬೇಗನೆ ಶಿಷ್ಯನನು ಮಾಳ್ಪೆನೆಂದಾರೇವಣ
ರಾಗದೊಳು ರುದ್ರಮುನಿಯಂ
ಆಗಲೆ ಪಡೆದಂತೆ ಪಡೆಯೆ ಚಿಂತಿಸುತಿರ್ದಂ

ವ || ಇಂತು ಚೆನ್ನಬಸವೇಶ್ವರಂ ಧರಾತಳದೊಳ್ ಮಸುಳಿಸಿದ ಷಟ್ಸ್ಥಲವನುದ್ಧರಿಪ [1]ಸಾಮರ್ಥ್ಯ[1]ಯುತನಪ್ಪ ಶಿಷ್ಯನಂ ಬೇಡಿ ಶಿವನಂ ಕೂರ್ತು ಧ್ಯಾನಿಸುತಿರ್ಪಲ್ಲಿ

ಮ. ವಿ. ವೃ.
ನಿರಹಂಕಾರ ಯತೀಶನಾಳ್ವ ತಪಕಂ ಮೆಚ್ಚುತ್ತೆ ಕಾಮಾರಿ ತಾಂ
ವರದಿಂವಲ್ಲಮನಾಗಿ ಬಂದು ಶಿಶುರೂಪಿಂದಿರ್ಪವೊಲ್ ಕಾಲಕಂ-
ಧರ[2]ನೆಂದೆನ್ನಿಪ ಈಶನಂಶ[2] ಪೊರಪೊಣ್ಮುತ್ತುಂ ಸುಭಕ್ತಾರ್ಥದಿಂ
ಕರದಿಂ ಜ[3]ನ್ಮಿ[3]ಸಲೆಂದು ಬಂದು ಭವ[4]ನಾ ಅಮ್ಮ[4]ಪ್ಪೆಗಂ ಬಂದವೊಲ್ ೧೪

ತ್ರಿದಶಾನೀಕಕೆ ದುಗ್ಧಮಂ ಕರುಣದಿಂ ನೀಡುತ್ತಿ[†]ಹಾ ಸಿಂಧುವಿಂ
ದುದಿಸುತ್ತಿರ್ಪ ಸುಚಂದ್ರನಂತೆ ಧರೆ[5]ಯೊಳ್ ಮೂಡಿರ್ದ[5] ಮಾಹಾಂಧಮಂ
ಮುದದಿಂದೋಡಿಸಿ ಚಾರುರಂಜಿತ ಸುಶೋ[6]ಭಾಪುಂಜದಿಂದಂ ವಲಂ[6]
ಉದಯಾದ್ರೀಂದ್ರದೊಳುದ್ಭವಿಪ್ಪ ರವಿಯಂ[7]ತಿತ್ತರ್ಭಕಂ[7]ರೂಪಿನಿಂ ೧೫

ಉರದೊಳು ತಾಳ್ದಲಿಂಗದುರು ಸಜ್ಜೆ ಲಲಾಟದ ಭಸ್ಮದಿಂದಲುಂ
ಕೊರಳೊಳು ಶೋಭೆಗೊಂಡ ಹರನಕ್ಷಿಸರಂ ಮುಖಮಂತ್ರದಿಂದಲುಂ
ಹರಶಿವಭಕ್ತನಾತ್ಮಜನವೊಲ್ ಮುದದಿಂದ ಜಗದ್ಧಿತಾರ್ಥಮಾ
ಗುರುತರ ಬಾಲಲೀಲೆಯೊಳು ನಿಲ್ಲುತ ಚೆನ್ನವೃಷಾಂಕನೊತ್ತಿನೊಳ್ ೧೬

---

1. ಸಾತ್ಯರ್ (ಅಇ). 2. ಸಂದೆನಿಪಶಾಸಂಮೆಸು (ಅಇ). 3. ಲ್ಮಿ (ಅಇ). 4. ಸಂಆಸು (ಅಇ). 5. ಯೊಳಿರ್ದ(ಅಇ). 6. ಭಂಪುಂಜಸುತಿಸಲೇಂ (ಅಇ). 7. ತಿಕರ್ಗಂ ಶಿಶುರೂ (ಅಇ). † x (ಅಇ)

ಗುರುಚರಣಾಂಬುಜಕ್ಕೆ ತಲೆವಾಗುತ ರಕ್ಷಿಸುವೆನ್ನನೆಂಬುತುಂ
ಕರಕಮಲಂಗಳಂ ಮುಗಿದು ನಿಂದಿಹ ಬಾಲನ ನೋಡುತಾಗಳುಂ
ಹರುಷವ ತಾಳಿ ಚೆನ್ನಬಸವೇಶ್ವರನಾತನ ಭಕ್ತಿಯುಕ್ತಿಗಂ
ಕರುಣಿಪೆನೆಂದು ತಾಂ ನುಡಿದ ಸಂತಸದಿಂ ಯತಿಸಾರ್ವಭೌಮನುಂ ೧೭

ವ॥ ಇಂತು ಪರಮೇಶ್ವರನಂ ಧ್ಯಾನಿಸುವ ಚೆನ್ನಬಸವೇಶ್ವರನ ಹೃತ್ಕಮಲ ಕರ್ಣಿಕಾವಾಸದಲ್ಲಿ ಪ್ರಜ್ವಲಿಸುತಿರ್ಪ ನಿರ್ಮಳವಸ್ತುತಾನೆ ಬಹಿಷ್ಕರಿಸಿ ಶಿಶುರೂಪಿಂ ಶಿಷ್ಯನಪ್ಪೆನೆಂದು ಚೆನ್ನಬಸವೇಶ್ವರನನೆ ಗುರುವಂಮಾಡಿ ಆ ಗುರುಶಿಷ್ಯರೆಂಬುಭಯವು ತಾನೆಯಾಗಿ ಭೇದವಳಿದು ಪೂಜ್ಯಪೂಜಕತ್ವವ ನಟಿಸವೇಳ್ಕೆಂದು ನಿರಾಭಾರ ವೀರಶೈವ ದೀಕ್ಷೆಯಂ ಕೊಡುವ ಶ್ರೀ ಗುರುವಿನ ಪದಕಮಲಕ್ಕೆರಗಿ ಕರಕಮಲಮುಕುಳಿತನಾಗಿರ್ಪ ಬಾಲಕನಂ ಶಿಷ್ಯನಂ ಮಾಳ್ಪೆನೆಂದು ಚೆನ್ನಬಸವೇಶ್ವರಂ ತನ್ನ ಸಿಂಹಾಸನದಲ್ಲಿ ತಾಂ ಶಿವಾರ್ಚನೆ ಮಾಳ್ಪ ವೇದಿಕಾಸ್ಥಳದಲ್ಲಿ ವಿಲಾಸದಿಂದೆಡೆಯಾಡುವ ಕ್ರಿಮಿಕೀಟಂಗಳು ನೋಯದಂತೆ ಒಂದೊಂದಂ ಮೆಲ್ಲಮೆಲ್ಲನೆ ಉಗುರು ಕೊನೆಯೊಳ್ನೂಂಕಿ ಗೋರೋಚನ ಗೋಮೂತ್ರ ಗೋಮಯ ದಧಿಘೃತಪಯ ಮುಂತಾದವರಲ್ಲಿ ಷಟ್ಸಮ್ಮಾರ್ಜನೆ ವಿದ್ರುಮ ಮೌಕ್ತಿಕಾದಿ ಚೂರ್ಣಂಗಳಿಂ ಕಲಿತ ಕಮಲ ಬಂಧಂಗ( + ಳ?)ರಂಗವಾಲಿಯ ನಿಕ್ಕಿ ರಂಗವಾಲಿಯ ನೇಮದ ಮಾಯಣ್ಣನಂತೆ ವಿಚಿತ್ರತರವಾದ ರಂಗವಾಲಿಯನಿಕ್ಕಿ ಪಂಚಮುದ್ರೆಯನುದ್ಧರಿಸಿ ಮತ್ತಂ ಪಂಚಕಲೆಗಳಿಂ ವ್ಯಾಪಿಸಲು ಪಟ್ಟ ಪಂಚಶಕ್ತಿ ಸ್ವರೂಪವಾದ ಪಂಚವರ್ಣಿಗೆಯನುಳ್ಳ ತಂಡುಲಂಗಳಿಂದ ವೃತ್ತಾಕಾರವನುದ್ಧರಿಸಿ ಆ ಮಂಡಲದ ಹೊರಗೆ ಹಸೆಯ ರೂಪಿಸಂತೆ ಚವುಕವನುದ್ಧರಿಸಿ ಆ ಮಂಡಲದೊಳಗೆ ವೃತ್ತಾಕಾರವಾಗಿ ಕೇಸಂಗಳೊಡನೆ ಕೂಡಿದ ಪದ್ಮವನಿಕ್ಕಿ ಮತ್ತಂ ಆ ಪದ್ಮ ಮಧ್ಯದಲ್ಲಿ ಮಾಂಗಲ್ಯಮಾದ ಪ್ರತ್ಯಕ್ಷ ಪಂಚಬ್ರಹ್ಮಸ್ವರೂಪವಾದ ಓಂಕಾರವಂ ನ್ಯಾಸವಂ ಮಾಡಿ ಮತ್ತಂ ಪಂಚಾಕ್ಷರೀ ಮಂತ್ರದೊಡನೆ ಕೂಟವಾದ ಶಿವಯಂತ್ರವೆಂಬ ಪೆಸರನುಳ್ಳ ಮಂತ್ರಯುಕ್ತವಾದ ಪಂಚಮುದ್ರೆಯ ವಿಧಾನೋಕ್ತದಿಂ ಪೂರ್ಣವಾ[1]ದಾ[1]ರು ಕಳಸಂಗಳನು ತೆಗೆದುಕೊಂಡು ಆ ಪಂಚಮುದ್ರೆಯ ಮಧ್ಯದಲ್ಲಿ ಒಂದು ಕಳಸವನಿರಿಸಿ ಅಯಿದು ಮೂಲೆಗಳಲ್ಲಿ ಈ ಕ್ರಮದಿಂ ಕಳಸಪ್ರತಿಷ್ಠೆಯಂ ಮಾಡಿ ಮತ್ತಂ ಆಚಾರ ಲಿಂಗಂ ಮೊದಲಾದ [2]ಷ[2]ಡ್ವಿಧ ಲಿಂಗಂಗಳನುಂ ಭಕ್ತ ಮೊದಲಾದ ಆರು ಅಂಗಂಗಳನುಂ ಷಟ್ಸ್ಥಲರೂಪುಗಳನಾಗಿ ಲೇಸಾಗಿ ಧ್ಯಾನಿಸಿ ಮತ್ತಂ ಓಂಕಾರಾದಿಯಾದ ಕಳಸಂ ಗಳಿಗಂ ಪವಿತ್ರವಾದ ಸೂತ್ರಂಗಳಂ ಸುತ್ತಿ ಆ ಕಳಸಂಗಳ ಮುಖದಲ್ಲಿ ಕುಶದುರ್ವಾಮ್ರ ಪಲ್ಲವಂಗಳನಿರಿಸಿ ಮೊದಲು ತೊಡಗಿ ಈ ಆರು ಕಳಸಂಗಳನುಂ ಆರು ಸ್ಥಾನದಲ್ಲಿಯುಂ ಮಂತ್ರವಿಧಾನದೊಡನೆ ಕೂಡಿದಾತನಾಗಿ ಕ್ರಮ ತಪ್ಪದೆ ಪೂಜಿಸಿ ನಮಸ್ಕರಿಸಿ

1. ದ (ಅ). 2. x (ಅಇ).

ಸ್ತೋತ್ರಮಂ ಮಾಡಿ ಮತ್ತಂ ತನ್ನ [1](ಎಡ)ಬಲದಲ್ಲಿ[1] ಪರಮೇಶ್ವರಂ ಪ್ರತ್ಯಕ್ಷಮಾಗಿ ಪಲವು ರೂಪಿಂದಿರ್ಪಂತೆ, ಮಗುಟದ ಬೆಡಂಗಿನಿಂ ವಿಭೂತಿಯ ವಿಲಾಸದಿಂ ಕಟ್ಟಾಂಗದ ಕಮನೀಯದಿಂ ನಿರಾಭಾರದ ನಿರ್ಮಳದಿಂ ರಂಜಿತ ಜಂಗಮ ಪುಂಜದ ಪಂತಿಯ ಮುಂದುಗಡೆಯಲ್ಲಿ ವಿಭೂತಿವೀಳಯ ಸುವರ್ಣಗಾಣಿಕೆಯುಂ ಮಡಗಿ ಶಿಷ್ಯಸಮೇತಂ ಗುರು ಇದಿರಾಗಿ ನಿಂತು ಕರಸರಸಿಜ ಮುಕುಳಿತನಾಗಿ ದೀಕ್ಷಾಗುರು ಶಿಕ್ಷಾಗುರು ಮೋಕ್ಷ ಗುರು ಗುರುವಿನಗುರು [2]ಪರಮಗುರು[2] ಪರಮಾರಾಧ್ಯನೆಂದು ಆಚಾರಲಿಂಗಂಗಳಂ ಸ್ತೋತ್ರವಂ ಮಾಡಿ ಈ ತೆರದಲ್ಲಿ ಮೂರು ವೇಳೆ ದೀರ್ಘದಂಡಗೋಪಾದಿಯಲ್ಲಿ ನಮಸ್ಕಾರಂಗೆಯ್ಯಲಾ ಚರಲಿಂಗವ್ರಜಂ ತಮ್ಮೊಳ್ತಾವು ಪರಾಂಬರಿಸಿಕೊಂಡು ಶಿಷ್ಯನಂ ನಿಮಗೆ ಕೊಟ್ಟೆವೆಂದೆನಲು ತಚ್ಛಿಷ್ಯ ಸಮೇತವಾಗಿ ಆ ಚೆನ್ನಬಸವೇಶ್ವರಂ ಪ್ರತ್ಯೇಕ ಪ್ರತ್ಯೇಕ ಚರಲಿಂಗತಿಂತಿಣಿಗೆ ಶಿರವುರ ಭುಜಮುಟ್ಟೆ ನಮಸ್ಕಾರಂಗೆಯ್ದು ವಿಭೂತಿಯಂ ಧರಿಸಿಕೊಂಡು ಮತ್ತಂ ನಾನಾ ವಿಚಿತ್ರತರಮಾದ ಮೇಲ್ಕಟ್ಟಂ ಕಟ್ಟಿ ಶೋಭನವಾದ ಸಿಂಹಾಸನದ ಕಳಸ ಪೂಜೆಯೊತ್ತಿನ ಮೃದುತರ ಗದ್ದು[3]ಗೆಯಲ್ಲಿ[3] ಚೆನ್ನಬಸವೇಶ್ವರಂ ಉತ್ತರಮುಖವಾಗಿ ಕುಳ್ಳಿತು ಶಿಷ್ಯನಂ ಪೂರ್ವಮುಖವಾಗಿ ಕುಳ್ಳಿರಿಸಿ ಮತ್ತಂ ನವನೀತಮಂ ಕ್ರಿಯೆಯಿಂದ ಘೃತಮಂ ಮಾಡುವಂತೆ ಕಪಿಲೆಯಾಕಳಂ ಕರೆದು ಕಾಸಿರ್ದಪಾಲಂ ಮರಳಿ ಚಿಲುಪಾಲಂ ಕಾಸುವಂತೆ ಒಪ್ಪವಿಟ್ಟು ಸುಜಾತಿರತ್ನಮಂ ಮರಳಿ ಮತ್ತೊಂ[4]ದಂ[4] ಒಪ್ಪವಿಡುವಂತೆ ಸಕ್ಕರೆಯಂ ಮತ್ತೊಮ್ಮೆ ಕಾಸಿ ತವರಾಜನಂ ಮಾಳ್ಪಂತೆ, ಶಿವಭಕ್ತವೇಷಂಗೊಂಡಿರ್ದ ಶಿಶುವಿಂಗಂ ಜಂಗಮವೇಷಂದೊಡಿಸುತಿರ್ದ ನೆಂ[5]ತೆಂದೊಡೆ[5] – ಮತ್ತಂ ಮದವೆಂಬ ಗಜಾಸುರನ ತೊವಲಂ ಸುಲಿದು ಸುಜ್ಞಾನೋದ ಕದಿ ಹದವಿಟ್ಟು ಮಹಾಲಿಂಗಕ್ಕೆ ಪೊದಿಕೆಯಾಗಿ ಪೊದಿಸುವುದಕ್ಕೆ ಇದೇ ಕುರುಪೆಂದು ತೋರುವಂತೆ [6]ಸುವರ್ಣ[6] ಲೇಖಿತಮಾದ ಕಂತೆಯಂ ತೊಡಿಸಿ ದುರಾಚಾರವೆಂಬ ತ್ರಿವಿಕ್ರಮನಂ ಕೊಂದು ಸದಾಚಾರವೊಂದನೆ ಪಿಡಿವುದಕ್ಕೆ ಇದೇ ತೆರನೆಂಬಂತೆ ಸುವರ್ಣದಂಡಮಂ ಕೊಟ್ಟು ಅದ್ವೈತ ಬ್ರಹ್ಮದ ಶಿರ[7]ಸ್ಸನೊಡೆಮು[7] ಕ್ರೀಯೊಂದಂ ಬಿಡದೆ ಪಿಡಿವುದನರುಪುವಂತೆ ಸುವರ್ಣ ಕರ್ಪರವಂ ಕೈಗೊಳಿಸಿ ಸಮಸ್ತ ಪ್ರಾಣಂಗಳಲ್ಲಿ ಶಾಂತಿಯಂ ಬೀರುತ್ತಿರೆಂಬುದನರುಪುವಂತೆ ಸ್ಫಟಿಕ ಕಮಂಡಲವಂ ಕೈಗೊಳಿಸಿ ನಿನ್ನ ಸಮಾನದ ನಿರಾಭಾರಿಗಳಲ್ಲಿ ಭಕ್ತಿಭಿಕ್ಷಮಂ ಬೇಡಿಕೊ ಎಂಬಂತೆ ಭಿಕ್ಷಾ[8]ಶಬ್ದ[8]ವನುಚ್ಚ ರಿಸಿ ಮತ್ತಂ ಆ ಶಿಷ್ಯನ ಭಕ್ತಪದಾರ್ಥಮಂ ಗುರುಕೈಗೊಂಬನೆಂಬು[9]ದಂ[9] ಸೂಚಿಸು ವಂತೆ ಆ ಭಿಕ್ಷಮಂ ತಾಂ ಭಕ್ಷಿ ಮಾಡಿಸಿಕೊಂಡುಂ ಮತ್ತಂ ಗುರುಚರಲಿಂಗಭಕ್ತಿಯಂ ಬಿಡದಾತಂಗೆ ಮೋಕ್ಷರಾಜ್ಯಮಂ ಪಟ್ಟವಕಟ್ಟುಹೆನೆಂಬುದನರುಪುವಂತೆ ಚರಲಿಂಗಂಗಳ್[9] ಪರಾಂಬರಿಕೆಯಿಂ ಸಮಗದ್ದುಗೆಯೊಳ್ ಮೂರ್ತಿಗೊಳಿಸಿ ಶುದ್ಧ ಸಿದ್ಧ [10](ಪ್ರಸಿದ್ಧ)[10]

1. x (ಇ). 2. x (ಇ). 3. x (ಇ). 4. ದನು (ಇ); ಘನು (ಅ).
5. ತೆಂ.......(ಅಇ) 6. ಸವರ್ಣ (ಇ). 7. x (ಇ). 8. ಶಪ್ಪ (ಇ).
9. ದುಂ (ಇ). 10. x (ಅಇ).

ಪ್ರಸಾದ [1]ವಿಧಾನ[1]ತ್ರಯವು ಸೀಸೆಯೆಂದು ಸೂಚಿಸುವಂತೆ ಸಿದ್ಧಲಿಂಗನೆಂಬ ಪೆಸರಿಂ ಕರೆದು ಇಂತು ಚೆನ್ನಬಸವೇಶ್ವರಂ ತನ್ನ ಹಸ್ತಸರಸಿಜ ಸಂಜಾತನಾದ ನಿರ್ಮಳ ಶಿಶುವಿಂಗೆ ಪರಮಶಾಂತಿಯೆಂಬುದಕದಿಂ ಮಜ್ಜನಕೆರೆದು ಚಿದ್ಭಸಿತಮಂ ಪಣೆಗಿಟ್ಟು ಏಕೋಭಾವವೆಂಬ ಏಕಮುಖ ರುದ್ರಾ[2]ಕ್ಷೆ[2]ಯಿಂ ಕೊರಳೊಳ್ಕಟ್ಟಿ ಶಿವತತ್ತ್ವವ ನರಿವರಿವಿನ ಲಿಂಗಮಂಕಟ್ಟಿ ಪರಮಜ್ಞಾನವೆಂಬ ಬಾಯ್ವೆಣ್ಣೆಯನಿಕ್ಕಿ ದ್ವೈತಾ ದ್ವೈತಾಗಮಂಗಳೆಂಬ ಜನರ ದೃಷ್ಟಿ ನಡದಂತೆ ಶಿವಾದ್ವೈತವೆಂಬ ತಿಲಕವನಿಟ್ಟು ಸದ್ಭಕ್ತಿ ಯೆಂಬ ತೊಲೆವಾಲಂಕೂಟ್ಟು ಮಹಾಜ್ಞಾನವೆಂಬ ತೊಟ್ಟಿಲೊಳ್ ಮಲಗಿಸಿ, ಚಿನ್ನಾದ ವೆಂಬ ಜೋಗು[3]ಳಮಂ[3] ಪಾಡಿ ಪರಬ್ರಹ್ಮದ ಶಿಶುವಂ ಸಲಹುವಂತೆ ಸಲಹುತಿರ್ದ ಶಿಶುವಿಂಗೆ ನಿಟಿಲತಟಸ್ವರೂಪಿನ ಧ್ಯಾನವೇ ಅರಳೆಲೆಯಾಗಿ ಗುರುವಾಕ್ಯಂಗಳಂ ಪ್ರೀತಿಯಿಂ ಕೇಳ್ವ ಭಾವಮೇ ಕರ್ಣಯುಗಕ್ಕೆ ರತ್ನಂಗಳ ಮಾಂಗಾಯ್ಗಳಾಗೆ ಶ್ರೀ ಗುರುವಿನ ವಾಕ್ಯಕ್ಕೆ ಪ್ರತ್ಯುತ್ತರವೀಯದ ಸದ್ಗುಣವೆಂಬ ಕಂಧರಕ್ಕೆ ಮೌಕ್ತಿಕ ಕಂಠಸರಮಾಗಿ ಗುರುಸೇವೆಗಲಸದೆ [4]ಮಯ್ಯೊಗ್ಗಿ[4] ಮಾಳ್ಪಗುಣಮೆ ಪಸುವಟ್ಟೆಯ ಪ್ರೇರಣೆಯಾಗಿ ಗುರುಪಾದಕ್ಕೆರಗುವ ಗುಣಮೆ ಶಿರಸ್ಸಿಗಂ ರತ್ನಕಿರೀಟಮಾಗಿ ಗುರು ಚರಲಿಂಗದೊಳ್ ಸತ್ಯಮಲ್ಲದೆ[5]ಯ[5]ಸತ್ಯವನು ನುಡಿಯದ ಭಾಷೆಯೆ ಕರ್ಣಶೋಭಿತ ಮಾದ ಮೊದಲ್ಕುಡಿಯಾಗಿ ಚತುರ್ವಿಧ ಫಲಪ್ರದಂಗಳ ಶರಣ ಬಯಸನೆಂಬಾಗಮವ ಪಠಿಸುವ ಗುಣಂಗಳೇ ಕಾಲಲಿಪ್ಪಂದುಗೆ ಕಿರುಗೆಜ್ಜೆಗಳಾಗೆ ಸಿಂಗರಂ ಬೆತ್ತಿರ್ದ ಶಿಶುವಂ ಚೆನ್ನಬಸವೇಶ್ವರಂ ಷಣ್ಮುಖನಂ ಶಶಿಧರಂ ಸಲಹುವಂತೆ ನಂಬ್ಯಣ್ಣನೆಂಬ ಶಿಶುವಂ ವಾಲ್ಮೀಕೇಶ್ವರಂ ಸಲಹುವಂತೆ ಸುಜ್ಞಾನ ನಿರಹಂಕಾರರೆಂಬವರಲ್ಲಮನೆಂಬ ಶಿಶುವಂ ಸಲಹುವಂತೆ ಅಕ್ಕನಾಗಲೆದೇವಿ ಚೆನ್ನಬಸವೇಶ್ವನೆಂಬ ಶಿಶುವಂ ಸಲಹುವಂತೆ ಅತ್ಯಂತ ಪ್ರೀತಿಯಿಂ ಸಲಹುತ್ತುಮಿರೆ ಮತ್ತಮಾ ಶಿಶುವಿಂಗಂ ಗುರುಸ್ತೋತ್ರಮಂ ಪ್ರೀತಿಯಿಂ ಕೇಳ್ವ ಗುರುವಿನ ಕೀರ್ತಿಯ ಕೀರ್ತಿಸುವ ಗುರುನಾಮಮಂ ಸ್ಮರಿಪ ಗುರುಪದ ಸೇವೆಯಂ ಮಾಳ್ಪ ಗುರುಪೂಜೆಯುಂ ಮಾಳ್ಪ ನಿತ್ಯಂ ಗುರುವಿಂಗೆ ವಂದಿಸುವ ಗುರು[5]ವಿಂ[5]ಗಂ ಭಂಟನಾಗಿರುಹ ಗುರುದೇವರ್ಗಂ ಹಿತವನಾಗಿರುಹ ಗುರು[6]ವಿಂಗೆ[6] ತನ್ನನೆ ಸಮರ್ಪಿಸುವುದು ಮೊದಲಾದ ನವವಿಧ ಭಕ್ತಿಗಳ್ ಬಲಿದುಂ ನವವರ್ಷಂಗಳಾಗೆ ಮತ್ತಂ ವೇದಶಾಸ್ತ್ರಾಗಮವೇದೋಪನಿಷತ್ಪುರಾಣಂಗಳೆಲ್ಲಂ ಜಿಹ್ವಾಗ್ರದೊಳ್ ನೆಲಸಿ ರುತ್ತಂ ಸಿದ್ಧೇಶ್ವರಂ ಇರೆಯಿರೆ – ೧೮

1. ವದಾನ (ಇಅ). 2. ಕ್ಷತೆ. 3. ಳಿಯಂ (ಇ). 4. ಮಯೊಗ್ಗಿ (ಇ).
5. x (ಇ). 6. x (ಇ).

ಚಂ. ವೃ.

ಸಮಸುಖದಿಂದಲಾಡು[1]ತಿಹ ಸಿದ್ಧಯತೀಶನು[1] ಬಾಲಲೀಲೆಯೊಳ್
ಸುಮನದಿಪೊಕ್ಕು ಕ್ರೀಡಿಸುವ ಪೂಗೊಳಪಾವನ ಪುಣ್ಯತೀರ್ಥಮಂ
ಅಮಮ ಯತೀಶನೇರಿದನಗಂ ರಜತಾದ್ರಿ[2]ಯು ಪಾದವಿಟ್ಟ[2]ಭೂ-
ಮಿಯದು ವಿಚಿತ್ರ ಮೋಕ್ಷಧರೆಯುಪ್ಪುದು ತಪ್ಪದುಮೇನನೆಂದಪೆಂ ೧೯

ಗುರುಚರಲಿಂಗಭಕ್ತಿ ಪರಮಾಚರಣಾನ್ವಿತ ಸಿದ್ಧಲಿಂಗನಂ
ಹರುಷದಿ ಸೋಂಕಿದಾತಗಮರತ್ವ ವಿಲಾಸದಿ ನೋಡಿದಾತ[3](ನಾ)[3]
ದುರಿತಗಳೆಲ್ಲವುಂ ಜವದಿ [4]ಪೋಗು[4]ಗು ಮಾಗಳೆ ಯರ್ಚಿಪಾತಗಂ
ಶರಣಪದಂ ಸದಾ ನೆನೆದವಂಗೆಯು ವಿಶ್ವಪದಂ ವಿಚಾರಿಸಲ್ ೨೦

ಗುರುಪದವೀವುದೀಶಪದ ವೀವುದ ಜಂಗಮಭಕ್ತಿಯೀವುದುಂ
ಶರಣಸುಮಾರ್ಗವೀವುದು ಸುತತ್ತ್ವ ವಿಚಾರವ ನೀವುದಾವಗಂ
ಕರಣಗುಣಂಗಳಂ ಸುಸರಮಾಡುಗುಮಾಗಳೆ ಭಕ್ತಿನಿಷ್ಠೆಯಿಂ
ಸ್ಮರಿಸಲು ಸಿದ್ಧಲಿಂಗನ ಸುಮಂಜುಲ ನಾಮವದೇನಸೆಂದಪೆಂ ೨೧

ಉ. ವೃ.

ನಿಃಕಲರೂಪು ತಾನೆವರಗೋಸಲ ದೇವರುಯುಕ್ತನಿಃಕಲಂ
ಸತ್ಕಲರೂಪು ಚೆನ್ನಬಸವೇಶ್ವರ ಕೇವಲ ಸತ್ಕಲಾದಿಯಿಂ
ದುತ್ಕಲ ಸಿದ್ಧಲಿಂಗ[5]ನ ಸು[5]ಮೂರ್ತಿಯ ರೂಪು ಶಿವಂಸದಾಶಿವಂ
ಸತ್ಕಲ ನಾಮಹೇಶ ಗುರುಲಿಂಗವು ಜಂಗಮವಾಗಿ ತೋರುಗುಂ ೨೨

ಚಂ. ವೃ.

ದಿನದಿನಕಗ್ಗಳಂ ಗುರುಸುಭಕ್ತಿಯು ಮಾವಗ ಮಾಸಮಾಸಕಂ
ಘನತರ ವರ್ಷವರ್ಷಕೆ ಮಹಾಶ್ಚರಿಯಾಗಿಯು ವರ್ತಿಸುತ್ತಲುಂ
ಘನಗುರು ಭಕ್ತಿಸಿಂಧು ವಿಧುಮಂಡಲ ಷಟ್ಸ್ಥಲ ಕಂಜಸೂರನಿಂ
ಜನನುತ ಸಿದ್ಧಲಿಂಗಗುರು ಸಂಯಮಿ ವಲ್ಲಭನಿಂವಲಿರ್ಕುಗುಂ ೨೩

---

1. ಸುಬಾಲ ಮುಕ್ತಸು (ಇಅ). 2. ಮದಾಗವಗಲಿರ್ಪ (ಅಇ). 3. ಗಂ (ಅಇ).
4. ಪೋಕೂ (ಅಇ). 5. ನ. (ಅಇ).

ಕಂ. ಗುರುಭಕ್ತಾಬ್ಧಿ ಸುಧಾಕರ
ಗುರುಭಕ್ತಿ ಶತ್ರುವನದಾವಾನಲ ಮಹಿಮಂ
ಗುರುಭಕ್ತಕಮಲ ದಿನಕರ
ಗುರುಭಕ್ತೋದ್ದಾಮ ಸಿದ್ಧಲಿಂಗನ ಸಂಗಂ ೨೪

ಗುರುನಿಂದ ನೆಳಲಮೆಟ್ಟಂ
ಗುರುಪಙ್ಕ್ತಿಯೊಳಿರನು ಪೋಪಪಥದೊಳ್ ಪೋಗಂ
ಗುರುವಿ[1](ನೆದಿರೋರೆಯುಪ್ಪಂ)[1]
ಗುರುಭಕ್ತಿಯದೆಂತು ಸಿದ್ಧಲಿಂಗನೊಳಿಹುದೋ ೨೫

ಗುರುಮೂರ್ತಿಯ ಜಾನಿಸುತಂ
ಗುರುದೇವರ ಪಾದಕಮಲವನ್ನರ್ಚಿಸುತಂ
ಗುರುನಾಮವ ಸ್ಮರಿಸುತ್ತಂ
ಗುರುಕೃಪೆಯಂ ಪಡೆವುತಿರ್ದ ಸಿದ್ಧಯತೀಶಂ ೨೬

ವ॥ ಗುರುದೇವರ್ಗೆ ಬಿನ್ನಹಂ ಮಾಡುವಲ್ಲಿ ರೇವಣನೆಂಬ ಗುರುಭಕ್ತರ ತಾಮಸದಂತಲ್ಲ ಗುರುನಿರೂಪವ ಕೇಳುವಲ್ಲಿ ಬಿಲ್ಲೇಶಬೊಮ್ಮಣ್ಣನಂತಲ್ಲ ಮತ್ತಂ ಬರ್ಪಪಥದಲ್ಲಿಯು ಆ ಅರಣ್ಯದೊಳ್ಸೀಳ್ನಾಯಿಗಳ್ ಬಂದು ಶರೀರವನುತಿಂಬುತ್ತಿರೆ ಗುರುಸ್ಮರಣೆಯಿಂ ಪರಿಹರಿಸಿಕೊಂಡು ಅಮರಗುಂಡಮಂ ಪೊಕ್ಕು ಗುರು ಹೇಳಿತ್ತಂ ಮೀರದಿರ್ಪ ಪೂರ್ಣಕುಂಭ ಬ್ರಾಹ್ಮಣನಸುತ ಗುರುಭಕ್ತನಂತೆ ಮತ್ತಂ ಗುರು[2]ವಿಂಗೆ[2] ಪ್ರತ್ಯುತ್ತರವ ಕೊಡಲಂಜುತಿರ್ಪಲ್ಲಿ ಗುರುವಾಕ್ಯಕ್ಕಂ ಪ್ರತ್ಯುತ್ತರ ವೀಯದೆ ಗುರುಪಾದ ಪೂಜೆಯಂ ಮಾಡಿಕೊಂಡಿರ್ದುದಂ ಆ ಗುರು ಹೋದರೆ ಗುರು ಕುಳ್ಳಿರ್ದ ಹುಣಸೆಯ ಮರದ ಮೇಲಣ ಗೂಗೆಯನೆ ಗುರುವಿನ ಗುರು ಪರಮಗುರುವೆಂದು ಪೂಜಿಸಿ ಅವರಲ್ಲಿಯು ಪಂಚಮುಖನ ಪ್ರತ್ಯಕ್ಷಮಂ ಪಡೆದ ಗುರುಭಕ್ತನ ವಿಶ್ವಾಸದಂತೆ ಮತ್ತಂ ಗುರು ಪ್ರಸಾದಮಂಕೊಂಬಲ್ಲಿ ಜಾತೊಡೆಯರ ಕೈಯಪ್ರಸಾದವಂ ಪಡೆದ ಬಿಲ್ಲಮರಾಯನ ವಿಶ್ವಾಸದಂತೆ ಗುರುಭಕ್ತಿಯ ಮಾಳ್ಪಲ್ಲಿ ಗುರುಭಕ್ತಭಂಡಾರಿಯ ವಿಶ್ವಾಸದಂತೆ ಗುರುಭಕ್ತಿಯಂ ಕಡೆತನಕಂ ನಡೆಸುವಲ್ಲಿ ಸಟ್ಯಾಣ ಸೆಟ್ಟಿಯಂತೆ ಗುರುಪಾದ ಸ್ಮರಣೆಯಂ ಸ್ಮರಿಸುವಲ್ಲಿ ಸದ್ಗುಣಿಮಣಿಕರಂಡ ಚಿದಂಬರಯ್ಯಗಳಂತೆ ಗುರುವಿನಾಣತಿಯಂ ಮೀರದಿರ್ಪಲ್ಲಿ ಗುರುಪದಕಮಲ ಭೃಂಗನೆನಿಪಪೂತಿಯಾಂಡಿಯಂತೆ ಗುರುಪದ ಕಮಲದೊಳ್ ಬೆರಸಿ ಬೆಚ್ಚಯುಚ್ಚೊತ್ತಿದಂತಿರ್ಪ ಪಳ್ಳೂತಯ್ಯಗಳಂತೆ, ಸಕಳೇಶ ಮಾದರಸರಲ್ಲಿ ಗುರುಭಕ್ತಿಯಂ ನಡೆಸಿದ ರಾಮನ ವೀರಯ್ಯನಂತೆ ಇಂತು ಗುರುವಿನಲ್ಲಿ

1. ದಿರ್ಬರೆಯೋರೆಯುಹಂ x(ಅ) 2. ಲಿಂಗ (ಇ).

ವಿಶಾ ಸವುಳ್ಳ ಸಿದ್ಧಲಿಂಗೇಶ್ವರಂ ಒಂದಾನೊಂದು ದಿವಸ ಗುರುಪಾದ ಪೂಜೆ[1]ಗೆ[1] ಕುಸುಮಮಂತರವೇಳ್ಕೆಂದು – ೧೭

ಉ. ವೃ.

ಕುಕ್ಕುಟನಾದಕಿಂತ ಮೊದಲೆದ್ದು ವಿಭೂತಿಯು ಬಾಳಲೇಖೆಯೊಳ್
ಜೋಕೆಯೊಳಿಟ್ಟುಕೊಂಡು ಗುರುಪಾದಕೆ ವಂದಿಸಿ ಲಿಂಗಪೂಜೆಯುಂ
ಚಕ್ಕನೆಮಾಡಿತಾಂ ನಡೆಯೆಬೇಗದಿ ಪೂವಿನ ಸೆಜ್ಜೆಯನ್ನು ಆ
ಲೋಕಿಸುತಂತದಂಪಿಡಿದು ಪೋದನು ಹೂವಿನ ವಾಟಿಯೊತ್ತಿಗಂ ೧೮

ಬೇಗದಿ ಪೋಗವೇಳ್ಪು ಗುರುಪೂಜೆಗೆ ಪೂಗಳು ಮಿಲ್ಲವೆಂಬುತುಂ
ಆಗಲೆ ಕೋಳಿಕೂಗುತಿವೆ ಶಂಖದ ನಾದವು ಪೊಣ್ಮುತಿರ್ದುದೀ
ಗೀಗಲು ತಾರಕಾಳಿಗಳ ಕಾಂತಿಯುಕಾಂತಿಗಳಾಗಿಲಾಗಿನಿಂ
ಪೋಗುತಲಿಕ್ಕುಮೆಂದು ಗಗನಾಂಗಣಮಂ ನೆರೆನೋಡುತೆಯ್ದಿದಂ ೧೯

ಪೂಗಳ ತೋಂಟಕಾರು ಬಹರೋ ಬರಲಿಲ್ಲವೆಯೋ ಪ್ರಭಾತವಾ
ಯ್ತೋಗುರುಪಾದ ಪೂಜೆಯನು ಮಾಡುವ ವೇಳೆಗೆ ಪೋಗಲಾರೆನೋ-
ಪೂಗಳರಲ್ದವೋ ಭ್ರಮರ ಮುತ್ತಿದವೋ ಪುಳುತಿಂಬುತಿರ್ದವೋ
ಆಗಲೆ ಯೇ[2]ಳದಾದೆನೆನುತುಂ ವರಪೂವಿನ ವಾಟಿಗೆಯ್ದಿದಂ ೨೦

ವ॥ ಸಿದ್ಧಲಿಂಗೇಶ್ವರಂ ಪೂದೋಂಟಮಂಪೊಕ್ಕು ನೋಳ್ಪಾಗಲಾ ಕುಸುಮಂಗಳೆಂತಿರ್ದುವೆಂತೆಂದೊಡೆ: ಕರವೀರನೆಂಬ ಭೃತ್ಯರಾಜಂ ತನ್ನಂಗಮಂ ಹರಂಗೆ ಸಮರ್ಪಿಸಲು ಕುಸುಮವಾಗಿದ್ದೇನೆ ಎನ್ನಂಗದಲರಂ ತಿರಿದು ಶಿವಂಗರ್ಪಿಸಿರಯ್ಯಾ ಯೆಂದು ಸಿದ್ಧಲಿಂಗೇಶ್ವರಂಗೆ ದೈನ್ಯದಿಂ ಬಾಯ್ಬಿಟ್ಟು ಬೇಡಿಕೊಳ್ವಂತರೆವಿರಿದಲರಿಂದಲಂ ಕೃತಮಾದ ಪಡ್ಡಳಿಗಳಿಂದಲುಂ ತಮ್ಮುಮಂ ಶಿವಂಗೆ ಸಮರ್ಪಿಸಿದ ದುಜಾ೯ತಿಯಪ್ಪ ನೆಂಬುದಕ್ಕೆ ತನ್ನ ಪೆಸರೇ ಸಾಕ್ಷಿಯೆಂದು ಪೇಳ್ವಂತರಳ್ದ ಜಾತಿಕುಸುಮಿತಲತೆಗಳ ಸಂಚಿಯುಂಗಳಿಂದಂ, ಮತ್ತಂ ಪುರಹರಂಗಂ ತನ್ನ ಸಮರ್ಪಿಸಿದ ಕೃಷ್ಣಂಗೆ ಕಮಲಾಕ್ಷ ನೆಂಬ ಪೆಸರಂ ಕೊಟ್ಟನೆಂದು ಪೇಳ್ವಂತರೆವಿರಿದ ಕಮಲಂಗಳಿಂದಂ ಹರನಂ ಮಲ್ಲಿಕಾ ದೇವಿ ಮೆಚ್ಚಿಸಿ ತನ್ನಂಗಮಂ ಕುಸುಮವಾಗಿ ಸಮರ್ಪಿಸಲು ಮಲ್ಲಿಕಾಲತೆಯಾಗಿ ಜನಿಸಿ ಕುಸುಮಿತೆಯಾಗಿದೇನೆ ಎನ್ನಲರಂ ಶಿವಂಗೆ ಸಮರ್ಪಿಸಿರಯ್ಯಾ ಎಂದು ಸಿದ್ಧಲಿಂಗಂಗೆ ಪಲ್ಗಿರಿದವೊಲರಲ್ದ ಪೂಗೊಂಚಲಿಂದೊಪ್ಪಂಬೆತ್ತ ಮಲ್ಲಿಕಾಲತೆಗಳ ನಿವಹಂಗಳಿಂದಂ, ಭ್ರಮರಾಸುರನಂ ಕೊಲಲೆಂದು ಹೈಮವತಿ ನಾನಾ[3](ವೇಷಂ)[3]ಗಳಿಂ ಪುಷ್ಪಗಳಂ

1. ಯಗೆ (ಇ). 2. ಯಾ (ಅಇ). 3. ವಿಷ (ಅ); ವಿಷಯ (ಇ).

ನಿರ್ಮಿಸಿ ಆ ಕುಸುಮಂಗಳಿಂ ಪುಷ್ಪಕವಂ ರಚಿಸಿ ಅದರೊಳ್ ಮುತ್ತಿಕೊಂಡು ಅಸುರ ನೋಳ್ಕಾಳ[1](ಗ)[1]ವಂ ಮಾಡಿ ಅಸುರನಂ ಸಂಹರಿಸಿ ಆ ಪುಷ್ಪಕವಂ ಪೂದೋಂಟದಲ್ಲಿ ಚಂಪಕವೃಕ್ಷವಾಗಿರೆಂದು ನೇಮಿಸಿ ಪೋದಳ್ ಎನ್ನಲರಂ ಶಿವಂಗೆ ಸಮರ್ಪಿಸಿರಯ್ಯಾ ಎಂದು ಬಿನ್ನವಿಪವೊಲರೆವಿರಿದ ಬಿರುಮುಗುಳ್ಗಳಗೊಂಪಣದಿಂ ರಾಜಿಪ ಚಂಪಕ ದ್ರುಮರಾಜಿಗಳಿಂದಂ, ಮತ.ಂ ತನ್ನ ಶಿವಂಗೆ ಸಮರ್ಪಿಸಿದ ಮನುಜರ್ಗೆ ದೇವವಲ್ಲಭ ಪದಮಪ್ಪುದೆಂದು ಪೇಳ್ವಂತರಳ್ವ ಪ್ರಸವಂಗಳಿಂ[2]ದೊ[2]ಪ್ಪುವ ಸುರಹೊನ್ನೆಯ ವೃಕ್ಷ ನಿಕರಂಗಳಿಂದಂ, ಸುರಲೋಕದಲ್ಲಿರ್ದವರಂ ಸೂ[3]ಚಿ[3]ಕಾದಿ ಮುನಿ ನಾಗಲೋಕಕಂ ತಂದು ನೀಲಕಂಠೇಶ್ವರಂಗರ್ಪಿಸುತಿರಲಲ್ಲಿಯ ನಾಗಕನ್ನಿಕೆಯುಮರ್ತ್ಯಲೋಕಕಂ ತಂದು ದ್ರಾವಿಡ ದೇಶದ ಸೇವಂತಿನಾಥಂಗರ್ಪಿಸುತ್ತಿರಲಲ್ಲಿಯ ವಿಷ್ಣು ಚೋಳಂ [4]ವಕ್ರಿಸೆ,[4] ಅಲ್ಲಿಂಬಿಟ್ಟು ಪೂವಾಟಿಯೊಳ್‌ಪುಟ್ಟಿ ಕುಸುಮಂಗಳಾಗಿರ್ಪೆವು ಹರಂಗೆ ಸಮರ್ಪಿಸುವರ ಕಾ[5]ಣೆ[5]ವೆಂದು ದೆಸೆದೆಸೆಗೆ ಬಾಯ್ಬಿಟ್ಟು ಬಿನ್ನವಿಸುವಂತೆ ಬಿರುಮುಗುಳಾದ ಪ್ರಸೂನಂಗಳಿಂದೊಪ್ಪುವ ಸೇವಂತಿಗೆಗಳ ತಂಡಂಗಳಿಂದಂ, ಕಮ್ಮಲರಂ ಎತ್ತಿ ಶಿವಂಗರ್ಪಿಸಿದ ಭಕ್ತರ್ಗೆ ನಂದೀಶ್ವರನ ಸಮಬಲವಪ್ಪುದಕ್ಕೆ ತಮ್ಮ ಪೆಸರೇ ಸಾಕ್ಷಿಯೆಂಬಂತರಲ್ವ ಪೂದೋಂಟಗಳಿಂದಲಂಕರಿಸಿರ್ದ ಸಂದ್ಯಾವರ್ತಸಂಗಳ ಮೊತ್ತಂಗಳಿಂಪಂ ಶಿವನಲ್ಲದನ್ಯ ದೇವತಾಸಂಗಕ್ಕೆಳಸದ ಮನವೆಮ್ಮಲ್ಲಿದೆ ಹಾದರಿಯೆಂದನ್ಯಾಯದಿಂ ನುಡಿವರೆಮ್ಮನೆಂದು ದೈನ್ಯದಿಂ ಯತೀಶಂಗೆ ಬಿನ್ನೈಸುವಂತರೆವಿರಿದು ದೆಸೆದೆಸೆಗೆಕಂಪಂ ಬೀರುವ ಕುಸುಮಂಗಳಿಂದೊಪ್ಪಂಬೆತ್ತ ಪಾದರಿ ವೃಕ್ಷಪಂತಿಗಳಿಂಪಂ ಮತ್ತಂ ಕೃಷ್ಣ ದೇವಂ ಸುರಪನೊಳ್ಕಾದಿ ಬಲ್ಪಿಂದೆಮ್ಮ [6](ಸೆ)[6]ರೆವಿಡಿದು ತಂದು ತನ್ನ ಪಟ್ಟದ ರಾಣಿ ರುಕುಮಿಣಿಯ ಮನೆಯ ಬಾಗಿಲ ಮುಂಗಡೆ ಕೀ[7]ಳಿ[7]ಲಲ್ಲಿ ಕಾದಿರಿಸಿಕೊಂಡಿರ್ದುಂ ಕೆಲವು ದಿನದ ಮೇಲೆ ಮೃತವನೈದಿದಂ ಆತನ ಬಾಗಿಲ ಕಾದ ದೋಷಂ ಪೋಗವೇಳ್ಕೆಂದೀಪುರದ ಪುಷ್ಪವಾಟಿಗಂ ಬಂದು ಪುಟ್ಟಿ ಕುಸುಮಂಗಳಾಗಿ[8]ರ್ಪೆವೆಮ್ಮ[8]ಲ್ಲಿರ್ದ ದೋಷಂಗಳಂ ಪರಿಹರಿಸಲೋಸ್ಕರಂ ಎಮ್ಮಲಿರ್ದಲರಂ ತಿರಿದು ಕರೆಗೊರಲಂಗೆ ಸಮರ್ಪಿಸಿರಯ್ಯಾ ಎಂದು ಬಿನ್ನಹಂ ಮಾಡುವಂತರಲ್ವಲರಿಂ ರಾಜಿಪ ಪಾರಿಜಾತ ದ್ರುಮರಾಜಿಗಳಿಂಪಂ, ಎನ್ನಲರಂ ಹರಂಗರ್ಪಿಸಿದ ಭಕ್ತರ ಶತ್ರುಗಳ ನಿರಿವುದಕ್ಕೆ ನಾಂ ಸುರಗಿಯೆಂಬೊಲರೆವಿರಿದ ಕುಸುಮಂಗಳಿಂ ಚೆಲ್ವುವೆತ್ತ ಸುರಗಿವೃಕ್ಷಯೂಥಂಗಳಿಂದಂ, ಗಿರಿಕ[9]ನ್ನಿ[9]ಕೆಯಾಗಿಯುಂ ಪುರಹರನನಾಲಿಂಗಿಸದೆಯೆನ್ನನಾಲಂಗಿಸಿ ಪುಷ್ಪತೆಯಾಗಿರ್ದಪಳಿವಳಿದು ಸಹಜಗುಣಮೆಯೆಂದು ತನ್ನ ನಡದಲರಾಗಿರ್ಪ ಗಿರಿಕರ್ನಿಕಾಲತೆಯುಂ ಹಳಿದುನುಡಿವಂತರೆವಿರಿದ ಕುಸುಮಂಗಳಿಂ ರಾಜಿಸುವ ಕುರವಕ ದ್ರುಮರಾಜಿಗಳಿಂದಂ, ಮತ್ತಂ ಕಾಕ್ಷಾಮೃಗಂ ಶಿವಂಗೆ ತನ್ನಂಗಮಂ

---

1. x (ಅಇ). 2. x (ಇ). 3. ಜಿ (ಇ). ಚಿ (ಅ). 4. ಕ್ರಿ (ಅ); ರಿ (ಇ).
5. x (ಇ). 6. ಸೀ (ಅಇ). 7. ಳ (ಇ). 8. ರ್ಪವುಂಯೆ (ಅಇ).
9. ಕರ್ನಿಕೆ (ಇಅ).

ಪುಷ್ಪವಾಗಿ ಸಮರ್ಪಿಸಲೆಂದು ಒಂದೀ ಕುಸುಮದೋಂಟದೊಳ್ಜನಿಸಿ ಮೊಲ್ಲೆಯೆಂಬ ಪೆಸರಿಂ ಲತೆಯಾಗಿಯೆನ್ನನಾಲಿಂಗಿಸಿ ಪುಷ್ಪಿತೆ[1]ಯಾಗಿ[1] ಶಿವಂಗೆ ಸಮ[2](ರ್ಪಿ)[2]ಸೆಂದು ದೈನ್ಯದಿಂ ಪಲ್ಗಿರಿವುತಿರ್ಪ ಕಸ್ತೂರಿ ಮೊಲ್ಲೆಯ ಕುಸುಮಂಗಳಂ ಶಿವಂಗೆ ಸಮರ್ಪಿಸು ವುದಕ್ಕೆ ಸಿದ್ಧಲಿಂಗದೇವಾ ಬನ್ನಿಯೆಂದು ಬಾಯ್ಬಿಟ್ಟು ಕರೆವಂತರೆವಿರಿದಲರಿಂದೊಪ್ಪಂ ಬೆತ್ತ ಕಾಂಚಿವಾಳ ದ್ರುಮ ಸಂಚಯದಿಂ, ಮತ್ತಂ ಕೋಳದೊಳ್ಜನಿಸಿ ಅಲ್ಲಿಯೆತ[3](ವ)[3]ಳು ತಿರ್ಪ ತಾವರೆಯೆನ್ನ ಕಿರಿಯಮಗಂ ಜಲದಲಾದರುಂ ಸ್ಥಲದಲಾದರುಂ ಪುಟ್ಟಿಯೆಲ್ಲಿ ಯಿರುತಿರ್ಪ ಸ್ಥಲವಾದರೆ ಜಲದಾವರೆಗಿಂ ಹಿರಿಯಮಗಂ ಕಿಂಚಿದುನ್ನತಮಾಗಿ ಬೆಳೆದು ಸುವರ್ಣಚ್ಛಾಯಮಪ್ಪ ಕುಸುಮಂಗಳಿಂದಲಂಕೃತಮಾದ ಚಿನ್ನದಾವರೆಯಲರ್ನಿನ್ನ ಹಿರಿಯಮಗಂ ಈ ಮೂವರ್ಮಕ್ಕಳಲ್ಲದೆ ವಿಶೇಷ[4]ವಾಗಿ ಮಕ್ಕಳಂ ಪಡೆದ[4] ವೃದ್ಧತ್ವ ಮೆಸಗಿಲ್ಲಂ ಪ್ರಾಯಂಪೋಗಿ ಮುಪ್ಪಾಗಿ[5]ಪ್ಯ[5]ಸುಂಕೆಪ್ಪು ತಲೆವೋಣಗಿ ಬಿಳಿದಾಗಿ ಪುಷ್ಪಿ ತತ್ತ್ವವರತು ಶಿರಬಾಗಿಯುಂ ಎನ್ನನಾಲಿಂಗಿಸಿಕೊಂಡು ಬಿಡದೆ ಕಾಡುತಿರ್ಪ ಈ ಅಪ್ರ ಗಂಚಿಯುಂ ಕಡೆಗೆಳೆದು ಎನ್ನ ಸಂತಸದೋರಿಸಯ್ಯಾ ಎಂದು ದೈನ್ಯದಿಂ ದೆಸೆದೆಸೆಗೆ ಬಾಯ್ಬಿಡುವಂತಿರ್ದಲರಸಮುದಾಯಂಗಳಿಂದೊಪ್ಪುವ ಬೆಟ್ಟದಾವರೆಗಳ ಗೊಂದಣ ದಿಂದಲುಂ, ಮತ್ತಂ ಮರುಗಾದೇವಿಯೆಂಬಾಕೆ ಹರಂ[6]ಗೆ ತನ್ನಂಗಮಂ ಸಮ[6]ರ್ಪಿಸ ಲೋಸ್ಕರಂ ಪುಷ್ಪವಾಟಿಯೊಳ್ಪುಟ್ಟಿ ಮರುಗವಾಗಿರ್ಪಳೋ ಎಂಬಂತಿರ್ಪ ಕಸ್ತೂರಿ ಮರುಗ ಮೊದಲಾದ ನಾನಾತೆರದ ಮರುಗಂಗಳಿಂ. ಬ್ರಹ್ಮದೇವಂ ಪರಮೇಶ್ವರನಂ ಪೂಜಿಸಲೆಂದು ತನ್ನ ಜಡೆಗಳಂ ಪುಟ್ಟಿಸಿದನೋ ಎಂಬಂತೆ ಕಂಪಿಡಿದು ಸೊಗಸುವಡೆದಿರ್ದ ಬ್ರಹ್ಮಜ[7](ಟೆ)[7]ಗಳಿಂದಂ, ಮತ್ತಂ ಪಚ್ಚೆಯೆಂಬಾ[8]ಕೆ[8] ತನ್ನಂಗಮಂ ಹರಂಗರ್ಪಿಸಲೆಂದು ಪತ್ರೆಯಾಗಿ ಪುಟ್ಟಿರ್ದಪಳೊಯೆಂಬಂತೆ ಸುಗಂಧಂ ತೀ[9]ವಿರ್ದತೆನೆಗಳಿಂ ಭಾ[9]ಸುರಮಾದ ಪಚ್ಚೆಯಪತ್ರೆಯ ಗಿಡುಗಳ ತಿಂತಿಣಿಯಿಂದಂ, ಮತ್ತಂ ವೀರಸಂಗವ್ವೆಯೆಂಬಾಯಕ್ಕಂ ಶಿವಂಗೆ ಮಡಿವಾಳಮಂ ಸಮರ್ಪಿಸುವ ನೇಮದಿಂದಿರ್ದೊಂದುದಿನಂ ದೊರಕದಿರೆ ತನ್ನ ಶಿರೋರುಹಮಂ ಕಿತ್ತು ಸಮರ್ಪಿಸಿ ತನ್ನನೇಮಂ ಮುಗಿದ ಬಳಿ[10]ಕ್ಕೆ[10]ಮಿಕ್ಕ ಶಿರೋರು ಹಂಗಳಿಂ ಕುಸುಮವಾಟಿಯೊಳ್ಪುಟ್ಟಿಂದು ಕಳುಹಲ್ಬಂದು ತಾವಾಗಿ ಬೇರ್ಗಳಿಳಿದು ಸೊಗಸಿಂ ಪರಿಮಳವಡೆದು ರಾಜಿಸುವಂತಿರ್ಪ ಮಡಿವಾಲ ಜಾಲಂ[11]ಗಳಿಂ, ಮಂಚಿ ಯೆಂ[11]ಬಾಯಕ್ಕಂ ತನ್ನಂಗಮಂ ಶಿವಂಗೆ ಸಮರ್ಪಿಸುವುದಕ್ಕೆ ಇದುಕುರುಪೆಂದು ತೋರ್ಪಂತೆ ಕೋಮಲದಲಮಾದ ಮಂಚಿ ಪತ್ರೆಗಳ ಸಂಚಯಂಗಳಿಂ, ಬಿಲ್ವಪತ್ರೆ ಯಂದರಿಯದರ್ಪಿಸಿದ ಶಬರಂಗೆ ಗಣೇಶ ಪದವಾಯಿತ್ತು, ಅರಿದರ್ಪಿಸಿದಾತಂಗೆಂತಪ್ಪ ಪದವಹುದೆಂಬುದ ಭಕ್ತರ್ನೀವೆ ವಿಚಾರಿಸಿಕೊಳ್ಳಿಯೆಂಬಂತರೆವಿರಿದ ಪುಷ್ಪಂಗಳಿಂದಲುಂ

---

1. x (ಅಇ). 2. x (ಅಇ). 3. ಪ (ಅಇ). 4. x (ಇ). 5. ಮಯಿ (ಇ). 6. (ಇ). 7. ಟ್ಟ (ಅಇ). 8. ಕಂ (ಇ). 9. x (ಇ). 10. ಕ್ಕ (ಅಇ). 11. x (ಇ).

ಕೋಮಲದಲಂಗಳಿಂದಲುಂ, ಒಪ್ಪುವೆತ್ತ ಬಿಲ್ವ[1]ಪತ್ರಕುಜ[1]ರಾಜಿಗಳಿಂ ಮತ್ತಂ ನೀಲೋತ್ಪಲಂ ಚೆಂಗಣಗಿಲು ಮುಂತಾದ ಪ್ರಸೂನಂಗಳಿಂ ತೊಳಸಿ ದೂರ್ವಾಂಕುರ ಮುಂತಾದ ಪತ್ರಂಗಳಂ ಸಹಸ್ರಂಗಳಿಂದರ್ಪಿಸವೇಳ್ಕುಂ ಭಕ್ತರೆಂಬಂತರೆವಿರಿದ ಕುಸುಮಂಗಳಿಂದ ರಾಜಿಪ ದಾಸಣಂಗಳ ನಿವಹಂಗಳಿಂದಂ, ಮತ್ತಂ ಬ್ರಹ್ಮವಿಷ್ಣುಗಳ ವಾದದ ಕತದಿಂ ತಪ್ಪಿಸುಡಿದುದರಿಂ ನಿಮ್ಮ ಸಭಾಮಧ್ಯದೊಳೆನ್ನನಿರಲೀಸದಾದಿರಿ ಕಲ್ಯಾಣಸಂಗನ ಬಸವನಾ ತಪ್ಪಂ[2] ಕಳದು ಭಸಿತ[2]ವಂ ತಳಿದೆನ್ನಂಗವಂ ಪವಿತ್ರಂಮಾಡಿ ಹರಂಗರ್ಪಿಸಿ ರಕ್ಷಿಸಿದನಿನ್ನೆನ್ನಂ ನೀವು ಸಭಾಮಧ್ಯಕ್ಕಂ ಕರೆಸದ ಪರಿಯಾವುದೆಂದು ಪ್ರಸವ ಜಾತಿಗಳೊಡನೆ ಮಾತನಾಡುವಂತರೆವಿರಿದಲರಿಂ ಸಿಂಗರಂಬೆತ್ತ ಕೇತಕೀ ವೃಕ್ಷಂಗಳ ಕುಸುಮ ವಾಟಿಯಂ ಬಳಸಿಯೊಪ್ಪುತಿರ್ದ ಪೂವಾಟಿಯಲ್ಲಿ- ೩೧

ಕಂ. ಪೂದೋಟವ ಪೊಕ್ಕಾಕ್ಷಣ
ನಾದಾಮೃತಮೂರ್ತಿ ಸಿದ್ಧರಾಮಯದೇವಂ
ಮೂದೇವರ ದೇವಂಗಂ
ಸಾ([3]ದರದಿಂದೆತ್ತುವ)[3] ಪೊಲ್ ಪೂವಂದಿರಿದಂ ೩೨

ಅಂಗುಲಿರುಹದೊಳ್ ನಯನವ
ನಂಗಜಹರನಿಂ ಪಡೆದ ವ್ಯಾಘ್ರಪಾದನೋ
ಲ್ಮಂಗಲಮಯ ಬಿರುಮುಗುಳಂ
ಸಾಂಗಮದಾಗಲ್ಕೆತಿರಿದನೆತಿಕುಲ ತಿಲಕಂ ೩೩

ಅಳಿಗಾಳಿ ಪುಳುಗಳೆಲ್ಲಂ
ಚಳಿಮಳೆ ಬಿಸಿ[4]ಲುಂ ಘೂ[4]ಳುಗ[5]ಳೊ[5]ಂದಿದರಳ್ಗಳ
ನುಳಿದುತ್ಕಳಕಳಿಸುವೆಸ-
ಳ್ಗಳಲರಿನ ಗೊಂಚ[6](ಲುಗ)[6]ಳಂ ತಿರಿದಂ ಮುದದಿಂ ೩೪

ಕಂಪಿಡಿದು ಸೊಗಸುತಿರ್ಪಾ
ಸೊಂಪಿಂದರೆವಿರಿಸುಲೆಂದೊಡೊ[7]ಳ್ಳ[7]ರಲಾ[8](ದಾ)[8]
ತಂಪಾಗಿ ಕಾಂತಿ ವೆತ್ತಿ-
ರ್ದಿಂಪಿನ ಪೂಗಳನುತಿರಿದ ಸಂಭ್ರಮದಿಂದಂ ೩೫

---

1. x (ಇ). 2. x (ಇ). 3. ದ ವೊ (ಇ) ; ಧಾರಣದಿಂದೆತ್ತು(ಅ)
4. ಲ್ಘೂ (ಅಇ). 5. ಳೊಳೊ (ಅಇ). 6. ಲ್ಗ (ಅಇ). 7. ಅ. ಲ್ವ (ಇ).
8. ದ (ಅಇ).

ಕರುಣಿಗುಣವಂತ ನಿರ್ಮಳ
ಪರಬ್ರಹ್ಮಜ್ಞಾನಿ ಸಿದ್ಧಲಿಂಗಯತೀಶಂ
ಗುರುವಿನ ಜಡೆಯೆಡೆಗೆಂದುಂ
ಹರುಷದೊಳಿರವಂತಿ ಪೂಗಳಂ ತಾಂ ತಿರಿದಂ ೩೬

ಅಳಿಮನವೊಲ್ಲದ ಯತಿಪಂ
ನಳಿನಾಕ್ಷಿಯರಂಗಲತೆಗೆ ಸಿಕ್ಕದ ಮಹಿಮಂ
ವಿಳಸದಿ ಕೋಮಲವಾಗಿಹ
ಅಳಿ[1]ಸೋಂಕದ ಸುರಭಿ[1]ಯ ಬಿರಿಮುಗುಳ್ಗಳ ತಿರಿದಂ ೩೭

ಭವಹರಭಕ್ತನಭರ್ಗಂ
ಸವಿನಯದಿಂ [2]ನೋಡಿ ನೋಡಿ[2] ಪುಳುಕಿಸುತಾಗಂ
ನವವಿಧ ಕಂಪಂ ಬೀರುವ
[3](ನವೀನ)[3]ದ ಸೇವಂತಿಯಲರ್ದೊಂಗಲ ತಿರಿದಂ ೩೮

ಪೂವೊಂದು ಬಿದ್ದಡಾಗಂ।
ಭಾವಜಹರಗೆಂದ ಶ್ವೇತನಂ ನೆನೆಯು[4]ತ್ತುಂ[4]
ತೀವಿದ[5](ತಿ)[5]ಸುರಗಿಯಲರಂ।
ದೇವರ ದೇವಂಗೆ ತಿರಿದ ನಿರ್ಮಳಕರದೊಳ್ ೩೯

[6]ಪಾದರ[6]ಗುಣಮುನ್ನಿಲ್ಲಂ
ಪಾವರನಾಮವನು ತಾಳ್ದ[7]ಬ್ರಹ್ಮಯ್ಯನವೊಲ್[7]
ಮಾಧುರ ಸೊಂಪಿಂ ಬೆಳದಿಹ
ಪಾದರಿಪೂಗಳನು ಸಿದ್ಧಲಿಂಗಂ ಕೊಯ್ವಂ ೪೦

ಪೂಜಾತಿಗಳಿಂಗೆಲ್ಲಂ
ಈ ಜಾತಿಯ ಶ್ರೇಷ್ಠವೆಂದು ಪೇಳ್ದಂತಿರ್ಪಂ
ತಾಜಾತಿಯೆಲರನೆತಿಪಂ
ಹೃಜ್ಜಾತನವೈರಿಗೆಂದು ತಿರಿದಂ ಮುದದಿಂ ೪೧

ವ॥ ಅಂತವಂ ಕೊಂಡು ಪೂಗಳಂ ಕೊಯ್ಯಲೆಂದು ಕೊಳನಂ ಪೊಕ್ಕುಂ

---

1. x (ಇ). 2. ನೋಡಿ (ಅಇ). 3. ನದಿನದ (ಅಇ). 4. ತಲಿಂ (ಅಇ).
5. ಧಿ (ಅಇ). 6. ಪಾದರದ (ಅಇ). 7. ಬ್ರಂ........(ಇ)

ಕಂ. ಕಮಲಂಗಳ್ಕಲ್ಹಾರಮು
ಭ್ರಮರಂಗಳುಮೆರಗುತಿರಲು ಸೋಹುತ್ತ್ರವನುಂ
ವಿಮಳಿನ ಕರದೊಳಗಾಗಂ
ಪ್ರಮುದಿತದಿಂ ತಿ[1]ರಿದು ತಿರಿದು[1] ತೀವುತ್ತಿರ್ದಂ ೪೨

ನೋಡಿಯೆ ಸದ್ಭಾವದೆ[2](ತಾಂ)[2]
ಗಾಢದಿನೀರ್ವೂವ ತಿರಿದು ಸಜ್ಜೆಯ ತುಂ[3](ಬಲ್)[3]
ಜೋಡಿಸಿ ದಂಡೆಯ ಕಟ್ಟ-
ಲ್ಕೂಡೆಸರಸಿಜದ[4](ಸುತಂತುವಂ ತಾಂ ಕೊ)ಂ[4]ಡಂ ೪೩

ವ॥ ಕನ್ನೈದಿಲ್ಕ ನಿರ್ಗಕಾರ ಕುರವಕಂ ದವನ ಬಕಪುಷ್ಪ ಸಹಕಾರ ಜಂಬುಕಂಕೆಲ್ಲಿ ಬಿಲ್ವ ಮೊದಲಾದ ಪತ್ರಂಗಳಂ ಕುಶದೂರ್ವಾಂಕುರಂ ಭದ್ರ ಮುಂತಾದ ತೃಣಂಗಳಂ ಮುಡಿವಾಲ ಲಾಮಂಚಕ ಉಂಚಿ ಮೊದಲಾದ ಬೇರ್ಗಳಂ ತೆಗೆದುಕೊಂಡುಂ ಮತ್ತಂ [5]ಪೂಗದ್ರುಮ[5] ಪರ್ಣಂಗಳ ನೇತ್ರಂಗಳಂ ಕೋಮಲಮಾದ ಕರ್ಪೂರ ಕದಳಿದಳಂಗಳಂ ನಳಿನದಳಂಗಳಂಕೊಂಡು ಪೂವಾಟಿಯುಂ ಬಿಟ್ಟು ಗುರುಪಾದದೊತ್ತಿಗಂ ಬಂದು ನಮಸ್ಕಾರಂ ಮಾಡಿ ಪುಷ್ಪಂಗಳಂ ಶೋಧಿಸಿ ದಂಡೆಗಳಂ ಕಟ್ಟುತಿರ್ದನದೆಂತೆಂದೊಡೆ- ೪೪

ಕಂ. ಕದಳೀದಳದೊಳ್ಕುಸುಮವ
ಮುದದಿಂ ತಂದಿರಿಸಿ ನಳಿನಗುಣದಿಂ ದಂಡೆಯ
ಪದರದಿತಾಂ ವಿರಚಿಸಿದಂ
ಸದಮಳನಿರವಂತಿಯಲರ ಗೊಂದಣದಿಂದಂ ೪೫

ಕಮಳಾಕರ ಬಂಧಂಗಳ
ನಮಳಿನ ಮುರಜಬಂಧ ಮುತ್ಪಲ ಬಂಧಂಗಳ್
ಪ್ರಮುದಿತ ಸರಸಿಜ ಬಂಧಂ
ಸುಮನ[6](ಸಮಾಲಿಂಗ)[6] ಬಂಧಮುಂ ವಿರಚಿಸಿದಂ ೪೬

ದ್ವಿರದಾಜಿನಬಂಧಂ ವಿ
ಸ್ತ್ರರವಿಧುರವಿಬಂಧ ಬಿಂಬ ಬಂಧ ವೃಷಬಂಧ
ಸ್ಮರಬಂಧಂ ಅವನೀಬಂ-
ಧುರಬಂಧಂ ವೀಣಾಬಂಧಮುಂ ರಚಿಸಿದಂ ೪೭

---

1. x (ಇ). 2. ಂಸಂ (ಅಇ). 3. ಬಿಯೂ (ಅಇ). 4. ತಂತುವಂತೆಕೊ (ಅಇ)
5. x (ಇ). 6. ಸುಮನಬಂಧಂಮುಂಲ್ಲಿಂಗ (ಅಇ).

ಸ್ರ. ವೃ.

ಷಟ್ಸಮ್ಮಾರ್ಜನಂಗಳಂ ಮಾಡಿಸವಳ ಹುಡಿಯಿಂದೆಟಿಸಲ್ಪದ್ಮವಿಕ್ಕಿಂ
ಮೂಡಲ್ ಮುಂತಾಗಿ ಸ್ವಸ್ತಿಂ ಕಮಲಕೊಡೆಯುಮೈ[1]ಮೂಲೆಯುಂ[1]
ನಾಗಬಂಧಂ
ಷಟ್ಕೋಣಂ ಚಾಮರಂ ಶೂಲವಸುಗಣದ ಮೂಲಂಗಳಿಂದ ಕ್ರಮಂ ವಿ-
ಸ್ಪಷ್ಟಂ ರಂಗೋಲಿಯಂ ಯಿಕ್ಕಿದನತುಳ ವಿಲಾಸಾಸ್ಪದಂ ಸಿದ್ಧಲಿಂಗಂ ೪೮

ಉ. ವೃ.

ಗಂಧಸುಧೂಪ ದೀಪಕರವಸ್ತ್ರ ಪರಿಗ್ರಹಲಿಂಗಕಾಂಡ ತೀ
ರ್ವಿದಕಮಂಡಲಂ ಕುಸುಮ ಪಾತ್ರೆ ನಿರಾಜನ ದರ್ಪಣಂ ವಿಭೂ
[2](ತ್ಯಾದಿ ಪವಿತ್ರಪೂರ್ಣ)[2] ಜಲಕುಂಭಮುಪಾರತಿ ತಾಂಬುಲಂಗಳಂ
[3](ಅ)[3]ದರದಿತ್ತುವಂದಿಸಿ ಕರಂ ಮುಗಿವು[4](ತ್ರಿಹ)[4] ಸಿದ್ಧಲಿಂಗನುಂ ೪೯

ವ|| ಗುರುದೇವರ್ ಲಿಂಗಪೂಜೆಯಂ ಮಾಡುತ್ತಿರ್ಪಲ್ಲಿ ೫೦

ಉ. ವೃ.

ಆರತಿಯಂ ಕೊಡುತ್ತಕುಸುಮಾಂಜಲಿಯೀವುತ ಪಾಡುತಾಡುತಂ
ಆರತಿಯೀಸಿಕೊಂಡು ಬಳಿ ಕಾರತಿಯಂ ಕೊಡುತುಂ ವಿಲಾಸದಿಂ
ದಾರತಿ ಸಿದ್ಧಲಿಂಗಜಪುಗಂಟೆಯ ಬಾಜಿಸುತಂ ನಿವೇ[5](ದ್ಯತಾಂ)[5]
ಬೂಲಮನೀಡುತಿಂತು ಗುರುಸೇವೆಯ ಮಾಳ್ಪನ ದೇನನೆಂಪಸೆಂ ೫೧

ಕಂ. ಗುರುದೇವರ್ಶಿವಪೂಜೆಯ
ಹರುಷದೊಳುಂ ಮಾಡಿ ಮುಗಿಯೆ ಶಿವಸಿದ್ಧೇಶಂ
ಗು[6]ರುವಿನಪದಸರ[6] ಸಿಜಗಳ
ತ್ವರಿತದಿ ಪೂಜಿಸುವೆನೆಂದು ಬಗೆದಂ ಮುದದಿಂ ೫೨

ಒಂದಿಗುರುಪದವ ಪಿಡಿದೊಡೆ
ಕುಂದುವವೆಂದಂಜಿ ತಾ[7]ನು ಮನದೊಳ್ ನೆನೆದುಂ)[7]
ಬಂಧುರ ಮೃದುಕರ ಪಿಡಿಯ-
ಲ್ಕುಂಮು[8](ಗು)[8] ಗುರುಪದಗಳೆಂದುಮುದ್ಯತನಾದಂ ೫೩

---

1. x (ಇ). 2. ತ್ಯಾಥಪಪೂರ್ತಪೂರ್ಣ(ಅಇ). 3. ನಾ (ಅಇ). 4. ತ್ರಿರ್ವ (ಅಇ). 5. ದ್ಯಮತಾಂ (ಅಇ). 6. x (ಇ). 7. ಂಮನದೋಳ್ನೆನದುಂ (ಅಇ) 3. ಉ (ಅಇ)

ಕರಗಳ್ಕಂಪಿಸೆಗದ್ಗದ
ಸ್ವರದಿಂನುತಿಸುತ್ತೆ ಶರೀರಪುಳಕವನೆಯ್ದು
ಲ್ಗುರುಚರಣಕೆ ವಂದಿಸು[1](ತುಂ)[1]
ಗುರುಕುಲಾಬ್ಧಿಚಂದ್ರಸಿದ್ಧನುದ್ಯತ ನಾದಂ ೫೪

ವ॥ ನಿಚ್ಚ ಶಿವರಾತ್ರೆಯಂ ಮಾಳ್ಪನೇಮದ ಶಿವರಾತ್ರೆಯ ಭದ್ರಿದೇವನಂತೆ, ಘಟಿಕೆ ಘಟಿಕೆಗೆ ಲಿಂಗಪೂಜೆಯಂ ಮಾಳ್ಪನೇಮದ ಕಾಲಕಂಠಯ್ಯನಂತೆ ಆಸಿದ್ಧಲಿಂಗೇಶ್ವರಂ ಬಲ್ಬಜವುಳಿದ(?) ಅಜಗಣ್ಣನಂತೆ ಗುರುಪಾದವನಾಹ್ವಾನಿಸಿ, ಮತ್ತಂ ಪರಮೇಶ್ವರಂಗೆ ನಿರ್ಮಲೋದಕದಿಂ ಮಜ್ಜನಕ್ಕೆರೆವ ನೇಮವನುಳ್ಳ ದಾಠಯ್ಯ ಸೋಮಾಸಿಮಾರಯ್ಯ,[2] ಹಂಪಿದೇವಯ್ಯಂ[2] ಅಗ್ಗವಣಿಯಹೊನ್ನಯ್ಯಂ ಸದ್ಯೋಜಾತಯ್ಯಂ, ಮತ್ತಂ ಪನ್ನೀರಿಂದೀಶ್ವರಂಗೆ ಮಜ್ಜನಮಂ ಮಾಳ್ಪನೇಮದ ಶಿವರಾತ್ರಿಸಂಗಯ್ಯಂ ಮುಂತಾದ ಮಜ್ಜನದ ನೇಮದ ಶರಣತಿಂತಿಣಿಯಂತೆ ಮತ್ತಂ ನಿತ್ಯವು ಸಹಸ್ರಕುಂಭಾಭಿಷೇಕದ ನೇಮದ ಪೋಚಲದೇವಿಯಂತೆ ಗುರುಪದ ಸರಸಿಜಯುಗ್ಮಕ್ಕೆ ಭಕ್ತಿಯಿಂ ಮಂತ್ರೋದಕದಿಂ ಮಜ್ಜನಕ್ಕೆರೆದುಂ ಮತ್ತಂ ತನ್ನಲಿಂಗಕ್ಕೆ ಮುಖಪಾವಡವನಿಕ್ಕುವ ನೇಮದ ಕೇತಲದೇವಿಯಂತೆ [3]ಮತ್ತಂ ಶಿವಭಕ್ತ[3]ರ್ಗೆ ಮುಖಪಾವಡವನಿಕ್ಕುವ ಕಾಯಕದ ಬೀಚಿದೇವಯ್ಯನಂತೆ ಮತ್ತಂ ಶಿವಭಕ್ತರ ಮುಖಮಜ್ಜನದ ವೇಳೆಯಲ್ಲಿ ಮುಖಪಾವಡವನಿಕ್ಕುವ ಕಾಯಕದ ಶಿವಮುದ್ದಯ್ಯನಂತೆ ಗುರುಚರಣದ್ರವಮಂ ಮೃದುವಸ್ತ್ರದಿಂ ಮೆಲ್ಲಮೆಲ್ಲನೆ ತೊಡೆದುಂ ಪರಮೇಶ್ವರಂಗೆ ನಿತ್ಯವುಂ ಹರಸಿ ಭಸಿತವಂ ಧರಿಸುವ ತಿರುಜ್ಞಾನಸಂಬಂಧಿಯಂತೆ, ಶ್ರೀವಿಭೂತಿಯಂ ಧರಿಸಿ ಮತ್ತಂ ಲಿಂಗದೇವರ್ಗಂ ಕಸ್ತೂ[4]ರಿ ಲೇಪನಂಮಾ[4]ಳ್ಪನೇಮವನುಳ್ಳ ಉದ್ಭಟಯ್ಯನಂತೆ ಗುರುವಿನಂಘ್ರಿಗಂ ಕಸ್ತೂರಿಯಂ ಲೇಪಿಸಿ ಮತ್ತಂ ಪುರಹರಂಗೆ ಗಂಧವನರ್ಪಿಸುವ ನೇಮದ ಪೊಲಗಾಂಡಮೂರ್ತಿಗಳಂತೆ ಮತ್ತಂ ಶಿವಲಿಂಗದೇವರ್ಗಂ ನಿಂಬೇಕಾಯಪ್ಪು ಗಂಧವಂ ಸಮರ್ಪಿಸುವ ನೇಮವನುಳ್ಳ ಮಾಚಲದೇವಿಯಂತೆ ಗಂಧವ ಸಮರ್ಪಿಸಿ ಪಂಚರತ್ನಾಕ್ಷತೆಯಂ ಲಿಂಗಕ್ಕೆ ಸಮರ್ಪಿಸುವ ನೇಮದ ಕಾಚಲದೇವಿಯಂತೆ ಅಕ್ಷತೆಯ ಸಮರ್ಪಿಸಿ[5] ಮತ್ತಂ ಅಧೋಕ್ಷಜಂ ಸಹಸ್ರ ಕಮಲದಿಂದೀಶಪಾದವಂ ಪೂಜಿಸುತ್ತಿರಲೊಂದೆಸಳ್ ಕಡಿಮೆಯಾಗೆ ತನ್ನ ನೇತ್ರವಂ ಕಿತ್ತು ಸಮರ್ಪಿಸಿ ರಮೆ ಚಕ್ರ ಗರುತ್ಮ ದುಗ್ಧಾಬ್ಧಿಯಂ ಪಡೆದನೆಂದು ಪೇಳ್ವ ಮಹಿಮ್ನಸ್ತೋತ್ರವಂ ಕೇಳ್ದು ಹೊಂಬಣ್ಣದ ಸಹಸ್ರದಳಾಬ್ಜದಿಂ ಪೂಜಿಪೆನೆಂದು ನೇಮಂಬಡೆದೀಶಂಗರ್ಪಿಸುವ ವೀರಚೋಳನಂತೆ ಗುರುಪದ ಸರೋಜಯುಗ್ಮಕಂ ಕಮಲಂಗಳ[6]ನೊತ್ತಲಿಕ್ಕೆ ಮತ್ತ[6]ಂ ಲಿಂಗ ದೇವರ್ಗಂ ಕೆಂಪಿನ ಸೇವಂತಿಯಿಂಡೆಯಂ

1. ೦ (ಅಇ). 2. x (ಇ). 3. x (ಇ). 4. x (ಇ). 5. x (ಇ).
6. x (ಇ)

ಸಮರ್ಪಿಸುವ ನೇಮವನುಳ್ಳ ಇಂಡೆಯ ಬ್ರಹ್ಮಯನಂತೆ ಸೇವಂತಿಯಿಂಡೆಯಂ ಗುರುಚರಣತಳದೊಳ್ ಸೇರಿಸುತ್ತಂ ಮತ್ತಂ ಸೇವಂತಿಯ ಪುಷ್ಪವವೊಂದೊಂದಾಗಿ ಸಮರ್ಪಿಸುವ ನೇಮವನುಳ್ಳ ಬೀಚಲದೇವಿಯಂತೆ ಬಿಳಿದಾದ ಸೇವಂತಿಗೆಯಂ ಒಂದೊಂದಾಗಿ ಗುರುಚರಣಕೊತ್ತನಿಕ್ಕುತುಂ ಮತ್ತಂ ತುಂಬೆಯಲರನೀಶ್ವರಂಗೆ ಸಮರ್ಪಿಸುವ ನೇಮದ ಹಿಪ್ಪಲಿಗೆಯ [1]ಕಲ್ಲಯ್ಯನಂತೆ, ತುಂ[1]ಬೆಯಲರಿಂದಲಂಕರಿಸಿ ಮತ್ತಂ ಚೆಂಗಣಿಗಿಲಲರ ಕಿರೀಟಮಂ ಈಶ್ವರನ ಮಕುಟಕ್ಕಲಂಕರಿಸುವ ನೇಮವನ್ನುಳ್ಳ ಹೂವಿನಲ್ಲಮ ದೇವಿಯಂತೆ ಚೆಂಗಣಗಿಲಲತಂಕಿರೀಟಮಂ ಶ್ರೀಗುರುವಿನ ಜಟಾಮಕುಟಕನುಗೊಳಿಸಿ ಮತ್ತಂ ಶಿವಭಕ್ತರ ಮಕುಟವ ಶೃಂಗಾರವಂ ಮಾಳ್ಪಕಾಯಕದ ಉತ್ತಮಾಂಗದ ಕೇಶಿಯಂತೆಯುಂ ಮತ್ತಂ ತಿರುವಾರೂರ ತ್ಯಾಗನಾಥನ ಮಕುಟವಂ ಸಿಂಗರಿಪ ನೇಮದ [2]ಪೂಜಿದೇವನಂತೆ[2] ಶ್ರೀಗುರುವಿನ ಮಕುಟಮಂ ಪುಷ್ಪಂಗಳಿಂ ಸಿಂಗರಿಸಿ ಮತ್ತಂ [3]ಶಿವಭಕ್ತ[3] ನೀಲಕಂಧರಂಗೆ ಚಂಪಕ ಪುಷ್ಪವಂ ಸಮರ್ಪಿಸುವಲ್ಲಿ ಪ್ರೀತಿವಂತನಾದ ಚಿರುಪುಲಿಯರಂತೆ ಚಂಪಕ ಕುಸುಮ ದಂಡೆಯಂ ಗುರುವಿನುರದೊಳೆಳಲಿಟ್ಟುಂ ಮತ್ತಂ ಬಿಲ್ವಪತ್ರೆ ತನ್ನ ನಿಯಮಕ್ಕಂ ದೊರಕದಿರೆ ತನ್ನ ಶರೀರದ ಚರ್ಮಮಂ ತೆಗೆದು ಬಿಲ್ವಪತ್ರೆಯಾಕಾರಂ ಮಾಡಿಶಿವಂಗೆ ಸಮರ್ಪಿಸುವ ನೇಮವನುಳ್ಳ ಬಿಲ್ವ[4]ಪತ್ರೆಯ ಕೊಪ್ಪಿ[4] ದೇವನಂತೆಯುಂ ಆವಪತ್ರೆಯನಾದಡುಂ ತಂದು ಪಂಚಾಕ್ಷರಿಯಂ ಸ್ಮರಿಸಿ ಬಿಲ್ವಪತ್ರೆಯಂ ಮಾಡಿ ಶಿವಂಗರ್ಪಿಸುವ ನೇಮವನುಳ್ಳ ಬಿಲ್ವಪತ್ರೆಯ ಶಂಕಿದೇವನಂತೆ ಕಂಪಿಡಿದು ಕೋಮಲ ವಾದ ಬಿಲ್ವಪತ್ರೆಗಳನರ್ಪಿಸುತ್ತಂ, ಮುಡಿವಾಲಮಂ ಶಿವಂಗೆ ಸಮರ್ಪಿಸುವ ನೇಮದ ವೀರಸಂಗಸ್ವಾ[5]ಯಂತೆ ಮುಡಿ[5]ವಾಲಮಂ ಮಕುಟಕ್ಕೆ ಸುತ್ತಿಯುಂ ಪರಮೇಶ್ವರಂಗೆ ತೃಣಂಗಳಂ ಸಮರ್ಪಿಸುವ ನೇಮದ ಗಣದಾಸವ್ವೆಯಂತೆ ದೂರ್ವಾಂಕುರಂ ಮುಂತಾದ ತೃಣಂಗಳಂ ಸಮರ್ಪಿಸುತ್ತಂ ಮತ್ತಂ ಆವಾಗಂ ಪಂಚಾಕ್ಷರಿಯಂ ಜಪಿಸುವ ನೇಮದ ಮುರುಗರಂತೆ ಪಂಚಾಕ್ಷರಿಯ ಶಿವಾಯಿಯಂತೆ ಆವಾಗಂ ಶಿವ ಮಂತ್ರವಲ್ಲದನ್ಯವ ನುಡಿಯದ ಮೊಕ್ಕಳದ ರಾಮಯ್ಯನಂತೆ ಒಂದೊಂದು ಕುಸುಮಂಗಳಿಗೊಂದೊಂದು ಮಂತ್ರೋಚ್ಚಾರಣೆಯಿಂದರ್ಪಿಸುತ್ತಂ ದ್ವಾದಶಾಬ್ದ ಕುಸುಮ ನೇಮಮಂ ನಡೆಸಿದ ಕಲ್ಲಿನಾಥನಂತೆ ಮತ ಂ ನೂರುಬಾರಿ ಸಂಪಿಗೆ ಪುಷ್ಪನೇಮಂ ನಡೆಸಿದ ಕಲ್ಲಿನಾಥನಂತೆ ಮತ್ತಂ ನೇಮಕ್ಕೆ ಪುಷ್ಪ ದೊರಕದಿರೆ ಕಂಡದಿಂಡೆಯ ಸಮರ್ಪಿಸಿದ ರೇಕವ್ವೆಯಂತೆ ಪಲತೆರವ ಕೆಂಪಿನ ದಾಸಣದ ಕುಸುಮವನರ್ಪಿಸಿ ಪಲತೆರದ ಪುಷ್ಪಂಗಳಂ ಪರಮೇಶ್ವರನಿಗೆ ಅರ್ಪಿಸಿದ ತಿರುಚಿಟ್ಟೆನ್, ಇರಿವತ್ತ, ತಿಲ್ಲಿವಲ್ಲಿ, ವಾಯಲಾರು ಮುಂತಾದ ಶಿವಶರಣರ ಸಮೂಹದಂತೆ ಗೊಂದಣದ ಪುಷ್ಪಂಗಳಂ ಗುರುವಿನ ಉರಶಿರ ಪೆಗಲ್ತೊಡೆಗಳೊಳಂ ಮಡಗಿ ಮತ್ತಂ ಚಿರುತೊಣೆಯರಂತೆ ಪುಷ್ಪಂಗಳಂ ಬೀಸರ ಪೋಗಲೀಸದೆ ಉಳಿದ ಪುಷ್ಪಂಗಳಂ ಸಮರ್ಪಿಸಿ ಮತ್ತಂ ಕರಿಯನಾರ್ ಓಪಿಲ ಗುಪ್ತ

---

1. x (ಇ). 2. x (ಇ). 3. ಶಿವಭಕ್ತಮತ್ತಂ (ಅಇ). 4. x (ಇ). 5. x (ಇ).

ಮಂಚಣ್ಣ, ಮಾಚಯ್ಯ ಗೋಗವ್ವೆ ಮುಂತಾದ ಧೂಪದ ನೇಮದ ಶರಣರಂತೆ ಗುಗ್ಗಲು ಧೂಪಮಂ ಸಮರ್ಪಿಸಿ ಮತ್ತಂ ಧೂಪರಾಜನೆಂಬ ಧೂಪವ ಸಮರ್ಪಿಸುವ ನೇಮದ ಶಿವದೇವಿಯಂತೆ ಧೂಪರಾಜ ಧೂಪಂ ಸಮರ್ಪಿಸುತ್ತಂ ಮತ್ತಂ ತನ್ನಹಸ್ತದ ಬೆರಲ್ಗಳಿಗಂ ಬತ್ತಿಯಂ ಸುತ್ತಿ ನಿವಾಳಿಯಾರತಿಯನೆತ್ತುವ ಬ್ರಹ್ಮಯ್ಯನಂತೆ ಮತ್ತಂ ಶಿವಾರ್ಚನೆಯ ಸಮಯದಲ್ಲಿ ಹಸ್ತವಂ ಕತ್ತರಿಸಿ ಬೆರಳ್ಗಳಿಗಂ ಬತ್ತಿಯಂ ಸುತ್ತಿ ನೀವಾಳಿಸುವ ನೇಮದ ವೀರಗೆಲಸದ ಸೋಹಿದೇವನಂತೆಯುಂ ನೂರೊಂದು ಬತ್ತಿಯಂ ಈಶ್ವರಂಗೆ ಸಮರ್ಪಿಸುವ ನೇಮುವನುಳ್ಳ ನಿರಂಜನದ ಕಮಲಾಯಿಯಂತೆಯುಂ ಕಪಿಲೆಯಾಕಳ ತುಪ್ಪದಿಂ ನೂರೊಂದು ಬತ್ತಿಯಾರತಿಯಂ ಬೆಳಗುವ ನೇಮದ ತುಪ್ಪದ ನಾಗಾಯಿಯಂತೆಯುಂ ಇಪ್ಪೆಯ ತುಪ್ಪದ ದೀಪವಂ ಸಮರ್ಪಿಸುವ ದೇವಲಾಂಬಿಕೆಯಂತೆ ತುಪ್ಪದ ದೀಪವಂ ಸಮರ್ಪಿಸುವ ನೇಮದ ಕೊಲ್ಲವ್ವೆಯಂತೆಯುಂ ಸರ್ವನಿರಾಜನನೇಮದ ವೀರಭದ್ರಯ್ಯನಂತೆ ಪಟ್ಟುವಸ್ತ್ರದ ಬತ್ತಿಯ ದೀಪಾರತಿಯ ನೇಮದ ಪುರಾಣಾರಿ ದೇವನಂತೆಯುಂ ಕರ್ಪೂರದಾರತಿಯ ಸಂಗಯ್ಯನಂತೆಯುಂ ಮತ್ತಂ ಶಿವಂಗೆ ದೀಪಮಂ ಸಮರ್ಪಿಸುವ ನೇಮದ ಕಲಿಯಾರು ಕಡಲವಲನಂಬಿ, ನಮಿನಂದಿ ಮುಂತಾದ ಶರಣರ ಸಮೂಹದಂತೆ ಗುರುಪಾದಾಂಬುಜಯುಗಕ್ಕಂ ಕರ್ಪೂರದಾರತಿಗಳಂ ಸಮರ್ಪಿಸುತ್ತಂ ಮತ್ತಂ ರಾಜಾನ್ನದಕ್ಕಿಯ ನೈವೇದ್ಯಮಂ ಸಮರ್ಪಿಸುವ ನೇಮದ ರಾಜಾನ್ನದ ಬೊಮ್ಮಿದೇವನಂತೆಯುಂ ಮತ್ತಂ ಪರಮೇಶ್ವರಂಗೆ ಷಡ್ರಸಾನ್ನಂಗಳಂ ಸಮರ್ಪಿಸುವ ನೇಮದ ಕರಿಕಾಲಚೋಳ ಸಿರಿಯಾಳ ಚೆನ್ನಯ್ಯ ಸುರಗಿಯ ಚೌಡಯ್ಯ ಚೋಳಿಯಕ್ಕ ದುಗ್ಗವ್ವೆ ಬಸವರಾಜ ಕೊಳೂರ ಕೊಡಗೂಸು ಮುಂತಾದ ಶಿವಶರಣರಂತೆ ಶ್ರೀಗುರುನಿಂಗೆ ನೈವೇದ್ಯಮಂ ಸಮರ್ಪಿಸುತ್ತಂ ಮತ್ತಂ ಹಡಪದ ರೇಚಯ್ಯನಂತೆ ಗಂಗಾದೇವಿಯಂತೆ ಸಪ್ಪೆಮಲ್ಲಮದೇವ ಮುಂತಾದ ಶರಣರಂತೆ ಕರ್ಪೂರತಾಂಬೂಲವಂ ಸಮರ್ಪಿಸುತ್ತಂ ಕೈರಗುಳಿಗೆಯಂ ಪರಮೇಶ್ವರಂಗೆ ಸಮರ್ಪಿಸುವ ನೇಮದ ಸೋಮರಸಿಯಂತೆ ಸಿದ್ಧಲಿಂಗೇಶ್ವರಂ ಕೈರಗುಳಿಗೆಯಂ ಸಮರ್ಪಿಸುತ್ತಂ ಮತ್ತಂ ಈಶ್ವರಂಗೆ ತ್ರಿಕಾಲಂ ಕುಸುಮ ನಿವಾಳಿಯನೆತ್ತುವ ನೇಮದ ಚಿಕ್ಕಪರ್ವತೆಯಂತೆ ಮುದದಿಂ ಪುಷ್ಪಾಂಜಲಿಯಂ ಮಾಡುತ್ತಂ ಈಶ್ವರಂಗೆ ದರ್ಪಣವಂ ತೋರುವ ನೇಮದ ಕಾಮಲದೇವಿಯಂತೆಯಂ ಬಸವೇಶಂಗೆ ನಿತ್ಯವುಂ ಕನ್ನಡಿಯಂ ತೋರುವ ಕನ್ನಡಿಕಾಯಕದ ಲಕ್ಕಿದೇವನಂತೆ ಶ್ರೀಗುರುವಿನ ಮುಖಕಮಲಕ್ಕೆ ರತ್ನದರ್ಪಣಮಂ ತೋರಿ ಮತ್ತಂ ಬಸವೇಶಂಗೆ [1]ಚಾ[1]ಮರಮಂ ಡಾಳೈಸುವ ನಿಯಮುವನುಳ್ಳ ಚವರದ ಚಿಕ್ಕಯ್ಯನಂತೆ ರತ್ನಖಚಿತದ ಕಾವಿನ ಚವರಮಂ ಡಾಳಸುತ್ತಂ ಶರಣರ್ಗೆ ತಾಲವೃಂದವನಿಕ್ಕುವ ಕಾಯಕದ ಮಧುವರಂತೆ ವ್ಯಜನವನಿಕ್ಕುತಂ ಶಿವಭಕ್ತರ್ಗೆ ಸತ್ತಿಗೆಯಂ ಪಿಡಿವ ಕಾಯಕದ ಸತ್ಯೇಶ ಚಾಮರಯ್ಯ

1. x (೧).

ಸಂತೆ ಬಸವೇಶ್ವರಂಗಂ ಸತ್ತಿಗೆಯಂ ಪಿಡಿವ ನೇಮದ ಸತ್ತಿಗೆಯ ಬೊಮ್ಮಣ್ಣನಂತೆ ಶ್ರೀಗುರುವಿಂಗಂ ರತ್ನಾತಪತ್ರಮಂಪಿಡಿವುತ್ತಂ ಮತ್ತಂ ಶಿವಲಿಂಗದೇವರಂ ಕಣ್ಣೆವೆ ಯಿಕ್ಕದೆ ನೋಡುವ ನಿಯಮವನುಳ್ಳ ಅನಿಮಿಷ ಕೇಶಿದೇವಯ್ಯ[1](ರ)[1]ಂತೆ ಶ್ರೀಗುರು ಮೂರ್ತಿಯ ಅನುಮಿಷ ದೃಷ್ಟಿಯಿಂದೀಕ್ಷಿಸುತ್ತಂ ಶಿವಭಕ್ತರಂ ಸ್ತೋತ್ರವ ಮಾಡುವ ಕಾಯಕದ ವಿಮಳದೇವನಂತೆಯುಂ ಮತ್ತಂ ಶಿವಭಕ್ತರ ಸ್ತೋತ್ರದ ಕಾಯಕದ ಸಿಂಗಿಬೊಪ್ಪಯ್ಯನಂತೆಯುಂ ಶಿವನ ಪರಾಕ್ರಮಮಂ ಕೊಂಡಾಡುವ ನೇಮವನುಳ್ಳ ಮಹಾಬಲದೇವಯ್ಯನಂತೆಯುಂ ಶಿವನ ಕೀರ್ತಿಯಂ ಕೊಂಡಾಡುವ ಧವಳಿದೇವಯ್ಯ ನಂತೆಯುಂ ಶಿವನ ಮಹತ್ವಮಂ ಕೊಂಡಾಡುವ ನೇಮದ ದೇವದಂಡಿಯ ಕಾಯಿದೇವ ನಂತೆಯುಂ ಶ್ರೀಗುರುಚರಣಮಂ ಕೊಂಡಾಡುತ್ತಂ ಮತ್ತಂ ಶಿವಭಕ್ತರ್ಗೆ ನಮಸ್ಕಾರ ಮಂ ಮಾಡುವ ಕಾಯಕದ ಧೂರ್ಜಟಿ ಕೇಶಿದೇವಯ್ಯನಂತೆಯುಂ ದೀರ್ಘದಂಡದಿ ನಮಸ್ಕಾರವಂ ಮಾಡಿ ಮತ್ತಂ ಶಿವಲಿಂಗ ಪೂಜೆಯುಂ ಮಾಡಿ ಪ್ರಸಾದವಂ ಬೇಡೆ ಕೊಡ ದಿಪ್ಪರೆ ಕೊರಲ್ಗೆ ಗಂಡಗತ್ತರಿಯಂ ಹಾಯ್ವನೇಮದ ಗಂಡಗತ್ತರಿಯ ನಾಚಿದೇವನಂತೆ ಇಂತು ಶ್ರೀಗುರುಪೂಜೆಯಂಮಾಡಿ ಗುರುಕೃಪಾ ಪ್ರಸಾದವಂ ಪಡೆದು ಮತ್ತಂ ಶಿವ ಭಕ್ತರ್ಗೆ ಲೆಂಕತ್ವಮಂ ನಡಸುವ ಕಾಯಕದ ಲೆಂಕಬೊಮ್ಮಣ್ಣನಂತೆ ಗುರುವಿಂಗೆ ತಾಂ ಲೆಂಕತ್ವಮಂ ನಡೆಸುತ್ತಂ ಶಿವಭಕ್ತರ್ಗೆ ದಾಸಗಾ[2]ಯ(ಕ)[2]ವ ಮಾಡುವ ನೇಮದ ಗೋಣಿಯ ಮಲ್ಲದೇವಯ್ಯನಂತೆ ಗುರುವಿಂಗೆ ತಾಂ ದಾಸತ್ವಮಂ ನಡಸುತ ಂ ಇಂತು ಗುರುಪೂಜೆಯಂ ಸಂತತಂ ನಡಸುತ್ತಂ ಮತ್ತಂ ಗುರುಪಾದಸರೋಜಯುಗ್ಮಕ್ಕಂ ಶಾಂತಿಯೆಂಬ ಸ್ನಾನೋದಕದಿಂ ಸಮತೆಯೆಂಬ ಶ್ರೀಖಂಡ ಪಿಂಡದಿಂ ಸುಚಿತ್ತಸುಖ ವೆಂಬ ಮೌಕ್ತಿಕಾಕ್ಷತೆಯಿಂ ಆತ್ಮನಿಂ ಮಂಜುಲಮಾಗೊಪ್ಪಂಬೆತ್ತ ಜ್ಞಾನವೆಂಬ ಕೇಶರಂಗಳಿಂ ರಂಜಿಪ ಅಷ್ಟದಳ ಕಮಲ ಕುಸುಮದಿಂ ಸದ್ವಾಸನೆಯೆಂಬ ಧೂಪದಿಂ ಕಾಂತಿಯೆಂಬಾರತಿಗಳಿಂ ಪೂಜೆಯ ಪ್ರೀತಿಯೆಂಬ ನೈವೇದ್ಯದಿಂದ ತನ್ನ ಭಕ್ತಿಯ ರಾಗರಸವೆಂಬ ತಾಂಬೂಲದಿಂದಂ ಇಂತಪ್ಪ ಅಷ್ಟವಿಧಾರ್ಚನೆಯಂ ಆವಗಂ ಮಾಡುತ್ತಂ ಸಿದ್ಧಲಿಂಗೇಶ್ವರಂ ಇರೆಯಿರೆ — ೫೫

ಚಂ. ವೃ.

ಘನಗುರು ಭಕ್ತಿಕಾಮಧುಗ ಜಂಗಮಭಕ್ತಿ ಚಕೋರ ಚಂದ್ರಮಂ
ಘನತರ ಲಿಂಗಭಕ್ತಿ ಸರಸೀರುಹ ಸೂರ ಪಿನಾಕಪಾಣಿ ಭ-
ಕ್ತನಿವಹ ಪಾಪಗೋದುಮುಗರಟ್ಟ ಮನೋರಮ ಲಿಂಗಸಂಗ ಶೀ
ಲನನಘ ಸಿದ್ಧಲಿಂಗ ವಿನಯಾನ್ವಿತನಿದ್ದನು ಭಕ್ತಿಭಾವದಿಂ ೫೬

1. ನ (ಅಇ). 2. ಯ (ಅಇ).

ಉ. ವೃ.

ಇಂತುಮನೇಕಕಾಲ ಗುರುಭಕ್ತಿಯ ಮಾಡು[1]ತಲಿ[1]ದ್ದ ಸಿದ್ಧನಂ
ಕಂತುಹರಾಂಗ ಚೆನ್ನಬಸವೇಶ್ವರ ಕಾರುಣದಿಂದ ನೋಡುತಂ
ಮುಂತಿವನಿಂದ ಷಟ್‌ಸ್ಥಲವು ಲೋಕದೊಳೇಳಲುವೇಳ್ಕುಮೆಂದುದೇ
ಶಾಂತರಕೇತನಂ ಕಳುಹಿದಲ್ಲದೆಯಾಗದುಮೆಂದು ಚಿತ್ತದೊಳ್ ೫೭

ಶಾಂತನೆ ಬಾ ಗುಣಾನ್ವಿತನೆ ಬಾ ಗುರುಭಕ್ತನಿಧಾನ ಬಾ ಸದಾ
ಅಂತಕವೈರಿ ಬಾ ಕರುಣಿ ಬಾವರ ಚಿತ್ಸತಿ ಕಾಂತ ಬಾರೊ ಕಾ-
ಮಾಂತಕ ಬಾರೊ ಯೆನ್ನಶಿವ ಬಾ ಗುರು ಬಾ ಚರಲಿಂಗ ಬಾರೊ ವೇ-
ದಾಂತನೆ ಬಾರೊ ಯೆಂದು [2]ಕರೆದಂ ಗುರು[2] ಬಣ್ಣಿಸಿ ಸಿದ್ಧಲಿಂಗನಂ ೫೮

ಮ. ವಿ. ವೃ.

ಚರಸಂತಾನವೆ [3](ಬಾ)[3] ಸುಧಾನಿಧಿಯೆ ಬಾ ದ್ವೈತೇ[4](ಭ)[4] ಪಂಚಾಸ್ಯ ಬಾ
ಹರಭ[5]ಕ್ತ್ಯೈ[5]ಬ್ಧಿ ಸುಧಾಮಯೂಖ ನಿಧಿ ಬಾರೆನ್ನಾ[6]ಯು[6] ಸಂಜೀವ ಬಾ
ಧರೆಯಂ ಪಾಲಿಪ ದೇವ ಬಾ ಸುಗುಣ ಬಾ ಸಿದ್ಧೇಶ ಬಾರೆಂಬುತಂ
ಕರೆದಂ ಶ್ರೀ ಗುರುಲಿಂಗಮೂರ್ತಿ ಹರ್ಷಾನಂದಾಶ್ರುವಿಂದುಕ್ಕುತಂ ೫೯

ಕಂ. ಕರೆಯಲ್ ಪುರ[7](ಹರ)[7]ನೊತ್ತಿಗೆ
ಶರಜನ್ಮಂ ಬಪ್ಪೋಲ್ರೇಣುಕನೊತ್ತಿಂಗಂ
ವರರುದ್ರಮುನಿಪ ಬಪ್ಪೊಲ್
ಹರುಷದಿ ಬಂದೊಂದಿಸಿ ಕರವ[8](ಂ)[8] ಮುಗಿದಿರ್ದಂ ೬೦

ಬಂದಿರ್ದನನೀ[9]ಕ್ಷಿ(ಸಿ)[9]ತಾ
ನಂದದಿ ತಾಂಬೂಲ ಶೇಷವಿದೆಯೆಂದಾಗಂ
ಸಂದಣಿಸುತ ಧವಳೇಶನೊ
ಲಂದದಿ ಗುರುಪ್ರಸಾದಕೆ ತಾಕಯ್ಯಾಂತಂ ೬೧

ಪಡೆದು ಪ್ರಸಾದವ ನಾಕ್ಷಣ
ಮೃಡಗರ್ಪಿಸಿ ಸವಿವುತಾತಂ ಶ್ರೀಕೃಷ್ಣನವೊಲ್
ದೃಢದಿಂ ಹಸ್ತ[10](ದಿದೇಹವ)[10]
[11](ತಡವುತ್ತಂ)[11] ಸುತನ ನೋಡಿ ಹರುಷದೊಳೆಂದಂ ೬೨

---

1. x(ಇ). 2. ಗುರುಕರೆದಂ (ಅಇ). 3. x (ಅಇ). 4. ಭಾ (ಅಇ).
5. ಕ್ತ್ಯೈ (ಅಇ). 6. ಯುಷ್ಯ (ಅಇ). 7. ಜನ (ಅಇ). 8. ಲ (ಅಇ).
9. ಕ್ಷಿ (ಅಇ). 10. ವಶರೀರಕೆ (ಅಇ). 11. ತೊಡವುತ (ಅಇ).

ಮಗನೆ ಕೇಳೀಗ ಧರೆಯೊ-
ಳ್ನಗಜೇಶನ ಭಕ್ತಿಯರತು ಪರಸಮಯಿಗಳುಂ
ಮಿಗೆಸೊಕ್ಕಿ ಹರನ ನಿಂದಿಪ
ಹಗರಣಮಂ ಕೇಳಲಾರೆವೆಂದರ್ನಗುತಂ ೬೩

ಬಸವಂ ಪೋದಂದಿಂದು
ಬ್ಬಸವಾಗಿದೆ [1]ಹ[1]ರ ಸಮಯಕಲ್ಲದೆ ಮತ್ತಂ
ಮತ್ಸಮಯದೊಳೆಮ್ಮಂ ಕ-
ಬ್ಬಸುಗಳೊಲ್ಕಾಡಿಪರ್ ದ್ವೈತಾದ್ವೈತತರ್ಕಳ್ ೬೪

ಗುರುಲಿಂಗವನರನೆಂಬ-
ರ್ಚರ ಲಿಂಗವ ನೇನುಮೆಂದುಮರಿಯರ್ ಮತ್ತಾ
ಗಿರಿಸುತಪತಿಯಂ ಯಜಿಸ
ರ್ಶರಣಸ್ಥಲ ಕೆಟ್ಟುದೆಮ್ಮ ಸಮಯದೊಳೆಂದಂ ೬೫

ಲಿಂಗವ ಧರಿಸಿರ್ಪರೊಳಂ
ಮಂಗಲಮಯ ಭಕ್ತಿಯೊಳ್ಪು ತಾ ಮುನ್ನಿಲ್ಲದೆ
ಹಿಂಗದೆ ಮಾಯಾ[2](ಲೋಕದ)[2]
ಸಂಗದವರಲ್ಲದೆ ಭಕ್ತರೆಂಬರಕಾಣೆಂ ೬೬

ಲಿಂಗಾಂಗದ ಸಂಗವನು-
ತ್ತುಂಗ ನಿರಾಶಾ ಲಕ್ಷಣಮುಂತಾಗಿಲ್ಲಂ
ಜಂಗಮವೆಂದೆಂಬುವರೊಳ್
ಪೊಂಗಿದ ಲಾಂಛನಮದಲ್ಲದೆ[3](ನಂ)[3] ಕಾಣೆಂ ೬೭

ಪೆಣ್ಪೊನ್ಮಣ್ಣಿಗೆ[4](ಯೆ)[4]ಲ್ಲಂ
ಬಿಣ್ಪಿಂ ಸಿಕ್ಕುತ ಚರ[5](ರಾ)[5] ಲಾಂಛನ ಗೆಡಿಸುತ
ಮಣ್ಪುಳುವೊಲೆಗಂ ಸಿಕ್ಕಿದ
ತಣ್ಪಿನ ಸಫರಂಗಳಂತೆ ಜ[6]ಂಗ[6]ಮ ವಿಕರ್ಮಂ ೬೮

1. x (ಇ). 2. ಪ್ರಪಂಚಿನ (ಅಇ). 3. ದೆನಾಂ (ಅಇ). 4. ಗೆ (ಅಇ).
5. ವು (ಅಇ). 6. x (ಇ).

ಅದುಕಾರ[1]ಣ[1] ದೇಶಾಂತರ
ವಿಧದಿಂ ಶಿವಭಕ್ತಿಯ ನುದ್ಧರಿಪುದು [2](ಸತತಂ)[2]
ಮುದದಿಂ ಸೀನಲ್ಲದೆಯುಂ
ಒದವಿದರೊಳ್ಬಲುಹುಮಿಲ್ಲವೆಂದರ್ನಯದಿಂ ೬೯

ದೇಶಾಂತರ ನೆವದಿಂದಂ
ದೇಶಂಗಳೊಳಿರ್ಪ ಜನರ ಕರ್ಮವ ಪರಿದುಂ
ಈಶಾನನ ಭಕ್ತಿಯನುಂ
ವಿ[3]ಶ್ವಂ ಭ[3]ರದೊಳ್ ಸ್ಥಾಪಿಪುದೆಂದಂ ಮುನಿಪಂ ೭೦

ವಚನ || ಇಂತೆಂದು ಚೆನ್ನಬಸವೇಶ್ವರಂ ಬೇಡಿಕೊಳುತಿರ್ಪಲ್ಲಿ ಸಿದ್ಧಲಿಂಗೇಶ್ವರಂ ಷಟ್ಸ್ಥಲವನುಂಟುಮಾಡಲೆಂದು ಶಿವನಿಂ ಕಳುಹಿಸಿಕೊಂಬ ರೇಣುಕ ಗಣೇಶ್ವರನಂತೆ ಬಸವಾದಿ ಪ್ರಮಥರಂ ಬೋಧಿಸಲೆಂದು ಹರನಿಂ ಕಳುಹಿಸಿಕೂಂಬ ಅಲ್ಲಮಾ ಪ್ರಭುವಿನಂತೆ ಗೌತಮನ ಶಾಪಶಕ್ತಿ ವಿಷ್ಣುವಿಂ ಸೋಂಕಿ ಶಿವಭಕ್ತಿಯರತಿರ್ದ ಮುನಿಗಳಂ ಬೋಧಿಸಲೆಂದು ಪರಮೇಶ್ವರನಿಂ ಕಳುಹಿಸಿಕೊಂಬ ನಂದೀಶ್ವರನಂತೆ ಶ್ರೀಗುರುವಿಗಂ ನಮಸ್ಕಾರಂಮಾಡಿ ಕಳುಹಿಸಿಕೊಂಡು ದೇಶಾಂತರಕ್ಕೆ ಮನಂದಂದು ಸಮಸ್ತ [4]ಜ[4]ಂಗಮ ದೇವರ್ಸಹಂ ಶಿಷ್ಯರ್ಕಳಂ ಶಿವಸೋದರರನೇಕರ್ಸಹ ಪೊರಮಡಲುಂ ೭೧

ಚಂ. ವೃ.

ಮಕುಟದ ಕರ್ಣಕುಂಡಲದ ಕಂಕಣಹಸ್ತದ ಯಜ್ಞಸೂತ್ರಕೀ
ಚಕದುರುದಂಡ ಕರ್ಪರ ಕಮಂಡಲ ಧೋತ್ರವಿಭೂತಿ ಗಿಣ್ಣಿಲಿಂ
ಸಕಲ ಪುರಾಣವೇದ ವಚ[5]ನಾ(ವ)[5]ಳಿ ಪುಸ್ತಕ ದಕ್ಷಮಾಲಿಕಾ
ನಿಕರದ ಜಂಗಮಾಳಿಯೊಡನೆಯ್ದಿತುಮಾಗಲೆ ಸಿದ್ಧಲಿಂಗನಾ ೭೨

ಪಿಡಿದಿಹ ನಾಗವೇತ್ರ ಮದನಾಕ್ಷಿಯ ಕುಪ್ಪಸಗಂತೆ ಕಂತೆಯಿಂ
ಗಿಡಿಗಿಡಿದೊತ್ತಿದಾಭಸಿತದಾಥರ ದಾಥರದಿಂದ ಶೂಲವಂ
ಪಿಡಿದ ಕರಾಬ್ಜದಿಂ ಕನಕ ಕುಂಡಲ ಕುಂಡಲದಿಂದಲೊಪ್ಪುವೀ-
ವೃಥತರ ಜಂಗಮಾಳಿಗಳು ಕೂಡಿತುಮಾಗಳೆ ಸಿದ್ಧ ಸಿದ್ಧನಂ ೭೩

1. ಣದಿಂ (ಅಇ). 2. x (ಅಇ). 3. ಶ್ವಾಂಬ (ಅಇ). 4. ನಾ (ಅಇ).

ರಜತದ ಕಂಥೆ ಕಬ್ಬಿನದ ಕಂಥೆ ಸುತಾಂಬ್ರದ ಕಂಥೆಯುಂ ಮಹಾ
ರಜತದ ಕಂಥೆ ಮುತ್ತಿ[1]ನ (ಸು)[1]ಕಂಥೆಯು ಗೋಣಿಯ ಕಂಥೆ ಮಂಜುಲಾ
ಸುಜಿನಿಯ ಕಂಥೆ ಪಟ್ಟೆ[2](ಯ) ಸುಕಂಥೆಯು ಕಾವಿಯಕಂಥೆ ಕಂಥೆಯಂ
ರಚಿಸಿದ ಜಂಗಮಾವಳಿಯುಮಾಗಲೆ ಕೂಡಿತುಮೇನನೆಂದಪೆಂ)[2] ೭೪

ಕಾಮವಿದೂರರುಂ ಘನವಿಭೂತಿ ವಿಧೂಳಿತ ಗಾತ್ರಯುಕ್ತರಿಂ
ಸಾಮನುತಾಂಗರುಂ ಹರುಷಿತಾಮಲ ಚಿತ್ತರು ಶಾಂತಿದಾಂತಿಗಂ
ಧಾಮರು ಲಿಂಗನಿಷ್ಠೆ ಯುತರುಂ ಕರುಣಾಳುಗಳುಂ ಸುಧೀರರುಂ
ಭೂಮಿಯ ರುದ್ರರೂಪರಹ ಜಂಗಮಕೂಡಿತು ಸಂತಸಂಗಳಿಂ ೭೫

ವ|| ಮಕುಟದ ಮಹೇಶ್ವರರುಂ ಕರ್ಣಕುಂಡಲದ ಕಮನೀಯರುಂ ವಿಭೂತಿ ವಿಲಸಿತ ಗಾತ್ರರುಂ ರುದ್ರಾಕ್ಷೆಯ ಭದ್ರಮಯರುಂ ಪಂಚಾಕ್ಷರಿಯ ಪರಬ್ರಹ್ಮ ಸ್ವರೂಪರುಂ ಕೂಡಿಕೊಂಡುಂ ಮತ್ತಂ ಶೂನ್ಯವೇ ಕರಸ್ಥಲದ ಲಿಂಗವಾಗಿ ಮಹಾ ಶೂನ್ಯಮೇ ಜಟಾಮಕುಟವಾಗಿ ಜ್ಞಾನಮುದ್ರೆಯೇ ಕರ್ಣಯುಗ ಮುದ್ರೆಯಾಗಿ ತದೈಕ್ಯಪದನಿರ್ಮಿತವೇ ಭಸ್ಮರುದ್ರಾಕ್ಷೆಯಾಗಿ ಸರ್ವಪ್ರಾಣಿ ರಕ್ಷಣ್ಯವೇ ಕಂಥೆಯಾಗಿ ಆದಿಯಾಧಾ[3]ರಂಗಳೇ[3] [4](ಖ)ಟ್ವಾಂಗ ಟೊಪ್ಪರಂಗಳಾಗಿ ಬ್ರಹ್ಮನೆಯಂಗುಲಿ ದಾರ ಮಾಗಿ ಕಾಲಾಗ್ನಿ ರುದ್ರನೇ ಸೂಜಿಯಾಗಿ ಈಶ್ವರನೇ ಶತಕಂಠವಾಗಿ ಅಜಾಂಡ ಮಹಾಂಡಾದಿ ಧಾರಣಮೇ ಆದಿಕಂಥಾಧಾರಣವಾಗಿ ಆಚಾರ್ಯತ್ವದಾಜ್ಞಾಧಾರವೇ ಪರಶುತ್ರಿಶೂಲ ಖಟ್ವಾಂಗ ಡಮರು ಧಾರವಾಗಿ ಪರಶಿವಯೋಗಾನಂದವೇ ದಂಡವಾಗಿ ಪ್ರಣವ ಕರ್ಪರವಾಗಿ ಚತುರ್ದಶ ಭುವನವೇ ಪೀಠವಾಗಿ ಪೃಥ್ವಿಯೇ ಆಸನವಾಗಿ ನಿರಾಮಯವೇ ಸ್ಥಿರಸಿಂಹಾಸನವಾಗಿ ಚೌಸೀತಿ ಸಹಸ್ರಸ್ವರಂಗಳೇ ಸ್ಫಟಿಕನೀಲಪವಳ ದರ್ಪಣ ಘಂಟೆತೊಡರು ಬಾವುಲಿಪೆಂಡೆಯ ಸೇರಿದ ಸರಗಜ್ಜೆಗಳಾಗಿ ಧರ್ಮಗುಣವೆ ವೃಷಭನಾಗಿ [5]ವಿರಾ[5]ಜಿಸುವ ಜಂಗಮ ದೇವರ್ಸಹಂ ಮತ್ತಂ —

ಸರ್ವಮುದ್ರಾಧರಂ ಯಸ್ಯ ಸರ್ವಕಂಥಸ್ಯಧಾರಣಂ
ಸರ್ವಶೂನ್ಯ ನಿರಾಲಂಬಂ ಮಹತ್ತ್ವಾಮುಮಗೋಚರಂ

ಎಂಬ ಮಹತ್ವದವಾಗಿ ಮತ್ತಂ

ಮುರಿಮುದ್ರೆ ಸಮಾಯುಕ್ತಂ ಏಕಮೂರ್ತಿಮಗೋಚರಂ
ಷಡ್ದರ್ಶನ ಸ್ಥಾಪಿತತ್ವಂ ಹಂಚುಕಂಥಾಧರಂ ಶಿವಂ

---

1. ನ (ಅಇ). 2. ಸುಜಿನಿಯಕಂಥೆ ಪಟ್ಟೆಸುಕಂಥೆ ಕಾವಿಯಿಂ ರಚಿಸಿದ ಕಂಥೆಯಾ|ಳಿಯುಹ ಜಂಗಮ ಕೂಡಿತು ಮೇನನೆಂದಪೆಂ (ಅಇ). 3. ರ (ಇ). 4. ಕ (ಅಇ). 5. ರಾ (ಇ).

ಎಂಬ ಹಂಚುಕಂಥೆಯಾಗಿ ಮತ್ತಂ

ಶಂಖನಾದಂ ಸಮಸ್ತೇಷು ಶ್ರೂಯತೇ ಭಕ್ತವತ್ಸಲಂ
ಪರವಾದಿ ಶಿರಚ್ಛೇದ ಆಚಾಟ್ಸ ಜ್ಞಾನಧಾರಣಂ

ಎಂಬುದರಿಂ ಬಲಮುರಿ ಜವಳಿ ಶಂಕುಕಹಳೆ ಮೊರೆವ ವಾದ್ಯಧ್ವನಿಗಳಿಂ ಸಂಭ್ರಮಂ ಬೆತ್ತು ಬಲಪ್ರದಕ್ಷಿಣವಾಗಿ ದಕ್ಷಿಣ ಸಮುದ್ರದಿಂ ಪಡುವಣೋತ್ತರ ಮೂಡಲಾದಿ ಸಮುದ್ರ ತೀರಂಗಳಲ್ಲಿ ನಾನಾ ದೇಶಂಗಳಂ ಪೊಕ್ಕು ದೇಶಾಂತರಂ ಗೈವಲ್ಲಿ ಖೇಡಖರ್ವಡ ನಗರ ನಿಗಮ[1]ಗ್ರಾಮ[1]ಂಗಳ ಭಕ್ತರ್ಕಳ್ ಕಳಸ ಕನ್ನಡಿಗಳಿಂ ಭಕ್ತಕನ್ನಿಕೆಯರ ಶೋಭನಂಗಳಿಂಬಂದು ವಿಭೂತಿ ವೀಳೆಯ ಸುವರ್ಣಗಾಣಿಕೆಯುಂ ಮಾಡಿ ನಿವಾಳಿಯ ಪಟ್ಟುವಸ್ತ್ರಂಗಳನಿಟ್ಟು ಗುಡಿತೋರಣಂಗಳಿಂ ಶೃಂಗರಿಸಿಯಿರ್ದ ಗ್ರಾಮಂಗಳಲ್ಲಿಗೆ ಬಿಜಯಮಾಡಿಸಿ ತಂದುಂ ನಾನಾ ವಿಚಿತ್ರತರಮಾದ ಮೇಲ್ಕಟ್ಟುಗಳಿಂ ಸಿಂಗರಂಬೆತ್ತ ಗೃಹಂಗಳೊಳ್ ಮೂರ್ತಿಗೊಳಿಸಿ ಪೂಜಿಪ ಭಕ್ತರ ಭಕ್ತಿಗಳಂ ಕೈಕೊಂಬುತುಂ ದೇಶಾಂತರಂಗೆಯ್ವುತಿರ್ದರದೆಂತೆನೆ : ೭೬

ಉ. ವೃ.

ಅಂಗವರಾಟ ಹೊಯಿಸಳ ತುರುಷ್ಕತೆಲುಂಗ ಕಳಿಂಗ ಬರ್ಬರಂ
ಕೊಂಗಪುಳಿಂದ ಚೋಳ[2](ಸವು)[2] ರಾಷ್ಟ್ರಮವಂತಿಯು ಸೂರಸೇನ್ಮಹಾ-
ವಂಗ ಲಲಾಟಬೋಟ ಮಗಧಂ ಜನ ಕುಂತಳ ಕೊಂಕಣಾದಿ ದೇ-
ಶಂಗಳೊಳೆಲ್ಲವುಂ ಚರಿಸಿಯುಂ ಚರಲಿಂಗಕೆ ತೃಪ್ತಿಮಾಡಿದಂ ೭೭

ಮ. ವಿ. ವೃ.

ವರಕಾಂಭೋಜ ಸುಪುಂಡ್ರ ಪಾಂಡ್ಯಮಲೆಯಾಳಂ ಸಿಂಧುಕನ್ನೋಜಿ ಖ-
ರ್ಪರ ಪಾಂಚಾಲ ವಿಶಾಲ ಬಾಹ್ಲಿಕ ಸುಕಾಶ್ಮೀರಂ ತ್ರಿಗ[3](ರ್ತಂ ಸುಗೂ-
ರ್ಜರ)[3] [4]ಘೋಟಂ[4] ಘನಕೇರಳಂ ಕುರು[5](ಸುನೇ)[5] ಪಾಳಂ ಸುಚೇರಾದಿಯುಂ
ತುರುದೇಶಂಗಳೊಳುಂ ಶಿವಾಚರಣೆಯಂ [6]ತಾಂ[6] ಸ್ಥಾಪನಂ ಗೆಯ್ವುತುಂ ೭೮

ಉ. ವೃ.

ದ್ರಾವಿಡ ಕನ್ನಡಂ ಬೆಳುವಲಾದಿಯ ವೊಡ್ಡಿಯ ದೇಶವಾದಿಯಾ
ದಾವಿರತಂ ಸುಶೋಭನವು ಮಾಗಿಹ ದೇಶಗಳಲ್ಲಿ ಲಿಂಗಸಂ
ಗಾವಿರಳ ಪ್ರಸಾದ ಚರಗೌರವ ಭಕ್ತಿಸು ಪಾದತೀರ್ಥವಂ
ಪಾವನವಪ್ಪ ಪೂಜೆಗಳ ಮರ್ಮವ ತೋರಿದ ಸಿದ್ಧಲಿಂಗನುಂ ೭೯

---

1. x (ಇ). 2. ಸು (ಅಇ). 3. x (ಇ). 4. ಟಕಂ (ಅಇ).
5. x (ಅಇ). 6. ತಾಂತಾಂ (ಅಇ).

ವ॥ [1]ಮತ್ತ[1]ಮಾದೇಶಂಗಳ

ಕಂ. ಗ್ರಾಮಂಗಳ್ಪಟ್ಟಣಗ
ಳ್ಭ್ರಾಮದ ನಗರಂಗಳ್ದುರ್ಗಂಗಳ್ಮಂ ತಾ
ದವ[2]ಳ(ದ)[2] ಹಟ್ಟಿಕೊಟ್ಟಂಗ
ಳಮಳಪೇಟೆಗಳೊಳ್ಚರಿಸಿದಂ ಶಿವಸಿದ್ಧಂ ೮೦

ಹರಭಕ್ತಿ ಪರಿಕ[3](ಲಿ)[3]ಸಲು
ಹರುಷದಿರೇವಣನು ಧರೆಯೊಳುಂ ಚರಿಸಿದವೊ-
ಲ್ಕರುಣಿ ಗುರುಸಿದ್ಧಲಿಂಗಂ
ಧರೆಯೊಳ್ ಚರಿಸಿದನು ಭಕ್ತಿಯಂ ಪ್ರಕಟಿಸುತಂ ೮೧

ಶ್ರೀಗಿರಿ ಹಿಮ ವಿರೂಪಾಕ್ಷಂ
ಲಾಗಿನ ಘಟಕಾಶಿ ಕಾಳಹಸ್ತಿ[4](ಯುಮುಂ)[4] ಮೊದ-
ಲಾಗಿಹ ಶಿವಕ್ಷೇತ್ರಗಳೊಳ
ಗಾಗಲೆ ವರ್ತನೆಯ ಭಕ್ತಿಯಂ ಕೈಕೊಂಡಂ ೮೨

ವ॥ ಪರಿಪೂರ್ಣ ಜ್ಞಾನವೆಂಬ ಬಟ್ಟ ಪಾವಡೆಯಿಂ (ಸ)ಮತಾ ಕಂಥೆಯಿಂ ವಿಷಯಾಶಿಕ್ಷಿತ ದಂಡದಿಂ ವೈರಾಗ್ಯ ಖರ್ಪರದಿಂ ಇಂದ್ರಿಯಾದಿಗಳೆಂಬ ಜಂಗಮ ಸಮೂಹದಿಂ ಮೋಕ್ಷ ದೇಶಂಗಳೊಳ್ ಚರಿಸುತಿರ್ದನಂತುಮಲ್ಲದೆಯುಂ — ೮೩

ಕಂ. ಚರಿಸುತಿಹ ಸಿದ್ಧದೇಶಿಕ
ಧರೆಯೊಳ್ಚರಿಸೆಂದು ಶಿಷ್ಯರುಗಳಂ ನಿಯಮಿಸಿ
ಚರಪತಿತನವಂಬಿಟ್ಟುಂ
[5]ಹರಿಸುರ(ರಂ)[5] ಗೆಲ್ವ[6]ತಿಥಿ(ಯ)[6] ವೇಷದೊಳಿರ್ದಂ ೮೪

ಉ. ವೃ.
ಕಾಗಿನ ಕರ್ಣ ಪಾವಡೆಯು ಕಂಥೆಯು ಭಾರಿಯ[7]ದಂಡ[7] ಘಂಟೆಯಿಂ-
ದಿಂಗಡಲಂಗಕಾಂತಿಯ ಸಮೂಹವನೊಬ್ಬುಳಿ ಮಾಡಿದಂತೆಯುಂ
ಅಂಗದಿಧೂಳಿಸಿರ್ಪಭಸಿತಂಗಳ ಕಾಂತಿಯ ಚೆಲ್ವಿನಿಂದಲುಂ
ಸಿಂಗರವೆತ್ತು ತೋರ್ಪತಿಥಿ ರೂಪಿನೊಳಿದ್ದ[8]ನು[8] ಸಿದ್ಧಲಿಂಗನುಂ ೮೫

1. x (ಇ). 2. ಳ (ಅಇ). 3. ೦ (ಅಇ). 4. ರ (ಅಇ). 5. ಪರಿಹರಿಸುರ (ಇ). ಹರಿಸುರ (ಅ). 6. ತಿಥಿ (ಅಇ). 7. ಡವು (ಅಇ). 8. x (ಇ).

ವ ॥ ಅತಿಥಿವೇಷಂದಾಳ್ದು ಅತಿಥಿ ಚರಲಿಂಗಂಗಳಂ ಕೂಡಿಕೊಂಡವರ್ಗೆತಾಂ ಚರಪತಿಯಾಗಿ ನಾನಾದೇಶಂಗಳಂ ಪೊಕ್ಕು — ೮೬

ಉ. ವೃ.

ಲಿಂಗಮಹತ್ವಮಂ ಚರಮಹತ್ವಮನಾಗುರು[1](ಮಾತ್ಮೆ)[1]ಯಂ ಗುಣೋ-
ತ್ತುಂಗ ಸುಭಕ್ತ ಮಾತ್ಮೆಯ ಶಿವಾಗಮ ಸಾರಸುತತ್ವದೇಳ್ಗೆಯಂ
ಬೇಗದಿ ಲೋಕದೊಳ್ ಪ್ರಕಟಿಸುತ್ತ ಶಿವಾಚರಣಂಗಳಂ ನಿರೂ-
ಪಂಗೆ[2](ಯಿವುತ್ತೆ)[2] ತೀಶ ಚರಲಿಂಗಕೆ ಸಂತಸಮಾಡುತಿರ್ದನುಂ ೮೭

ಚಂ. ವೃ.

ಪರಸಮಯಂಗಳಂ ಗೆಲಿದು ಶಂಕರಭಕ್ತಿಯ ಲೋಕದಲ್ಲಿ ಸು-
ಸ್ಥಿರವನು ಮಾಡುತಂ ಶರಣಮಾರ್ಗವನೆಮ್ಮಿದ ಭಕ್ತರಲ್ಲಿಯುಂ
ಗುರುಚರಭಕ್ತಿಯನ್ನರುಪುತಂ ಶಿವತತ್ವ ಸುಬೋಧೆಯಂ ಸದಾ
ಚರನಿವಹಂಗಳಲ್ಲರುಹುತಂ ಘನಮುಕ್ತಿಯ ನೀವುತಿರ್ದನುಂ ೮೮

ಪುರಹರ ರೂಪುರೇಣುಕನು ಲೋಕದ ಮರ್ತ್ಯರ ನೋಡಿ ಮೋಹದಿಂ
ಶರಣಪದಂಗಳನ್ನರುಪುವಂತೆ ಶಿವಾನ್ವಿತ ಸಿದ್ಧಲಿಂಗನುಂ
ಗುರುಚರ ಭಕ್ತಿಯುಕ್ತಿಗಳ ಬೋಧಿ[2](ಸಿ)[2] ಶಿಕ್ಷಿಸಿ ಮುಕ್ತಿಮಾರ್ಗಮುಂ
ಪರಹಿ ವಿಚಾರದಿಂ ಧರೆ[3](ಯರಕ್ಷಿಸಿದಂ ಮುದದಿಂದಲಾವಗಂ)[3] ೮೯

ವ ॥ ಮತ್ತಮಾ ಸಿದ್ಧಲಿಂಗೇಶ್ವರಂ ಅತಿಥಿ ಚರಲಿಂಗಂಗಳಂ ಷಟ್‌ಸ್ಥಲಾಚರಣೆಯಂ ನಾನಾ ದೇಶಂಗಳೊಳ್ ಪ್ರತಿಷ್ಠಿಸುತ್ತಿರಿಯೆಂದು ತನ್ನ ಶಿಷ್ಯರ್ಕಳಿಂಗಂ ನಿಯಾಮಿಸಿ ಉದಾಸೀನ ವೇಷಂ ತಾಳುತಿರ್ದನದೆಂತೆಂದೊಡೆ — ೯೦

ಉ. ವೃ.

ಭಾರಿಯ ದಂಡ ಟೊಪ್ಪಿಯದರಗ್ರದ ಭಾಸ್ಕರ ಚಂದ್ರಲೇಖೆಯಂ
ಭಾರಿಯ ಜಜ್ಜುಗಂತೆವರ ಪಾಕದ ಕರ್ಪುರದುತ್ತನಿಂದಲುಂ
ಭಾರಿಯ ರುಂಡಮಾಲೆ ಕಟಿಸೂತ್ರದಿ ದೊತ್ರದಿಯಂಗದಟ್ಟನಿಂ
ಭಾರಿಯ ಕಕ್ಷಪಾಳವಿ[4]ಹು[4] ದಾಸಿಯೊಳಿರ್ದನು ಸಿದ್ಧಲಿಂಗನುಂ ೯೧

---

1. ಮಹಾತ್ಮ್ಯೆ (ಅಇ). 2. ಯ್ಯುತ್ತಂಯಿ (ಅಇ). 3. ಯುಂ ಪರಿರಕ್ಷಿಸಂ ಮುದಂ ಮಿಗಲ್ (ಅಇ).

ಪಾದದಗೆಜ್ಜೆ ಬೊಕ್ಕುತಿಸುಳಂ ವರ ಹಂಚುಕ[1](ಠಾ)[1]ರಿ ಭೂತಿಯಾ
ಆಧರದಿಂ ಕಪಾಲಶಿವಸೂತ್ರ[2]ದ ಸೆಜ್ಜೆಯ[2] ಬಿಟ್ಟಮಂಡೆಯಿಂ
ದಿಂದುಧರಾಂಗ ವೇಷವನು ತಾಳ್ದು ಸುರೇಂದ್ರ ಸುಚೆಂದ್ರ ವಿಷ್ಣುರು-
ದ್ರಾದಿ[3]ಯ[3] ಸಂಪದಂಗಳನುದಾಸಿಪುದಾಸಿಗಳಿಂದ ಲೊಪ್ಪಿದಂ ೯೨

ಉ. ವೃ.

ಬೆಟ್ಟಗಳಲ್ಲಿ ಬಂಡೆಗಳ ಸಂಚಯದಲ್ಲಿ ಗುಹಾಳಿಯಲ್ಲಿಯುಂ
ಘಟ್ಟಗಳಲ್ಲಿ ನೀಳರೆಗಳಲ್ಲಿ ಬಿಲಂಗಳ ವೊತ್ತದಲ್ಲಿಯುಂ
[4]ಹಟ್ಟ[4]ಗಳಲ್ಲಿ ಕಾನನದ ಬಟ್ಟೆಗಳಲ್ಲಿ ತುರಾಳಿಯಲ್ಲಿಯುಂ
ಕೊಟ್ಟಗಳಲ್ಲಿ ಸಂಚರಿಸಿ ಸರ್ವಕೆ ಮೋಕ್ಷವನೀವುತಿರ್ದಸಂ ೯೩

ಕಾನನದಲ್ಲಿ ಚಂಚರಿಹ ಪಾಳಯ ಸಂಚಯದಲ್ಲಿ ಸಂತತಂ
ನೂನನಿರಾಕುಲಂ ಚರಿಸುತಂ ಚರಲಿಂಗಕೆ ಷಡ್ರಸಾನ್ನಮಂ
ತಾನೆಡೆಮಾಡಿಸುತ್ತ ಶಿವತತ್ವ ಸುಖಂಗಳ ಗೋಷ್ಠಿಯೀವುತುಂ
ಮಾನವರಿಚ್ಛೆಗಂ ಪರಿಯದಾವಗ ಷಟ್ಸ್ಥಲಯೋಗ ಮಾಡುತಂ ೯೪

ಕಂ. ಸಮುಸ್ತೋದಾಸಿಗಳಿಂಗಂ
ಪ್ರಮುದಿತ[5](ದಿ)[5] ಧನಾಢ್ಯನಾಗಿ ಬೋಧಿಸುತವರೊಳ್
ಸಮುಸುಖದಿಂ ಚರಿಸು[6]ತ್ತಂ[6]
ಉಮೆಯಾಣ್ಮನ ಶರಣಸಿದ್ಧ ಹರುಷದೊಳಿರ್ದಂ ೯೫

ವ|| ಮತ್ತಮಾ ಸಿದ್ಧಲಿಂಗೇಶ್ವರನ ಶ್ರೀಪಾದವೆ ಅತಳಲೋಕಂ ಪಾದೋರ್ಧ್ವವೇ ವಿತಳಲೋಕಂ ಜಂಘಾಯುಗವೆ ಸುತಳಲೋಕಂ ಜಾನುದ್ವಯವೆ [7](ತಳಾ) ತಳಲೋಕಂ[7] ಗುಹ್ಯಸ್ಥಾನವೇ ರಸಾತಳಲೋಕಂ ಕಟಿಸ್ಥಾನವೆ ಪಾತಾಳಲೋಕಂ ನಾಭಿಮಧ್ಯವೆ ಭೂಲೋಕಂ ಹೃದಯವೆ ಭುವರ್ಲೋಕಂ ಕಂಠಸ್ಥಾನವೆ ಜನರ್ಲೋಕಂ ತಾಲುಸ್ಥಾನವೆ ತಪೋಲೋಕಂ, ಲಲಾಟವೆ ಸತ್ಯಲೋಕಂ ಮಸ್ತಕವೆ ಮಹಾಲೋಕಂ ಬ್ರಹ್ಮಾಂಡವೆ ಕಿರೀಟಂ ಗಗನಮಡಲವೆ ಮುಖಮಂಡಲಂ ದಶದಿಕ್ಕುಗಳೆ ಬಾಹುಗಳುಂ ಚಂದ್ರಸೂರ್ಯರೆ ನೇತ್ರಂಗಳುಂ ಆಕಾಶವರ್ಣಮೆ ಶರೀರಂ ವನಸ್ಪತಿಗಳೆ ರೋಮಂಗಳುಂ ಪಾತಾಳವೆ ಪಾದಕಮಲಂ ಶೂನ್ಯವೆ ಕರಸ್ಥಳಲಿಂಗಂ ಮಹದಾಕಾಶವೆ ಜಟಾಪಟಲಂ ಚಂದ್ರ ಜ್ಯೋತ್ಸ್ನೆಗಳೇ ಶ್ರೀ ವಿಭೂತಿಯುಂ ಸಕಲವೇದಂಗಳೆ

1. ಟೊ (ಅ೧). 2. ದಿ ಸೆಜ್ಜೈಸು (ಅ) ದಿಸಿಜ್ಜೈ ಸೂ (ಇ). 3. x (ಇ). 4. ಪಟ್ಟೆ (ಇ). 5. ದಿಂ (ಅ೧). 6. ತ್ತ ಲುಂ (ಅಇ). 7. ತಳಲೋಕಂ (ಅಇ).

ಸರ್ವಕ್ರಿಯೆಗಳುಂ ನಕ್ಷತ್ರಂಗಳೆ ಕುಸುಮ ನಿಚಯಂ ಕುಲಪರ್ವತಂಗಳೆ ರುದ್ರಾಕ್ಷಂಗಳುಂ ಸಪ್ತಸಾಗವೆ ಜಲಪಾತ್ರವುಂ[1] ಜಗ(ತ್)[1]ತ್ಸೃಷ್ಟಿಮಯುವೆ ಕಂಥೆಯುಂ ಮೇರು ಪರ್ವತವೇ ದಂಡವುಂ ಸದ್ಗುಣವೇಭಿಕ್ಷಾಪಾತ್ರೆಯುಂ, ಮಹಾಶೇಷನೆ ಕಟಿಸೂತ್ರವುಂ ಸುಜ್ಞಾನವೇ ಮುದ್ರೆಯುಂ ಅಹೋರಾತ್ರಿಗಳೇ ಮಠಂಗಳುಂ ಪೃಥ್ವಿಯೇ ಕುಳ್ಳಿರುವ ಸಿಂಹಪೀಠವುಂ ತ್ರಿಕಾಲಜ್ಞಾನವೇ ಸೌಭಾಗ್ಯಂ ಶಿವಕುಲ[2]ವೇತನ್ನಕುಲ[2]ಂ, [3]ಷಡೃತು[3]ಗಳೇ ಷಟ್ಸ್ಥಲಗಳಾಗಿ ರಾಜಿಸುವ ಸಿದ್ಧಲಿಂಗೇಶ್ವರಂ ದೇಶಾಂತರ ಗೆಯ್ಯುತ್ತುಂ ಇರೆಯಿರೆ. ||೯೬||

ಮ. ವಿ. ವೃ.

ಪರಮೇ[4]ಶಂ (ಗಿರಿಶಂ) ಸು[4]ಧಾಕರಧರಂ ಕಾಲಾಂತಕಂ ಶಂಕರಂ
ಉರಗೇಂದ್ರಾಭರಣಂ ವಿನಾಯಕ ಪಿತಂ ಗಂಗಾಧರಂ ಕಾಮಸಂ
ಹರಸೌಖ್ಯಾಕರ ರಕ್ಷಿಕೆಮ್ಮವನು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮ ಜಟಾಧರಂ ಪುರಹರಂ ಭರ್ಗಂ ಶಿವಾವಲ್ಲಭಾ ||೯೭||

ಗದ್ಯ : ಇದು ಸಕಲಸುರಗಣಮಣಿಮಕುಟರಚಿತದ್ಯುಮಣಿಪ್ರಭಾಧಿಕ್ಯ ಮಾಣಿಕ್ಯ ದ್ಯುತಿಪುಂಜಮಂಜುಲರಂಜಿತ ಸಂಪಚ್ಚರಣನೆನಿಪ ಭೂತೇಶ್ವರ ಶ್ರೀ ಪಾದ ಪಯೋಜಮಕರಂದಲೋಲಂಬಮಾನ ಚೆನ್ನವೀರೇಶಾಭಿಧೇಯ ವರಜಂಗಮದೇವಂ ವಿರಚಿತಮಪ್ಪ ಷಟ್‌ಸ್ಥಲವಲ್ಲಭ ಮಹಾಪ್ರಬಂಧದೊಳ್ ಸಿದ್ಧಲಿಂಗೇಶ್ವರ ಗುರು ಪೂಜಾಮಹಾತ್ಮ್ಯ ದೇಶಾಂತರ ಕಥನಂ ದ್ವಿತೀಯಾಶ್ವಾಸಂ ಸಮಾಪ್ತಂ.

---

1. ಜಗ (ಅಇ). 2. x (ಇ). 3. ಷಡ್ರುತು (ಅಇ). 4. ಶಂಸು (ಅಇ).

## ತೃತೀಯಾಶ್ವಾಸಂ

# ದೇಶಾಂತರ ನಾನಾವಾದ ಮಾಹಾತ್ಮ್ಯ ಕಥನಂ

ಕಂ. ಶ್ರೀ ವರನಯನಾರ್ಚಿಪದ
ಭಾವಜಹರ ಗೌರೀಧವ ಗಂಗಾಮಕುಟಂ
ಸಾವಿರತಲೆಗನ ಕಡುಕಿನ
ದೇವದೇವನೆ ಸಲಹು[1](ಯೆನ್ನಂ)[1] ಭೂತೇಶಂ

ಇಂತಿಹ ಶಿವಸಿದ್ಧೇಶಂ
ಶಾಂತತೆಯಿಂ ಪಲವುದೇಶದೊಳ್ ಚರಿಸುತ್ತಂ
ಕಂತುಹರೋದಾಸಿಗ[2](ಳಾ
ತಿಂತಿ)[2]ಣಿಯುಸು[3] (ತೊರೆದು ಆ)[3]ರ್ಯದೇಶ[4](ಂ)[4] ಪೊಕ್ಕಂ ೨

ಚಂ.
ವರಗುರು ಸಿದ್ಧಲಿಂಗ ಚರಮೂರ್ತಿವಿಲಾಸದೊಳಾರ್ಯದೇಶಮಂ
ಹರುಷದಿ ಪೊಕ್ಕು ದುರ್ಗನಗರಂಗಳೊಳಿರ್ಪ ಮಹೇಶಪೂಜೆಯಂ
ಉರುತರದಿಂದ ಮಾಳ್ಪ ಶಿವಭಕ್ತರ ಗೇಹಗಳಲ್ಲಿ ಪೂಜೆಗೊಂ-
ಡಿರುತ ಸುತತ್ತ್ವಮಾರ್ಗವನು ಬೋಧಿಸುತಿರ್ದನು ಭಕ್ತಿಯುಂಗವಂ ೩

ವ॥ ಇಂತು ಭಕ್ತರಂ ಬೋಧಿಸಿ ಕೃತಾರ್ಥರಂಮಾಡಿ ಅಲ್ಲಿಂತೆರಳ್ದು ಮತ್ತೆ ಕೆಲವು [5](ಶಾಖಾ)[5] ನಗರಂಗಳಂ ಪೊಕ್ಕು –

ಉ. ವೃ.
ಭಿಕ್ಷವ ಬೇಡಿಕೊಂಡು ನದಿತೀರಕೆ ಪೋಗಿ [6]ಕುಳಿತ್ತು[6] ಲಿಂಗವಂ
ಆಕ್ಷಣ ಪೂಜೆಗೆಯ್ದು ರುಚಿ ರೂಪವು ತೃಪ್ತಿಗಳರ್ಪಿತಂಗಳಂ
[7](ಲಕ್ಷ್ಯದಿ ಮಾಡುತಾಡಿ)[7] ಶಿವಯೋಗಪರಾಯಣನಾಗಿ ಮರ್ತ್ಯರಂ
ರಕ್ಷಿಸುತಂತವಂ ಚರಿಸುತಿರ್ದನು ಸಂತಸದಿಂದ ಸಿದ್ಧನುಂ ೪

---

1. ಯೆನ್ನುವಂ (ಅಇ). 2. ಳ್ತಿಂಥಿ (ಅಇ). 3. ದೊರ್ವನಾ (ಅಇ). 4. ಮ (ಅಇ). 5. ಸಾಕಾ (ಅಇ). ಕುಳ್ಳಿತ್ತು (ಅಇ). 7. ಲಕ್ಷಣ ವೀಣಾಕಂ ಮಾಡಿ (ಅಇ).

ಬ್ರಹ್ಮವೆ ಕರ್ಪರಂ ತ್ರಿವಿಧದಾಸೆಗಳಿಲ್ಲದುದೇಕ [1]ದಂಡಕಂ[1]
ಹಮ್ಮುಗಳಿಲ್ಲದಿರ್ಪುದೆ ಕಮಂಡಲ ರುದ್ರನ ಪಾಶಗಿತ್ತು ತಾ-
ಸುಮ್ಮಹವಾದುದೇ ಜಡೆ ಪಿತಾಮಹಲೇಖಿತಲುಪ್ತಭಸ್ಮದಿಂ
ದುಮ್ಮಹ ವೇಷದಿಂ ಚರಿಸಿದಂ ಕರಣಂಗಳ ತೀರ್ಥ[2](ಯಾ)[2]ತ್ರೆಯೊಳ್ ೫

ಇಂತು ವಿಲಾಸದಿಂ ಚರಿಸು[3](ವಷ್ಟರೊಳೊ)[3]ಂದು ದಿನಂ ಯತೀಶ ಸ-
ದ್ಭಕ್ತರ ಗೇಹ[4](ಕೆಯ್ದಿ)[4]ಯುರು ಭಿಕ್ಷವ ಬೇಡಿಯು ಗೋವದೋಹಿಪ
[5](ಷ್ಟೊತ್ತು)[5]ವು ನಿಂದಿರುತ್ತಮವರಲ್ಲಿಯು ಭಿಕ್ಷವ ತಾರದಿರ್ದಡಂ
ಶಾಂತಗುಣಾಂಗನುಂ ಮರಳಿ ಭಕ್ತರ ಕೇತನಕೆಯ್ದುತಿರ್ದನುಂ ೬

ಕಂ. ಬಂದುಂ ಭಿಕ್ಷಾಶಬ್ದವ
[6](ನಂದಮಿಗಲುಚ್ಚರಿಸೆಕೇಳಿದು ಸುಮ್ಮನಿರ-
ಲ್ಕೊಂಧುಕ್ಮಾತ್ರದಿ ನಿಂದುಂ
ಅಂದುಂ ಮತ್ತೊರ್ವ ಭಕ್ತಗೇಹಕೆ ನಡೆದಂ)[6] ೭

ಬೇಡಿದರಿಲ್ಲೆನುತಿರಲುಂ
ಗಾಢದಿ ಮತ್ತೊಂದು ಮನೆಗೆ ಪೋಗಿಯೆ ಬೇಡ-
ಲ್ನೀಡದಿರೆ ಮರಳಿ [7]ಮತ್ತ(ಂ)[7]
ಗಾಡಿಯೊಳೊರ್ವನ ಮನೆಗೈದೆ ನೀಡಿದು[8]ದಿಲ್ಲ[8] ೮

ಎಲ್ಲರು ಮಿಲ್ಲಿಲ್ಲೆಂಬಾ-
ಸೊಲ್ಲನು ಕೇಳುತ್ತ ಮನದೊಳುಲ್ಲಾಸಂ ಮಿಗೆ
ಪಲ್ಲವಿಸುತ್ತಿರೆ [9]ಯತಿಪಂ-
ನಿ[9]ಲ್ಲದೆ ತೆರಳಿದನು ನಗರ ಮತ್ತೊಂದಕ್ಕಂ ೯

ಆ ನಗರದಿ ಭಿಕ್ಷವನುಂ
ಮಾನನಿಧಿ ಬೇಡಲೆಲ್ಲಂ ಇಲ್ಲೆಂದೆನಲಾ
ಮಾನಸಭವವೈದಿ ಮಾಡು-
ವೀ ನವೀನದ ಗನ್ನ[10](ತಕೆಯ)[10]ಳು ಕುವೆನೆಂದಂ ೧೦

---

1. ದಂಡಂ. 2. ಜಾ (ಅಇ). 3. ತಿರುಂತೆಣ (ಅಇ). 4. ಕೆಯಿದಿ (ಅಇ). 5. ಷ್ಪೋಲು (ಅಇ). 6. ನಂದಮಿಗಲುಚ್ಚರಿಸಲ್ಕೇಳ್ದು ಸುಮ್ಮನಿರಲೊಂದುಂ ಗೊಂದುಕ್ಮಾತ್ರದಿ ನಿಂದಿದಿರ್ದಂ ಮತ್ತೊರ್ವ ಭಕ್ತಗೇಹಕೆ ನಡೆದಂ (ಅಇ). 7. ಮತ್ತ (ಅಇ). 8. ದಿಲ್ಲಂ (ಅಇ). 9. x (ಇ). 10. ಕೆನೆಯೆ (ಅಇ)

ಆ ಗ್ರಾಮವ ಬಿಟ್ಟುಂ ಮ-
ತ್ತುಗ್ರಾಕ್ಷನ ಶರಣನೊಂದು ಊರಿಗೆ ಪೋಗಿಯು
ಶೀಘ್ರದಿ ಭಿಕ್ಷವ ಬೇಡಲು
ದಗ್ರದ ಶಿವಭಕ್ತರೆಲ್ಲಮಿಲ್ಲಾಯೆಂದರ್ ೧೧

ವ || ಆ ಗ್ರಾಮದಲೊಂದು ದೇಗುಲದಲ್ಲಿ [1]ಮೂರ್ತಂಗೊಂಡು[1] ನಿತ್ಯ ತೃಪ್ತನಾದ ಪರಮೇಶ್ವರಂಗೆ ಹರ್ಷಾಮೃತಾರೋಗಣೆಯನಿತ್ತಾ ಪ್ರಸಾದಮಂ ಸವಿದು ತೃಪ್ತನಾಗಿ ಅಲ್ಲಿಯೊಂದು ರಾತ್ರಿಯಂ ಕಳಿದು ಬೆಳಗಾಗಲ್ ಮತ್ತೊಂದು ಗ್ರಾಮಮಂ ಪೊಕ್ಕು ಮಧ್ಯಾಹ್ನ ಕಾಲದಲ್ಲಿ ಭಿಕ್ಷವಂ ಬೇಡೆ ಓಹಿಲಯ್ಯಂಗಿಲ್ಲಾಯೆಂಬಂತೆಲ್ಲಾ ಭಕ್ತ ನಾರಿಯರು 'ಘೋಷಾಯಿ ಭಿಕ್ಷನ್ನಹಿ'ಯೆಂದು ನುಡಿಯೆ ಇದು ಶಿವತಂತ್ರವೆಂದು ಸಿದ್ಧೇಶ್ವರಂ ಆ ಪುರದೊಳೊಂದು ರಾತ್ರೆ ಶಿವಧ್ಯಾನ ಪರವಶನಾಗಿ ಕಳಿದು ಬೆಳಗಾಗಿ ಮತ್ತಾ[2]ಮಧ್ಯಾಹ್ನದಲ್ಲಿ[2] ಮತ್ತೊಂದು ನಗರಮಂ ಪೊಕ್ಕು ಬೇಡಲುಂ ಎಲ್ಲರಿಲ್ಲಾ ಯೆಂದಡಂ ಹರ್ಷಂದಾಳುತಲ್ಲೊಂದು ರಾತ್ರೆಯಂ ಕಳಿದು ಮತ್ತೆಯೊತೆರದೊಳೊಂಬತ್ತು ದಿವಸಂಗಳಂ ಕಳಿದು ಮತ್ತಂ ರೋಹಿಣೀಖೇಡವೆಂಬ ಪಟ್ಟಣಮಂ ಪೊಕ್ಕುವೊಂದು ದೇವಾಲಯಮಂ ಸಾರ್ದು ಮೂರ್ತಿಗೊಂಡಿರ್ಪಲ್ಲಿ ಪಗಲ್ತೀರಿದುದೆಂತೆಂದೊಡೆ ೧೨

ಕಂ. ಪಸಿದ ಸಿದ್ಧೇಶ್ವರನಿರವ
ಶಶಿಧರ[3]ಗೆ[3] ವೇಳ್ವೆನೆಂದುನ್ನಿಸುತಂ [4]ಪೋಪೊಲ್[4]
ಬಿಸಜಸಖನಸ್ತಮಿಸಿದಂ
ವಸುಧೆಯೊಳು ಪಸರಿಸಿತುಂ [5]ತಮಂ[5] ದಶದಿಸೆಯೊಳ್ ೧೩

ಯತಿಪನ ಹೃದಯಾಕಾಶದಿ
ಸತತಂ ಸದ್ಗುಣ [6](ತಳತಳಿಸಿ ತೊಳಗುತಿರ್ಪಂ
ತತುಳಾಕಾಶದೊಳುಂ ಶಶಿ
ಅತಿ)[6] ಪ್ರಜ್ವಲಿಸುವ ಕಾಂತಿಯಿಂದಂ ತೋರ್ಕುಂ ೧೪

ವ || ಆ ಸಮಯದಲ್ಲಿ ಸರ್ವಜನರೆಲ್ಲಂ ಊಟಂಗಳಿಂ ತೃಪ್ತರಾಗಿ ಮರೆದೊರಗಿರ್ಪಲ್ಲಿ –

---

1. ಮೂರ್ತಿಗೊಂಡು (ಅಇ). 2. x (ಇ). 3. ಗಂ (ಅಇ). 4. ಪೋಪಲ್ (ಅಇ). 5. ತಂತಮಂ (ಅಇ). 6. ಗಣೆತಳಿತಳಿಸಿ ತೊಳಗುತ್ತಿರ್ಪಂ ತತುಳಾಕಾಶ ದೊಳ್ತತಿ ಅತಿ (ಅಇ).

ಕಂ. ಹಸಿದಿ[1]ರ್ಪೆತಿ[1] ಸಿದ್ಧೇಶಗೆ
ಶಶಿಧರ ಬಿನ್ನಹವ ಮಾಡಿಯುಣಲಿಕ್ಕಿಸುವುದು
ಸಸಿನದಿ ನೋಡುವೆನೆಂಬೊಲಾ
ರಶಿಯುದಯಾದ್ರೀಂದ್ರದಲ್ಲಿಗೆಯ್ದಿದನಾಗಂ ೧೫

ವಚನ॥ ಆ ಸಮಯದಲ್ಲಿ

ಕಂ. ಮನಹರ್ಷದ ಮಜ್ಜನದಿಂ
ತನುಪುಳಕ[2]ಲರಿನ ನಿಬ್ಬಯಕೆ[2]ಯ ನೈವೇದ್ಯದಿ
ವಿನಯ[3]ದ[3] ತಾಂಬೂಲಗಳಿಂ
ದನುಪಮನಂ ಯಜಿಸುತಿರ್ದನಾ ಸಿದ್ಧೇಶಂ ೧೬

ಆ ಗುಡಿಯ ಕುಂಬಳೇಶ್ವರ
ನಾಗಳೆ ಶಿವಭಕ್ತವೇಷದಿಂ ಬಂದೊಂದಿಸು-
ತ್ತಿಕ್ಷೇಗಂ ಭಿನಿವಲ್ಲಿಗೆ
ಬೇಗಂ ತರಿಸುವೆನು ಭಸಿತಮಂ ಪಿಡಿಯೆಂದಂ ೧೭

ಬೇಡೆಂದು ಯತಿಪನಾಗಂ
ಗಾಡಿಯೊಳುಂ ಮೂರು ಸೂಳು ಪ್ರಾರ್ಥನೆ ಗೆಯ್ಯಲ್
ಕಾಡದೆ ಕರುಣಿಪುದೆನುತುಂ
ಗಾಢದೆ ಬಿನ್ನವಿಸಿ ಭಸಿತಮಿತ್ತಂ ನಗುತುಂ ೧೮

ಗಿರಿಶಂ ಜಂಗಮ ರೂಪಂ
ಪರಿದೆಯ್ದಿಯುಮಾವೂರ ಗೌಡನ ಸ್ವಪ್ನದಿ
ಕರಹಸಿದೆನೆನಗೆಯನ್ನವ
ತ್ವರಿತದಿ ನೀಡೆಂದು ಪೇಳ್ದನಾ ರಾತ್ರಿಯೊಳುಂ ೧೯

ಎಚ್ಚತ್ತು ಗೌಡನಾಗಳೆ
ಬೆಚ್ಚುತ್ತಂ ತನ್ನ ಮಡದಿಯಂ ಬಿಡದೆಬ್ಬಿಸಿ
ಇಚ್ಛೈಸಿದೆನೂಟಕ್ಕೆಂ
ದುಚ್ಚರಿಸಿದನೊರ್ವ ಚರ ಸ್ವಪ್ನದೊಳೆಂದಂ ೨೦

1. ರ್ಪತಿ (ಅಇ). 2. ಲರ್ನಿರ್ಭಬಯಕೆ (ಆಇ). 3. ದಿ (ಅಇ).

ಇರುಳ್ತಿಳಿದಡಿಗೆ ಮಾಡಿಯು
ಚರಲಿಂಗಕೆ ನೀಡಿ ಬಿಡುವ ಸುಮ್ಮನೆ ಮಲಗೆಂ
ದೊರೆದು ಮರೆದೊರಗೆ ಮತ್ತಂ
ಕರಹಸಿದೆನು ಬೇಗಲನ್ನವಂ ತೋರೆಂದಂ ೨೧

ಮರಳಿ ಪತಿಸತಿಯನೆಬ್ಬಿಸಿ
[1]ಚರಲಿಂಗ(ಂ)[1] ಹಸಿದನೆಂದುಮೆನ್ನೊಳ್ನುಡಿದಂ
ತರುಣಿಯೆ ಕೇಳೆನಲುದಯ[2](ಕೆ)[2]
[3]ಚರ(ವಂ) ಮಾಳ್ಪಂ[3] ಮಲಗೆಂದೊರಗಿರ್ದಾಗಳ್ ೨೨

ಈ ವೂರ ಕುಂಬಳೇ[4](ಶಂ)[4]
[5]ನಾ ವೊಂಬತ್ತುಪವಾಸದಿಂದಂ ಹಸಿದೆಂ[5]
ನೀವಡಿಗೆ ಮಾಳ್ಪೆವೆನ್ನದೆ
ನಾವಿರ್ದಲ್ಲಿಗೆ ತಹುದೀ[6](ಗೆಲ್ಲ)[6]ವನೆಂದಂ ೨೩

ವ॥ ಮತ್ತೆಚ್ಚತ್ತು ಬೆದರಿ ಸತಿಯನೆಬ್ಬಿಸಿ ಕೇಳಾ ಈವೂರ ಕುಂಬಳೇಶ್ವರನಂತೆ, ಒಂಬತ್ತು ದಿನದಿಂದಲು ಹಸಿದೆಂ ಉಪವಾಸವೆಂದುಂ ಬೆಳಗುತನಕಿರಲಾರೆ ಈಗಳೆ ಮನೆಯೊಳಿರ್ದನ್ನವಂ ತಾರೆಂದು ಕರಕರಿಸುತ್ತಲುಂ ಮಲಗಲೀಸದಿರ್ದಪಂ ಮನೆಯಲ್ಲಿದ್ದುದಂ ತಾಂ ಕುಂಬಳೇಶ್ವರಂಗೀಗಳೆಯುಪಹಾರವಿಟ್ಟು ಬಹೆನೆನಲು ಸತಿ ಕ್ರೋಧಂ ಮಾಡಿ ನಾವೆಲ್ಲಮುಂಡು ಮಿಕ್ಕನ್ನವಂ ದೇವರಿಗುಪಹಾರಮಂ ಮಾಳ್ಪೆನೆನಲಹುದೆ ಪಾಪಕ್ಕಂಜೆಯಲ್ಲಾಯೆಂದು ಪತಿಯಂ ಧಿಕ್ಕರಿಸಿ ಮತ್ತಂ ಪ್ರಭಾತಕಾಲವಾದರೆ ನಾವೆಲ್ಲಂ ಮಿಂದು ದಂತಪಜ್ತಿಯಂ ಬೆಳಗಿ ಪೊಸದುಕೂಲಂಗಳನುಟ್ಟು ಪೊಸಭಾಂಡಂಗಳಿಂದಡಿಗೆಯಂಮಾಡಿ, ಕುಂಬಳೇಶ್ವರಂಗೆ ಪಂಚಾಮೃತಾಭಿಷೇಕವಂ ಮಾಡಿಸಿ ಮಹಾ ನೈವೇದ್ಯಮಂ ಕೊಟ್ಟುಂ ಊರೊಳಗಿರ್ದ ಜಂಗಮದೇವರೆಲ್ಲರಂ ಬಿಜಯಂಗೆಯ್ಸಿ ತಂ[7]ದು[7] ಷಡ್ರಸಾನ್ನಗಳಿಂ ತೃಪ್ತಿವಡಿಸುವ ನೀಂ ಈಗ ಸುಮ್ಮನೆ ಮಲಗೆಂದು ಪತಿಗಂ ಒಡಂಬಡಿಕೆಯಂ ಕೊಟ್ಟು ತಾನುಂ ಪತಿಯುಂ ಮರೆದೊರಗಿರ್ಪಲ್ಲಿ ೨೪

1. ಚರಲಿಂಗ (ಅಇ). 2. ಕಂ (ಅಇ). 3. ಚರನಯಿದಕೆ ಮಾಳ್ಪ (ಅಇ).
4. ಶ್ವರಂ (ಇ), ಶ್ವಂ (ಅ). 5. ನಾಂವೊಂಬತುಪವಾಸದಿಂದಲು ಹಸಿದೆಂ (ಅಇ).
6. ಗೈಲ (ಅಇ). 7. x (ಇ).

ಸ್ರ. ವೃ.

[1](ಭೂತೇಶಂ ದಂಪತಿದ್ವಂದ್ವದ ಕನಸಿನೊಳಂ ಬಂದು ಸೂರ್ಯೋದಯಕ್ಕಂ
ನಾ ತಾಳಲ್ಕಾರೆ ನೀಪೀಗ ಮನೆಯಲಿಹ ಶಾಲ್ಯಾನ್ನಮಂ ಬೇಗದಿಂ ಬೆ-
ಟ್ಟಿತ್ತಾಗಿಪ್ಪುಪ್ಪುಗಾಯುಂ ಕೆನೆವೊಸರಸು ಮೇಲಕ್ಕಿಯಿಂದುಳ್ಳಿಯಿಂದೊ-
ಳ್ಳಿತಪ್ಪೊಲ್ ಮಾಡಿ ಬೇಗಂ ತರುತೆಚರಕೆ ನೀಡೆಂದನಾನಂದದಿಂದಂ)[1] ೨೫

ಚಂ.

ನೆಲುಹಿನ ಭಾಂಡದಲ್ಲಿ [2](ಮೊಸರುಂಟ)[2]ದೆ ಜಂತದ ಪೆಟ್ಟಿಯಲ್ಲಿಯುಂ
ವಿಲಸಿತದೇಲ[3](ದಾ)[3] ನಿವಹ ಗಂಟಿನೊಳಿರ್ಪುವು ನಿಂಬೆ ಪಣ್ಗಳುಂ
ಎಲೆ ಮಡಗಿರ್ಪ ಭಾಂಡದ ಸಮೀಪದಲಿರ್ಪವು ಮಾದ್ರ್ರಕಂಗಳುಂ
ಜಲಘಟದೊತ್ತಿ[4]ನಲ್ಲಿಹವು[4] ದೀಪವ ಪೊತ್ತಿಸಿ ನೋಡಿ[5]ಮೆಂದನುಂ[5] ೨೬

ಹಸಿದೆನು ತಂಗುಳೋಗರವಿರುತ್ತಿಹುದಂತದ ಬೇಗ ತಂದು ನೀಂ
ಶಶಿಧರ ಕುಂಬಳೇಶ್ವರನು ನಾಂ ಚರವೇಷವ ತಾಳ್ದು ರಂಗಮ-
ಧ್ಯಸರುಸದೊತ್ತಿನಲ್ಲಿ ಬಲುಗಂಬವ ನೆಮ್ಮಿ ಕುಳಿತ್ತುಮಿರ್ಪೆನುಂ
ಸಸಿನದಿ [6](ನೀಡಿ)[6]ಮೆಂದು ಬಡಿದೆಬ್ಬಿಸಿದಂ ತಳುವಾಯಿತೆಂಬುತಂ ೨೭

ಬೆದರುತಲೆದ್ದು ದೀಪವನು ಕತ್ತಿಸಿ ಭಾಂಡವ ನೋಡುತೆಲ್ಲವಂ
ಪದರದಿ ಗೂಡೆಗಿಕ್ಕಿ ತಳುವಾದಪುದೆಂಬುತ ಪೊತ್ತುಕೊಂಡುವುಂ
ವಿಧುಧರವಾಲ್ಯಕೈದಿ ಚರಲಿಂಗಕೆ ವಂದಿಸಿ ದೀಪವೆತ್ತುತಂ
ಹದುಳದಿ ಲಿಂಗಪೂಜೆಗೆಡೆಮಾಡಿ ವಿಭೂತಿಯನಿತ್ತು ಭಕ್ತಿಯಿಂ ೨೮

ಪದಸರಸೀರುಹಕ್ಕೆರಗಿ ಶಂಕರಪೂಜೆಯ ಮಾಡಿ ಲಿಂಗಕಂ
ವಿಧಿತಪದಾರ್ಥವಂ ಸಲಿಸಿ ಮೋಕ್ಷದ ಮಾರ್ಗವನಿತ್ತುಮೆನ್ನನುಂ
ಮುದದೊಳು ರಕ್ಷಿಸೆಂಬವನ ಬಿನ್ನಹಗೇಳುತ ಸಿದ್ಧಲಿಂಗನಂ
ತವಕೊಡಬಟ್ಟುಮೀಶ್ವರನ ಪೂಜಿಸಿಯ[7]ರ್ಪಿ(ಸಿ)[7]ದಂ ಪದಾರ್ಥಮಂ ೨೯

---

1. ಭೂತೇಶಂ ದಂಪತಿದ್ವಂದ್ವದ ಕನಸಿನೊಳು ಬಂದು ಸೂರ್ಯೋದಯಕ್ಕಂ। ನಾಂ ತಾಳಲ್ಕಾರೆ ನೀವೀಗ ಮನೆಯಲಿಹ ಸಾಲ್ಯನ್ನಮಂ ಬೆ। ಟ್ಟಿತ್ತಾಗಿರ್ಪುಪ್ಪುಗಾಯುಂ ಕೆನೆವೊಸರಸು ಮೇಲಕ್ಕಿಯಿಂದೊಳ್ಳಿತ್ತಾಪ್ಪೋಲದಂ ಮಾಡಿದ ಮಡಿತವನುಮಂಬೇಗ ನಾನಿರ್ಪ ಠಾವಿಂಗೆ ಬಂದು। ಮೂರ್ತಿಗೊಂಡಿರ್ಪ್ಪರಚರಕ್ಕೆ ನೀಡೆಂದನಾನಂದದಿಂದಂ॥
2. ದ್ದದದಿಯುಂ (ಅಇ). 3. ಕ್ಕಿ (ಅಇ). 4. ನಲವವೆ (ಅಇ). 5. ಮೆನ್ನುಂ (ಇ).
6. ಮಾಡೆ (ಅಇ). 7. ರ್ಪಿ (ಅಇ).

ಕಂ. [1](ರೂಪುಂ ರುಚಿಯುಂ ತೃಪ್ತಿಯ)[1]
ನೇ ಪರಿಯೊಳ್ ಲಿಂಗತ್ರಯ[2]ಕ[2]ರ್ಪಿಸಿ ತಾಂ ನಿ-
ರ್ಲೇಪಪ್ರಸಾದತ್ರಯದಿಂ
ತಾಪತ್ರಯದೂರ ಸಿದ್ಧತೃಪ್ತಿತನಾದಂ ೨೦

ವ॥ ಮತ್ತಮಾ ಗೌಡಂ ಸಿದ್ಧಲಿಂಗೇಶ್ವರನೊತ್ತಿನಲ್ಲಿ ಬೆಳಗಪ್ಪನ್ನೆಗಮಿರ್ದು ಸೂರ್ಯೋದಯವಾದ ಬಳಿಕ್ಕಂ ತನ್ನ ಮಠಕ್ಕಂ ಬಿಜಯಂಗೈಸಿ ತಂದು ಪೂಜಿಸುತ್ತಲಿರೆ ಯೆಲ್ಲರರಿದುಂ –

ಕಂ. ಸನ್ನುತದೊಳಾಗ ಭಕ್ತರು
ಪನ್ನಗಧರ ಕುಂಬಳೇಶನೀಯತಿಪತಿಗಂ
ಬಿನ್ನವ ಮಾಡಿದನೆಂಬುತ
ಉನ್ನತದಿಂ [3]ತ(ಮ)[3]ತಮಗಂ ಪೊಗಳು[4](ತ್ತಿ)[4]ರ್ದರ್ ೨೧

ಊರೂರ್ಗಳ ಶಿವಭಕ್ತ-
ಸಾರ್ರಿಯೆ ಬಂದಡ್ಡಬಿದ್ದು ಕೊಂಡಾಡುತ್ತಂ
ಮಾರಾರಿಯ ಕೈಯಿಂದಂ
ಕಾರಿರುಳ್ಪೂಜೆಗೊಂಡನಂ ಪೂಜಿಸಿದರ್ ೨೨

ವ॥ ಆರ್ಯದೇಶ ರೋಹಿಣಿಖೇಡವೆಂಬ ನಗರದಲ್ಲಿಯ ಕುಂಬಳೇಶ್ವರನೆಂಬ ಲಿಂಗದ ಭಕ್ತಿಯುಂ ಕೈಕೊಂಡಲ್ಲಿಂ ತೆರಳ್ದು ನಾಸಿಕ ತ್ರ್ಯಂಬಕವಂ ನೋಡುತ್ತ ಕೊಂಕಣದೇಶಮಂ ಪೊಕ್ಕು ಭೀಮಂ ಪ್ರತಿಷ್ಠಿಸಿದ ಭೀಮೇಶಲಿಂಗದ ಮಸ್ತಕಾಗ್ರದಿಂ ಬಪ್ಪುದಕದಿಂ ತಮ್ಮ ಲಿಂಗದೇವರ್ಗೆ ಮಜ್ಜನಂ ಮಾಡಿ ಆ ಭೀಮೇಶ್ವರಂಗೆ ತಮ್ಮ ದರ್ಶನಮನಿತ್ತು ಮತ್ತಲ್ಲಿಂದಂ ಇರ್ಬರ್ ಜಂಗಮದೇವರ್ಸಹಂ ಮಾಬಳೇಶ್ವರಂಗಂ ತಮ್ಮ ದರ್ಶನವನೀಯವೇಳ್ಕೆಂದು ಬಂದಂ ೨೩
ಉ. ವೃ.

ಜಂಗಮದೇವರಿಬ್ಬರುಸಹಂ ಯತಿ ಮಾಬಳ ಲಿಂಗಗೇಹಮಂ
ಸಾಂಗಮದಾಗಿ ಪೊಕ್ಕು ಮುರಿದುದ್ದಮದಾಗಿಹ ಲಿಂಗಪೀಠಮಂ
ಲಂಘಿಸುತೇರಿಯುಗ್ರದಿ ಕುಳಿತ್ತುವು ಲಿಂಗದ ಮಸ್ತಕಾಗ್ರ ದು-
ಶ್ತುಂಗಬಿಲಾಂತದೊಳ್ ಬಹ[5] ತದಂಬು[5]ವ ನೋಡುತಲಿರ್ದನರ್ತಿಯಿಂ ೨೪

1. ರೂಪು ರುಚಿ ತೃಪ್ತಿಗಳ (ಅಇ). 2. ಕೆಯು (ಅಇ). 3. ತಮ್ಮ (ಅಇ).
4. ತಿ (ಅಇ). 5. ಕದಂಬ (ಅಇ).

ತೆಂಗಿನ ಬಟ್ಟಲಿಂದಲುದಕಂಗಳನಾಸುತ ತಮ್ಮ ಲಿಂಗ[1] ಕು[1]
ತ್ತುಂಗದಿ ಮಜ್ಜನಕ್ಕೆರೆದುಮಾ ಜಲದಿಂ [2]ಮುಖ[2] ಮಜ್ಜನಂಗಳಂ
ಪಿಂಗದೆ ಮಾಡುತಂ ಮರಳಿ ಮುಕ್ಕಳಿಸುತ್ತಲುಂ ದಂತಪಙ್ಕ್ತಿಯುಂ
ಅಂಗುಲಿಯಿಂದಲುದ್ಧೃತ ಬಿಲಾಂತದಿ ಹಸ್ತಮನಿಟ್ಟು ನೀರುಮಂ ೩೫

ಕಂ. ಹಿಂಗದೆ ಮೊಗೆಮೊಗೆದು [3]ತಮ್ಮ[3]
ಲಿಂಗಕ್ಕೆರೆದದನೆ ತಾವು ಗಂಡೂಷಿಸುತಂ
ಲಿಂಗಶಿಖಾಗ್ರದ ಬಿಲದೊಳ್
ಮುಂಗೈತನಕಿಕ್ಕಿ ನೋಡಿ ಹರ್ಷಿಸುತಿರ್ದರ್ ೩೬

ಆ ಸಮಯದಿ ತಮ್ಮಡಿಗಳ್
ಈಶನ ಪೂಜಿಸುವೆನೆಂದು ಗುಡಿಯುಂ [4]ಪೊಗುತಂ[4]
ಈಶಲಾಂಛನವ ಕಾಣು[5]ತ[5]
ರೋಷವ ತಾಳಿದರು ಮನದಿ ಬಗ್ಗಗ[6]ಳಿಂ(ದಂ)[6] ೩೭

ಲಿಂಗವನು ಮುಟ್ಟಬಹುದೇ
ಜಂಗಮರಿಲ್ಲೇಕೆ ಬಂದಿರೆಲೆಲೇಯೆನುತಂ
ಲಿಂಗಾಂಗಿಯುಗುಳ್ದುದನಾ
ಮಂಗಲರೂಪಿಗಳು ಕಂಡು ಕೌತುಕಗೊಂಡರ್ ೩೮

ಉ. ವೃ.
ಲಿಂಗದ ಪೀಠದಗ್ರದೊಳು ಮೆಟ್ಟುವ ಜಂಗಮವುಂಟೆ ಲೋಕದೊಳ್
ಲಿಂಗದ ಮಸ್ತಕಾಗ್ರದೊಳುಮೆಂಜಲುಮಾಡಿದರುಂಟೆ ಭೂಮಿಯೊಳ್
ಲಿಂಗವ ತೊಂತಿಕೊಂಡುಮುಪವಿತ್ರವ ಮಾಡುವರುಂಟೆ ಧಾತ್ರಿಯೊಳ್
ಮಂಗಲದೂರರಾದವರುಮಿರ್ಪುದು ನೀತಿಯೆಯೆಂದರಾ ದ್ವಿಜರ್ ೩೯

ಮನುಮುನಿಗಳ್ ಮುಂತಾದರ್
ಘನಮಹಿಮನ ಮುಟ್ಟಲಂಜಿ ದೂರದಲಿರ್ಪರ್
ಮನಸಿನೊಳಳುಕಿಲ್ಲದೆ ನೀ
ವನಘನ ಬಳಿಯುಗುಳಲಹುದೆಯೆಂದುಂ ನುಡಿದರ್ ೪೦

1. ಗಕ್ಕುಂ (ಅಇ). 2. x (ಇ). 3. ತಮ್ಮಯ (ಅಇ). 4. ಪೋಗುತಂ (ಅಇ).
5. ತಂ (ಅಇ). 6. ಳಿಂ (ಅಇ).

ಉ. ವೃ.

ಈಗವೆ ಪೋಗಿ[1] ಪೋಗಿ[1] ಘನಲಿಂಗವ ಮುಟ್ಟಲು ಬೇಡ ಬೇಡವೀ-
[2]ದೇಗುಲಕೇಕೆ[2] ಬಂದಿರಕಟಾ ಗುಡಿ ಕೆಟ್ಟಿತುವೆಂಬ ವಿಪ್ರರೊಳ್
ಜಂಗಮಮುಟ್ಟಿ ನೋಡಿದೊಡೆ ಲಿಂಗಕೆ ಸಂತಸ ತಾನೆಯಕ್ಕುವಾ-
ಮಂಗಲವಿಪ್ರಜಾತಿಗಳು ಮುಟ್ಟಲು ಸಂತಸವಕ್ಕುಮೆಂದನುಂ ೪೧

ಸೂತಕಪಿಲ್ಲದಿರ್ಪ ಚರಲಿಂಗವು ಮುಟ್ಟಲು ದೋಷವೆಂಬಿರ್ಪೆ
ಸೂತಕವುಳ್ಳ ಬಾಡಬರು ಮುಟ್ಟಲು ದೋಷಮದಿಲ್ಲವೆಂಬಿರ್ಪೆ
ಅಂತಕ ಯಾತನಾಲಯಕೆ ಸಿಕ್ಕುವ ಮಾತನು ಕೇಳಲಕ್ಕುಮೇ
ಪಾತಕಜಾತಿಸೂತಕಿಗಳಂ ಮುಖನೋಡೆನು ಪೋಪೆನೆಂದೆನಲ್ ೪೨

ವ ॥ ವಿಪ್ರಜಾತಿಗಳ್ ಪರಮೇಶ್ವರನಂ ಮುಟ್ಟಬಾರದೆಂಬುತಂ ಮೆಟ್ಟುತಿರ್ಪ [3]ಕನ್ನಪ್ಪನಹಗೆ ನೀಂ[3] ಲಿಂಗದ ಪೀಠದ ಮೇಲುಗುಳುತಿರ್ದಪೆ ತಿರುನೀಲನಕ್ಕಮ್ಮ ಯರಿಗೇನಹೆ ನೀಂ[3] ಎಂಬ ವಿಪ್ರರ್ಗಂ ಸಿದ್ಧಲಿಂಗೇಶ್ವರಂ ಶಿವಶರಣರ ನಿಲವನರಿಯದೆ ವಾದಿಸಿ ಗೊಬ್ಬೂರ ಹೆಬ್ಬಾರುವರ್ಕೆಟ್ಟುದನರಿಯಿರೆ ನಾವಟಿಗೆಯ ವಿರ್ಪರ್ ಕೆಟ್ಟುದ ನರಿಯರಲ್ಲಾ ಸ್ವಪಚಯ್ಯ ಸಾಮವೇದಿಗಳ ಬಗೆಯ ನರಿಯಿರೆ ಸೂರಸಾನೆಯಮ್ಮ ನೊಳ್ವಾದಿಸಿದ [4]ಪೋ[4]ರಾಂಡಲವೆಂಬಾಗ್ರಹಾರದ ವಿಪ್ರರ ಬಗೆಯನರಿತುದಿಲ್ಲವೆ ಭೋಗಣ್ಣನೊಳ್ವಾದಿಸಿದ ಕೆಂಬಾವಿಯ ವಿಪ್ರರ ತೆರನನರಿಯಿರೆಯೆಂದು ನುಡಿವುತ್ತಿರೆ ವಿಪ್ರರ್ಜರೆದು ಜಂಕಿಸುತ್ತಂ ಪೋಗೆನಲು ಮಾಬಳೇಶ್ವರಂ ತಾಂ ಪೊರಮಡಿಸಿಹನ್ಸೆಸೆ ಯೆಂಬುತಂ ದೇಗುಲಮಂ ಪೊರವಂಟು ಕೂಗಳತೆಯೊಳೊಂದು ವೃಕ್ಷದಡಿಯಲ್ಲಿ ಆ ಚರಲಿಂಗಗಳ್ಸಹಂ ಕುಳಿತ್ತು ಬಳಲ್ದಿರಲಾಯೆಂದು ಕಮಂಡಲ ಶೀತಳಜಲಮಂ ತೆಂಗುವಟ್ಟಲೊಳು ಕೊಟ್ಟು ತಾವುಂ ಶಿವಲಿಂಗಾರ್ಪಿತಂ ಮಾಡುತಿರಲಿತ್ತಲುಂ ೪೩

ಕಂ. ಲಿಂಗವನು ಮೆಟ್ಟಕೊಂಡೀ-
ಜಂಗಮರಿಲ್ಲೆಲ್ಲ ಉಗುಳಿ ಕೆಡಿಸಿದ ಗುಡಿಯಂ
ಹುಂಗುಳಿಸಿ ಧೂಪವಿಕ್ಕಿಯೆ
ಲಿಂಗಕ್ಕಭಿಷೇಕ ಮಾಳ್ಪೆನೆನುತುಂ ಬಂದರ್ ೪೪

---

1. x (ಇ). 2. ದೇಗುಲಕ್ಕೈಕೆ (ಅಇ). 3. ಪ್ಪೆ ಕನ್ನಪ್ಪಗೇ ನಹೆ ನಿಂ (ಅಇ).
4. ಘೋ (ಇ).

ಲೀಲೆಹಿಡಿದೊರ್ವ ವಿಪ್ರಂ
ಮೇಲೆನಿಸುವ ಪಂಚಗವ್ಯಪಂಚಾಮೃತ ದಾ-
ಜಾಲಜಲವಿರ್ದ ಕೊಡಗಳ
ಕಾಲಿಂದೊದೆದೊಡೆದು ಹೊಡೆದು ನೂಂಕುತಲವರೊಳ್ ೪೫

ಎನ್ನಯ ಪೀಠಾಗ್ರದೊಳುಂ
ಎನ್ನಯ ಜೀವನಮದಪ್ಪ ಸಿದ್ಧೇಶ್ವರನಂ
ಮುನ್ನಿರ್ದಂತಿರಿಸಿದಲ್ಲ-
ದೆನ್ನಂ ಪೂಜಿಸದಿರೆಂದನಾ ತಂಬಿಯರೊಳ್ ೪೬

ಉ. ವೃ.
ಶ್ರೀಗುರು ಸಿದ್ಧಲಿಂಗನನು ಝುಂಕಿಸಲಪ್ಪುದೆ ನೀವುಮೆಲ್ಲರುಂ
ಪೋಗಿ ಕರಾಬ್ಜಮಂ ಮುಗಿದು ಬಿನ್ನಹ ಮಾಡಿಯುಮೆನ್ನ ಗೇಹಕಂ
ಈಗಲೆ ತಂದು ಮೂರ್ತಿಗೊಳಿಸೆನ್ನನು ಪೂಜಿಪುದಲ್ಲದಿರ್ದೊಡಂ
ಬೇಗದೊಳಾನು ಪೋಗುವೆನುಮೆಂದನು ಶಂಕರ ಲೀಲೆಗಾರನುಂ ೪೭

ಕಂ. ವಿಪ್ರನ್ರಡುಗುತಲಾಗಂ
ಕ್ಷಿಪ್ರದೊಳಂ ಬಂದು ಕಳಸ ಕನ್ನಡಿ ಸಹಿತಂ
ಅಪ್ರತಿಮ ಸಿದ್ಧಲಿಂಗಗೆ
ಸುಪ್ರೇಮದೊಳೆರಗಿ ಶಿವನು ನುಡಿದುದನೆಂದರ್ ೪೮

ನೀವು ಬಂದಲ್ಲದೆಮ್ಮಯ
ಭಾವಜಹರ ಕೋಪದಿಂದೆ ಪೂಜೆಯನೊಲ್ಲನು
ನಾವಜ್ಞಾನಿಗಳೆಮ್ಮಂ
ಕಾವುದು ಕರುಣದೊಳಗೆಂದು ದೈನ್ಯಂಬಟ್ಟರ್ ೪೯

ವ || ಇಂತು ವಿಪ್ರರನೇಕ ದೈನ್ಯಂಬಡುತ್ತಿರ್ಪಲ್ಲಿ ಸಿದ್ಧಲಿಂಗೇಶ್ವರಂ ಆ ಮಾಬಳೇಶ್ವರನ ಭಕ್ತಿಯುಂ ಕೈಕೊಳವೇಳ್ಕೆಂದು ಬಂದು ಲಿಂಗಕ್ಕೆ ಭಸಿತವಂ ಧರಿಸಿ ಆ ಮಾಬಳೇಶ್ವರನ ಪೂಜೆಯಂ ಒಂದು ತಿಂಗಳು ಕೈಕೊಂಡು ಅಲ್ಲಿಂ ತೆರಳ್ದು ಉಳುವೆಯ ಮಹಾಮನೆಯೊಳಿರ್ಪ ಕಸ್ತೂರಿವರ್ಣದ ಭಸಿತವಂ ನೋಡಿ ಒಂದು ದೇವಾಲಯದಲ್ಲಿ ಮೂರ್ತಿಗೊಂಡಿರ್ಪಲ್ಲಿ ೫೦

೯೦. ವೈಷ್ಣವನೊರ್ವಂ ಬಂದುಂ
ಕೃಷ್ಣನೆ ಗತಿಯೆಂಬುತವನು ಗುಡಿಯೊಳ್ಪುಕ್ಕಳಿತಂ
ದಿಷ್ಣ್ಯಪತಿಧರ ಶರಣನ
ಕೃಷ್ಣನ ಸಮಯಾರಿಯೆಂದು ವಂದಿಸದಿರ್ದಂ ೫೧

ಎಲ್ಲಿಂದ ಬಂದೆ ಜಂಗಮ
ಉಲ್ಲಾಸದೊಳಿರ್ಪೆ ನಿನಗೆ ಭಿಕ್ಷಗಳಾದವೆ
ಇಲ್ಲೊಬ್ಬನೇಕೆ ಇರುತಿಹೆ
ಇಲ್ಲವೆ ನಿನಗಾರುಸತಿಸುತಾದಿಗಳೆಂದಂ ೫೨

ಪ್ರಾದೇಶಿಗಳಾವುಂ ಜಗ
ದಾಧಾರನ ಭಜನೆಯಿಂದ ಭಿಕ್ಷುಕವೇಷದಿ
ಈ ಧಾತ್ರಿಯೊಳ್ ಚರಿಸುತಿಹೆ-
ವೆಂದೆಂದುಂ ಸತಿಯರಿಲ್ಲವೆಂದಂ ಸಿದ್ಧಂ ೫೩

ಬೊಂತೆಯ ಮರೆಮಾಡಿರ್ಪಾ-
ಮುಂತಣದೇನೆಂದು ಕೇಳ್ದ ದಾಸಂಗೆಂದಂ
ಸಂತತವುದಕವ ತುಂಬುವ
ದಿಂತೀ ಕಮಂಡಲವೆಂದು ನುಡಿದಂ ಸಿದ್ಧಂ ೫೪

ಹರಿಪದಪೂತಾಂಭೋಜದೊ-
ಳುರುಜಲವುಂ ಪುಟ್ಟಿ ಧರೆಯು ರಕ್ಷಿಸುತಿರ್ಪುದು
ಮುರರಿಪುಗೆ ಸರಿಯು ದೈವವ
ಧರೆಯೊಳ್ನಾ ಕಾಣೆನೆಂದು ದಾಸಂ ನುಡಿದಂ ೫೫

ಆ ನುಡಿಗೇಳುತಲೆತಿಪಂ
ಪನ್ನಗಧರನಿಂವ ಗಂಗೆ ಪುಟ್ಟಿದುದಲ್ಲದೆ
ಅನ್ಯರ ಕಾಲೊಳ್ ಜನ್ಮಿಸಿ
[1]ಪನ್ನಿಸಿ[1]ತೀ ಧರೆಯನೆಂಬುವದು ಹುಸಿಮಾತುಂ ೫೬

---

1. x (ಇ)

ಎನಲಾ ವೈಷ್ಣವನೆಂದಂ
ವನಜಾಕ್ಷನ ಬಗೆಯನರಿಯೆ ಕೇಳ್ಳೈ ಜಂಗಮ
ಕನಲಿ ಬಲೀಶನ ಕೊಲ್ಪಂ
ದನುವಿಂ ಹರಿಪದದಿ ಪುಟ್ಟಿತೆಂದಂ ದಾಸಂ ೫೭

ಕೇಳಾದರೆ ದಾಸನೆ ನೀಂ
ಬಾಳಂಬಕನಿಂದ ದೈವಮಿಲ್ಲಂ ಧರೆಯೊಳ್
ಕಾಳಾಹಿತಲ್ಪನೆಲ್ಲವ
ಡಿಳ್ಳಾಯುವ ಹೇಳಬೇಡವೆಂದಂಸಿದ್ಧಂ ೫೮

ವ॥ ಮೊದಲು ಭೃಗುಶಾಪದಿಂ ಮತ್ಸ್ಯಾವತಾರದಿಂದುದಧಿಯಿಂದುಸಿರ್ದು ಅಗಸ್ತ್ಯತರ್ಪಣವ ಮಾಡುವಂಜುಲಿಯೊಳ್ಸಿಕ್ಕಿ ದೈನ್ಯಂಬಟ್ಟು ಬಿಡಿಸಿಕೊಂಬುವಕ್ಕೆ- ಸಾಕ್ಷಿ-

ಅಗಸ್ತ್ಯಾಂಜುಲಾವರ್ಘ್ಯಂ ದಾಸಕಾಲೇ ಸಮಾಗತಃ
ಸೋಪ್ಯಂಜುಲೌ ವರ್ತಮಾನಂ ಮತ್ಸ್ಯಂ ತಂ ಸ್ವರ್ಣವಿಗ್ರಹಂ
ವಿಲೋಕಯಾನ್ವಿಹಾಯಾರ್ಘ್ಯಮತಿಷ್ಠತ್ಸುಚಿರಂ ಮುದಾ
ತತೋಽಭಭಾಷೇ ಮತ್ಸ್ಯೋಽಸೌ ತಂ ಮುನಿಂ ತಪಸಾನ್ನಿಧಿಂ
ಮುಂಚಮಾಮಾಚ್ಯುತಃ ಸೋಽಹಂ ಭೃಗೋಃ ಶಾಪಾನ್ಮಹಾಮುನೇಃ

ಇಂತೆಂದು ಮತ್ಸ್ಯಪುರಾಣವುಂಟಾಗಿ ಮತ್ಸ್ಯಾವತಾರ ಮೊದಲೋ ವಿಕ್ರಮಾವತಾರ ಮೊದಲೋ ನೀನು ಹೇಳೆಲವೊ ಮತ್ತಂ ಕೂರ್ಮ ವರಾಹಾದಿಗಳು ಸೂಕರಾರೋಹ ವೆಂಬ ಗಂಗಾತೀರದಿಲ್ಲಿರ್ದುದು ಮೊದಲೋ ವಾಮನಾವತಾರ ಮೊದಲೋ ಮತ್ತಂ ಕೇಳು ಶ್ರೀಪರ್ವತದಲ್ಲಿಯ ಕಂದರದಲ್ಲಿಯ ನರಸಿಂಹಬಿಲದಲ್ಲಿರ್ದು ಆವಾಹನಾಖ್ಯ ತೀರ್ಥದಲ್ಲಿ ಸ್ನಾನವಂ ಮಾಡಿ ನರಸಿಂಹೇಶ್ವರ ಲಿಂಗವನುಂ ಶ್ರೀ[1]ಶರಭೇಶ್ವರ[1]ನನುಂ ಪೂಜಿಸುತಿರ್ಪನಾ ಹರಿ ನರಸಿಂಹಾವತಾರದಲ್ಲಿ ಅದಕ್ಕಂ ಸಾಕ್ಷಿ-

ಅಪಿಚಾನ್ಯೋ ನೃಸಿಂಹಾವತಾರೇ ಶ್ರೀಶೈಲಕಂದರೇ
ಸರಸ್ವತ್ಯಾಸ್ತಥಾ ಸ್ವರ್ಗ ಗಂಗಾಪಾತಾಳ ಗಂಗಯೋಃ
ಸಂ[2]ಗಮಂ[2] ಭವ್ಯಮಾವಾಹನಾಖ್ಯ ತೀರ್ಥಂ ಪಿಬತಿ
ಶಶ್ವದ್ಗತಾಗತಂ ಕುರ್ವನ್ ನರಸಿಂಹಾಹ್ವಯಂ ಬಿಲಂ
ಕೃತ್ವಾಸಮಾಗತ್ಯ ತತ್ರ ನದ್ಯಾಂ ವಿಹಿತಮಜ್ಜನಃ
ಆವಾಹನಾಖ್ಯ ತೀರ್ಥೋದಿವಾಶಂ ಶ್ರೀಶಬರೇಶ್ವರಂ
ನರಸಿಂಹೇಶ್ವರಂ ಭಕ್ತ್ಯಾ ಪೂಜಯನ್ ವರ್ತತೇ ನಿಶಂ

---

1. ಭೈರವೇಶ್ವರ (ಇ). 2. x (ಇ).

ಇಂತೆಂದು ಪರ್ವತಕಲ್ಪದಲುಂಟಾದಕಾರಣಂ ಈ ನೃಸಿಂಹಾವತಾರ ಮೊದಲೋ ವಿಕ್ರಮಾವತಾರ ಮೊದಲೋ ಬಲ್ಲರೆ ನೀವು ಹೇಳಿರೆಲವೊ ವಿಕ್ರಮನ ಕಾಲ[1]ತೊಳೆವ[1]ರೆ ಉದಕವೆಲ್ಲಿಂದಂ ಬಂದುದು ಬಲ್ಲರೆ ಹೇಳು ಅಜ ತಂದನೋ ಗಂಗೆ ತಾನೇ ಬಂದಳೋ ಆ ಕಮಂಡಲಜಲವಾದೊಡತಿ ಸೂಕ್ಷ್ಮಲೋಕಂಗಳಿಹಗೆ ಮುಳುಗಿದವು ಆವ ಭಾಂಡದೊಳಿರ್ದುದಾ ಜಲಂ ಆ ಮಹಾಭಾಂಡವ ತಂದವನಾವನ್ನೈ ಆಭಾಂಡವನೇಸು [2](ಬ್ರಹ್ಮಾಂಡ)[2] ದೊಳಿರಿಸಿದ[3](ವಂ)[3] ಎರೆದವ[4]ನಾವನ್ನೈ[4] ವೈಕುಂಠನ ಕಾಲ ತೊಳೆವ ತೊಳೆಯಿಸಿಕೊಂಬವರು ನೀರೊಳಗೆ [5]ಮುಳುಗಿ[5]ದರೋ ಓಡಿ ಹೋದರೋ ಬೇಗಂ ಪೇಳೆಲವೋ ಮತ್ತಂ ಉಮಾವಿವಾಹಸಮಯದಲ್ಲಿ ಗಿರಿರಾಜಂ ಪಾದಪ್ರಕ್ಷಾಳನಂ ಮಾಡಿದ ಶಿವಪಾದೋದಕಮಂ ಕರಂ ಬ್ರಹ್ಮಂಗೆ ಕರುಣಮಾಗಿ ಜಲಾಸ್ತ್ರವಿದೆಯೆಂದು ಕೊಡಲು ಬ್ರಹ್ಮ ಬದುಕಿದೆನೆಂದು ಶುಚಿರ್ಭೂತನಾಗಿ ಕಮಂಡಲದೊಳ್ ತುಂಬಿಕೊಂಡಿರುತ್ತಂ ಇರೆ ನಾನಾಯುಗಂಗಳ್ ಕಳೆದ ಬಳಿಕಚ್ಯುತಂ ಬ[6]ಲಿಯಂ ಬಂಧಿಸ[6]ಲೆಂದು ಜನಿಸಿದ ಕಾಲ್ ಊರ್ಧ್ವಲೋಕಂಗಳನೊಡೆದು ಕೆಡಹುತ್ತ ಬರುತ್ತಿರೆ ಲೋಕಹಿತಾರ್ಥವಾಗಿ ಕಮಂಡಲುಜಲವನಜಂ ಕಾಲಮೇಲೆ ತಳೆದು ಶಪಿಸಲು ಗತಿಗೆಟ್ಟಡಂಗಿರ್ದ ಕಾಲಂ ಮದನಾರಿ ಕಿತ್ತಡೆ ಇಪ್ಪತ್ತೆಂಟುಯೋಜನಪರಿಮಾಣದುದ್ದಗಲದ ರಕ್ತಹರಿಯಿತ್ತು ನೆಟ್ಟೆಲುವಂ ಮುರಿದು ಖಟ್ವಾಂಗಧರನಾಗಿರ್ದ ಶಿವಂ 'ಕಲ್ಪಾಂತೇ ಶಮಿತ ತ್ರಿವಿಕ್ರಮಮಹಾಕಂಕಾಳ[7]ಬದ್ಧಸ್ಫುರತ್[7]' ಮಹಾನಾಟಕವೆ ಸಾಕ್ಷಿಯಲಾ ಮತ್ತಂ ಬ್ರಹ್ಮನ ಕಮಂಡಲಜಲವೆ ಅಸ್ತ್ರವೆಂಬುದಕ್ಕೆ ಸಾಕ್ಷಿ–

> ಮಹಿಷಾಸುರಸಂಹಾರಕೃತೇಮು[8](ಗ್ರೈರ್ದಮುಸ್ಸುರಾಃ)[8]
> ಶಿವಂ ಶೂಲಂ ಹರಿಚಕ್ರಮಾಜಃ ಸೂತಿಃ ಕಮಂಡಲಂ
> ಮಹೇಂದ್ರಶಕ್ತಿವಿತ್ಯೇಕಮಾಯುದಾನಿ ಸ್ವಮುತ್ಸೃಕಃ

ಎಂದು ಮಾರ್ಕಂಡೇಯ ಪುರಾಣದಲ್ಲುಂಟು ಮತ್ತಂ ಕೇಳೆಲವೊ ಗೌತಮಂ ತಂದ ಗಂಗೆಯಂ [9]ಗೌತಮಿ[9]ಯೆಂಬಂತೆ [10](ಭ)[10]ಗೀರಥಂ ತಂ[11]ದ ಗಂಗೆಯಂ ಭಾ[11]ಗೀರಥಿಯೆಂಬಂತೆ ಜಹ್ನು[12]ನಿರ್ಗಮಿತೆ[12]ಯಾದ ಗಂಗೆಯುಂ ಜಾಹ್ನವಿಯೆಂಬಂತೆ ಹರಿ ಕಾಲಲುದಯಿಸಿದ ಗಂಗೆಗಂ ಚರಣಜಾಹ್ನವಿಯೆಂದುಂಟೆ ನಿಘಂಟುಗಳೊಳು ಮತ್ತಂ ಭೂಂದಿತ (?) ವಾದ ಗಂಗಾಪ್ರವಾಹದೊಳು ಹರಿಚರಣದೊಳಾವ ಗಂಗೆ ಉದಿಸಿತ್ತೈ ಆದಿಯೊಳಾವುದು ಹೇಳೆಲವೊ ಆಕಾಶಗಂಗೆಯೋ ಭಾಗೀರಥಿಯೋ ಮಂದಾಕಿನಿಯೋ ಕೃಷ್ಣಪರಿಪಾಕಿನಿಯೋ ಹೇಳೆಲವೋ ವಿಯದ್ಗಂಗೆಯೋ ವಿಷ್ಣುಪದಗಂಗೆಯೋ ಹೆಸರು

---

1. x (ಇ). 2. ಬ್ರಾಹ್ಮಾ (ಅ) ಬ್ರಾಹ್ಮ (ಇ). 3. ವc (ಅಇ).
4. ನಾವನನ್ನೈ (ಅಇ). 6. x (ಇ). 7. x (ಇ). 8. ರ್ಗವಮು:ಸುರಾಃ (ಅಇ).
9. ಗವುತಮಿಗೆ (ಇ). 10. ಭಾ (ಅಇ). 11. x (ಇ). 12. ನಿರ್ಗತೆ (ಅಇ).

ತಾ ಸ್ವರ್ನದಿಯೋ ವೈಕುಂಠಪುರನದಿಯೋ ಸುರದೀರ್ಘಿಕೆಯೋ ಭಾಗವತದೀರ್ಘಿಕೆಯೋ ಹರಿಪದೋದ್ಭವೆಯೆಂಬ ಹೆಸರು ಆಕಾಶಗಂಗೆಗಂ ನಿಘಂಟುಗಳೊಳಗೆಲ್ಲುಂಟಿಲವೋ ಶ್ರುತಿಗಳೊಳಗೆಲ್ಲಿಯುಮಿಲ್ಲಂ ಮತ್ತಂ ಭಾಗೀರಥಿ ಗಂಗೆಗೆ ಸೌಧಾಭಿಧಾನಂ 'ಗಂಗಾ[1]ವಿಷ್ಣುಪದೀ[1]ಜಹ್ನುತನಯಾಸುರನಿಮ್ನಗಾ'ಯೆಂದು ಅಮರಸಿಂಹದೊಳುಂಟಾವಡಂ ವಿಧಿತವಲ್ಲಾಯೆಂದಡೇ[2]ನುಮಂ ವಿಷ್ಣುಪದಸಮುದ್ಭವೆಗೆಂ[2]ಬ ಛಂದವೆ ವಿಷ್ಣುಪದಕಿಲ್ಲಾ ಮತ್ತಂ ವಿಷ್ಣುಪದನಾಮುವಾಕಾಶನಾಮ ವಿಷ್ಣುಪದವೆಂಬ ಗಗನಸಂಬಂಧದಿಂದಲುಂ ವಿಷ್ಣುಪದಿಯೆಂಬ ನಾಮುವಾಯಿತಾ ಗಂಗೆಗೆ [3](ವಿಯದ್ವಿಷ್ಣು)[3] ಪದಂನಾದುದೆಂದು ಅಮರಸಿಂಹನಲ್ಲಿ ಗಗನಕ್ಕೆ ವಿಷ್ಣುಪದವೆಂಬುದೇ ಮುಖ್ಯನಾಮುಅದು ಹೇಗೆಂಡಡೆ ಕೃಷ್ಣಂಗೆಯೂ ಮಂಡೂಕಂಗೆಯೂ ಹರಿಶಬ್ದವರ್ತಿಸುತಿರ್ದಡೇಂ ಆ ವಿಷ್ಣುವಿನಲ್ಲಿಯೆ ಹರಿಶಬ್ದಮುಖ್ಯವಾಗಿ [4]ವರ್ತಿಸುವಂತೆ ವಿಷ್ಣುಪದಶಬ್ದವ್ಯೋಮಕ್ಕೆ ವರ್ತಿಸುವುದು[4] ದೇಹವುಳ್ಳವರ ದೇಹಿಗಳೆಂಬಂತೆ ಗೃಹವುಳ್ಳವಳ ಗೃಹಿಣಿಯೆಂಬಂತೆ ವಿಷ್ಣುಪದವುಳ್ಳ ನಭವುಳ್ಳಗಂಗೆಗೆ ವಿಷ್ಣುಪದಿಯೆಂಬನಾಮು ಸಂಬಂಧಿಸಿತಿಂತಿಹುದುವಾದ ವಿಷ್ಣುಪದನಾಮುವ್ಯೋಮಕ್ಕೆಯದು ಮುಖ್ಯನಾಮುವೆಂತಾಯಿತೆಂದಡೆ [5](ವಿಷ್‌ವ್ಯಾಪ್ತೌ)[5] ಎಂಬ ಧಾತುವಿನಿಂಪ ಪರಮಶಿವತತ್ತ್ವಾದಿ ಭೂಮ್ಯಂತದೇಹಾದಿ ಘಟಪಟಾದಿಗಳ [6]ವ್ಯಾಪಕತ್ವವನನುಳ್ಳದಾದಕಾರಣ ವ್ಯೋಮ ವಿಷ್ಣುಪದವೆಂಬುದೇ ಮುಖ್ಯವಾಯಿತ್ತು[6] 'ಮತ್ತಂ 'ಈಶತತ್ತ್ವಾದಿ ಭೂಮ್ಯಂತರ ಶರೀರಾದಿವ್ಯಾಪ್ಯಾದಿ ತಿಷ್ಠಿತಃ ಶಿವಸ್ತಸ್ಮಾದ್ವಿಷ್ಣುರುದಾಹೃತಃ' ಎಂಬುದರಿಂ ಶಿವಂಗೂ ವಿಷ್ಣುಪದವೆಂಬ ನಾಮುವಾಯಿತ್ತು. ಮತ್ತಂ ಕೃಷ್ಣನಿಗಾದೊಡೇಂ ವಿವರಿಸಲು ಗೌಣನಾಮುವದು ಹೇಗೆಂದೊಡಂ ಪಂಚವಿಂಶತಿತನು ಮುರಾರಿಗುಂಟಾಗಿ ಪಂಚತೀತತ್ತ್ವಮೊಳಗೆವ್ಯಾಪಕವಾ[7]ದುದರಿಂದ ವಿಷ್ಣುನಾಮುವಾಗಿತ್ತು ಮತ್ತಂ ವನ[7]ಜಲೋಚನನಂಗಂ ಪಕ್ಷಿಗಮನತ್ವಮುಂಟಾದುದರಿಂದಲುಂ ವಿಷ್ಣುವೆಂಬುದೇ ಮುಖ್ಯನಾಮುವಾದಕಾರಣ ವಿಷ್ಣುಪದವಂಬರಂ ವಿಷ್ಣುಪದಿಯೆಂಬುದೆ ಗಂಗೆಯು[8]ಪ (ರಿಂ)[8] ವಿಷ್ಣುಪದೋದ್ಭೂತೆ[9]ಯೆಂ(ದುಂ)[9] ಗಂಗೆಗೆ ಪೆಸರಿಲ್ಲಾ ಹರಿಪದೋದ್ಭೂತೆಯೆಂಬ ಪೆಸರಾ ಭಾಗೀರಥಿಗಿಲ್ಲಂ ಮತ್ತಂ ಗಂಗೋದ[10]ಯಾವಸಾನದೊಳು ಶಿವನ ನೇತ್ರಂಗಳಿಂದಾದ ನದೀ ವಶ[10]ಕಂಗಳೊಳಗೊಂದು ನದಿಯಂ [11]ಸುರಪಂ[11]ನಾಕಕಂ ಕೊಂಡೊಯ್ದಂ ಆ ವಿಯದ್ಗಂಗೆಯಂ ಕರುಣಿಸೆನೆ ಗಂಗಾಂಕನ ಜಟಾಮುಕುಟದ ಭಸಿತಾಕಲಿತವಾದ ಗಂಗೆಯಂ ಕರುಣಿಸಿ ಭಗೀರಥನು ಭೂಲೋಕಕ್ಕೆ ತಂದನು ಮತ್ತಂ ಗಂಗಾಶ[12]ಬ್ದವೆಂತೆಂದೊಡಂ ಶಿವನ ನೇತ್ರದಲುದಯಿಸಿ[12]ದುದರಿಂ ಗಂಗೆಯೆಂಬುದಾಯಿತ್ತು 'ಗೋಃಶಬ್ದಶ್ಚಕ್ಷುರುಚ್ಯತೇ'

---

1. ವಿಷ್ಣುದ್ವಿೀ (ಅಇ). 2. x (ಇ). 3. ಬಿಂತುದ್ವಿಷ್ಣು (ಅಇ). 4. x (ಇ). 5. ವಿಶವ್ಯಾಪ್ತ (ಅಇ). 6. x (ಇ). 7. x (ಇ). 8. ದಂ (ಅಇ). 9. ಯೆಂ (ಅಇ). 10. x (ಇ). 11. ಸುರಪ (ಅಇ). 12. x (ಇ).

ಯೆಂದುಂಟಾದುದರಿಂ [1]'ಅಸೌಗೋಭ್ಯಾಂಗತಿತಾ'[1] ಗಂಗಾಯೆಂಬುದರಿಂ ಗಂಗೆಯೆಂಬ ಪೆಸರು ಪ್ರಸಿದ್ಧವಾಯಿತ್ತು ೫೮

ಕಂ. ಈಶನೋಲಗದೊಳೀಶ್ವರಿ
[2]ಈಶನ[2] ಕಣ್ಗಳನು ಮುಚ್ಚಿ ಕೈತೆಗೆದಾಕ್ಷಣ
ಈಶಾಕ್ಷಿಯೊಸರ್ದ ಜಲಮಂ
ಈಶ್ವರಿಯಂಗುಲಿಯುಲಿರ್ದುದಿರ್ದ ಪನಿಗಳ್ ೫೯

ಅಂಗುಲಿದಶಕಂಗಳೊಳು
ತ್ತುಂ[3]ಗದಿ ಜನಿಸಿರ್ದ ನದಿ ದಶ[3]ದೊಳ್ಮೂರಂ
ಅಂಗಜಪಿತ ವಿಧಿ ಸುರಪ-
ರ್ಪಿಂಗದೆ ಕೊಂಡೊಯ್ಯಲೇಳು ಧರೆಗಿಳಿದಿರ್ದವು ೬೦

ಭೂವ್ಯಾಕಾಶಂಗಳೊಳಂ
ಕಾವ್ಯಾಂತರವಾಗಿ ತುಂಬಿ ಪೊರಳುತ್ತುರುಳು-
ತ್ತೊವಿಸ್ಮಂಗಂ ಘುಳುಘುಳಿಸು-
ತ್ತೊವಿಸ್ಮಂದಂ ಇರ್ದುದಾಗ ಪ್ರಳಯೋದಕದೊಲ್ ೬೧

ವ|| ಇಂತು ಹೆಚ್ಚುತುಂ ಹತ್ತುತಂ ಹಬ್ಬುತ್ತಂ ಸುಳಿವುತ್ತಂ ಸೂಸುತ್ತಂ ನಲಿವುತ್ತಂ [4]ಬುದ್ಬುದಂಗಳು[4]ದ್ಭವಿಸುತ್ತಂ ದಿಕ್ತಟ ಜಗತ್ತಟ ವಿಯತ್ತಟ ಚರಾಚರ ನಿವಹಂಗಳಂ ಉದಕದೊಳು ಖೇಚರ ಭೂಚರನಿಚಯುವಂ ತೇಂಕಾಡಿಸುತ್ತುಂ ಬಹ ಉರವಣೆಯುಂ ಅಜಹರಿಗಳ್ಕಂಡು ಭಯಂಗೊಂಡು ಪ್ರಳಯೋದಕವೆಂದು ಶಂಕರಂಗೆ ದೈನ್ಯದಿಂಕಾಯಯಮ್ಮಾ ಎಂದು [5]ಪಲ್ಗಿರಿಯೆ[5] ತೃಣಾಗ್ರಬಿಂದೂಪಮಾನವಾಗಿ ಜಟಾಗ್ರದೊಳ್‌ಧರಿಸಿ ಭಯಮಂ ಬಿಡಿಸಿದಂ [6]ಕೆಲಕಾಲದ[6] ಮೇಲೆ ಭುವನ ಪಾವನಮಾಗಲ್ವೇಳ್ಕೆಂದು ಒಂದು ಬಿಂದೋಪಮಾನವಾಗಿ ಗಂಗೆಯಂ ಕೊಡಿಯೆಂದು ಹರಿಸುರಾದಿಗಳ್ ಬಿನ್ನವಿಸೆ ಅವರ್ಗಂ ಕರುಣಮಾಗಿ ಹರಂ ಮೇರು ಶಿಖರಾಗ್ರದೊಳೊಂದು ಬಿಂದುವಂ ಬಿದಿರ್ಚಿವರೆ ಯದುಂ ನಾಲ್ಕುಭಾಗವಾಗಿ ಪರಿವಹವಾಗಿಳಿದು ಪೂರ್ವಾಬ್ಧಿಯಂ ಸೀತೆಯೆಂಬ ನದಿಕೂಡಿತ್ತು. ಮತ್ತೊಂದು ಪರಾಸೆಯಿಂ [7]ದಿಳಿದುಂ ಪರಿ[7]ವಹವಾಗಿ ನಂದಿನಿಯೆಂಬ ನದಿಯಪರಾಬ್ಧಿಯಂ ಮಾಡಿತ್ತು ರುದ್ರಸೋಮೆಯೆಂಬುದೊಂದುತ್ತರಾಬ್ಧಿಯಂ ಕೂಡಿತ್ತು. ಸುವಕ್ಷೆಯೆಂಬ ನದಿ ದಕ್ಷಿಣಾಬ್ಧಿಯಂ ಕೂಡಿತ್ತು ಇದೀಗ

1. ಅಸೌಗೋಭಾಗತೀತಾ (ಅಇ). 2. ಈಶನು (ಅಇ). 3 x (ಇ). 4. x (ಇ).
5. ಪಲ್ಗಿರಿದು (ಅಇ). 6. x (ಇ). 7. x (ಇ).

ಗಂಗೋತ್ಪತ್ತಿ ಹರಿಯ ಕಾಲಲುದಯಿಸಿತ್ತೆಂಬ ಮಾತೆಲ್ಲಿಯದಿನ್ನುಂ ನಿನ್ನ ಮತವಂ ಕೇಳೆಲವೊ ಅಂಗೀರಸ ಶಾಂಡಿಲ್ಯರು ಕೆಟ್ಟುದನರಿಯಾ ಎಲವೊ ೬೨

ಚಂ. ವೃ.

ಶ್ರುತಿಮತ ಬಾಹ್ಯವಪ್ಪ ತವತಂತ್ರದ ಯುಕ್ತಿ ಕುಯುಕ್ತಿ ಕೇಳು ನೀಂ
ವಿತತಮ ಜಾತಿಭೇದ ಶಿವನಿಂದೆಯ ಮಾಳ್ಪುದು ಲಜ್ಜೆ ವರ್ಜಿತಂ
ಸತತ ಜಪಂ ತಪಂ ರಹಿತಮಾರ್ಗಕಲತ್ರಸಮಾನವರ್ತನಂ
ಅತುಳಮದಾದ ದುರ್ಗುಣಮನುಳ್ಳುದುಮೆಂದನು ಸಿದ್ಧನಾತನೊಳ್ ೬೩

ಕಂ. ನಿನ್ನಯ ಮತಕಂ ಸಂತತ
ನನ್ನಿಯೊಳುಂ ದೈವವಾಗಿಯಿರ್ಪನಲಾ ಹರಿ
ಮುನ್ನ ಭ[1]ವಭ[1]ವದಿ ಬಂದುದ
ನಿನ್ನೇನುಸುರುವೆನುಮುವನ ಸಂಕಟದಿರವಂ ೬೪

ಅವತಾರವತಾರದೊಳಂ
ಭವಹರನಂ ಭಜಿಸಿ ಮುಕ್ತಿಯೈದುತ್ತಿಪ್ಪಂ
ಅವನಂ ಕೇಳ್ವಿಧಿ ಜಠರದಿ
ಜವದಿಂ ಜನಿಸಿಯಧೋಕ್ಷಜನಾಗಿರುತಿರ್ದಂ ೬೫

ವ ॥ ಇಂದ್ರಾನುಜಾಭಿಧಾನದಿಂವದಿತಿಯ ಗರ್ಭದೊಳ್ ಜನಿಸಿವಂ ಬಾದರಾಯಣ ನಾಮದಿಂ ಶಬರಿಯ ಜಠರದೊಳ್ [2]ಜನಿಸಿವಂ ಕೃಷ್ಣಾಭಿಧಾನದಿಂದೆ ದೇವಕೀ ಜಠರದೊಳ್[2] ಪುಟ್ಟಿ ಪಾಂಡವರ್ಗೂ [3]ಳಿಗ[3]ವಂ ಮಾಡಿದಂ ಅತ್ರಿಮುನಿಗಂ ಪುಟ್ಟಿ ದತ್ತಾ[4](ತ್ರೇ)[4]ಯ ನಾಗಿರ್ದುಂ ಮೇಷರೂಪಿಂ ಪರಮೇಶ್ವರಂಗೆ ವಾಹನವಾಗಿ ಸಾಂಬನೆಂಬ ಕುವರನ ಪಡೆದಂ ಬೆರಳಕೊನೆಯೊಳ್ ಹರಿರೂಪಂ ತೋರೆ ದಧೀಚಿಯಿಂದೊದಯಿಸಿಕೊಂಡುದನರಿಯಿರೆ ಶ್ರೀವತ್ಸನೆಂಬ ಹೆಸರಂ ಪಡೆದಂ ದಧೀಚಿಮುನಿಯೊಳ್ ಕದನದಿಂಚಕ್ರವಂ ಪೋಗಲಾಡಿಸಿಕೊಂಡು ಸಹಸ್ರಕಮಲದಿಂದೀಶನಂ ಭಜಿಸಿತಾ ಚಕ್ರಮಂ ಪಡೆವಂ ಕೃಷ್ಣ ರುಕ್ಮಿಣಿಯರು ದೂರ್ವಾಸನ ರಥವ ಸ್ವರಂಗಳಾದರುಂ, ಮತ್ತಂ ದೂರ್ವಾಸನ ಪ್ರಸಾದ[5]ದಿಂ[5] ವಜ್ರಾಂಗನಾದಂ ವ್ಯಾಧಬಾಣೋಪಹತಿಯಿಂ ಮರಣಮನೆಯ್ದಿದಂ, ಮುಸಲದೆಸೆಯಿಂ ಕುಲಕ್ಷಯಮಾಯಿತ್ತಾ ಕೃಷ್ಣಂಗಂ ಬಾಲಿ ರಾವಣರಂ ಕೊಂದುದರಿಂದಂ ವಳಿಯದೊಳು ರಾಮೇಶ್ವರಲಿಂಗಂಗಳಂ ಪ್ರತಿಷ್ಠಿ

1. x (ಇ). 2. x (ಇ). 3. x (ಇ). 4. ತ್ರ (ಅಇ). 5. x (ಇ).

ಸಿದಂ ಮತ್ತಂ ಮತ್ಸ್ಯಾವತಾರದಲ್ಲಿ ಬಕ ರುದ್ರನಿಂ ಕೊಲ್ಲಿಸಿಕೊಳ್ಳಲ್ಪಟ್ಟ ಕೂರ್ಮಾವತಾರದಲ್ಲಿ ಶಿರಃಚ್ಛೇದನಂ ಮಾಡಿಸಿಕೊಂಡಂ ಮತ್ತಾ ಶಿರಸ್ಸುಂ ಈಶನ ಹಾರಮಧ್ಯದಲ್ಲಿ ಕಟ್ಟಲ್ಪಟ್ಟಿತ್ತುಂ ವರಾಹಾವತಾರದಲ್ಲಿ ಷಣ್ಮುಖಂ ಕೋರದಾಡೆಯಂ ಕಿತ್ತು ಹರನ ಮುಂಗೈಯಲ್ಲಿ ಕಟ್ಟಲ್ಪಟ್ಟಿತ್ತು ನೃಸಿಂಹನ ತೊವಲಂ ಸುಲಿದು ಈಶಂಗೆ ಪೊದಿಸಲ್ಪಟ್ಟಿತ್ತು ಶರಭರುದ್ರನಿಂ ವಿಕ್ರಮನ ಬೆನ್ನೆಲುವು ಶಿವನಿಂದ ಹಿಡಿಯಲ್ಪಟ್ಟಿತ್ತು ದಕ್ಷನ ಯಾಗಶಾಲೆಯಲ್ಲಿ ಮೃಗರೂಪಿನಿಂದೋಡುತ್ತಿರಲು ಶಿರಸ್ಸಂ ವೀರೇಶ್ವರನೆಚ್ಚನಲಾ ವಿಷ್ವಕ್ಸೇನನ ವಿಗ್ರಹವಂ ಹರಂ ತ್ರಿಶೂಲದಿಂದಿರಿದು ನೆಗಹಿದನಲಾ ಹರಂ ಬ್ರಹ್ಮಕಪಾಲವಂ ಪಿಡಿದು ಬರೆ ತನ್ನ ಶಿರಸ್ಸಂ ಒಡೆದು ರಕ್ತಂ ಸುರಿದು ಡೆಂಡಣಿಸಿ ಬಿದ್ದನಲಾ ಹರಿ ಉರಿಲಿಂಗೋದ್ಭವದಲ್ಲಿ ವರಾಹನಾಗಿ ನಾಗಲೋಕಕ್ಕಿಳಿದನಲಾ ವರ್ಷವರ್ಷಕ್ಕಂ ತನ್ನ ಮಗನಂ ಕೊಲ್ವುದ ಮಾಣಿಸಲಾರನಲಾ ತಾನೇ ಗತಿಯೆಂದೆತ್ತಿದ ವ್ಯಾಸಹಸ್ತಮಂ ಕಿತ್ತಡೆ ತರಿಸಿಕೊಡಲಾರದಾದನಲಾ ಕಾಶಿಯಲ್ಲಿ ವಿಶ್ವೇಶ್ವರನಂ ಭಜಿಸಿದನಲಾ ಇಂದ್ರನೀಲಲಿಂಗವಂ ಆವಾಗಂ ಭಜಿಸಿಪನಲಾ ಮತ್ತಂ ದೇವಕಿಗಂ ಪುಟ್ಟಿದಾಗ ಶಂಖುಕರ್ಣನಿಂ ತಲೆಯ ತರಿಸಿಕೊಂಡುಂ ಮುಂಜಕೇಶಿಯೆಂಬ ಪೆಸರ್ವಡೆದನಲಾ ಮತ್ತಾತನಿಂ ಕೊಲಿಸಿಕೊಂಡು ಮೈಯೂದಿದುದರಿಂ ದಾಮೋದರನೆಂಬ ಪೆಸರ್ವಡೆದಂ ಇಂತನೇಕಮುಂಟು ವಿಷ್ಣುಭಂಗಂಬಟ್ಟುದನದನಾನೇನೆಂದು ಪೇಳ್ವೆಂ ಆವಾಗಂ ನುಡಿವುದಕ್ಕೆಮಗಿದು ಪಂಚಾಕ್ಷರಿಯೇ ಶ್ರೀರುದ್ರಜಪವೆಂದು ಸಿದ್ಧಲಿಂಗೇಶ್ವರಂ ನುಡಿಯಲಾ ವೈಷ್ಣವಂ ಕ್ರೋಧವಂ ಮಾಡುತ್ತಂ ಜರೆವುತ್ತಂ ಈ ಜಂಗಮವಿದ್ದಡೆ ನಮ್ಮ ಸಮಯವಿಲ್ಲೆಂದು ಮನದೊಳ್ ನೆನೆದುಂ ೬೬

ಚಂ. ವೃ.

ಕೊಲುವೆನುಮೆಂದು ಬೇಡಿದುದನಿತ್ತವು ಸಾಕಿದ ಭೂತವನ್ನು ತಾಂ
ಕುಲಷಿತನಾಗುತೊತ್ತಿಗೆಂಪದಂ ಕರೆದೊಯ್ಯನೆ ಬೇಡಿಕೊಂಬುತಂ
ಬಲು ಪರದೇಶಿಯಿರ್ಪೆಡೆಗೆ[1](ಯ್ದೈದುತೆ)[1] ಜಂಗಮನನ್ನು ಕೊಂದಡಂ
ಬಲಿಗಳನೀವೆ ಸಾಕುವೆನು ಬೇಡಿತ[2](ನೀವೆನು)[2]ಮೆಂದು ವೈಷ್ಣವಂ ೬೭

ಹರಿಯುಸು ಝುಂಕಿಸು[3] ತ್ರಿಹುನ ಕೊಂದಡೆ ಮನ್ನಿಪೆ ನಿನ್ನನೆಂಬು[3]ತಂ
ಉರುತರ ಭೂತವಂ ಕಳುಹಲೆಯ್ದಿತು ರಾತ್ರೆಯೊಳದ್ಭುತಂಗಳಂ
ಮೊರೆವುತಲುಬ್ಬಿ ಕೊಬ್ಬುತ ಭಯಂಕರದೋರುತ ಚೀರುತಾಲುತಂ
ಹರನ ವಿಲಾಸಗೇಹದೊಳು ಪೊಕ್ಕು ಯತೀಶನ ನೋಡುತಿರ್ದುದುಂ ೬೮

1. ಗೆಯ್ದುಯುಂ (ಅಇ). 2. ನಿತ್ತೆವು (ಅಇ). 3. x (ಇ).

ವ|| ಆ ರಾತ್ರಿಯೊಳ್ ಶಿವಧ್ಯಾನಪರವಶನಾಗಿರ್ಪ ಸಿದ್ಧಲಿಂಗೇಶ್ವರನಂ ಕಂಡು

ಚ. ವೃ.

ನೊರದಗಲಕ್ಕೆ ಬಾಯ್ಬಿಡುತ[1] (ತಾಂ ನ)[1]ಯನಂಗಳ ಮೇಳಿಸುತ್ತಲುಂ
ಕಿರುಕಿರುಗುಟ್ಟಿ[2]ತಂ ಬಲು[2]ಹಿನಿಂದ ಕವಾಟವ ತಾಟಿಸುತ್ತಲುಂ
ಎರಗೆರಗೊತ್ತಿ ಬಂದು ದನಿದೋರುತ ಹೂಂಕರಿಸುತ್ತ[3](ಲೆತ್ತಲುಂ)[3]
ಬಿರುಬಿರನೊತ್ತಿ ಹೆಜ್ಜೆಯಿಡುತಂ ಇಡುತಂ ಕರೆವುತ್ತಲಿರ್ದುದುಂ ೬೯

ಕಂ. ಪರವಶ ತಿಳಿದೆಚ್ಚತ್ತುಂ
ಹರಿದಾಡುವ ಭೂತವನ್ನು ಕಾಣುತ ತನ್ನೊಳ್
ಹರಿದಾಸಕೃತಕವೆಂದೆಂ
ದುರತರದಿಂ ನೋಡುತಿರ್ದ [4](ಬೇ)[4]ತಳನಿರವಂ ೭೦

ಶಿವಸಿದ್ಧರಾಮ ತನ್ನಯ
ಭವಹರಗೇಹವನು ಬಳಸಿ ಬರ್ಪಾ ರಾತ್ರಿಯೊ
ಳ್ಕವಿದೆರಗಿದ ಹೆಮ್ಮಾರಿ[5]ಯೊ[5]
ಅವನಿಪ ಸೌಂದರನ ತಿಂದ ಮಾರಿಯಯಿರವೋ ೭೧

ಕೋವುರ ಬೊಮ್ಮಯನಿರ್ಪಾ
ಚಾವಡಿ ಮುಂಗಡೆಯ ನಿಂದು ಕುಟ್ಟು[6]ವ(ಅ)[6]ಡಕೆಯ
ಓವಿ ಬೇಡಲ್ಕೆ ಬಂದಿಹ
ದಾವಿಡಹೆಮ್ಮಾರಿಯಿರವೊಯೆಂಬೊಲ್ತೋರ್ಕುಂ ೭೨

ವಿಕ್ರಮ ಪಿಡಿಯಲ್ಬರ್ಪಾ
ಸತ್ಕ್ರಮವಂ ಕಂಡು ಭೀತಿರಸವಂ ತೋರ್ಪ ಪ
ರಾಕ್ರಮಿ[7](ಯಾ) ವೇ[7]ತಾಳನ ಉ
ತ್ಕ್ರಮಭೀತಿಯನು ತೋರುತಿರ್ದುದು ಭೂತಂ ೭೩

ಕೆದರ್ದಲೆ ಬಿದಿರ್ವೊರಗೆಯ್ಯಿಂ
ಕದಿಗ್ರಾಲ್ [8](ಪೊದರ್ವೈರ್ಗೂದಲ್ ಬಗ)[8] ವೊರ್ಗದಿಂ ಕೆಂ-
ಗದಿರ್ಗಣ್ ಬೀಳ್ವಾಯ್ ದೌಂಷ್ಟ್ರಗ
ಳದಿರುತಿರೆ ಬಿದಿ[9]ರ್ದು[9] ಕರಮುನೆರ್ದೆಯೊಳು ಭೂತಂ ೭೪

1. ತನ್ನ (ಅಇ). 2. x (ಇ). 3. ಲುಂ (ಅಇ). 4. ವೇ (ಅಇ). 5. x (ಇ). 6. ವ (ಅಇ). 7. ಯಾವ್ವೇ (ಅಇ). 8. ಲ್ಪೊದರ್ವೈರ್ಗೂದಬ್ಬಗ (ಅಇ). 9. ರ್ದುದು (ಅಇ).

ಕೆಂಡಗಳಂ ಕಾರುತ್ತಂ
ಕಂಡಂಗಳ ತಂದು ತಂದು ಪಸರಿಸಿ ಕರಿದಾ
ಮುಂಡೆಗಳಂ ಹರವುತ್ತಂ
ಮುಂಡಗಳಂ ಪೊತ್ತುಕೊಂಡು ರಿಂಗಣಗುಣಿದುದು ೭೫

ಮ. ವಿ. ವೃ.
ಭರದಿಂ ಧೂಳುವ ಚೆಲ್ಲುತುಂ ಮೊರೆವುತುಂ ತಾಂ ಬಿಕ್ಕುತುಂ ಬೀಗುತುಂ
ಉರಗಾ[1]ನೀಕ[1]ದೊಲಾರ್ಭಟಂಗೆಯ್ವು ಮತ್ತೇಭೇಂದ್ರದೋಲೊತ್ತಿ ಹೂಂ
ಕರಿಸುತ್ತಂ ಜಿರಟುತ್ತೆ ತೀಶ್ವರನಿಹ ಗೇಹಸ್ತಂಭವಂ ಕೀಳುತುಂ
ವರಕಾಗಾಲದ ಮಿಂಚಿನಂತೆ ಮಿನು[2](ಗುತ್ತಂ ಏ)[2]ಡಿಸುತ್ತಿರ್ದುದುಂ ೭೬

ವ॥ ಮತ್ತಮಾ ಭೂತಂ ಬೆದಬೆದರಿಸುತ್ತಂ ಗೃಹಮಂ ಮೆಟ್ಟಿ ಜಗ್ಗಿಸುತ್ತಂ ಪೆರ್ಮುಳಿಯಂತೆ ಮೊರೆವುತಂ ಸಿಡಿಲಂತೆರಗುತ್ತಂ ಮೇಘನಾದದಂತೆ ದನಿದೋರುತ್ತಂ ಪೊಗೆಯಂತೆ ಕವಿವುತ್ತಂ ಅಗ್ನಿ[3]ಯಂತೆ ಉರಿ[3]ವುತ್ತಂ ನರನಂತೆ ಮಾತಾಡಿಸುತ್ತಂ ವ್ಯಾಘ್ರನಂತೆ ಆರ್ಭಟಿಸುತ್ತಂ ಅಳಕಾಶ್ವನಂತೆ ಕೆಕ್ಕರಿಸಿ ಹಸುಮಿಸುತಂ ಭಲ್ಲೂಕನಂತೆ ಕೆಲೆವುತ್ತಂ ವೇತಾಳನಂತೆ ಕಥೆವೇಳುತಂ ತಲೆಕೆಳಗಾಗಿ ನಡೆವುತ್ತಂ ಪರಮೇಶ್ವರಂ ಸಿದ್ಧರಾಮೇಶ್ವರನಂ ಅಂಧಕಾರಲೋಕಕಂ ಕೊಂಡೊಯ್ವು ಭೀತಿದೋರಿಸಿದಂತೆ ತೋರಿಸುತ್ತಿರೆ ಸಿದ್ಧಲಿಂಗೇಶ್ವರಂ ನಿಶ್ಶಂಕನಾಗಿರೆ ಆ ಭೂತಮನೋಡಿಸವೇಳ್ಕೆಂದಾ ದೇವಾಲ್ಯದ ಲಿಂಗಂ ಗರ್ಭಗೃಹದ ಜವಳಿಗಪಗಳಂ ದಣಾರವಮುಸೆಯೆ ತೆಗೆದು ರಂಗಮಂಟಪಕ್ಕೆ ಬರ್ಪಲ್ಲಿ ಪಾದದಲ್ಲಿ ಕಟ್ಟಿದ ಚಿನ್ನದ ಕಿರುಗೆಜ್ಜೆಗಳ ಸರಂ ಮಿನುಗುತಿರೆ ಸಣ್ಣದೂವಟದ ಸುವರ್ಣಚಿತ್ರದ ಸೂಕ್ಷ್ಮಬಹಿರ್ವಾಸದ ಕಾಂತಿ ಪೊಂಬಿಸಿಲಂ ಕೀಳ್ಪಡಿಸುತ್ತಿರೆ ದಂತಪಂತಿಗಳ ಧವಳಿಮದ ಕಾಂತಿ ಚಂದ್ರಜ್ಯೋತ್ಸ್ನೆಯಂ ಪಳಿವಂತಿರೆ ಕರಕಮಲದಿಂ ಪಿಡಿದ ಸೂಕ್ಷ್ಮನಾಗವೇತ್ರದ ಚೆಲ್ವು ಕಮನೀಯಮುಂ ಬೀರುತ್ತಿರೆ ಮಾಸ್ತಕಾಗ್ರದ ಸೂಕ್ಷ್ಮಾಗ್ರದ ಸೂಕ್ಷ್ಮರತ್ನಕಿರೀಟಂ ಸಿಂಗರಂಬೆತ್ತಿರೆ ಕೊರಳಲ್ಲಿ ಶಿವಲಿಂಗದೇವರ ಸೆಜ್ಜೆ ರಂಜಿಸುತ್ತಿರೆ ಪಂಚಾಬ್ದದ ಬಾಲ್ಯಯೌವನದ ಜಂಗಮಶಿಶುವೇಷಂದಾಳ್ದು ಬಂದು ನಸುಗೋಪದಿಂ ಹೂಂಕರಿಸಲಾ ಭೂತಂ ಕಂಗೆಟ್ಟೋಡಿ ಮುಂದಿರ್ದ ಕೊಳದೊಳ್ಬಿರ್ದು ಭಯಂಗೊಂಡೆರ್ದು ದಡವಡಿಸುತ್ತೋಡಿ ತನ್ನೊಡೆಯಂಗೀ ಹದನಂ ಪೇಳ್ವುದುಂ ಇತ್ತಲೀ ಜಂಗಮಶಿಶು ಸಿದ್ಧಲಿಂಗೇಶ್ವರನಂ ಸಂತೈಸಿ ಆಲಿಂಗಿಸಿ ಎಂದಿನಂತೆ ಲಿಂಗಾಕಾರನಾಗಿರ್ದನಾ ಸಮಯದೊಳ್ ವೃಷಭಂ ಬಂದು ಅಡ್ಡಬಿದ್ದುಂ ಸಿದ್ಧಲಿಂಗೇಶ್ವರನ ಪಾದಾಬ್ಜಮಂ ತನ್ನ ಉರಶಿರನಯನಂಗಳಿಗೊತ್ತಿಕೊಂಡುಂ ನಿಮ್ಮ ಕೊಲ

1. x (ಇ). 2. ತಂಯೋ (ಅಇ). 3. x (ಇ).

ಲೆಂದು ಭೂತವಂ ಕಳುಹಿದ ಪಾತಕ ನಾನುಂ ಎನ್ನ ಗುಣಾವಗುಣವಂ ನೋಡದೆ ರಕ್ಷಿಸಯ್ಯಾ ಎಂದು ದೈನ್ಯದಿಂ ಪಲ್ಗಿರಿಯೆ ಆ ವೈಷ್ಣವಂಗಂ ಅಂಜಬೇಡವೆಂದಭಯುವಂ ಕೊಟ್ಟು ಕೃತಾರ್ಥನಂ ಮಾಡುತ್ತಿರೆ ಈಶನಿಂ ಬೇತಾಳನನೋಡಿಸಿದ ಮಹಿಮನೆಂದುಂ ಎಲ್ಲಾ ಕೊಂಡಾಡುತ್ತಿರೆ ಅಲ್ಲಿಂ ತೆರಳ್ದು ಕೀಳುಕೊಂಕಣಮಂ ಪೊಕ್ಕು ಶಿವಪೂಜೆಗೊಂಬುತ್ತಂ ಮತ್ತಂ ಸೂಚಿಕಾಯಕ ವೀರಣ್ಣಯ್ಯ ಕೈಲಾಸಕ್ಕೆ ಪೋದ ಠಾವಿನ ದೊಪ್ಪೇಶ್ವರ ಗ್ರಾಮಮಂ ಪೊಕ್ಕು ನೀಲಕಂಠೇಶ್ವರಂಗಂ ದರ್ಶನವವಿತ್ತು ಅಲ್ಲಿಂದ ತೆರಳ್ದು ಒಂದು ವೃಕ್ಷದಡಿಯಲ್ಲಿ ಕುಳಿತುಂ ಶಿವಧ್ಯಾನ ಪರಾಯಣನಾಗಿರ್ದುಇರ್ಪಲ್ಲಿ - ೭೭

ಚಂ. ವೃ.

ಕೊರಳೊಳಗಿರ್ಪ ಸಿಂಗಿ ಸೊರೆಗರ್ಪರ ಶಂಖದ ಕರ್ಣಕುಂಡಲಂ
ಕರದೊಳಗಾವಗಿರ್ಪ ಘನಮತ್ಸ್ಯದ ಪೃಷ್ಠದ ಅಸ್ತಿ[1]ಯಿಂ (ದಲುಂ)[1]
ಉರುತರ ಚಕ್ರ ಕಂಥೆಯ ವಿಲಾಸದ ಜೋಗಿಗಳೊತ್ತಿಗೈದಿಯುಂ
ಮರದಡಿಯಲ್ಲಿ ಕುಳ್ಳಿರುತಲಾಡಿವರಾಗಳೆ ಸಿದ್ಧನೊತ್ತಿನೊಳ್ ೭೮

ಉರುತರ ಭೈರವೇಶ್ವರನ ಲಾಂಛನಕಂ ಮಿಗಿಲಾದ ಲಾಂಛನಂ
ಧರೆಯೊಳಗಿಲ್ಲ ಮಿಕ್ಕವರ ಲಾಂಛನವೆಂ[2]ಬ (ವ)[2]ಕೆಲ್ಲ ಭೈರವಂ
ಪರಿವೃಢನೆಂದು ಜೋಗಿಗಳು ತಮ್ಮೊಳು ತಾ[3]ವು (ವಚೋ)[3] ವಿಲಾಸದಿಂ
ಪರಿಣಮಿಸುತ್ತಲಿರ್ಪರಿಗೆಯೆಂದನು ಸತ್ಯವ ಸಿದ್ಧಸಿದ್ಧನುಂ ೭೯

ಉ. ವೃ.

ಕೇಳಿಲೊ ಭೈರವಾದಿಗಳುಮೀಶನ ಬಾಗಿಲ ಕಾಯ್ದುಕೊಂಡಿಹರ್
ಬಾಳವಿಲೋಚನಂಗೆ ಸುತರಪ್ಪುರವರ್ಗೆಯುಳರ್ಕವಾಹನಂ
ಕಾಳಗದೊಳ್ ವಿರೇಶಪವದಿಂದೊದೆಯಲ್ಕಡು ಡೊಂಕಿ ತೋರ್ಪುದುಂ
ಮೇಳದಿ ಪೇಳ್ವ ಭೈರವಪುರಾಣವಲಾ ನಿಮಗೆಂದ ಸಿದ್ಧನುಂ ೮೦

ವ॥ ಮತ್ತಂ ಕೇಳಿಲವೊ ನಿಮ್ಮ ಸಿದ್ಧರೊಳುಂ ವ್ಯಾಳಿಯೆಂಬವಂ ಉರಿಯೊಳಳಿದಂ ರತ್ನಘೋಷಂ ಕೆಸರೊಳಳಿದಂ ನಾಗಾರ್ಜುನಂ ವಿಷ್ಣುವಿಂದಳಿದಂ ಕೋರಾಂಟಸಿದ್ಧಂ ಕೆರೆಯೊಳಳಿದಂ ಸಾರಂಗಸಿದ್ಧಂ ಕೈಕಾಲ್ಮೋಟಾದಂ ಗೋರಕ್ಷಸಿದ್ಧಂ ರೇವಣನಿಂ ಭಂಗವಟ್ಟಂ ಖರ್ಪರ[4]ಸಿದ್ಧಂ[4] ಸಿದ್ಧರಾಮೇಶ್ವರನಿಂ ಸೊನ್ನಲಾಪುರದೊಳ್ ಭಂಗವಟ್ಟಂ ಕಾಪಾರ್ಯಸಿದ್ಧಂ ಮಾಸನೂರಿನ ಮಡುವಿನ ಕಠಾರಮಂ ತೆಗೆದುಂ ಬಿಜ್ಜಳಂಗೀಯಲಾರದಾದಂ ಚಪ್ಪುಟಿಸಿದ್ಧಂ ಭೋಜನಿಂ ರಾಜಲಜ್ಜಿತನಾದಂ ಮತ್ತಂ

1. ಯಿಂ (ಅಇ). 2. ಬ (ಅಇ). 3. ವುಸಾವೋಜೋ (ಅಇ). 4. x (ಇ).

ಕೇಳಿಲವೊ ರಸವಾ[1]ದದಿಂ[1]ದಕ್ಷಯಘುಟಿಕೆಯುಂ ಮಾಳ್ಪೆನೆಂಬ ವಜ್ರಪಂಜರ ಸಿದ್ಧಂ
ಪದ್ಮಾವತಿಯೆಂಬ ವೇಶ್ಯಾಂಗನೆಗೆ ಸಿಕ್ಕಿದಂ ತನುವಂ ಸುವರ್ಣಛಾಯೆಯುಮಂ ಪಡೆಮಂ
ನೆನೆದಾಗ ಪೊಂಗಳನುಗುಳ್ವ ಸಾಮಗಾನಸಿದ್ಧನುಂ ಪರುಷವೇದಿಯ ಬಲ್ಲಜ್ಜಾರಿಕಾ
ಸಿದ್ಧನುಂ ಧೂಮ್ರವೇದಿಯ ಬಲ್ಲ ನಿತ್ಯನಾಥನುಂ ಧನಾಢ್ಯನೆನಿಪ ಬಲಭದ್ರಸಿದ್ಧನುಂ
ವಿದ್ಯೆಂಗಳಂ ಬಲ್ಲ ಭಂಗಾಳಸಿದ್ಧನುಂ ಶಿವಭಜನೆಯ ಸಿದ್ಧಿಯನರಿಯದೆ ಭವಭಾರಿಗ
ಳಾದರುವೆಂದು ಸಿದ್ಧಲಿಂಗೇಶ್ವರಂ ನುಡಿಯೆ ಜೋಗಿಗಳ್ ಕೋಪಿಸಿ ಗತಿಸ್ತಂಭ
ವಾಚ್ಯಸ್ತಂಭ ದೃಷ್ಟಸ್ತಂಭ ಮೊದಲಾದ ಶೂನ್ಯಮಂತ್ರಂಗಳಂ ಮಂತ್ರಿಸೆ
ಆ ಮಂತ್ರಂಗಳ್ ತಮ್ಮನೆ ತಾಗಿ ಬಾಧೆಮಾಡುತ್ತಿರೆ ಆ ಜೋಗಿಗಳ್ ಬೆದರಿ ಭಯಂ
ಗೊಂಡು ಪ್ರತ್ಯಕ್ಷಪರಮೇಶ್ವರನೆಂದು ಕೊಂಡಾಡಿ ನಮಸ್ಕಾರಂಗೆಯ್ದು ರಕ್ಷಿಸೆಮ್ಮೆಲ್ಲರ
ನೆಂದು ದೈನ್ಯದಿಂ ಪಲ್ಗಿರಿದು ಬೇಡಿಕೊಂಬುತ್ತಿರೆ ಅವರ್ಗಂ ಅಂಜಬೇಡೆಂದಭಯಮಂ
ಕೊಟ್ಟು ಅವರ ಬಾಧೆಯಂ ಪರಿಹರಿಸಿ ಆ ಜೋಗಿಗಳ್ವಂದಿಸೆ ಬಿನ್ನಪಂಗೆಯ್ದು ಭಜಿ
ಸುತ್ತಿರೆ ರೇವಣೇಶ್ವರಂಗಂ ಕೊಲ್ಲಾಪುರದ ಸಿದ್ಧರು ಕುಟಿಲ ಮಂತ್ರಂಗಳಂ ಮಂತ್ರಿಸಿ
ದಂತಾಯಿತ್ತೆಂದು ಸರ್ವರುಂ ಕೊಂಡಾಡುತ್ತಿರೆ ಆ ಪೂಜೆಯಂ ಕೈಕೊಂಡುಂ ಅಲ್ಲಿಂ
ತೆರಳ್ದು ಗೋಕರ್ಣದ ಮಾಬಳೇಶ್ವರಂಗಂ ದರ್ಶನವನಿತ್ತುಂ ಸಿದ್ಧೇಶ್ವರ [2]ಸಜ್ಜೇಶ್ವರ[2]
ಗೋಣಕೇಶ್ವರ ಧಾರೇಶ್ವರ ಮೊದಲಾದ ಶಿವಸ್ಥಾನಂಗಳಂ ಪೊಕ್ಕು ಲಿಂಗಂಗಳ್ಗಂ
ದರ್ಶನವನಿತ್ತುಂ ಘಟ್ಟ[3](ಕ)[3]ರಾವಳಿಗಳನಿಳಿದು ಜಿನದೇಶಮಂ ಪೊಕ್ಕುಂ ಕಾರಕಳವಲ್ಲಿ
ಒಬ್ಬ ಶಿವಭಕ್ತನ ಗೃಹದೊಳ್ ಶಿವಾರ್ಚನೆಯುಂ ಮಾಡಿ ಶಿವಪ್ರಸಾದದಿಂ ತೃಪ್ತನಾಗಿ
ಬಂದು ಬಸವೇಶ್ವರನ ನಾಕದೊಳ್ (?) ಮೂರ್ತಿಗೊಂಡು ಶಿವಧ್ಯಾನವಶನಾಗಿರ್ಪಲ್ಲಿ
ಅಲ್ಲಿಗೈತಂದ ಜೈನ ಬೌದ್ಧ ವೈಷ್ಣವಾದಿ ಪರವಾದಿಗಳಂ ವಾದಭೂಮಿಯೊಳ್ ಗೆಲ್ದು
ಶಿವಪಾರಮ್ಯವಂ ಸ್ಥಾಪಿಸಲ್ ಜೈನರ್ಕಳ್ ಸಿದ್ಧಲಿಂಗೇಶ್ವರನ ಮಹಾಮಹಿಮೆಯುಂ
ಕೊಂಡಾಡುತ್ತೆ– ೮೦

ಚಂ. ವೃ.

ಅರುಹನ ಪೂಜ[4](ಕರ್ ಮನದೊಳಚ್ಚರಿಗೊಳ್ಳು[4])ತ ತಮ್ಮೊಳೆಲ್ಲರುಂ
ಪರಮಜಿನೇಂದ್ರ ತಾನೆ ಚರರೂಪಿನೊಳೈದಿದನೆಮ್ಮ ರಕ್ಷಿಸಲ್
ಹರುಷದಿ ಪೇಳ್ವ ಪಾಳ್ಕೆಯನು ಮಾಡುವೆನೆಂಬುತ ಬಂದು ಸಿದ್ಧಗಂ
ತ್ವರಿತದೊಳೊಂದಿಸುತ್ತೆ ಚರಲಿಂಗಕೆ ಬಿನ್ನಹ ಮಾಡುತಿರ್ದರುಂ ೮೧

1. ದಂ (ಇ). 2. x (ಇ). 3. ತು (ಅಇ). 4. ಕಾರಿಗಳು ಪಾಚ್ಚರಿಯೆಂಬು (ಅಇ).

ಕರುಣಿಸು ದೇವ ದೇವ ಜಿನನಲ್ಲದೆ ದೈವಮದಿಲ್ಲವೆಂಬುತಂ
ಪರಿಪರಿಯಿಂದ ಶಂಕರನ ನಿಂದಿಪ ವಾಕ್ಯದ ದುಷ್ಟಶ್ರೇಷ್ಠರಂ
ದುರಿತಸಮುದ್ರಬಾಡಬನೆ ಬುದ್ಧನೆ ನಿಮ್ಮಯ ಪಾದಪೂಜೆಯಂ
ಹರುಷದಿ ಮಾಡಿದಲ್ಲದೊಡೆಯೆಮ್ಮ[1](ಯ ಪಾಪವು ಪೋಗಲಕ್ಕುಮೇ)[1] ೮೨

ಕಂ. ಅದು ಕಾರಣ ನಿಮಗೆ ಬಿನ್ನಹ
ಮುದದಿಂ ಗೈದಲ್ಲದರುಹನೊಲ್ಲನು ಪೂಜೆಯಂ
ಸದುಗುಣಿ ಬೇಗ ಭಸಿತವ
ಹದುಳದಿ ಹಿಡಿದೆಮ್ಮ ರಕ್ಷಿಸೆನುತೆರಗಿರ್ದರ್ ೮೩

ಈವೂರೊಳಗೊಂದು ತಿಂಗ-
ಳ್ನೀವಿರ್ದುಂ ಎಮ್ಮ ಜಿನಗೆ ಹರುಷವ ಮಾಳ್ಪುದು
ನೀವಿದಕೆ ನಿಮಗೆ ಬಿನ್ನಹ
ದೇವನೆ ಕೈಕೊಂಬುದೆಂದು ಭಸಿತವನಿತ್ತರ್ ೮೪

ದೈನ್ಯಂಬಡುತಿಹ ಜೈನರ
ಮನ್ನಿಸುತಂ ಸಿದ್ಧಲಿಂಗನೇಳೇಳೆನುತುಂ
ಉನ್ನ[2](ತದಿ)[2] ಮುಂದೆ ಮುಡಗಿಹ
ಚೆನ್ನಾಗಿಹ ಭಸಿತವಿಡಿದುವೊಪ್ಪಿದೆವೆಂದರ್ ೮೫

ಚಿನ್ನದ ಕಾಯಕದಿಂದಂ
ಪನ್ನಗಧರನಂ ಭಜಿಸುವ ಭಕ್ತನ ಮನೆಯೊಳ್
ಸನ್ನುತದಿ ಸಿದ್ಧಲಿಂಗನ
ಮನ್ನಣೆಯಿಂ ತಂದು ಮೂರ್ತಿಗೊಳಿಸಿದರಾಗಂ ೮೬

ಆ ಭಕ್ತನ ಮನೆಗಂ ಜಿನ
ನಾ ಭಕ್ತರು ತಂದಿತ್ತ ದ್ರವ್ಯಗಳೆಲ್ಲವ
ನಾ ಭಕ್ತಂಗೊಪ್ಪ ಹೇಳಿಯು
ಮಾಭಕ್ತಿಯೊಳ್ಭಜಿಸುತಿರ್ದರಾ ಜೈನರ್ಕಳ್ ೮೭

---

1. ಮ್ಮುವನೊಲ್ಲೆನುಮೆಂದುವುಂ. 2. ತ. (ಅಇ)

ವ॥ ಇಂತೀ ಜೈನರ್ಕಳ ಭಕ್ತಿಯಂ ಬೌದ್ಧವೈಷ್ಣವರುಗಳ ಭಕ್ತಿಯುಮಂ ಕೈಕೊಂಡು ಮಹಾಮಹಿಮ ಸಿದ್ಧಲಿಂಗೇಶ್ವರನಲ್ಲಿಂ ಪೊರಮಟ್ಟು ಮದೇಭಗತಿಯಿಂ ತೆರಳ್ದು ಯೋಗಮಂ ಮಾಳ್ಪುಜ್ಜುಗಕ್ಕಂ ಅಭವನಿವಾಸಮೆನಿಪ್ಪ ಗಾಳಿಪೂಜೆಯೆಂಬ ಭೂಭೃದಮಂ ಪೊಕ್ಕಾ ನಗದೊಳ್ ೮೮

ಕಂ. ಬಲ್ಲಾಳನ ಮಗಳಿರ್ಪಾ
ಉಲ್ಲಾಸದ ಗವಿಯ ನೋಡಿಯಲ್ಲಿಯ ಕೆರೆಯೊಳ್
[2](ಮಲ್ಲೇಶನ)[2] ಪೂಜೆಯನುಂ
ಸಲ್ಲೀಲೆಯೊಳ್ ಮುಗಿವಲ್ಲಿ ದಿವಸಂ ಮುಗಿದುದು ೮೯

ವ॥ ಆ ರಾತ್ರಿಯೊಳ್ ಗವಿಯಲ್ಲಿ ಕುಳಿತಿರ್ಪಲ್ಲಿ–

ಉ. ವೃ.
ಭಾರಿಯ ಕಂಥೆಟೊಪ್ಪಿ ಕರಕಂಕಣ ದಂಡ ವಿಲಾಸಕರ್ಪರಂ
[3](ತೋರುವ ಕೈಯ)[3] ಜೋಳಿಗೆಯೊಳೊಪ್ಪಿ ಸುಜಂಗಮವೇಷವಾಂತು ಗಂ
ಭೀರರವಂಗಳಿಂ ದನಿಗುಡುತ್ತವೆ ಶ್ರೀತ್ಯದಿ ಮಲ್ಲಿಕಾರ್ಜುನಂ
[4](ಸಾರುತು)[4] ಮಿಲ್ಲಿಯೆನ್ನ ಗುಹೆಯೊಳ್ಕುಳಿತಿರ್ಪವರಾರುಮೆಂಬುತಂ ೯೦

ದೀಪವನೆತ್ತಿ ಕಾಣುತ ವಿಲಾಸದಿಯೊಂದೆಸೆಯೊಬ್ಬರೊಬ್ಬರುಂ
ಕರ್ಪರದಿಂದೆ ತಂದೆನಿದೆ ಬೋನವ ನಿಮ್ಮಯ ಲಿಂಗಕೆಂಬುತಂ
ತಾಪಸಸಿದ್ಧಲಿಂಗನನು ಪ್ರಾರ್ಥಿಸಿ ನೀಡಿಯು ಮತ್ತೆ ತಾನುವುಂ
ಪಾಪವಿದೂರಗರ್ಪಿಸಿ ಪ್ರಸಾದದಿ ತೃಪ್ತಿತರಾದರಿರ್ವರುಂ ೯೧

ಉ. ವೃ.
ಭೋಜನ ಮಾಡಿದಂತರದೊಳಂ ಹರನೆಂ[1]ದನು[1] ಬಾಳ ಕಾಲದಿಂ
ರಾಜಿಸುತಿರ್ಪೆನಿಲ್ಲಿ ಫಲಪಲ್ಲವಮೂಲಸುಕಂದ ಜೇನುಗಳ್
ಭೋಜನಮಾಗಿಯೆಂದುವು ಸುಜಂಗಮ ಬಂದುದ ಕಾಣೆನೀಗಲೀಂ
ಮಂಜುಲವೆತ್ತ ಕಾನನದೊಳ್ಬಿದಿದೆಯೊರ್ವನದೇನು ಕಾರಣಂ ೯೨

ಕಂ. ಕಾನನದೊಳ್ ಬರುತಲಿರಲ್
[2](ಭಾನುವದಸ್ತಮಿಸೆ)[2] ಕುಳಿತೆನೀ ಗುಹೆಯೊಳಗಂ
ನೀನಿರ್ಪುದ ನಾನರಿಯೆನ-
ನೂ[3]ನ(ದ)[3] ದರ್ಶನಮನಿತ್ತಿರೆಂದಂ ಸಿದ್ಧಂ ೯೩

---

1. ತ್ರಿಲೋಚನ (ಅಇ). 2. ಸಾರಿದ ಮುಂಗೈ (ಅಇ). 3. ಬಂದನು (ಅಇ).
4. x (ಇ). 5. ಲ್ಬಾನಮಿಸಿದಡೆ (ಅಇ). 6. ನ. (ಅಇ).

ಅಂ[1]ತಾದೊಡಿ[1]ನ್ನುಮಿಲ್ಲಿಂ
ಮುಂತಣ ದೇಶಾಂತರಮದಾವ ಕಡೆಯೆನ್ನಲ್
ನಿಂತಿಹೆನಿಲ್ಲೊಂದೆಡೆಯೊಳ್
ಮುಂತಣ ದೇಶಾಂತರ[2](ವಿಲ್ಲವೆಂದ)[2] ಮುದದಿಂ ೯೪

ಇನ್ನುಂ ದೇಶಾಂತರದೊಳ್
ಪನ್ನಗಧರಭಜನೆಯನ್ನು ಮರ್ತ್ಯರಿಗರಿಪಲ್
ಉನ್ನತ ಷಟ್ಸ್ಥಲದಿರವಂ
ಸನ್ನುತದಿಂ ಪ್ರಕಟಿಸೆಂದು ಚರ ಬಯಲಾದಂ ೯೫

ಅದ ಕಂಡು ಸಿದ್ಧಲಿಂಗಂ
ಪದಪಿಂದೀ ಗಿರಿಯ ಮಲ್ಲಿಕಾರ್ಜುನನಲ್ಲದೆ
[3]ಹೆದರದೆ[3] ಬಂದೀ ವನದೊಳ್
ಮುದದಿಂ ಬೋಳೈಪರಾರುಮೆನುತುಂ ನುಡಿದಂ ೯೬

ವ॥ ಪ್ರಭಾತವಾಗಲೊಡಂ ಶಿವಾರ್ಚನಂಗೆಯ್ದುಮಲ್ಲಿಂ ತೆರಳ್ದು ಕಾವೇರಿಯುದ್ಭವಿಸಿದ ನೀಲಾದ್ರಿಯಂ ಪೊಕ್ಕು ಅಲ್ಲಿರ್ಪ ಲಿಂಗಂಗಳಿಗೆ ದರ್ಶನಮನಿತ್ತುಂ ಸಹದೇವ ಲಕುಳರೊಳಗ್ನಿಪುರುಷಂ ಕಾದಿಪ ಕಾಳಗದ ಭೂಮಿಯಂ ಮೆಟ್ಟಿ ಪವಿತ್ರಂ ಮಾಡಿ ಮಲಯಾಳಕೊಂಗುಪಾಂಡ್ಯವರಾಟದೇಶಂಗಳಂ ಪೊಕ್ಕು ಅಲ್ಲಿರ್ದ ಲಿಂಗಂಗಳ್ಗೆ ದರ್ಶನಮನಿತ್ತು ಸೇತುಬಂಧ ರಾಮೇಶ್ವರಂಗಂ ದರ್ಶನಮನಿತ್ತು ಅಲ್ಲಿಂ ಕುಂಭಕ್ಷೇತ್ರಮಂ ನೋಡಿ ತೀರ್ಥಕೊಳಮಂ ನೋಡಿ ದ್ರಾವಿಡ ದೇಶಮಂ ಪೊಕ್ಕು ಪೊನ್ನಾಂಬಲೇಶಂಗಂ ದರ್ಶನಮನಿತ್ತುಂ ಅಲ್ಲಿಂ ತೆರಳ್ದು ಮಾಮರದಡಿಯ ತಪಂಗೈದ ಪಾರ್ವತಿಗರ್ಧಾಂಗವಿತ್ತ ಕಾಂಚಿಯ ಏಕಾಂಬ್ರನಾಥಂಗಂ ದರ್ಶನಮನಿತ್ತುಂ ಕಾಳಾವತಿಯಂ ಪೊಕ್ಕು ಸರ್ಪವಜ್ರೋರ್ಣಗಾಭವನಿಕೆಯರ್ ಕಣ್ಣಪ್ಪ ಪೂಜಾರಿ ಮುಕ್ಕಣ್ಣ ಚೋಳ ಕುಳಚಂಗಚೋಳ ಮುಂತಾದರ್ಗೊಲಿದ ಕಾಳಹಸ್ತೀಶ್ವರಂಗಂ ದರ್ಶನಮನಿತ್ತುಂ ಮತ್ತಲ್ಲಿಯ ಕೇದಗೆಯ ತೊರೆಯಲ್ಲಿ ಶಿವಾರ್ಚನಂಗೆಯ್ದುಮಲ್ಲಿಂ ತೆರಳ್ದು ಪಟ್ನಪಂ ತ್ಯಾಗನಾಥಂ ತಿರುಪಂಜಕಳನಾಥಂ ತಿರುನೀಲಕಂಠೇಶ್ವರಂ ಸೇವಂತಿನಾಥಂ ಮೊದಲಾದ ಲಿಂಗಗಳ್ಗಂ ತಮ್ಮ ದರ್ಶನಮನಿತ್ತುಂ ವರಾಟದೇಶ ಬುದ್ಧದೇಶಂಗಳಂ ನೋಡುತ್ತಂ ಕಾಶಿದೇಶಮಂ ಪೊಕ್ಕು ವಿಶ್ವನಾಥಂಗಂ ದರ್ಶನಮನಿತ್ತುಂ ಮತ್ತಂ ಸುರಾಭಾಂಡೇಶ್ವರಂ ಬಾಲಾರ್ಕೇಶ್ವರಂ ದಕ್ಷೇಶ್ವರಂ ಬುದ್ಧಕಲ್ಲೇಶ್ವರಂ ಮುಂತಾದ ಲಿಂಗಂಗಳ್ಗಂ ದರ್ಶನಮನಿತ್ತುಂ ಭಾಗೀರಥಿಯಂ ಪೊಕ್ಕು ಪಾವನಂ ಮಾಡಿ ಅಲ್ಲಿಂ ತೆರಳ್ದು ಬೊಟ್ಟು

1. x (ಇ). 2. ಮದಿಲ್ಲವೆಂಪಂ (ಅಇ). 3. x (ಇ).

[1]ಮಹಾಬೊಟ್ಟು[1] ತಿಸಿ ಮಹಾತಿನಿ ದೇಶಂಗಳೊಳ್ ಪೂಜೆಯಂ ಕೊಂಬುತುಂ ಕೇತಾರ ದೇಶಮಂ ಪೊಕ್ಕು ಆ ಲಿಂಗಕ್ಕಂ ದರ್ಶನಮನಿತ್ತುಂ ಪಾಂಡವರ್ಗೊಲಿದ ಪ್ರತಿಕೇತಾರ ದೊಳಿರ್ಪ ಮಹಿಷಾಕಾರಲಿಂಗಕಂ ದರ್ಶನವನಿತ್ತುಂ ದಕ್ಷನ ಯಾಗಶಾಲೆಯೊಳುರಿವಗ್ನಿ ಯಂ ನೋಡಿ ವೀರೇಶ್ವರನ ಬೊಬ್ಬೆಯಬ್ಬರವ ಧ್ವನಿಯನಾಲಿಸಿ ಅಲ್ಲಮಾಪ್ರಭು ದೇವಂ ಶಿವಯೋಗದಿಂ ಮೂರ್ತಿಗೊಂಡಿರ್ದ ಗುಹೆಯಂ ನೋಡಿ ಅಲ್ಲಿಂದ ನೀಲಕಂಠ ನೇಪಾಳಮಂ ಪೊಕ್ಕು ನಾಗಲೋಕದಲ್ಲಿ ಪವಡಿಸಿರ್ಪ ನೀಲಕಂಠೇಶ್ವರಂಗಂ ದರ್ಶನಮ ನಿತ್ತುಂ ಅಲ್ಲಿಂ ಪ್ರಯಾಗಕಂ ಮರಳಿಬಂದುಂ ಆ ಪ್ರಯಾಗೇಶ್ವರಂಗಂ ದರ್ಶನಮನಿತ್ತುಂ ಗಯಾಕ್ಷೇತ್ರಕ್ಕೆ ಬಂದು ರುದ್ರಪಾದವಂ ನೋಡಿ, ತುರುಷ್ಕ ದೇಷಮಂ ಕಳಿದುಂ ಆಂಧ್ರದೇಶಮಂ ಪೊಕ್ಕುಂ ರೇವಣಾಸಿದ್ಧೇಶ್ವರನ ಜನ್ಮಸ್ಥಾನವಾದ ಕೊಲ್ಲಿಪಾಕಿಯ ಸೋಮೇಶ್ವರಲಿಂಗಕಂ ದರ್ಶನಮನಿತ್ತುಂ ಅಲ್ಲಿಂ ತೆರಳ್ದು ಅರ್ಜುನಂ ತಪಮಿರ್ದ ಇಂದ್ರಕೀಲದ ಬೆಜ್ಜವಾಡದ ಮಲ್ಲಿಕಾರ್ಜುನಗಂ ದರ್ಶನಮನಿತ್ತುಂ ಅಮರಾರಾಮ ಮುಂತಾದ ಪಂಚಸ್ಥಾನದ ಲಿಂಗಂಗಳ್ಗಂ ದರ್ಶನಮನಿತ್ತುಂ ಶ್ರೀಶೈಲಕ್ಕಂ ಬರುತ್ತಿರ್ಪಲ್ಲಿ ೯೭

ಉ. ವೃ.

ಸಂಯಮಿರತ್ನ ಸಂಚಯದಿ ಶೃಂಗತರಂಗ[2](ದ) ನಾದ[2]ಕೇಹದಿಂ (?)
ದೊಯ್ಯನೆ ಪೋಪ ಪುಷ್ಪಕಕುಲಂ ತರಣಿವ್ರಜ ದಿಕ್ತಟಂಗಳಿಂ
ಪ್ರೀಯ್ಯದೊಳಿರ್ಪ ದ್ವೀಪಕುಲದಿಂ ವರಮಂಜುಲ ಪಂಕಹೀನ ಪಾ-
ನೀಯದಿಮಿಪ್ಪುದದ್ರಿ ಘನಸಾಗರದಂತೆಯು ನೀಲವರ್ಣದಿಂ ೯೮

ಪರ್ವತ ನೀಲಮೇಘತೃಣಕಾಷ್ಠ ಸುಜಾತಿಯೆ ಮಿಂಚುಮಲ್ಲಿ ಗಂ
ಧರ್ವರ ಘರ್ಜನಾದಿಗಳೆ ಮೇಘರವಾಳಿ ಕೃಪಾರಸಂಗಳಿಂ
ಸರ್ವಫಲಂಗಳಿಂ[3]ದ ಗು[3]ಣವೃಷ್ಟಿ ಮುಮುಕ್ಷುಗಳಾಗೆ ಚಾತಕಂ
ಪರ್ವಿದ ವೃಷ್ಟಿಕಾಲದೊಳುಮಿರ್ದುದು ಸಂತಸದಿಂದಲಾಗಳುಂ ೯೯

ಕಂ. ಪರ್ವತಯತಿ ತಪಸಿಂಗಂ
ಶರ್ವಂ ಮೆಚ್ಚು[4]ತ್ತ[4]ಲವನ ಹೃತ್ಕಮಲಂಗಳ್
ದರ್ವೀಕರಧರ ನೆಲಸಿದ
ಪರ್ವತಮೊಪ್ಪಿತ್ತು ಸಕಲಸಂಪದದಿಂದಂ ೧೦೦

1. x (ಇ) 2. ಗನಾಗ (ಅಇ). 3. ದವಗು (ಅಇ). 4. ತ (ಅಇ).

ವ ॥ ಅಗಸ್ತ್ಯನ ಪಾವಹತಿಯಿಂ ಪಾತಳಕ್ಕಿಳಿಪ ವಿಂಧ್ಯನಗಮಂ ಕೃಷ್ಣನ ಕೈಗೆ ಕೊಡೆಯಾದ [1](ಗೋವರ್ಧನಗಿರಿಯಂ)[1] ರಾವಣಾಸುರನ ಕರತಳ[2](ಕಂ)[2] ಬಂದ ರಜತಾಚಲಮಂ ಈಶ್ವರಂಗಂ [3]ಬಿಲ್ಲಾದ[3] ಹೇಮಗಿರಿಯಂ ಇಂದ್ರನಿಂ ಭಂಗಬಟ್ಟ ಮೈನಾಕಗೋತ್ರಮಂ ಸೂರ್ಯನಿಂ ಭಂಗಬಟ್ಟ ಹಿಮಶೀಕರಿಯಂ ಶೋಣನದಿಗಂ ನೆಲ ಸರಿತಮಾದ ಮಾಲ್ಯವಂತ[4](ಧ್ರ)[4]ಷದಮಂ ಸೂರ್ಯೋದಯಕ್ಕಲ್ಲದೆ ಪ್ರಕಾಶಿಸದುದಯ ಕ್ಷ್ಮಾ[5](ಭೃ)[5]ದಮಂ ತನ್ನಂ ಮರೆಹೊಕ್ಕ ಸೂರ್ಯತೇಜಮಂ ಕೆಡಿಪ ಅಸ್ತಭೂ[6](ಭೃ)[6]ದಮಂ ಚೆಂದನವಲ್ಲದೆ ಮಿಕ್ಕ ತರುಗಳಿಲ್ಲದ ಮಲಯಜ[7]ಧರಣೀ[7]ಧರಮಂ ಮತ್ತಂ ಗಿರಿಜಾ ವಿವಾಹಕ್ಕೆ ಶಿವಂ ಪೋಪಂದು ತಾಮ್ ಇದಿರಾಗ್ಬಿದಿ ವಂದಿಸಿ ಪಡಿಬೀಡಾರಮಂ ಮಾಡಿಹೆನೆನ್ನಲೊಂದು ದಿವಸಂ ಇರವೇಳ್ಕೆಂದು ಬಿನ್ನಪಂಗೆಯ್ದು ಶಿವನಂ ಕರೆತಂದುಂ ಮೃದುಗದ್ದುಗೆಯಿಂ ಮೂರ್ತಿಗೊಳಿಸಿ ಸರ್ವ[8]ಮನು[8]ಮುನಿಸುರದನುಜಪ್ರಮಥ ರುದ್ರಾದಿಗಳಲೆಬಲೆಯುಂ ತಾಳಲಾರೆನೀಗವೆ ಮುಂದಕ್ಕೆ ಬಿಜಯಂಗೆಯ್ವುದೆಂದೀಶನಂ ಆಕ್ಷಣದಲ್ಲಿಯೆ ಕಳುಹಿ[9]ದ[9] ಮಾನಸೋಕರಸಾಧರಮಂ ಮತ್ತಂ ಗಿರಿಜಾವಿವಾಹಕ್ಕೆ ಹೋಹಂದು ಶಿವಂಗಿದಿರಾಗಿ ಬಂದು ವಂದಿಸಿ ತನ್ನಲ್ಲಿಪ್ಪೊಂದು ದಿವಸಂ ಇರವೇಳ್ಕೆಂದು ಬಿನ್ನಪಂಗೆಯ್ಯು ಕರಕಮಲಂ ಮುಗಿಯೆ ಹರಂ ನೋಡಿಯೊಂದೆ ಮಾತಿನಿಂ ತಡೆಯಲಾರೆ ಕಾಣೆಯೆಂದೊಲ್ಲದೆನುಡಿಯೆ ಮತ್ತೆ ಬಿನ್ನಹವಮಾಡದೆ ಸಡಿಲಬಿಟ್ಟು ಮುಂದ[10](ಣ)[10] ಪಯಣಂ ದೂರ ಬೇಗಂ ಬಿಜಯಂ ಮಾಡಿಸ್ವಾಮಿಯೆಂದು ಮನ್ನಣೆಯ ಮಾತನಾಡಿ ಬಿಟ್ಟುಹೋದ ಇಂದ್ರಕೀಲ ವಿಶ್ವಂಭರಾ[11](ಭೃ)[11]ದಮಂ ಮತ್ತಂ ರಕ್ತವರ್ಣದ ಪಾಷಾಣವಲ್ಲದೆ ಮಿಕ್ಕಶಿಲೆಗಳಿಲ್ಲದ ರೋಹಣಪಾಷಾಣ[12](ಭೂಭೃದಮಂ)[12] ರಘು ನಾಥನ ಬಿಲ್ಲಿಂ ಹೊಯ್ಸಿಕೊಂಡ ಗಂಧಮಾದನಧರಿತ್ರೀಧರಮುಂ ಮತ್ತಂ ಭೂಭಾರಿ ಗಳಾದ ಸಪ್ತಕುಲಕ್ಷ್ಮಾಭೃದಮಂ ಹನುಮಂ ಸೇತುಬಂಧನಕಾಲದಲ್ಲಿ ತರುವಲ್ಲಿ ಬಿದ್ದ ಮಣ್ಣಿಮೊರಡಿಗುಡ್ಡಂಗಳ್ಮಂತಾದವುಂ ತನತನಗೆ ಸರಿಯಿಲ್ಲೆಂಬ ಗಾಂಭೀರ್ಯದಿಂ ದೊಪ್ಪಂಜಿತ್ತ ಶ್ರೀಶೈಲಮುತ್ತರದ್ವಾರದ ಮಹೇಶ್ವ[13](ರಾ)[13]ಚಲಮಂ ಅಡರಿ ಮಹೇಶ್ವರನ ಬಿಲಮಂ ನೋಡಿ ರುದ್ರಧಾರೆಯಂ ನೋಡಿ ಅಲ್ಲಿಯ ಸಿದ್ಧೇಶ್ವರ ಕುಬೇರೇಶ್ವರ ಲಿಂಗಂಗಳ್ಗಂ ದರ್ಶನಮನಿತ್ತುಂ ಚತುರ್ಮುಖಬಸವೇಶ್ವರಂಗಂ ದರ್ಶನ ಮನಿತ್ತುಂ ಸಿದ್ಧಲಿಂಗೇಶ್ವರಂ ಮಲ್ಲಿಕಾರ್ಜುನಂಗಂ ದರ್ಶನಮನಿತ್ತುಂ ಮತ್ತಂ ಪ್ರಚ್ಛನ್ನಪುರವಂ ಸಿಕತವತಿಯಪುರವಂ ಚಂದ್ರಗುಪ್ತನಂತಃಪುರಮಂ ಈಕ್ಷಿಸಿ ವಿಕ್ರಮ ನೇರಿದ ಉದಯತಾಳಮಂ ಶುಕಮುನಿಯೇರಿದ ಚಂದ್ರತಾಳಮಂ ಗಂಧರ್ವರಿಳಿದು ಬಹ ನಕ್ಷತ್ರತಾಳಮಂ ಕನಕವಲ್ಲಿಯಂ ಛಾಯಛತ್ರಮಂ ಕರಸ್ಥಲನಾಗಿದೇವನೇರಿದ ಮೋಹಿನೀಗಜವಂ ಪಾಪಹರತಿ ನದಿಯಂ ಪಾತಾಳಗಂಗೆಯಂ ಕುಡಿವ ಕೊಳನಂ

1. ಮಂದರಾದ್ರಿಯಂ (ಅಇ). 2. ತಂ (ಅಇ). 3. x (ಇ). 4. ದ್ರು (ಅಇ).
5. ಭ್ರು (ಅಇ). 6. ಭ್ರು (ಅಇ). 7. x (ಇ). 8. x (ಇ). 9. x (ಇ).
10. ಳ (ಅಇ). 11. ಭ್ರು (ಅಇ). 12. x (ಅಇ). 13. ರುಂ (ಅಇ).

ಚಂದ್ರಕುಂಡಮುಂ ಶಿವಯೋಗಿಮಲ್ಲರಸನುಂ ಸಕಳೇಶಮಾದರಸರುಂ ವಾದಿಸಿದ ತಾಣಂ ಬಿಲ್ವವನಮುಂ ಕರವೀರವನಮುಂ ಮನೋಹರಮಹೇಶ್ವರನ ವನಮುಂ ರುದ್ರಮುನಿಯಿರ್ಪ ತಾರಕಾದ್ರಿವನಮುಂ ವೈದ್ಯಸರಾಮಸಿದ್ಧರಾಮವೀರಶಂಕರಮುಂತಾದವರ್ಗಂ ಪ್ರಸನ್ನವಾದ ತಾಣಂ ನೋಡಿ ಅಕ್ಕಗಳ ಕದಳಿಯುಂ ಕಿನ್ನರನ ಕದಳಿಯುಂ ಪ್ರಭು ಗೋರಕ್ಷರ ಕಾಳಗದ ತಾಣಂ ನೋಡಿ ಮತ್ತಂ ಮಹೇಶ್ವರಂ ಗುಪ್ತಮಹೇಶ್ವರಂ ಚುರುಕೇಶ್ವರಂ ಕಾಳಹೃದ್ವೇಶ್ವರಂ ಗರುಡೇಶ್ವರಂ ಘಂಟಾಸಿದ್ಧೇಶ್ವರಂ ಜೇವಹ್ನಸ್ವೇಶ್ವರಂ ಸಿದ್ಧೇಶ್ವರಂ ನೀಲಹೃದ್ವೇಶ್ವರಂ ಗಣೇಶ್ವರಂ ಉಮಾಮಹೇಶ್ವರಂ ರಾಮೇಶ್ವರಂ ಶ್ರೀಸಂಗಮೇಶ್ವರಂ ತ್ರಿಲೇಶ್ವರಂ ಸಿದ್ಧಮುಕ್ತೇಶ್ವರಂ ಜ್ವರಹರೇಶ್ವರಂ ಶ್ರೀಮೂಲಸ್ಥಾನ-ರುಚಲೇಶ್ವರಂ ಗೌತಮೇಶ್ವರಂ ಮೊದಲಾದ ಲಿಂಗಂಗಳ್ಗಂ ದರ್ಶನವಿತ್ತುಂ ಮತ್ತಂ ಸಂದ್ಯಾಲದ ನವನಂದಿಗಳ್ಗೆ ದರ್ಶನಮನಿತ್ತುಂ ಅಲ್ಲಿಂ ತೆರಳ್ದು ಕುಂತಳದೇಶಮಂ ಪೊಕ್ಕುಂ ಹೇಮಕೂಟಾಚಲದ ವಿರೂಪಾಕ್ಷಂಗಂ ದರ್ಶನಮನಿತ್ತುಂ ಮತ್ತಮಾ ವಿರೂಪಾಕ್ಷಂಗೆ ಪೂರ್ವದಿಕ್ಕಿನ ಕಿನ್ನರೇಶ್ವರಂ ದಕ್ಷಿಣದ ಜಂಬುಕೇಶ್ವರಂ ಪಶ್ಚಿಮದ ಸೋಮೇಶ್ವರಂ ಉತ್ತರದ ಮಾಣಿಭದ್ರೇಶ್ವರ ಲಿಂಗಂಗಳ್ಗಂ ದರ್ಶನವಿತ್ತುಂ ಮತ್ತಂ ತುಂಗಭದ್ರೆ ಗಂಗಾತೀರದ ರಂಬೇಶ್ವರಂ ನಳೇಶ್ವರಂ ಮುಕ್ತೇಶ್ವರಂ ಮಲ್ಲೇಶ್ವರಂ ರಾಮೇಶ್ವರಂ ಲ[1]ಕ್ಷ್ಮ(ಣೇ)ಶ್ವ[1]ರಂ ಮಹಾಕಾಳೇಶ್ವರಂ ಮಾರ್ಕಾಂಡೇಶ್ವರಂ ಇಂದ್ರೇಶ್ವರಂ ಅಗ್ನೀಶ್ವರಂ ಅಘೋರೇಶ್ವರಂ ನಾಗೇಶ್ವರಂ ವರುಣೇಶ್ವರಂ ಮರುಕೇಶ್ವರಂ ಮುಂತಾದ ಲಿಂಗಂಗಳ್ಗಂ ದರ್ಶನಮನಿತ್ತು ಮತ್ತಂ ಮನ್ಮಥತೀರ್ಥಂ ಸೋಮತೀರ್ಥಂ ಮಹಾಕಾಳತೀರ್ಥಂ ತಾರಾತೀರ್ಥಂ ರೌಪ್ಯತೀರ್ಥಂ ಬ್ರಹ್ಮತೀರ್ಥಂ ಮತ್ತಮಾ ತುಂಗಭದ್ರಾತೀರದ ವಶಿಷ್ಠಾಶ್ರಮದಲ್ಲಿರ್ಪ ಪಾಪವಿನಾಶತೀರ್ಥಂ ಅಶ್ವಮೇಧಾವಿಧಾನತೀರ್ಥಂ ಮತ್ತಂ ಬದರಿಕಾಶ್ರಮದಲ್ಲಿಯ ಕೋಟಿವರತೀರ್ಥಂಗಳಂ ಮತ್ತಂ [2](ಮಾಲ್ಯ)ವಂತಾ[2]ಚಲದಲ್ಲಿಯ ಋಣವಿಮೋಚನತೀರ್ಥ ಯಕ್ಷತೀರ್ಥಂ ಗದಾ[3]ತೀ[3]ರ್ಥಂ [4]ಧನುಸ್ತೀರ್ಥ[4] ಶಂಕ[5]ರತೀರ್ಥ[5] ಪದ್ಮದಳತೀರ್ಥಂಗಳಂ ಮತ್ತಂ ಮತಂಗಪರ್ವತದಗ್ರದಲ್ಲಿಯ ವೀರೇಶನ ಸಮೀಪದಲ್ಲಿಯ ವತ್ಸನಾಭಿಯ ತೀರ್ಥಂ ಅಗ್ನಿತೀರ್ಥಂ ರಾಮತೀರ್ಥಂ ಪಿತೃತೀರ್ಥಂ ಮಾಂಗಲ್ಯತೀರ್ಥಂಗಳಂ ನೋಡಿ ಪಾವನಂ ಮಾಡಿ ರಾಜವಿಟಗಂ ಬಂದು ವೀರೇಶಂಗಂ ವಿಭೂತಿಯಂ ಧರಿಸಿ ಅಲ್ಲಿಂ ತೆರಳ್ದು ಚಂದ್ರಗಿರಿಮಲ್ಲಯ್ಯಂಗೆ ದರ್ಶನವನಿತ್ತು ಅಲ್ಲಿಂ ತೆರಳ್ದು ರಘುರಾಮಂಗಂ ಕಣ್ಗಳಂ ಕೊಟ್ಟ ಲೇಪಾಕ್ಷಿಯ ಪಾಪವಿನಾಶಂಗಂ ದರ್ಶನಮನಿತ್ತುಂ ಪಂಚನಂದಿಗಂ ಬಂದು ಬ್ರಹ್ಮವಿಷ್ಣುಸ್ಕಂಧನಂದಿಸುರಪಾದಿಗಳ್ಗೆ ಪ್ರಸನ್ನವಾದ ಲಿಂಗಂಗಳ್ಗಂ ದರ್ಶನವಿತ್ತುಂ ಮತ್ತಂ ದೂರ್ವಾಸಮಾರ್ಕಂಡೆಯಾದಿಗಳು ತಪಂಗೈದ ಕರ್ಣಾಟದೇಶದ ಕಡಲಾದ್ರಿಗಂ ಬಂದು ವಿಶ್ವನಾಥ ವೀರೇಶ ಮೃಕಂಡೇಶ್ವರ ಲಿಂಗಂಗಳ್ಗಂ ದರ್ಶನಮನಿತ್ತುಂ ಅಲ್ಲಿಂ ತೆರಳ್ದು ಕಪಿಲಕಣಾವಶೃಂಗಮುದ್ಗಲಮುಂತಾದ

1. ಲಕ್ಷ್ಮೇಶ (ಅಇ). 2. ವಂತಾ (ಅಇ). 3. x (ಇ). 4. x (ಇ).
5. ರಕ್ತತೀರ್ಥ (ಅಇ).

ಋಷಿಗಳು ತಪಂಗೆಯ್ವ ಕಕುದ್ಗಿಗಿರಿಗಂ ಬಂದು ಗಂಗಾಧರಂಗಂ ಸ್ವರ್ಣಾಂಬಿಕೆಗಂ ದರ್ಶನಮನಿತ್ತು,

ಇಂತು ಕ್ಷೇತ್ರಲಿಂಗಂಗಳೆಲ್ಲಂ ತನ್ನಇಷ್ಟದ ಕಲಾಮಾತ್ರದ ಲಿಂಗಂ[1]ಗಳ್ಗೆ[1] ದರ್ಶನಮಂ ಪಾಲಿಸಿ ಕಗ್ಗೆರೆಗಂ[2]ಬಂದ[2]ನದೆಂತೆಂದೊಡೆ–ಇಷ್ಟಲಿಂಗಪ್ರಸಾದಿಯಾದಾಂತ ರಂಗಂ ವಿಷ್ಣುವಾದವುಂಟೆಂಬ ವೈಷ್ಣವನ ವಾದಮಂ ಗೆದ್ದು ಮಾಯಾಪ್ರಪಂಚಿನ ಸಿದ್ಧಿಯೆಂಬ ಸಿದ್ಧವಾದಮಂ ಪರಿಹರಿಸಿ ಲಿಂಗವ್ಯಸನಿಯಾದಾತಂಗೆ ದುರ್ವ್ಯಸನ ಮುಂಟೆಂಬ ದುರ್ಬುದ್ಧಿಯ ಬುದ್ಧವಾದಮಂ ಗೆದ್ದು ಲೋಭಕಂಟಕಂ ತಾಗದಂತೆ ಇಂದ್ರಿಯಶತ್ರುಗಳ್ಮುಟ್ಟದಂತೆ ಮೋಹಪಿಶಾಚಂ ಮುಟ್ಟದಂತೆ ಕ್ರೋ[3]ಧತರಕ್ಷು[3] ಹೊಡೆಯದಂತೆ ಮಮತಾಸರ್ಪಂ ಕಚ್ಚದಂತೆ ಕಾಮನೆಂಬ ಕಳ್ಳಂ ಹೊಯ್ಯದಂತೆ ಮತ್ತಂ ಮದಾಂಧಕಾರದೊಳ್ ಬೀಳದೆ ತಾಪತ್ರಯಂಗಳೆಂಬ ಹಳ್ಳಂಗಳೊಳ್ ಕಾಲು ಸಿಕ್ಕದೆ ವಿಷಯವ್ರಜಮುಳ್ಗಳಂ ಮೆಟ್ಟದೆ ಅಸೂಯಾವಿಷಯವಲ್ಲಿಗಳಿಂ ಕಾಲಂ ತೊಡಂಕಿಸಿಕೊಳ್ಳದೆ ಅಹಂಕಾರವಿಷ[4]ಯ(ದ)[4]ಗಳಂ ಪುಗದೆ ಮತ್ತಂ ಚಿನ್ಮನ ಮರುತನೆಡೆಯಾಟಮದಾದ ಗಾಳಿಪೂಜೆಯಂ [5]ಪೊಕ್ಕು ಭ್ರೂ[5]ಮಧ್ಯದ ಗುಹೆಯಲ್ಲಿ ಮಲ್ಲಿಕಾಪ್ರಭಾಂಗದ ಮಲ್ಲಿಕಾರ್ಜುನನ ಪ್ರಸನ್ನತ್ವಮಂ ಪಡೆದು ಶಿವದಾಸೋಹಮೆಂದು ಮಾತನಾಡಿ ಮತ್ತಂ ಶರೀರವೆಂಬ ಭೂಕ್ಷೇತ್ರವಾಸಿಗಳಾದ ಇಂದ್ರಿಯಂಗಳೆಂಬ ಗುಹೆ ಗಳಲ್ಲಿ[6](ಭಕ್ತಾದ್ಯೈಕ್ಯಾಂತ)[6]ವಾದ ಋಷಿಗಳ್ಗೆ ಪ್ರಸನ್ನವಾದ ಆಚಾರಾದಿ ಲಿಂಗಂಗಳಂ ನೋಡಿ ಚಿದಪ್ಪುತತ್ತ್ವಂಗಳೆಂಬ ತೀರ್ಥಂಗಳಂ ನೋಡಿ ಚಿದಮೃತವೆ ಪೂರ್ಣೀ ಕರಿಸಿದ ಕಗ್ಗೆರೆಯೊಳಿರ್ದನಾ ಸಿದ್ಧಲಿಂಗೇಶ್ವರಂ. ೧೦೧

ಮ. ವಿ. ವೃ.

ಪರಮೇಶಂ ಗಿರಿಶಂ ಸುಧಾಕರಧರಂ ಕಾಲಾಂತಕಂ ಶಂಕರಂ
ಉರಗೇಂದ್ರಾಭರಣಂ ವಿನಾಯಕಪಿತಂ ಗಂಗಾಧರಂ ಕಾಮಸಂ-
ಹರ ಸೌಖ್ಯಾಕರ ರಕ್ಷಿಸೆಮ್ಮನವನು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮಜಟಾಧರಂ ಪುರಹರಂ ಭರ್ಗಂ ಶಿವಾವಲ್ಲಭಂ ೧೦೨

ಗದ್ಯ : ಇದು ಸಕಲಸುರಗಣಮಣಿಮುಕುಟರಚಿತ ದ್ಯುಮಣಿಪ್ರಭಾದಿಕ್ಯಮಾಣಿಕ್ಯ ದ್ಯುತಿಪುಂಜಮಂಜುಲರಂಜಿತ ಸಂಪಚ್ಚರಣನೆನಿಪ ಭೂತೇಶ್ವರ ಶ್ರೀಪಾದಪಯೋರುಹ ಮಕರಂದ ರೋಲಂಬಮಾನ ಚೆನ್ನವೀರೇಶ್ವರಾಭಿಧೇಯ ವರಜಂಗಮದೇವಂ ವಿರಚಿತ ಮಪ್ಪ ಷಟ್ಸ್ಥಲವಲ್ಲಭಮಹಾಪ್ರಬಂಧದೊಳ್ ಸಿದ್ಧಲಿಂಗೇಶ್ವರದೇಶಾಂತರನಾನಾವಾದ ಮಾಹಾತ್ಮ್ಯಕಥನಂ ತೃತೀಯಾಶ್ವಾಸಂ ಸಮಾಪ್ತಂ.

---

1. ಗಳಂದು (ಅಇ). 2. x (ಇ). 3. x (ಇ). 4. ಯದು (ಇ) ; ಯಡು (ಅ).
5. x (ಇ). 6. ಬಾಕ್ತಾದ್ಯೈಕ್ಯಾಂತ (ಅಇ).

## ಚತುರ್ಥಾಶ್ವಾಸಂ

## ಶಿವಯೋಗಸ್ಥಿತಿ ಕಥನಂ

ಕಂ. ಗಂಗಾಸಂಗಂ ಶರ್ವನು-
ಮಾಂಗಾಲಿಂಗಂ ಗುಣತರಂಗನುತ್ತುಂಗಂ
ಲಿಂಗಾಂಗ ಧ್ಯಾನೇಷ್ಟಂ
ಯೋಗೀಶಾನಂದವಾಸ ರಕ್ಷಿಕೆ ನಮ್ಮಂ ೧

ಕಗ್ಗಿರೆಯ ಪೊರವಳಯದೊಳ್
ಸಗ್ಗಿಗರರಸಂ ಬಿತ್ತಿ ಬೆಳೆದನೆಂಬೊಲ್ ಹಿ-
ಗ್ಗೊಗ್ಗಾಗಿರ್ಪಾ ವನದೊಳ್
ಬಗ್ಗದೊವಲುಡೆಗನ ಶರಣನಿರಲನುಗೆಯ್ವಂ ೨

ಉ. ವೃ.
ಸತ್ಯಮಹಿಂಸೆ ಲಜ್ಜೆ ದಯೆ ಚೋರವಿಹೀನಗುಣಂ ಕ್ಷಮಾನ್ವಿತಂ
ಉತ್ತಮಬ್ರಹ್ಮಚರ್ಯಸಮಿತಾಹರಶೌಚಮು ಧೈರ್ಯಮಾದಿಯ-
ಪ್ಪಿಂತು ದಳಂಗಳಿಂದ ಯಮಯೋಗಮಿರುತ್ತಿಹುದುಂ ವಿಚಾರದಿಂ
ಸಂತತ ಕಾಮವೈರಿಯಹ ಸದ್ಗುರು ಚಿದ್ಗುರು ಸಿದ್ಧಲಿಂಗನೊಳ್ ೩

ಸಂತತಮಾಸ್ತಿಕಂ ತಪ ಮಹೇಶ್ವರಪೂಜೆ ವಿಚಾರದಾನ ಸಿ-
ದ್ಧಾಂತವ ಕೇಳ್ವುದುಂ ಮತಿ ಜ[1]ಪ ವ್ರತ ಲಜ್ಜೆ ದಶಂ[1]ಗಳಿಂದಲುಂ
ಯುಕ್ತಮದಾಗಿಯುಂ ನಿಯಮಯೋಗಮುಮಿಪ್ಪುದು ಸದ್ಗುಣಾಂಕವಿ-
ಪ್ಪೋತ್ತಮ ಶಂಭು ಶಂಕರ ಸದಾಶಿವರೂಪಿನ ಸಿದ್ಧಲಿಂಗನೊಳ್ ೪

ಕುಕ್ಕುಟಮಂಡುಕಾಸನ ಮಯೂರ ಗರುತ್ಮ ಮಹೀಂದ್ರ ಪದ್ಮಗೋ-
ವೀಕಪದಾಸನಾಳಿಗಳು ಮುಖ್ಯ[2](ಮದಾಗಿಹ ಆ)[2]ಸನಂಗಳುಂ
ಚೊಕ್ಕಟಮಾಗದೆಂದು ಘನಲಿಂಗಕೆಯಾಸನ ತಾವೆಯೆಂಬುತುಂ
ಅಕ್ಕರಿಸಿಂದಲಾಸನಮದಾಗಿಯುಮಿರ್ದನು ಸಿದ್ಧಲಿಂಗನುಂ ೫

---

1. ಪವ್ರಲಜ್ಜೆದಸಂ (ಅಇ). 2. ಮಾಗಿದಮಾ (ಅಇ).

ಪೂರಕತಾರೆಯಾಗಿರಲು ರೇಚಕ ಪಂಚಕವರ್ಣವಾ[1]ಗಲುಂ[1]
ತಾರೆಯು ಪಂಚವರ್ಣಗಳು ಕೂಡಲು ಕುಂಭಕವಾಗಿ ವರ್ತಿಪಾ-
ಪಾರಪ್ರಣಾಮುಯಾಂಕಿತದ ಯೋಗ[2](ಮು)[2]ಮಿರ್ಪುದು ನಾಡಿ ಸಿದ್ಧಿಯೆಂ-
ದೂರ ಕರಾಂಗುಲೀಸ್ಫುಟನಮಾತ್ರೆಗಳಿಲ್ಲದ ಸಿದ್ಧಲಿಂಗನೊಳ್ ೬

ಸಂಚರಿಪಿಂದ್ರಿಯಂಗಳನು ತಗ್ಗಿಸಿ ಶಂಕರನಲ್ಲಿ ಚಿತ್ತಮಂ
ವಂಚನೆಯಿಲ್ಲದಿರ್ಕುವ ಸುಪ್ರತ್ಯದಹಾರದ ಯೋಗಮಿರ್ಪುದುಂ
ವಂಚನೆಯಿಂದಲಲ್ಪವನು ಮುಂದೆಯು ಸಾಧಿಪ ಪದ್ಮಹಾರದಾ-
ಸಂಚಲವಪ್ಪ ಯೋಗಗಳುಮಿಲ್ಲದ [3]ಭಾವವು ಸಿದ್ಧಲಿಂ[3]ಗನೊಳ್ ೭

ಮಂಗಲರೂಪವಾದ ಗುರುವಿತ್ತ ಸುಯಿಷ್ಟದ ಲಿಂಗಮೂರ್ತಿಯಂ
ಕಂಗಳಿನಿಂದಲೀಕ್ಷಿಸುತ ಭಾವಿಸಿ ಜಾನಿಪ ಜಾನಯೋಗಮಂ
ಹಿಂಗದೆಯಿರ್ಪುದುಂ ಪವನನಂ ಪಿಡಿದಾಂಕುತಲನ್ಯಮೂರ್ತಿಯಂ
ಸಾಂಗಮದಾಗಿ ಜಾನಿಪ ಕುಯೋಗಮುಮಿಲ್ಲದ ಸಿದ್ಧಲಿಂಗನೊಳ್ ೮

ಇಷ್ಟದ ಲಿಂಗಮಂ ಮನದಿ ಭಾವದಿ ಚಿತ್ತದಿನಿಂದ್ರಿಯಂಗಳಿಂ
ಶ್ರೇಷ್ಠಮದಾಗಿ ಧಾರಿಸಿದ ಯೋಗ[4]ಮುಮಿರ್ಪು[4]ದು ತಾನೆ ಬಾಹ್ಯದು-
ತ್ಕೃಷ್ಟಕುಮೂರ್ತಿಯಂ ಮನದಿ ಜಾನಿಸು ಜಾನವಧೈರ್ಯದಿಂದವಿ-
ಸ್ಪಷ್ಟದಿ ತಾಳ್ದ ಧಾರಣ ಕುಯೋಗಮುಮಿಲ್ಲದ ಸಿದ್ಧಲಿಂಗನೊಳ್ ೯

ಚಿದ್ಘನಲಿಂಗರೂಪಿನೊಳು ಕೂಡಿಯಭಿನ್ನದಿ ಪೂರ್ಣಭಾವದಿಂ
ತದ್ಗತವಾಗಿರುತ್ತಿಹುದು ಯೋಗಸಮಾಧಿಸಮಾರನಂ ಹಿಡಿ-
ತ್ತುದ್ಗತಮಾಗಿ ತುಂಬಿಸಿ ವಿರಿಂಚಿ ಬಿಲಾಂತದೊಳಿರ್ಪ ದೀಪ್ತಿಯೊಳ್
ಸದ್ಗತವಪ್ಪೆನೆಂಬ ಕುಸಮಾಧಿಯುಮಿಲ್ಲದ ಸಿದ್ಧಲಿಂಗನೊಳ್ ೧೦

ಕಂ. ಅಷ್ಟಾಂಗದ ಯೋಗದೊಳಂ
ಇಷ್ಟದ ಲಿಂಗವನು ಬಿಡದೆ ಜಾನಿಪ ಸಿದ್ಧಂ
ಶ್ರೇಷ್ಠನಾಗಿರ್ಪ ವನಕಂ
ಸೃಷ್ಟನ ಶಿರಕರನ ತಪಕೆ ಬರುತಿರ್ಪಾಗಳ್ ೧೧

1. x (ಇ). 2. x (ಅಇ). 3. x(ಇ). 4. x (ಇ).

ಕಂಜಜ ಹರಿಹರರಂದದಿ
ಮಂಜುಲದ್ವಿಜಮಂತ್ರದಂತೆ ಚಮರಿಕನಂತಾ
ಕುಂಜ[1](ರದ ಆಸ್ಯ)[1] ನಂದದಿ
ರಂಜಿಸಿದವು ವನದ ತರುಗಳ್[2]ತಿಪ್[2]ನ ಕಣ್ಗಂ ೧೨

ಎಡಬಲದಿ ಕರ್ಣಪೂರದಿ
ದೃಢದಿಂ ಮುಂದಿರ್ಪ ಕರಕದಿಂ ಕೌಶಿಕ ಶುಕ
ನಿಡುಭಾರದ್ವಾಜಿಗಳಿಂ
ಸಡಗರದಿಂದಗಸ್ತ್ಯನಿರ್ದುವಿುಲ್ಲಾ ವನದೊಳ್ ೧೩

ಉ. ವೃ.

ಪಾದರಿ ಲಕ್ಷ್ಮಿ ಕೃಷ್ಣ ಕುರವಂ ಸುರವಲ್ಲಭನೆಲ್ಲಿ ಬಿಲ್ವದಿಂ
ಪಾದಲ ಗೌರಿ ಕಾಲಕುಚಜಾಂಬವ ಕಿತ್ತಳೆ ಕೌಂಗು ತೆಂಗಿನಿಂ
ಗಂಧಕಗಂಧ ಉಕ್ಷಪನ ಸಂವರ ಖರ್ಜ್ಜುರ ಕರ್ನಿಕಾರದಿಂ
ದೊಂಪಳಿ ಚಳ್ಳಿಯಾದಿ ಕುಜವಿರ್ಕುಗು ಕರ್ಪುರವಾಳೆ ಬಾಳೆಯಿಂ ೧೪

ಮಾಗದಿ ನಂದಿವರ್ತ ಕರವೀರ ಬಕಂ ಪದವೊಲ್ಲೆ[3] ವೊಲ್ಲೆಯಿಂ[3]
ಚೆಂಗಣಗಿಲ್ಕುಲಂ ಸುರಗಿ ತಾವರೆ ಕೆಂಪಿನ ಜಾಜಿ ಜಾಜಿಯಿಂ
ಕೆಂಗದಿರ್ಗಣ್ಣ ವಸ್ತುವರ ದಾಸಳದಾಸಳರಾಜಿ ರಾಜಿಯಿಂ
ಪೂಗಳ ವೃಕ್ಷವಿಕ್ಕುವಿದು ಮಲ್ಲಿಗೆ ಮಲ್ಲಿಗೆಯಿಂದ ಸಂತತಂ ೧೫

ವ॥ ಮತ್ತಮಾ ವನದಲ್ಲಿ ವಾನಪ್ರಸ್ಥಕುಲದಂತೆ ರಾಜಿಸುವ ಇಪ್ಪೆ[4]ಯ ವೃಕ್ಷಯೂಥ[4]ಂಗಳಿಂದಂ ತಾಪಸಕುಲದಂತೆ ರಾಜಿಸುವ ತಮಾಲಪತ್ರಕವ್ರಜಂಗಳಿಂದಂ ವಸಂತವಲ್ಲಭರಂತೆಯುಂ ಮಂಜುಲತೆವಡೆದು ರಾಜಿಸುವ ಸಹಕಾರದ್ರುಮ ಪಂತಿಗಳಿಂದಂ ಸುರಭಿಸಂತತಿಯಂತಿರ್ಪ ಚಂಪಕಕುಜನಿವಹಂಗಳಿಂದಂ ಐರಾವತಾನ್ವಯದಂತೆ ಪೆಸರ್ವಡೆದ ಹೇರಿಳೆಗಳ ಮೊತ್ತಂಗಳಿಂದಂ ಒಪ್ಪಂಬೆತ್ತ ವನಂ ಭಾಗೀರಥಿಯಿಂ ಭಂಗವಟ್ಟ ಜಹ್ನುಮುನಿಯುವನವಂ ತನ್ನನಾಶ್ರಯಿಸಿದ್ದ ಶೃಂಗಮುನಿಯಂ ಪೆಣ್ಣಿಳ ವೇಷಂಮಾಡಿದ ಕಕುಚ್ಛಿಲವ ಶೃಂಗಾದಿವನಮುಂ ಕೌಶಿಕರಾಜನ ಭಟರಿಂ ಶಿರಚ್ಛೇದನವಾದ ಮಾಂಡವ್ಯನ ವನಮುಂ ಏಕಶತಸುತ ಮೃತವನೆಯ್ದಿದ ದುಃಖದಿಂ [5](ಶತದ್ರು)[5]ನದಿಯಲ್ಲಿ ಪತನವಾದ ವಶಿಷ್ಠನವನಮುಂ ಮಾರೀಚನಿಂ ಸುರೆಮಾಂಸಾದಿ

---

1. ರದಾಸ (ಅ); ರರದಾಸ (ಇ). 2. x (ಇ). 3. x (ಇ). 4. x (ಇ).
5. ತ ಸದ್ರುತಿ (ಅಇ).

ಗಳಂ ಸುರಿಸಿಕೊಂಡ ವಿಶ್ವಾಮಿತ್ರನ ವನಮುಂ ಅಂಧಕಾಸುರನಂ ಕರವಿಡಿದಿಡಿಸಿಕೊಂಡ ಬ್ರಹ್ಮನ ರೋಹ[1]ಣಾ[1]ದ್ರಿವನಮುಂ ಕಪೀಂದ್ರ ಕುಪ್ಪಳಿಸಿದತಿ ಜರ್ಜರಿತವಾದ ತೃಣ ಬಿಂದುವಿನ ವನಮುಂ ಈಶನಂ ಕೊಲಲೆಂದು ಮಾರಣಯಜ್ಞವನ್ನಿಕ್ಕಿದ ಸನತ್ಕುಮಾರನ ದಾರುವನಮುಂ ಗರುಡನಿಂ ಸಮಸ್ತಋಷಿಗಳೇ ದೈನ್ಯಂಬಟ್ಟ ಕಶ್ಯಪನವನಮುಂ ಪಕ್ಷಿಯ ಮಾತಿಂಗೆ ಬಿಟ್ಟ (?) ಪುಲಸ್ತ್ಯವನಮುಂ ವಿಪ್ರಪೂಜೆಯಿಂ ಗೋ[2](ವಧೆ)[2]ಯಂ ಮಾಡಿದ ಗೌತಮನ ವನಮುಂ ಇಂದ್ರಂಗೆ ಬೆನ್ನೆಲುವಂ ಕೊಟ್ಟ ದಧೀಚನವನಮುಂ ಇಂದ್ರನ ಜೆಸ್ತ್ರವರಾದ (?) ಸಪ್ತಋಷಿಗಳಾಶ್ರಮುಮಂ ಕಾರ್ತವೀರನಿಂ ಶಿರಚ್ಛೇದನಮುಂ ಮಾಡಿಸಿ ಕೊಂಡ ಜಮದಗ್ನಿಯವನಮುಂ ಸತ್ಯವಂ ನುಡಿದು ಪಾಪಕ್ಕೀಡಾದ ಸತ್ಯವ್ರತನ ವನಮುಂ ಇಲ್ವಲವಾತಾಪಿಯೆಂಬ ತಸ್ಕರರಂ ಸಂಹರಿಸಿ ಅವರ ದ್ರವ್ಯವನಪಹರಿಸಿಕೊಂಡ ಅಗಸ್ತ್ಯನವನಮುಂ ಸುತರಿಂ ತಂದೆಯ ಬಲವ [3]ಕೊ[3]ಲಿಸಿದ ವಾಲ್ಮೀಕವನಮುಂ ತನಗೆ ಸರಿಯಿಲ್ಲೆಂದು ಹಳಿದು ನಗುವಂತಿರ್ದವನಂ ರಂಭೆಯ ಲಲ್ಲೆವಾತಿಂಗೆ ಮರುಳಾದ ಶುಕ ಮುನಿಯ ವನಕ್ಕಂ ಯಮನಗರಮುಂ ಸೂರೆಗೊಂಡ ಸಾನಂದಮುನೀಶನವನಕ್ಕಂ ಪಿಂಗಳಮುನಿಯ ಪಾತಕವಂ ಸಂಹರಿಸಿದ ಮನೋಹರನವನಕ್ಕಂ ಕುಸುಮಾಸ್ತ್ರನ ಬಿಲ್ಲ ಬಿಸಾಡಿದ ಸಿದ್ಧರಾಮೇಶ್ವನವನಕ್ಕಂ ಕರಾಂಗುಳಿಗಳ್ಗೆ ನಯನಂಗಳಂ ಪಡೆದ ವ್ಯಾಘ್ರಪಾದನ ತ್ರಿಲ್ಲಿ (?) ವನಕ್ಕಂ ಮದನವಿಜಯಂಗಂ ಖೇಚರತ್ವಮಂ ಕೊಡಿಸಿದ ಆಕಾಶಕೇಶವನಕ್ಕಂ ಈಶಂ ತಪಂಗೆಯ್ದ ಹೇಮಕೂಟಾಚಲವನಕ್ಕಂ ನಂದಿ[4]ರೋ[4]ಷ ಭಾಸ್ಕರರು ತಪಂಗೆಯ್ದ ಬದರಿಕಾಶ್ರಮಕ್ಕಂ ಶಿವಯೋಗಿಮಲ್ಲರಸರಿರ್ದ ಬಿಲ್ವವನಕ್ಕಂ ಸರಿಮಿಗಿಲೆನಿಸಿ ತೋರುತಿರ್ದುದಾ ವನಂ ೧೬

ಕಂ. ಪುಳಿನಸ್ಥಳದಿಂ ಕೊಳದಿಂ
ನೆಳಲಿಂ ಫಳದಿಂ ವಿಳಸಿತಮಾಗಿಹ ಪೂವಿಂ
ದೆಳೆವರಗಳೊಳುಂ ಪರ್ಬಿದ
ಫಳಭರಿತದ ದ್ರಾಕ್ಷಾಲತೆಯಿಂ ವನವೆಸೆಗುಂ ೧೭

ಇಂತಿಹ ವನದೊಳಗೆತಿಪಂ
ಸಂತಸದಿಂ ಯೋಗಮಾಳ್ಪ ಗೃಹದೊಳ್ಕುಳಿತುಂ
ಕಂತುಮದಾಟವಿದಾವನ
ಸಂತತ [5](ಜಾನಿಸುತಲಿರ್ದನತಿ)[5] ಮುದ[6]ದಿಂ(ದಂ)[6] ೧೮

---

1. x (ಇ). 2. ವೇಥೆ (ಅಇ). 3. ಣ್ಣೊ (ಅಇ). 4. x (ಇ). 5. ಧ್ಯಾನಿಸುತ ಲೆತಿಪನಿರ್ದಂ (ಅಇ). 6. ದಿಂ (ಅಇ).

ಮಧುರಾಹಾರದಿ ನಾಲ್ಕುಂ
[1](ಒ)[1]ದವಿದ ಭಾಗವನು ಮಾಡಿ ಅದರೊಳಗೊಂದಂ
ಮುದದಿಂ ದಿನಕ್ರಮ[2]ದಿಂ(ದಂ)[2]
ಪದಪಿಂದುಂಬ ಮಿತಾಹಾರದ ಸಾಧನಮಂ ೧೯

ಒದವಿದ ಪದ್ಮಾಸನದಿಂ
ಹೃದಯದಿ ಚಿಬುಕವನಿರಿಸಿ ನಾಶಿಕದೃಗುವಿಂ
ಮುದದಿಂದಂಗುಷ್ಠಂಗಳಂ
ಪದಪಿಂ ಪಿಡಿದಿರ್ಪಾಸನಸಾಧನ ಕ್ರಮಮಂ ೨೦

ಗುದದಿಂ ವಾಯುವನುಂ [3](ಸಲೆ)[3]
ಪದಪಿಂದಾಕುಂಚಿಸುತ್ತಲಲ್ಲಿಯ ಶಕ್ತಿಯ
ಮುದದಿಂ ಚಲನಂ ಮಾಡುವ
ಸದರದ ಶಕ್ತಿಯ ಚಾಲನಸಾಧನಕ್ರಮಮಂ ೨೧

ದ್ವಾದಶದಂಗುಲದುನ್ನತ
ಚಾದುರಂಗುಲದಗದರುವೆಯಂ ಜಿಹ್ವಾಗ್ರಕೆ
ಮೋಹದಿ[4](ಸುತ್ತಿ)[4] ಸುಷುಮ್ನೆಯ
ಶೋಧಿಪ ಸರಸತಿಯ ಜಾಲಸಾಧನೆಯೆಂಬುವ ೨೨

ವ॥ ಇಂತೀ ಸಾಧನಚತುಷ್ಟಯಂ ಶರಣಂಗೆ ಸಲ್ಲದೆಂಮ ಮತ್ತಂ ನಿತ್ಯಾನಿ[5]ತ್ಯ(ವಸ್ತು)[5] ವಿವೇಕ, [6](ಇಹಾಮುತ್ರಾರ್ಥಫಲಭೋಗವಿರಾಗ, ಶಮಾದಿಮುಮುಕ್ಷತ್ವ)[6] ಯೆಂಬ ಸಾಧನಚತುಷ್ಟಯಮಂ ಸಾಧಿಸುತ್ತಂ ಮತ್ತಂ ಪ್ಯೈಚೆಮುಪ್ಪುರ್ಟ್ಟುವಂತೆ ಮರ್ದಿಸಿ ಕ್ಷೀರಾಹಾರವನಾಚರಿಸುವ ವಜ್ರಕರ್ಮಂ ಶರಣಂಗೆ ಸಲ್ಲದೆಂಮ [7](ಪ್ರ)[7]ಸಾದ ಕರ್ಮವನಾಚರಿಸುತ್ತಂ ಗುದ ಮೇಢ್ರ ಮಧ್ಯನಾಭಿ ಮಧ್ಯಹೃನ್ಮಧ್ಯತುಂಡ ಮಧ್ಯದಲ್ಲಿಯ ಅಗ್ನಿಯ ವಿವೇಕಂ ಸಲ್ಲದೆಂದುಂ ಚಿದಾಗ್ನಿಯ ಪರಿಪೂರ್ಣ ಭಾವದಿಂದಂ ವಿವೇಕಿಸಿ ಮತ್ತಂ ಅಪಾನವಾಯುವಂ ಬಲಾತ್ಕಾರದಿಂದೂರ್ಧ್ವಕ್ಕಾಕುಂಚಿಸಿ, ಗುದ ಮೇಢ್ರಮಧ್ಯದಗ್ನಿಮಂಡಲಂ [8]ಬಲಿದುಂ[8] ವಾಯುವಿ[9]ನೊ[9]ಡನೆ ಕೂಡಿಯುನ್ನ

1. ವೊ (ಅಇ). 2. ದಿಂ (ಅಇ). 3. x (ಅಇ). 4. ಸ್ತುತಿ (ಅಇ). 5. ತ್ಯ (ಅಇ). 6. ಯಿಹಪರತ್ರಾಪೇಕ್ಷೆ (ಅಇ). 7. ಪ್ರಾ (ಅಇ). 8. x (ಅ). 9. x (ಇ).

ತಕ್ಕೈದೆ, ಪ್ರಾಣವಾಯುವುಷ್ಣಸ್ವರೂಪವಾಗಿ ಪ್ರಕಾಶಿಸುತ್ತಿರೆ ಮರೆದೊರಗಿರ್ದ ಕುಂಡಲಿನಿಯಾವುಷ್ಣತಾಗಿಯೆಚ್ಚತ್ತು ದಂಡವದೃಜುವಾಗಿ ಬ್ರಹ್ಮನಾಡಿರಂಧ್ರದತ್ತ ಮುಖಮಾಡುವ ಮೂಲಾಧಾರ ಬಂಧಮಂ ಬಲಿದುಂ ಮತ್ತಂ ಸುಷುಮ್ನೆಯಿಂ ಪ್ರಾಣವಾಯುವಂ ಕುಂಭಿಸಿ ವಸ್ತಿಯನಾಕುಂಚಿಸಿಕೊಂಡಿರ್ಪ ಒಡ್ಯಾಣಬಂಧಮಂ ಬಲಿದುಂ ಮತ್ತಂ [1]ವ[1]ಜ್ರಾಸನದಲ್ಲಿ ಕುಳಿತು ಪದಂಗಳಂ [2]ಕರಂಗಳಿಂ[2] ಪಿಡಿದು ಗುಲ್ಫದೇಶಂಗಳಲ್ಲಿಯು ಕದಂಗಳನೌಂಕುತಂ ಗಳಸಂಕೋಚನೆಯು ಮಾಡಿಕೊಂಡು ಪ್ರಾಣವಾಯುವಂ [3](ಕು)[3]ಂಥಸಂಧಿಗೈದಲೀಸದೆ ಕೂರಿಸಿ ಕುಂಭಿಸಿಕೊಂಡಿರ್ಪ ಜಾಲಂದರ ಬಂಧಮಂ ಬಲಿದುಂ ಇಂತೀಬಂಧತ್ರಯಂಗಳಿಂ ದಶವಾಯುಗಳಂ ಬಂಧಿಪ ಯೋಗಬಂಧತ್ರಯಂ ಶರಣಂಗೆ ಸಲ್ಲದೆಂದುಂ ಮತ್ತಂ ತನುಮನಧನವೇ ಪ್ರಾಣವಾಗಿ ಪರಿವ ಪ್ರಾಣವಾಯುವುಮಂ ಲಿಂಗಧ್ಯಾನದಿಂದಾಕುಂಚಿಸಿ ಅಧೋಮುಖಭವೇಚ್ಛಕ್ತಿರೂರ್ಧ್ವಮುಖೀಭವೇತೆಂಬುದರಿಂ ಶ್ರದ್ಧಾಭಕ್ತಿಯೆಂಬ ಕುಂಡಲಿನಿಯಂ ಊರ್ಧ್ವಮುಖಮಂಮಾಡಿ, ಲಿಂಗಪ್ರಾಣಪಾದಲ್ಲಿ ಪ್ರಾಣವಾಯುವಂ ಕುಂಭಿಸಿ ಮತ್ತಂ ಷಡುರುಚಿಯೇ ಪ್ರಾಣವಾಗಿರ್ಪ ಅಪಾನವಾಯುವಂ ಲಿಂಗರುಚಿಧ್ಯಾನದಿಂದಾಕುಂಚಿಸಿ ಶಿವಲಿಂಗಪ್ರಸಾದದರ್ಪಲ್ಲಿ ಕುಂ[1]ಭಿಸಿದುದೇ[4] ಮೂಲಾಧಾರಬಂಧವೆಂಬದಂ ಬಲಿದುಂ ಮತ್ತಂ ಉದ್ಯೋಗಗಮನವಾಗಿ ಹರಿವ ವ್ಯಾನವಾಯುವಂ [5](ಲಿಂಗ)[5] ಧ್ಯಾನದಿಂದಾಕುಂಚಿಸಿ ಲಿಂಗಕ್ರಿಯಾಗಮನದಿಂ ಕುಂಭಿಸಿ ಚತುರ್ವಿಧವೇ ಧ್ಯಾನವಾಗಿ ಹರಿವ ಉದಾನವಾಯುವಂ ಸುಚಿತ್ತದಿಂದಾಕುಂಚಿಸಿ ನಿರ್ಭಯತೆಯಿಂ ಕುಂಭಿಸಿ ಕುಭಾಷೆ, ಕುಚಿತ್ತ ಸಂಬುದ್ಧಿಯತ್ತ ಹರಿವಸಮಾನವಾಯುವಂ ಲಿಂಗಸಾರಾಯಧ್ಯಾನದಿಂದಾಕುಂಚಿಸಿ ಸ್ವಯಂಜ್ಯೋತಿಯು ಮಹಾಶರಣರ ಅನುಭಾವದಿಂ ಕುಂಭಿಸಿದುದೇ ಒಡ್ಯಾಣ ಬಂಧವಂಬಲಿದುಂ ಮತ್ತಂ ಕುಚಿತ್ತ ಕುಬುದ್ಧಿ ಕುಗೋಷ್ಠಿಯಿಂ ಹರಿವನಾಗವಾಯುವಂ ಸುಜ್ಞಾನದಿಂದಾಕುಂಚಿಸಿ ಪರಬ್ರಹ್ಮದ ಬೆಳಗಿನೊಳಗೆ ಸುಳಿದಾಡುವ ಶರಣಗೋಷ್ಠಿಯೊಳ್ ಕುಂಭಿಸಿ [6](ದುಷ್ಕರ್ಮವ್ಯಾಪಾ)[6]ರಂಗಳಿಗೆ ಹರಿವ ಕೂರ್ಮವಾಯುವಂ ಶಿವಸ್ಮರಣೆಯಿಂದಾಕುಂಚಿಸಿ ಷಡಕ್ಷರಿಯ ಜಪದೊಳು ಕುಂಭಿಸಿ ಮತ್ತಂ ದುರ್ಗುಣದತ್ತ ಹರಿವ ಕ್ರಕರವಾ[7]ಯು(ವಂ)[7] ಸುಗುಣಧ್ಯಾನದಿಂದಾಕುಂಚಿಸಿ ಭಕ್ತಿರತಿಯಾನಂದದ ಸೋಮ್ಯಸಂಬಧದ ಕೂಟಕ್ಕೆ ತೆರಹಿಲ್ಲದೆ ತನ್ಮತಾಮರೆವಲ್ಲಿ ಕುಂಭಿಸಿ ಮತ್ತಂ ಕೋಪದಿಂದುರಿದೆದ್ದು ಹರಿದಾಡುವ ದೇವದತ್ತವಾಯುವಂ ಶಾಂತಿಯಿಂದಾಕುಂಚಿಸಿ ಶಿವಭಕ್ತರೆ ಭಕ್ತರು ಶಿವಾಗಮವೆ ಆಗಮ, ಶಿವಾಚಾರವೆ ಆಚಾರವೆಂದು ಏಕೋಭಾವೆಯನಿಟ್ಟು ದೃಢಪಿಡಿದು ನುಡಿದು ಅನ್ಯದ ಜರೆವಲ್ಲಿ ಕುಂಭಿಸಿ ಮತ್ತಂ ಅನೇಕ ಪ್ರಯಾ[8]ಸದಿಂ ಗ[8]ಳಿಸಿದ ಪ್ರವ್ಯವಂ ಧರ್ಮವಂ ಮಾಡಿ ಕೆಡಿಸಿದೆನೆಂಬತ್ತ

1. x (ಇ). 2. x (ಇ). 3. ತು (ಅಇ). 4. x (ಇ). 5. ಲಿಂಗಗಮ (ಅಇ). 6. ದುಃಖಿಪೂರ್ದ್ಯಾಪ (ಅಇ). 7. ಯು (ಅಇ). 8 ಸಂಗ (ಅಇ).

ಹರಿವ ಧನಂಜಯವಾಯುವಂ ತನುವಿನ ಬಳ[1]ಲಿ(ಸಿ)[1] ಗಳಿಸಿದ ಧನವಂ ಅನಾರ್ಪಿತಂ ಮಾಡಬಾರದೆಂಬ ಮನದಿಂದಾಕುಂಚಿಸಿ ಗುರುಲಿಂಗಜಂಗಮ ತ್ರಿವಿಧದಾಸೋಹದಿಂ ಪರಿಣಾಮವಾಗವೇಳ್ಕೆಂಬುವರಿಂ ಕುಂಭಿಸಿದುದೇ ಜಾಲಂದ್ರಬಂಧವೆಂಪದಂ ಬಲಿದುಂ ಇಂತು ಬಂಧತ್ರಯಂಗಳಂ ದಶವಾಯುಗಳಂ ಬಂಧಿಸಿ ಮತ್ತಂ ೨೩

ಉತ್ಪಲ. ವೃ.

ಯೋನಿ (?) ಯೊಳಿಕ್ಕಿ ವಾಮಪದವಂ ಬಲಕಾಡವನಿಕ್ಕಿಯಗ್ರದೊಳ್
ಸನ್ಮತ ಹಸ್ತದಿಂದ ಪಿಡಿದೊತ್ತಿಗಳಾಗ್ರವ ಬಗ್ಗಿಸುತ್ತಲುಂ
ಪೂರ್ಣಿಸಿ ವಾಮದಿಂ ಬಲದಿರೇಚಿಸಿಯೂರ್ಧ್ವದಿ ಕುಂಭಿಸುತ್ತಲುಂ
ಬಿನ್ನಣದಿಂ ಬಿಡುತ್ತಿಹ ಮಹಾವರ ಮುದ್ರೆಯು ಸಲ್ಲದೆಂಬುತುಂ ೨೪

ಹಸ್ತದೊಳಿರ್ಪ ಲಿಂಗವನು ದೃಕ್ಕುಗಳಿಂ ಪಿಡಿದೊತ್ತಿ ಮೆಲ್ಲಗಂ
ಮಸ್ತಕ ಬಾಗಿ ಚಿತ್ತದೊಳು ಮೂರ್ಧ್ವತೆ ಕುಂಚಿಸಿ ಪ್ರಾಣಮಧ್ಯದೊಳ್
ಸ್ವಸ್ಥದಿ ಕುಂಭಿಸುತ್ತವರ [2]ಪ್ರಾಣ[2]ವ ಲಿಂಗದಿ ರೇಚಿಸುತ್ತಲುಂ
ವಸ್ತುವಿನಲ್ಲಿ ಪೂರ್ಣಿಪ ಮಹಾವರಮುದ್ರೆಯೊಳಿರ್ದನಾಗಲುಂ ೨೫

ನಾಲಗೆಯಂ ಕರಂಗಳೊಳು ಮೆಲ್ಲಗೆ ನೀವುತ [3](ಲೂ)[3]ದುತೂದುಮಾ-
ನಾಲಗೆ ಹುಬ್ಬು ಮುಟ್ಟಲದನೂರ್ಧ್ವಕೆ ಯೇರಿಸಿ ಯುರ್ಧ್ವದೃ[3]ಷ್ಟಿ(ಯಿಂ)[3]
ಚಾಲನ [5](ಗೆಟ್ಟಿಪು)[5]ರ್ವುಗಳ ಮಧ್ಯವ ನೋಡುತ ಕುಂಭಿಸುತ್ತಲುಂ
ಮೇಲೊಸರುಂಬ ಖೇಚರಿಯ ಮುದ್ರೆಯು ಲೈಂಗಿಕಗಾಗದೆಂಬುತುಂ ೨೬

ಲಿಂಗವನೋಡ ನೋಡ ಮೆಯಿಜೊಂಪಿಸಿ [6]ಕಣ್ಮಲರೂರ್ಧ್ವ[6] ಕ್ಕೈದಿಯುಂ
ಸಾಂಗವದಾಗಿ ಹುಬ್ಬುಗಳ ಮಧ್ಯಕೆ ಲಿಂಗವ ತಂದು ಕೊಂಡುವುಂ
ಮಂಗಲವಾದಖಂಡಪರಿಪೂರ್ಣ ಚಿದರ್ಕನ ದೀಪ್ತಿಪುಂಜಮಂ
ಕಂಗಳ ಮುಂದೆ ತೋರ್ಪ್ರೊಲಿಹ ಖೇಚರಿಮುದ್ರೆಯೊಳಿರ್ದ ಸಿದ್ಧನುಂ ೨೭

ನಾಸಿ[7]ಕದಗ್ರ[7]ಕಾಗಿಯರೆಗಣ್ಣಿನೊಳೀಕ್ಷಿಸಿ ಕುಂಭಿಸು[8]ತ್ತ ಸಾ[8]
[9]ಧೀ (ಸುತ)[9] ಜಾಸಿಸುತ್ತಲಿಹ ಶಾಂಭವಿಮುದ್ರೆಯು ಸಲ್ಲದೆಂಬುತಂ
ಈಶನನೊಳಿಟ್ಟು ದೃಷ್ಟಿಯನು [10]ಪ್ರಾಣವ ಕುಂ[10]ಭಿಸಿ ಲಿಂಗವಲ್ಲಿಯೇ
ಬೀಸರವೋಗದಂತಿಹನು ಶಾಂಭ[11]ವ[11] ಮುದ್ರೆಯೊಳೀಸನೆಂದಪೆಂ ೨೮

1. ಲಿ (ಅಇ). 2. x (ಅ). 3. ತು (ಅಇ). 4. ಷ್ಟಿಂ (ಅಇ). 5. ಖಿಲ್ಲದೂ (ಅಇ). 6. x (ಅ). 7. ಕಾಗ್ರ (ಇ). 8. ತ್ತಲುಂ (ಅಇ). 9. ದೀಪಿ (ಅಇ). 10. x (ಈ). 11. ವೀ (ಅಇ).

ನಾಸಿಕ ಕರ್ಣನೇತ್ರ ವಿವರಂಗಳನಂಗುಲಿಯಿಂದ ಮುಚ್ಚಿಕೊಂ
ಡಾಸನದಿಂದಲಾಚರಿಸಿ ಕುಂಭಿಸಿ ತಾಟಿಸಿ ಬ್ರಹ್ಮರಂಧ್ರವಂ
ಆಸುಗ ಜಿಹ್ವೆಗೈಯ್ದುಯದಸುಂಗುತ ಪೊಂಗುತ ಪೋಗ [1]ಲೀ (ಸದಾ)[1]
ಸಾಸದಿ ಜಾನಿಸುತ್ತಿರುವ ಷಣ್ಮುಖ ಜಂಗಮಕಾಗದೆಂಬುತಂ ೨೯

ಇಷ್ಟದ ಲಿಂಗದಿಂದ ವರನಾಸಿಕ[2]ಜಿಹ್ವೆ[2]ಯು ನೇತ್ರದಲ್ಲಿಯು
[3](ತ್ವಷ್ಟದ ತ್ವಕ್ಕಿನಿಂದ್ರಿಯದಿ ಶ್ರೋತ್ರದಿ ಹೃದ್ಗುಹೆಯಲ್ಲಿ ಮುಚ್ಚಿಕೊಂ)-[3]
ಡಿಷ್ಟದ ದೀಪ್ತಿಯನ್ನು ವರಪ್ರಾಣದಿ ಪೂರ್ಣಿಸಿ ಕುಂಭಿಸುತ್ತಲುಂ
ಸ್ಪಷ್ಟದಿ ಜಾನಿಸುತ್ತಲಿಹ ಷಣ್ಮುಖಿಯಿಂದ ವಿರಾಜಿಸು[4](ತ್ತಿಹಂ)[4] ೩೦

ಪೂರ್ವದಿ ಪೇಳ್ದ ಮಾಳ್ಕೆಯೊಳುಮಾಸನದಿಂದೆ ಕುಳಿತ್ತು ಮಾಗಳುಂ
ಪರ್ವಿಪ ಬಂಧಮೂರರೊಳುವೊಂದಿ ಸರಸ್ವತಿಜಾಲದಿಂದಲುಂ
ಕೊರ್ವಿಪ ಪ್ರಾಣವಾಯುವನು ಬ[5]ಂಧಿಸಿ[5]ಯುಂ ಪ್ರಥಮಾಹ್ನದಲ್ಲಿಯೇ
ಉರ್ವಿಸಿ ನಾಲ್ಕುವೇಳೆಯೊ[6]ಳು (ಲಂ)[6] ಬಿಸಿಯಾದಿನ ಸುಮ್ಮನಿರ್ದುವುಂ ೩೧

ಮರುದಿನ ಹತ್ತುವೇಳೆ[7]ಯ(ಲಿ)[7] ಕುಂಭಿಸಿಯಾದಿನ ಸುಮ್ಮನಿರ್ದು ಮೂ-
ರರ ದಿನ ಪಂಚವಿಂಶತಿಯ ಲೆಕ್ಕದಿ ಕುಂಭಿಸಿಯಹ್ನಯಹ್ನಕಂ
ಮರೆಯದೆ ಪಂಚಪಂಚಗಳ ಹೆಚ್ಚಿಸಿ ಕುಂಭಿಸಿ ಮಾತ್ರೆಮಾತ್ರೆಯ
ನ್ನರಿವುತ ಕುಂಭಿಸುತ್ತಲಿರೆ ಕುಂಡಲಿ[8]ಯೂರ್ಧ್ವ[8]ಕೆಯೆಯ್ದಿ ಮಾತ್ರೆಯುಂ ೩೨

ಸುರುಚಿರಬ್ರಹ್ಮಗ್ರಂಥಿಯನು ಖಂಡಿಸಿ ಖಂಡಿಸಿ ವಿಷ್ಣುಗ್ರಂಥಿಯಂ
ಪರಮವಿಲಾಸರುದ್ರನುರುಗ್ರಂಥಿಯ ಖಂಡಿಸಿ ಚಂದ್ರಬಿಂಬಕಂ
ಹರುಷದೊಳೆ[9]ಯ್ದಿ(ಯೆಯ್ದಿ)[9] ತಿರುಗುತ್ತಲದಂ ದ್ರವಿಸುತ್ತಮೆಲ್ಲಗಂ
ಉರುತರದಗ್ನಿಮಂಡಲದೊಳಿರ್ದ ದಳಂಗಳ ಮೆಟ್ಟಿತಾನುವುಂ ೩೩

ಉ. ವೃ.

ಶಕ್ತಿಸಮೇತವಾದ ಶಿವನಗ್ನಿಯಮಂಡಲಮಧ್ಯದಲ್ಲಿಯುಂ
ವ್ಯಕ್ತಮದಾಗಿಹಗ್ನಿಯ ಸುಮೂಷೆಯೊಳಿರ್ಪ ಹಿರಣ್ಯದಂತಿಹಾ
ಮುಕ್ತಿಗಧೀಶನಂ ಬೆರಸಲೆಂದು ಸುದೀಪ್ತಿಯನೋಡುತಾಡುತಂ
ಯುಕ್ತಿಗಳಿಂದಲೀ ಪರಿಯ ಯೋಗವ ಮಾಡಿದ ಮೇಲೆ ಪ್ರೀತಿಯಿಂ ೩೪

---

1. ಶಡೆ (ಅಇ). 2. x (ಇ). 3. ತ್ವಗೇಂದ್ರಿಯಲ್ಲಿ ವರಶ್ರೋತ್ರ ಹೃದಯಂ ಗಣದಲ್ಲಿ ಮುಚ್ಚಿಕೊಂ (ಅಇ). 4. ತಿರ್ದಸುಂ (ಅಇ). 5. x (ಇ). 6. ಳು (ಅಇ). 7. ಯ-(ಅಇ). 8. ಯುರ್ದ (ಅಇ). 9. ಯ್ದಿ (ಅಇ).

ಕಂ. ದೂರಶ್ರವಣಂಗಳುಮಂ
ದೂರದೃಷ್ಟಿ ತ್ರಿಕಾಲಜ್ಞಾನಂಗಳುಮಂ
ಸಾರಿಯ ಪರಕಾಯಮುಮಂ
ನಾರಿ[1]ಯರೊ[1]ಳ್ ವಶ್ಯಮೆಂಬ ವಿದ್ಯಂಗಳುಮಂ ೩೫

ಸೂಕ್ಷ್ಮಪ್ರಾಣಿ[2](ಯ)[2] ದೇಹದಿ
ಸೂ[3]ಕ್ಷ್ಮದೆ)[3] ಪ್ರವೇಶಿಸುತ್ತಿರ್ಪಣಿಮಾಸಿದ್ಧಿಯ
ಲಕ್ಷ್ಮೀ ಕರಬ್ರಹ್ಮಾಂಡದ
ಪಕ್ಷಂಗಳ ಹೊರಗಾ[4]ಡು (ವ)[4] ಮಹಿಮಾಸಿದ್ಧಿಯ ೩೬

ಪರಮಾಣುಗೆ ಸರಿಯಾಗಿಹ
ಗಿರಿಗಳ ಭಾರಕ್ಕೆ ಸರಿಯಹ ಗರಿಮಾಸಿರಿಯಂ
ಗಿರಿಸದೃಶದ ಪುರುಷನನುಂ
ಪರಮಾಣುಗೆ ಸರಿಯ ಮಾಳ್ಪ ಲಘಿಮೈಶ್ವರ್ಯದ ೩೭

ಪಾತಾಳವಾಸಿಯಾಗಿಯು
ದಾತನ ಲೋಕವನು ನೋಳ್ಪ ಪ್ರಾಪ್ತೈಶ್ವರ್ಯವ
ನುತ್ತಾಸ್ವೇಚ್ಛಾಮಾತ್ರದಿ
ಸಂತತ[5]ಗ (ಗ)[5] ನದಲಿ ಗಮಿಪ ಪ್ರಾಕಾಮ್ಯಮುಮಂ ೩೮

ಸ್ವೇಚ್ಛೆಯಲಿ ಜಗವ ಕೆಡಿಸಿಯು
ಸ್ವೇಚ್ಛೆಯೊಳುಂ [6]ಮ[6]ರಳಿ ಸೃಜಿಪ [7](ಈಶತ್ವಮುಮಂ)[7]
ನಿಚ್ಚದ[8](ಲೀ ಜಗಮಂ ಸಲೆ)[8]
ಸ್ವೇಚ್ಛೆಯೊಳುಂ ವರ್ತಿಪ ವಶಿತ್ವೈಶ್ವರ್ಯಮಂ ೩೯

ಇವು ಮುಂತಾದಷ್ಟಸಿದ್ಧಿಯ (?)
ಪವುರುಷದಿಂ ಪಡೆಮ ಬಹಳ ಗರ್ವೋನ್ನತಿಯುಂ
ಕವುಟಿಲ್ಯದಿ ಕೆಟ್ಟುಪೋಗುವ
ಬಹು ಕಷ್ಟದ ಯೋಗಶರಣಗಾಗದುಮೆನುತುಂ ೪೦

---

1. ಯೊಳ್ (ಇ). 2. ಣಿಗಳ (ಅಇ). 3. ಕ್ಷ್ಮದೊಳುಂ (ಅಇ). 4. ಡು (ಆಇ). 5. ಗ (ಆಇ). 6. x (ಇ). 7. ಯುಸಿಷ್ಟದಸಿರಿಯುಂ (ಆಇ). 8. ಗೀಕರು ಜಗಮಂ (ಆಇ).

ವ || ಪಾಡ್ಯವಶಶಿಕಳೆಯುಂ ಪಶು ಕಾಣದೆ ಪಾತಾಳವಂ ಗೋಸುಂಬೆಕಾಣದೆ ದಿವಾರಾತ್ರಿಯೊಳೊಂಪೆತ್ತೆರದಿಂ ಕಾಣದೆ ಮಾರ್ಜಾಲಂ [1](ಕಣ್ಗೊ)[1]ಂದರಿಂದಿಕ್ಕೆಲಸಂ ಕಾಣದೆಕಾಗೆ ಘೂಕಂರಾತ್ರಿಯೊಳ್ಕಾಣದೆ ವೃಕ್ಷಮೂಲಮಂ ಮೂಸಿಪಣ್ಣೆಪ್ಪಿರವನರಿಯದೆ ಇರುವೆ. ಆಹಾರಮುಂ ಕೊಂಡ ಕಮಠಂ ತಸ್ನಶಿಶುವಂ ನೆನೆಯೆ ತೃಪ್ತಿಯಾಗದೆ ಹೇಮಕೊಂಡವಿಹಂಗಂ ತತ್ತಿಯುಂ ಸ್ಪರ್ಶಿಸಿದರೆ ತೃಪ್ತಿಯಾಗದೆಯವಕೆ ಆಹಾರಂ ಕೊಂಡ ಮೀನ್ಗಳುಂ ತಮ್ಮಾಮರಿಗಳೊತ್ತಿನಲಿ ಚರಿಸಿದರೆ ತೃಪ್ತಿಯಾಗದೆಯವಕ್ಕೆ ಕಲ್ಲಮಾಳಿಗೆಯೊಳ್ಪರಸಿ ಮಡಗಿದಡೆಕುಕ್ಕುಟಂ ವೇಳೆಯರಿದು ಕೂಗವೆ ಶ್ವಾನಂಬೂದಿಯೊಳ್ಪ್ರಲಂಗಿದಾಗ್ಗಂ ಏಳುಜನ್ಮದಸೂಚನೆಯನರಿಯವೆ ಅಂಗಾರಪಕ್ಷಿ ಕೆಂಡವಂನುಂಗಿಜೀವಿಸದೆ ವರ್ಷಕ್ಕೊಮ್ಮೆ ಮುಂಗಾರುವನಿಯುಂ ಕೊಂಡು ಜಾದಗೆವಕ್ಕಿಯಿರದೆ ತಿಂಗಳಿಗೊಮ್ಮೆ ಶಶಿಕಿರಣಮುಂ ಕೊಂಡು ಚಕೋರಖಗನಿರದೆ ಕಲ್ಲಹರಳಂನುಂಗಿ ಪಾರಾವತಖಗನಿರದೆ ಸರ್ಪಂ ಮರುತಸಂನುಂಗಿ ಜೀವಿಸದೆ ವರಾಹಂ ದೂರಶ್ರವಣವನ್ನರಿಯದೆ ಭೂತಂಗಳ್ ತ್ರಿಕಾಲಜ್ಞಾನವನ್ನರಿಯ[2](ವೆ)[2] ಪಿಶಾಚಂಗಳ್ ಪರಕಾಯಪ್ರವೇಶವನ್ನರಿಯವೆ ಇಂತಿವಾದಿಯ ಯೋಗಸಿದ್ಧಿಗಳ್ ಶರಣಂಗೆ ಸಲ್ಲವೆಂಬುತಾ ಸಿದ್ಧಲಿಂಗೇಶ್ವರಂ ಶಿವಯೋಗಮುಂ ಸಾಧಿಸುತ್ತಿರೆ ಆ ಸಮಯದೊಳ್ ಕಗ್ಗೆರೆಯನಿರಿಯಲೆಂದು ಶಬರರ್ ಬರ್ಪುದಂ ಶಿವಂ ಚಿತ್ತಕ್ಕಾರುಹಿಸೆ ಅವಂ ತನ್ನ ಹತ್ತಿರಿರ್ದ ಗೌಡನೊಳುಂ ಭಕ್ತರೊಳಂ ಈಗ್ರಾಮದಲ್ಲಿರಬೇಡ ಈಗವೆ ಪೋಗಿಯೆಂದೆನೆಯಾಕ್ಷಣದಲ್ಲಿಯವರ್ ತಂತಮ್ಮ ಸ್ತ್ರೀಯರಂ ಕರಕೊಂಡಪಶ್ವದಿಂ ಪೋದಾಗಲೆ ಶಬರರಿರಿಯಲ್ ಕಂಡು ಆ ಭಕ್ತರಾಶ್ಚರ್ಯಂಬಡುತ್ತುಂ ಕೇತಾಪದಲ್ಲಿರ್ದು ರೇವಣಸಿದ್ಧೇಶಂ ಕಲ್ಯಾಣದಲ್ಲಿರ್ದ ಮಾಯಿದೇವಿಯ ದುಃಖವನರಿದರೆಂಬರುಂ ಮತ್ತಂ ಗುಜ್ಜರದೇಶದಲ್ಲಿ ಶಿವಭಕ್ತನೋರ್ವಂ [3](ಸೊ)[3]ಪ್ಪೆಯನುಂಬುದಕಲ್ಯಾಣದಲಿ ಬಸವೇಶ್ವರನರಿದರೆಂಬರುಂ [4](ಈಗಳ್ ?)[4] ಸಿದ್ಧೇಶನಿಂ ಪ್ರತ್ಯಕ್ಷಂ ಕಂಡೆವೆಂದು ಕೊಂಡಾಡುತಂ ಪೋಗಲಿತ್ತಲಾ ಸಿದ್ಧೇಶ್ವರಂ ೪೧

ಚಂ. ವೃ.

ಹವಣಿಸಬಾರದಿರ್ಪ ಶಿವತತ್ತ್ವವು ತಾನೆ ವಿಲಾಸಲೀಲೆಯಿಂ
ಸವಿನಯನಾದಬಿಂದುಕಲೆಯಾಗಿಯು ಷಡ್ವಿಧಲಿಂಗವಾಗಿಯುಂ
ಸವಿನಷಡಂಗವಾಗಿಯು ಸುಸಿದ್ಧನು ಷಡ್ವಿಧಭಕ್ತಿಯಿಂದಲುಂ
ಭವಹರನಿಷ್ಟಲಿಂಗವನು ಜಾನಿಸುತಿರ್ದ ಮನೋನುರಾಗದಿಂ ೪೨

1. ಕಾಣೊ (ಅಇ). 2. ದೆ (ಅಇ). 3. ಸ (ಅಇ). 4 x (ಅಇ).

ಗುರುಕರಜಾತನಾಗಿ ವಿಧಿಗ್ರಂಥಿಯ ಖಂಡಿಸಿ ಭಕ್ತರಲ್ಲಿಯೇ
ಸ್ಥಿರತರನಾಗಿ ವಿಷ್ಣು ವಿನಗ್ರಂಥಿಯುಖಂಡಿಸಿ ಲಿಂಗದಲ್ಲಿಯೇ
ಉರುತರ ಲೀಯನಾಗಿ ಪರಮಪ್ರಸಗ್ರಂಥಿಯ ಖಂಡಿಸು[1]ತ್ತ[1]ಲಾ
ಪರಮಜಿತೇಂಪ್ರನಾಗಿ ಘನವಾಯೆಯುಗೆದ್ದನು ಯೋಗಮಾರ್ಗದಿಂ ೪೩

ಪುರಹರತಾನೆಲಿಂಗಮುಮೆತಾನೆಯುಪಂಗವಿದೆಂಬಭಾವದಿಂ
ಪರಿಗಮಿಸುತ್ತಲಬ್ಬರ ಸುಕೂಟಮೆಯಂಗದ ಲಿಂಗ[2]ಸಂ(ಗ)[2]ಮೆಂ
ದುರುತರದಿಂದ ತತ್ತ್ವಮಸಿವಾಕ್ಯದ ಆರ್ಥವಿದೆಂದುಚಿತ್ತದಿಂ
ಹರುಷದಿ ಜಾನಿಸುತ್ತಿಹನು ಇಷ್ಟದ ನಿಷ್ಠೆಯ ಸಿದ್ಧಲಿಂಗನುಂ ೪೪

ಕಂ. ಲಿಂಗಮದೆಂದೆಡೆ ಶಿವನುಂ
ಅಂಗವು ತಾ[3](ನು ಸುರಾದಿ)[3]ಪ್ರಾಪಂಚಿಕಮುಂ
[4]ಲಿಂ[4]ಗದಿ[5](ಸರ್ವಪ್ರ)[5]ಪಂಚದ
ಲಿಂಗಾಂ[6]ಗ(ದ)[6] ಸಂಗವೆಂದು ಜಾನಿಸುತಿರ್ದಂ ೪೫

ಲಿಂಗಾಂಗದ ಸಂಬಂಧದಿ
ಲಿಂಗವು ತಾನಪ್ಪೆನೆಂಬ ಪದಮುಂಟದರಿಂ
ಲಿಂಗಧ್ಯಾ[7](ನದ)[7] ಬಲದಿಂ
ಲಿಂಗವು ತಾನಾದೆನೆಂದು ಜಾನಿಸುತಿರ್ದಂ ೪೬

ತ್ಯಾಗಾಂಗದೊಳಿಷ್ಟವನುಂ
ಭೋಗಾಂಗದಿ ಪ್ರಾಣಲಿಂಗಭಾವದ ಲಿಂಗಂ
ಯೋಗಾಂಗದಿ ಜಾನಿಸುತಂ
ಸಾಂಗಮದಾಗಿರ್ಪ ಧ್ಯಾನಯೋಗದೊಳಿರ್ದಂ ೪೭

ಆರಂಗದಿ ಆರು[7]ಲಿಂ[7]ಗ
ವಾ(ರೂಢಿಸಿ) ತನ್ನ ಮನದಿ ಬೇರಿಟ್ಟಿರದೆಯು
ಮೀರಿ ನೋಡುತ್ತ ಜಾನಿಪ
ರೂಢಿಸುತಿಹ ಧ್ಯಾನಯೋಗದೊ[8](ಳೊ)[8]ಪ್ಪಿರ್ದಂ ೪೮

1. ತ್ತ (ಅ೩). 2. ಸಂ (ಅ೩). 3. ಂಸುರಾಸುರಾದಿ (ಅ೩). 4. x (೩). 5. ಪ್ರಾಪಂಚದ (ಅ೩). 6. ನಾ (ಅ೩). 7. x (೩). 8. ಳಗೊ (ಅ೩).

ಮೂವತ್ತಾರರ ಲಿಂಗವ
ಮೂವತ್ತಾರಂಗದಿಂದ ಹುದುಗೊಳಿಸುತ್ತಂ
ಭಾವಜ್ಞಾನದಿ ನೋಡು-
ತ್ತಾ ವಿಧದಿಂ ಹರ್ಷತಾಳ್ದು ಜಾನಿಸುತಿರ್ದಂ ೪೯

ದ್ವಿಶತದ ಷೋಡಶಲಿಂಗವ
ದ್ವಿಶತದ ಷೋಡಶದಂಗದಿ ಭಾವಿಸಿ ನೋಡುತ
ದ್ವಿಶತದ ಷೋಡಶದೀಪ್ತಿಯ
ಸಸಿನದಿ [1](ಜಾನಿಸುವಾ ಶಿವ)[1]ಯೋಗದೊಳಿರ್ದಂ ೫೦

ದ್ವಿಶ[2]ತ(ವ)[2] ಷೋಡಶಪ್ರಭೆಯಿಂ
[3]ಎಸೆವ[3] ಷಟ್ತ್ರಿಂಶದಿ ನಿಲಿಸಿಯುವನಾರರೊಳಂ
ಎಸೆವಾರ ಮೂರರಿಂದಂ
ಸಸಿನದೊಳೆರಡೊಂದೆಯಾಗಿ ಜಾನಿಸುತಿರ್ದಂ ೫೧

ವ ‖ ಶಿವಜ್ಞಾನಾಗ್ನಿಯಿಂದಷ್ಟಮದ ಮುಂತಾದ ದುರ್ಗುಣಂಗಳಂ ಸುಟ್ಟುಂ ದೇಹಭಾವವಳಿದುಂ ಚಿತ್ತವಂ ಸ್ವಸ್ಥವಂಮಾಡಿ ಶಿವನ ಖಂಡಿತತ್ವನರಿದುಂ ಮತ್ತಂ ಮುನ್ನ ಶ್ರೀಗುರುಪ್ರಣವಮಂತ್ರಧ್ಯಾನದಿಂ ಬ್ರಹ್ಮರಂಧ್ರನಾದ ಚೈತನ್ಯ[4](ಕ)[4]ಲೆಯುಂ ತೆಗೆದು ಕರಸ್ಥಲದೊಳಿರಿಸಿದ ಇಷ್ಟಲಿಂಗಂ ಸರ್ವಾಂಗದಲ್ಲಿ ಬೆಳಗಿ ತೋರಿದ ಪ್ರಣವ ಮಂತ್ರವೆ ಪ್ರಣವನಾದಕಲಾಸ್ವರೂಪನೆಂದರಿದುಂ ಪ್ರಣ[5](ವೋ)[5]ಹಂ ಪ್ರಣ[6](ವೋ)[6]ಹವೆಂಬ ಜಪದಿಂದ ಪ್ರತ್ಯಕ್ಷವಾದಪ್ರಣವನಾದಕಲಾಸ್ವರೂಪಮಂ ಭಾವಮನದೃಕ್ಕಿಂದ ಮೂಲಪ್ರಣವಮಂ ತಿಳಿದುಂ ಜಾನಿಸುತಿರ್ಪ ಸಿದ್ಧಲಿಂಗೇಶ್ವರನ ಜ್ಞಾನ[7]ಪ್ರಭೆ[7] ಸರ್ವಾಂಗದೊಳ್ [8]ಪೂರ್ಣೀ[8]ಕರಿಸಿ ಬೆಳಗುತ್ತಂ ಮತ್ತಂ ಬ್ರಹ್ಮರಂಧ್ರದ ಸಹಸ್ರದಳ ಕಮಲದಲ್ಲಿಯ ಚಿಜ್ಜ್ಯೋತಿರ್ಲಕ್ಷ್ಯಕ್ಕೂ ನಿಖಿಳತತ್ತ್ವಂಗಳಿಗೆಯೂ ಮೇಲ್ಪೊದಕೆಯಾಗಿ ಬ್ರಹ್ಮರಂಧ್ರದಚಿತ್ಕಳೆ ಪರಬ್ರಹ್ಮಾದಿಗಳನೊಳಕೊಂಡು ಶಿವೋಹಂ ಎಂದುಂ ಅಲ್ಲಿಂದಂ ಮುಂದೆ ಪರವೊಂದಿಲ್ಲದುದಂ ಅರಿದು ಶಿವೋಹಂಭಾವದರಿವು ತನ್ನ ಶಿವತತ್ತ್ವದಲ್ಲಿ ನಿಂದುಂ ಚಲಿಸದೆ ಶಿವಾನಂದಸುಖಮಂ ಸುಖಿಸುತ್ತ ಸಿದ್ಧಲಿಂಗೇಶ್ವರಂ ಧ್ಯಾನಯೋಗದೊಳಿರ್ದಂ ೫೨

---

1. ಧ್ಯಾಸಿಸುವ ಧ್ಯಾನ (ಅ) ; ಧ್ಯಾಸಿಸು x x (ಇ). 2. ತ (ಅಇ). 3. ಯುನವಿ (ಅಇ).
4. ಖ (ಅಇ). 5. ಮೋ (ಅಇ). 6. ಮೋ (ಅಇ). 7. x (ಇ). 8. x ರ್ಣೀ (ಇ).

ಉ. ವೃ.

ಧ್ಯಾನಮೆ ಧಾರಣಂ ಅದರ ಯೋಗದೊಳಿರ್ದನು ತಾನದೆಂತೆನ-
ಲ್ಯೂನವಿಶಾಲಭಾವಮನದಿಂದ್ರಿಯಪಂತಿಗಳಲ್ಲಿಯಿಷ್ಟವಂ
ಜ್ಞಾನಸಿೀಧೀ[1]ಶ(ತಾನು)[1] ಗುರುಸಂತತ ಸೌಖ್ಯವಿಚಾರದಿಂದಲುಂ
ಭಿನ್ನ[2](ತೆ)[2] ತೋರದಿರ್ಪವರ ಚೆಲ್ವಿನಧಾರಣಯೋಗಯೋಗದೊಳ್ ೫೩

ಖಂಡಿತವಾದ ಚಕ್ರದಳವರ್ಣದ ಧಾತುವ ನುಂಗಿ ತೋರುವೀ
ಖಂಡಿತವಲ್ಲದಿರ್ಪ ಪರಬೊಮ್ಮದ ಲಿಂಗವ ಪೂರ್ಣಭಾವದಾ-
ಖಂಡಿತರೂಪಿನಿಂದ[3]ದುವೆ ದೃಕ್ಕಿಗೆ ತೋರದ[3] ಭಿನ್ನಭಾವದಿಂ
ಖಂಡಿತವಿಲ್ಲವಾದ ಶಿವಧಾರಣಯೋಗವಮದುರ್[4](ಯಿ)[4]ರ್ದನುಂ ೫೪

ಮಂಜುಳಮಪ್ಪ ಶಂಕರನ ತತ್ತ್ವವ ಭಾವಿಸಿ ಚಿತ್ತದಿಂದಲುಂ
ರಂಜಿಪ ಮಾಯೆಯನ್ನು ಸಲೆ ಮಾಡಿದ ಚಿತ್ಕಲೆಯಂಗದಿಂದಲುಂ
ರಂಜನೆಯಿಲ್ಲದಿರ್ಪ ಪರಿಪೂರ್ಣದ ಬೊಮ್ಮದ ಲಿಂಗವನ್ನು ತಾ-
ಳ್ದುಜ್ಜುಗವಾದ ಧಾರಣಸುಯೋಗದೊಳಿರ್ದನು ಸಿದ್ಧಲಿಂಗನುಂ ೫೫

ವ ॥ ಇಷ್ಟಪ್ರಾಣಭಾವವೆಂಬ ಲಿಂಗತ್ರಯುವಂ ಸ್ಥೂಲಸೂಕ್ಷ್ಮಕಾರಣವೆಂಬ ತನುತ್ರಯದಲ್ಲಿತಾಳ್ದು ಮತ್ತಂ ಆಚಾರಾದಿ ಮಹಾಲಿಂಗಾಂತವಾದಾರುಲಿಂಗಮಂ ಭಕ್ತಾದ್ಯೈಕ್ಯಾಂತವಾದಾರುಲಿಂಗದಿಂ ತಾಳ್ದುಮಿವೆ[5]ಲ್ಲ(ಕ್ಕಂ)[5] ಮೂಲಕಾರಣವಾದ ಇಷ್ಟಲಿಂಗಧ್ಯಾನದ ಚಿತ್ಪ್ರಭಾಕಲೆಯಂ ಪರಿಪೂರ್ಣದಿಂ ಧರಿಸಿರ್ಪ ಧಾರಣಯೋಗದೊಳಿರ್ದಿರ್ದುದಂ ೫೬

ಉ. ವೃ.

ಧಾರಣಮೆಂಬ ಯೋಗಮದು ತಾನೆ ಸಮಾಧಿಯುಮೆಂಬುತಿಷ್ಟದೊ-
ಳ್ಕಾರಣಸಂಚಯಂಗಳಹುದಾಗಿಯು ತಾನಿದಿರೆಂಬುದಿಲ್ಲದು-
ದ್ವಾರ(?)ವಿಚಾರಭಾವಪರಿಪೂರ್ಣಸುಚಿದ್ಘನಲಿಂಗದಲ್ಲಿ ವಿ-
ಸ್ತಾರಚಿದೃಕ್ಕಿನಿಂದಚಲಯೋಗಸಮಾಧಿಯೊಳಿರ್ದ ಸಿದ್ಧನುಂ ೫೭

ಲಿಂಗವ ಬೇರೆಮಾಡಿ ನಡೆವಾಗುಣವಿಲ್ಲದ ಭಿನ್ನಭಾವದಿಂ
ಲಿಂಗವು ತಾನೆಯೆಂಬ ಗುಣನಿಂದು ಸುಚಿತ್ತದಿ ಪೂರ್ಣಭಾವದಿಂ
ಲಿಂಗದ ಕ್ರೀಯುಮೆಲ್ಲ ನಿಜನಿಃಕ್ರಿಯೆಯಾಗಿಯೆ ಯೋಗದಿಂದವೇ
ಸಾಂಗಮುದಾಗಿ ತೋರ್ಪ ಸುಸಮಾಧಿಯೊಳಿರ್ದನು ಸಿದ್ಧಲಿಂಗನುಂ ೫೮

1. ಶ (ಅಇ). 2. ಮೂ. (ಅಇ). 3. ವೆ ದೃಕ್ಕಿಗೆ ತೂಲ (ಅಇ). 4. ಶಿ (ಅಇ).
5. ಲ್ಲಿ (ಅಇ).

ಚಿತ್ತಸುಬುದ್ಧಿಯಲ್ಲಿ ಘನಬುದ್ಧಿಯಹಂಕರದ[1](ಲ್ಲಹಂಕರಂ)[1]
ಮತ್ತೆ ಮನಸ್ಸಿನಲಿ ಮನಜಾನದೊಳಂ ವರಜಾನಭಾವದ-
ಲ್ಲುತ್ತಮ ಭಾವಚಿತ್ಕಲೆಯೊಳುಂ ಕಲೆ ವಸ್ತುವಿನಲ್ಲಿ ಸಿಕ್ಕಿಯಾ
ವಸ್ತುವೆ ತಾನೆಯಾವಚಲಯೋಗಸಮಾಧಿಯೊಳಿರ್ದ ಸಿದ್ಧನುಂ ೪೯

ಲಿಂಗವ ನುಂಗಿಕೊಂಡದೃಗುವಾ ದೃಗುವಂ ನೆರೆ ನುಂಗಿಕೊಂಡುದು-
ತ್ತುಂಗಮನಂ ಮನಸ್ಸುವನು ನುಂಗಿದುದಾಗಲೆ ಭಾವ ಭಾವಮುಂ
ಮಂಗಲಮಾದ ಚಿತ್ಕಲೆಯ ನುಂಗಲು ಮತ್ತದ ನುಂಗೆ ವಸ್ತುವಂ
ಹಿಂಗದೆ ಸಿಕ್ಕಿ ಸಿದ್ಧಿ ಪರಕಾಷ್ಠಮದಾದ ಸಮಾಧಿ[2](ಯೋಗದೊ)[2]ಳ್ ೫೦

ವ ॥ ಮತ್ತಮಾ ಸಿದ್ಧಲಿಂಗೇಶ್ವರಂ ಭಾವದದೃಷ್ಟದಿಷ,ಲಿಂಗದ ಧ್ಯಾನಧ್ಯೇಯವೊಂದಾದ ಪರಮಾನಂದವನಂಗಂಗೊಂಡ ಚಿದ್ರೂಪವಹ ಶೂನ್ಯಾಕಾರಲಿಂಗವನುಂ ಆ ಲಿಂಗದಿಂದಿತ್ತಣ ಬ್ರಹ್ಮಸ್ಥಾನದಲ್ಲಿರ್ಪ ಓಂಹ್ರಾಂಹ್ರೀಂಹ್ರುಂಹ್ರೈಂ ಎಂಬ ಪಂಚಬೀಜಾಕ್ಷರಲಿಂಗವನುಂ ಅಲ್ಲಿಂದಿತ್ತಣಾಜ್ಞಾಸ್ಥಾನದಲ್ಲಿಯ ಹಂ ಕ್ಷಂ ಎಂಬ ಚರಾಚರಲಿಂಗವನುಂ ಅಲ್ಲಿಂದಿತ್ತಣ ವಿಶುದ್ಧಿಸ್ಥಾನದಲ್ಲಿಯ[3](ಅ)[3]ಕಾರಾದಿ[4](ಅಃ)[4]ಕಾರಕಡೆಯಾದಷೋಡಶಕಳಾಲಿಂಗವನು ಅಲ್ಲಿಂದಿತ್ತಣನಾಹತಸ್ಥಾನದಲ್ಲಿಯ ಕಕಾರಾದಿಠಕಾರಾಂತವಾದ ದ್ವಾದಶಲಿಂಗವನುಂ ಅಲ್ಲಿಂದಿತ್ತಣ ಮಣಿಪೂರಕ ಸ್ಥಾನದಲ್ಲಿಯ ಡಕಾ[5]ರಾ(ದಿಫಕಾರಾಂತ)[5]ವಾಗಿ ವ್ಯಾಪಿಸಿರುವ ದಶವಿಧಲಿಂಗವನುಂ ಅಲ್ಲಿಂದಿತ್ತಣ ಸ್ವಾದಿಷ್ಠಾನಸ್ಥಾನದಲ್ಲಿಯ ಷಡಾಂಶಿಕವಾಗಿ ಸ್ಥಾನಗೊಂಡಿರ್ಪ ಬಕಾರಾದಿ ಲಕಾರಾಂತವಾದ ಷಡ್ವಿಧಲಿಂಗವನುಂ ಅಲ್ಲಿಂದಿತ್ತಣ ಆಧಾರಸ್ಥಾನದಲ್ಲಿ ಚೇತರಿಸುತ್ತಂ ಇಹ ವಕಾರಾದಿ ಸಕಾರಾಂತ ವಿಕಲವಿಕೃತಿಮೂಲಲಿಂಗವನುಂ ಆವರಿಸಿಕೊಂಡ ಅನುಭಾವ ಭಾಷ್ಯರ್ಥವಾದ ಸರ್ವಜ್ಞತ್ವ ತೃಪ್ತಿತ್ವ ಅನಾದಿಬೋಧತ್ವ ಸ್ವತಂತ್ರತ್ವ ನಿತ್ಯತ್ವ ಅಲುಪ್ತಶಕ್ತಿತ್ವ ಚಿದಂಗವಾರರಲ್ಲಿ ಶಿವ ಸದಾಶಿವ ಈಶ ಬ್ರಹ್ಮತತ್ತ್ವ ಈಶ್ವರ ಈಶ ಇಂತೀ ಷಡುತತ್ತ್ವಗಳಿಗಾಶ್ರಯವಾದ ಪರಾ ಆದಿ ಇಚ್ಛಾ ಜ್ಞಾನ ಕ್ರಿಯೆಯೆಂಬ ಚಿತ್ಪ್ರಾಣಶಕ್ತಿಯೈದು ಪರಿಪೂರ್ಣಪ್ರಕಾಶವುಳ್ಳ ನಿರುಪಾಧಿಕ ಜ್ಯೋತಿರ್ಮಯವಾದ ಚಿದಗ್ನಿಯಿಂತಿವನೊಳಕೊಂಡ ಚಿದಾಕಾಶ ಆ ಚಿದ್ಘನವನೊಳಕೊಂಡ ಘನಲಿಂಗ ಆ ಘನಲಿಂಗವೇದ್ಯವಾದ ಸಿದ್ಧಲಿಂಗೇಶ್ವರಂ ಆ ಪ್ರಣವಚ್ಛವಿಮಂಡಲದೊಳಿರ್ದು ಆ ಪ್ರಣವಸ್ವರೂಪ ತಾನೆಯಾಗಿ ಆ ಪ್ರಣವವನುಚ್ಚರಿಸುವ ಶಬ್ದ ನಿಂದು [6]ನಿವಾ[6]ತ ಜ್ಯೋತಿಯಂತೆ ಪರಂಜ್ಯೋತಿಸ್ವರೂ[7](ಪವೇ ತಾ)[7]ನಾದ[8]ಕೊ(ಲ್ಲ)ವ್ವೆ[8]ಯಂತೆ ಲಿಂಗ

1. ಲ್ಯರಂ (ಅಇ). 2. ಯಾದಿಯೊ (ಅಇ). 3. ಆ (ಅಇ). 4. ಆ (ಅಇ).
5. (ಅಇ). 6. x (ಇ). 7. ಪೇತ (ಅಇ). 8. ಕೊಲ್ಲವೆ (ಅ) ಕೊಲ್ಲುವೆ (ಇ)

ವನೆವೆಯಿಕ್ಕದೆನೋಡಿ ಲಿಂಗಧ್ಯಾನದೃಕ್ಕಿಂ ನಿಬ್ಬೆರಗಾ[1](ದ)[1] ಅನಿಮಿಷ ಕೇಶಿ [2]ಯ(ರ)ಂ[2]ತೆ ಏಕಾಂತಸ್ಥಲದಲ್ಲಿ ಕುಳಿತು ಜ್ಞಾತೃ ಜ್ಞಾನ ಜ್ಞೇಯಮೆಂಬ ತ್ರಿಪುಟಿಯ ನಳಿದುಳಿದ ಶಿವಲಿಂಗದಲ್ಲಿ ಸಮರಸಸಮಾಧಿಯೊಳಿರ್ಪ ನಿಸ್ಸಂಗಿದೇವನಂತೆ ಮತ್ತಂ ಜಂಗಮದೇವರ್ಗೆ ತನ್ನಲ್ಲಿರ್ದ ಅಷ್ಟಮಹದೈಶ್ವರ್ಯ[3]ಮುಂ[3] ಮುಂತಾದವಂ ಕೊಟ್ಟಂ ತಾಂ ವಿರಕ್ತನಾಗಿಯೇಕಾಂತಸ್ಥಳದಲ್ಲಿ ಪದ್ಮಾಸನದಲ್ಲಿ ಕುಳಿತುಂ ಇಷ್ಟಲಿಂಗಧ್ಯಾನ ದೊಳೊಡೆವೆರೆದುಂ ನಿಬ್ಬೆರಗಿನಂತರಾಳದೊಳಿರ್ದ ನಿರಾಳದೇವನಂತೆ ಅಷ್ಟಾಂಗ ಯೋಗಮಂ ಬಲಿದುಂ ಕ್ಷುತ್ತೃಷಾದಿಗಳ ನಿಲಿಸಿ ಇಷ್ಟಲಿಂಗಧ್ಯಾನಾಮೃತದಿಂ ನಿತ್ಯತೃಪ್ತನಾಗಿ ಶಿವಸಮರಸ ಸಮಾಧಿಯೊಳಿರ್ಪ ಶಿವಯೋಗಿ ದೇವನಂತೆ ಪರಬ್ರಹ್ಮ ಸ್ವರೂಪವಾದ ಇಷ್ಟಲಿಂಗದಲ್ಲಿ ಶರೀರಾದಿ ಕರಣೇಂದ್ರಿಯಗಳಂ ಲೀಯವಮಾಡಿ ಲಿಂಗ ಧ್ಯಾನದ ಸಮರಸ ಸದ್ಭಾವದಲ್ಲಿ ನಿಬ್ಬೆರಗಿನ ಸಮಾಧಿಯೊಳಿರ್ಪ ನಿರಾಳದೇವಿಯಂತೆ ತಳತಳಿಸಿ ತೊಳತೊಳಗಿ ಬೆಳಗುವ ಚಿತ್ಪ್ರಭಾಲಿಂಗದ ಸಂಗಸಮರಸಸಮಾಧಿಯೊಳಿರ್ಪ ಶಿವಯೋಗಿಮಲ್ಲರಸರಂತೆ ಸಿದ್ಧಲಿಂಗೇಶ್ವರನಿರುತ್ತಿರೆಯಿರೆ ೬೦

ಕಂ. ಕರತಳದ ಲಿಂಗದಿಂದಂ
ಕರಸ್ಥಲದಗ್ರವನೆ ನೋಳ್ಪನನುಮಿಷದಿಂದಂ
ಶರಿರನಿಶ್ಚಲ[4]ನ[4]ದಿಂದಂ
ಗುರುವರನಿಹ ಬಗೆಯನೇನೆಂದುಸುರ್ವೆಂ ಕೊಸರ್ವೆಂ ೬೧

ಬೇರುಂ ಬೇರುಗಳಿಲ್ಲದ
ನೀರಂ ತನ್ನನುವ ತಾನೆ ಜಾನಿಸಿಯುದರೊಳ್
ಬೀರುತ ಸಮರಸದಿರವಂ
ಬೇರಾಗದೆಯಿದ್ದನಚಲನ ದ್ವಯರಥ್ವಂ ೬೨

ಇಂತಿಹ ಯತಿಪನ ಗದ್ದುಗೆ
ಸುತ್ತಂ ಗೆದಲಿಕ್ಕಿ ಪುತ್ತವೆದ್ದುದು ವಾಲ್ಮೀ-
ಕೆತಿಪನ ಮೆಯ್ಯಂ ಪೊರ್ದಿದ
ಪುತ್ತದವೊಲ್ತೋರುತಿರ್ದುದಾ ಗೆದಲ್ಮಣ್ಣಂ ೬೩

ಗಡ್ಡದಿ ಕಡಂದುರು ಗೂಡಂ
ದೊಡ್ಡಿತ್ತಪ್ಪಂತೆ ಮಾಡಿಯುದರೊಳ್ ಮರಿಯಂ
ಮಡಗಿಯದಕ್ಕಾಹರಮಂ
[5]ಕೊಡುತುಂ[5] ಮೊರೆವುತ್ತಲಿಕ್ಕು ಕಂದರದೆಡೆಯೊಳ್ ೬೪

---

1. ಗಿ (ಅಇ). 2. ಯಂ 3. x (ಇ). 4. x (ಇ). 5. ಕೊಡ್ಡುತ್ತ (ಅಇ).

[1](ಕೆ)[1]ದರ್ದಿಳಿಗೆಯ್ದಿದ ಜಡೆಗಳ
ಪೊಪರೊಳ್ ಮೊಲಸಿಕ್ಕೆಗೊಂಡು ಶಿಶುಗಳ ಪೆತ್ತುಂ
ಪದರದೆ ಮರಿಗಳ ಸಲುಹುವ
ಮುದದಿಂದಿರುತಿರ್ಕುಮೆತಿಯು ಬೆನ್ನಡೆ[2]ಯೆಡೆ[2]ಯೊಳ್ ೬೬

ಹುಲಿ ಹುಲ್ಲಹಿ ಮುಂಗುರಿಗಳ್
ಬಲುಗಜಕಂಠೀರವಂಗಳುಂ ಮುಂತಾದವು
ನಲವಿಂ ತಮ್ಮಯ ಜಾತಿಯ
ಕಲುಷಿತಮಂ ಬಿಟ್ಟುವಿರ್ಪವಾ[3](ಯತಿ)[3]ಯೆಡೆಯೊಳ್ ೬೭

ವ॥ ಸಿದ್ಧಲಿಂಗೇಶ್ವರನಿಂತಿರ್ಪಲ್ಲಿ ಅತ್ತಲಾ ಕಗ್ಗರೆಯ ಗೌಡಂ ತನ್ನ ಗ್ರಾಮವನಿರಿದ ಶಬರಾಧಿಪನಿಂ ಪ್ರಮಾಣವಂ ಪಡೆದು ಕೆಲವು ಗೃಹಸ್ಥರಂ ಕೂಡಿಕೊಂಡು ಬಂದು ಎಂದಿನಂತೆ ಗೃಹಂಗಳಂ ಕಟ್ಟಿ ನಮ್ಮೂರಂ ಇರಿವುದ ಸೂಚಿಸಿದ ಸಿದ್ಧಲಿಂಗೇಶ್ವರನೆಲ್ಲಿಗೆ ಪೋದನೋ ಇಂದಿಂಗಾರು ತಿಂಗಳಾಮದೆಂದು ತಮ್ಮೊಳ್ತಾವು ನುಡಿವುತ್ತಂ ಪುಷ್ಪವನೆತ್ತಲೆಂಸು ತೋಟಕ್ಕಂ ಬಂದು ಯತಿಪನಿಪ್ಪಿರವಂ ಕಂಡಾಶ್ಚರ್ಯಂ ಬಟ್ಟು ವಂದಿಸಿ ಸಮೀಪಕ್ಕೆ ಬಪ್ಪನ್ನೆಗಂ ಜಡೆಗಳ ಪೊವರೊಳಿರ್ದ ಮೊಲಂ ಜೆದರ್ದೋಡೆ ಆ ಗೌಡಂ ಬೆದರ್ದು ಹಿಮ್ಮೆಟ್ಟಿ ಮತ್ತೆ ಮುಂದಕ್ಕೆ ನಡೆದು ಬೆನ್ನಿಂತಣ ಮೊಲಶಿಶುಗಳಂ ಕಂಡಂಜಿ ಗೂಡಂ ಅಪ್ಪಣೆಯಿಲ್ಲದೆ ತೆಗೆಯಲಂಜಿ ಮತ್ತಂ ಸುತ್ತಣ ಪುಲ್ಪೊದರಂ ಕಿತ್ತು ರಜವ[4]ಂಬೋ[4]ಸರಿಸಿ ಸಮ್ಮಾರ್ಜನಮನೆಸಗಿಯೆಲ್ಲರುಂ ಕುಳಿತುಂ ಪೊನ್ನಾಂಬಲದಲ್ಲಿ ಶಿವಚಿತ್ರನೆಂಬ ವಿರತಂ ಶಿವಯೋಗದಿಂ ಕ್ಷುತ್ತೃಷಾದಿಗಳಂ ಗೆದ್ದು ತಿಂಗಳಿಗೊರ್ಮೆ ಪ್ರಸಾದಭೋಗಮಂ ಮಾಳ್ಪನೆಂಬರು ಮತ್ತಂ ಪೊನ್ನಾಂಬಲದಲ್ಲಿ ಚಿದಾನಂದನೆಂಬ ವಿರತನಂ ಚೋರರೊಯ್ದು ಅರಣ್ಯದೊಳೊಂದು ಸರುವಿನ ವೃಕ್ಷಮೂಲಕಂ ಕಟ್ಟಿ ಹೊದ್ದುಪದಂ ಕಿತ್ತುಕೊಂಡೊಯ್ಯೆ ಆ ಕಟ್ಟಿನಲ್ಲಿ ಶಿವಧ್ಯಾನಪರವಶ[5]ನಾಗಿ[5] ಕ್ಷುತ್ತೃಷಾದಿಗಳಂ ಮರೆದು ನಾಲ್ಕು ತಿಂಗಳಿರೆ ಪೊನ್ನಾಂಬಲೇಶಂ ಪೋಗಿಯಾ ಕಟ್ಟಂ ಬಿಟ್ಟು ಕರಿತಂವನೆಂಬರುಂ ಮತ್ತಂ ಏಕಪಾದ ಮುನೀಶಂ ತೃಣಧಾನ್ಯದನ್ನವನುಂಬ ವೇಳೆಯೋಳೀಶಂ ಭಿಕ್ಷುಕನಾಗಿ ಬೇಡೆ ಕೊಟ್ಟು ಮೂರುವರೆ ತಿಂಗಳಿದ್ದನೆಂಬರು ಮತ್ತಂ ಚಿರುಪುರಿಯೆಂಬಾತಂ ಸಮುಪೂಜಾಚಾರಕ್ಕೆ ಜಂಗಮಂ ದೊರಕದಿರೆ ಶಿವಯೋಗಪರಾಯಣನಾಗಿ ಕ್ಷುತ್ತೃಷೆಗಳಂ ಮರೆದು [6]ನಾಲ್ವತ್ತೈದು[6]ದಿವಸ[7]ವಿರ್ದ[7]ನೆಂಬರುಂ ಪೂರ್ವದಲ್ಲಿ ಈಗಳೀ ಸಿದ್ಧಲಿಂಗೇಶ್ವರಂ ಶಿವಯೋಗದಿ ಮೈಮರೆದು[8](ಅರು)[8]ದಿಂಗಳಿಂ ಕ್ಷುತ್ತೃಷಾದಿಗಳಿಲ್ಲದಿರ್ಪನೆಂದು ಕೊಂಡಾಡುತ್ತಿರ್ಪಲ್ಲಿ ೬೮

---

1. ಗೆ (ಅಇ). 2. x (ಇ). 3. ರೆಡೆ (ಅಇ). 4. x (ಇ). 5. x (ಇ).
6. x (ಇ). 7. x (ಇ). 8. ಆರು (ಅಇ).

ಉ. ವ.

ವಸ್ತುವಿನಲ್ಲಿ ಸಿಕ್ಕಿದ[1](ಸು)[1]ಸತ್ಕಲೆಭಾವಕೆ ಬಂದು ಭಾವದಿಂ
ಮತ್ತೆ ಮನಸ್ಸಿಗೈದಿ ಮನದಿಂ [2](ದೃಗಿಗೆಯ್ದುತ)[2] ದೃಕ್ಕಿನಿಂದಲುಂ
ಹಸ್ತದೊಳಿರ್ಪ ಲಿಂಗದೊಳು ನಿಂದುದೆಡಂಬಲನೀಕ್ಷಿಸುತ್ತಲುಂ
ಉತ್ತಮಸಿದ್ಧಲಿಂಗ ನುಡಿದ[3]ಂ ಪ್ರ[3]ಭು ಬೇಗದಿ ಪೋಪುದೆಂಬುತಂ ೬೯

ಆ ಪ್ರಭುಮುಖ್ಯವಾದ ಹರಭಕ್ತರು ವಂದಿಸಿ ಪೋದೆವಂದೆ ಸು
ಕ್ಷಿಪ್ರದಿ ಯಿಂದಿಗಾರುವರೆ ತಿಂಗಳುವಾದುದು ದೇವ ಬೇಡರಿಂ
ಸುಪ್ರಮಣಂಗಳಂ ಪಡೆದು ಬಂದೆವು ಕಟ್ಟಿದೆವಿಲ್ಲಿ ಗೇಹಮಂ
ಅಪ್ರತಿಸಿದ್ಧಲಿಂಗಗುರು ನಿಮ್ಮವ ಕಾಣುತ ಬಂದೆವೆಂಬುತಂ ೭೦

ಕಣ್ಣೆವೆಯಾಟದೊಳ್ ಹರಿವಿರಿಂಚಿಗಳಂ[4] (ಸೃಜಿಸುತ್ತೆ)[4] ಹೊಂದಿಪಾ
ಪುಣ್ಯಸ್ವರೂಪ[5]ಲಿಂ[5]ಗವನು ಪೂರ್ಣಿಸಿ ಜಾಸಿಪ ಯೋಗಿರಾಜಗಾ
ಗಣ್ಯದ ಕಾಲ ತಾಂ ನಿಮಿಷವಾಗಿಹುದೆಂಬುದದೀಗ ಸಿದ್ಧನೊ
ಳ್ಕಾಣಿಸಿತೆಂದು ಭಕ್ತಜನಕೀರ್ತಿಸಿತಾಗ ಮಹೋತ್ಸವಂಗಳಿಂ ೭೧

ಕಂ. ಮೊಲ ಪುತ್ತ ಕಡಜ ಗೂಡಂ
ನಲವಿಂದವ ತೆಗೆವೆವೆಂದು ಬಿನ್ನವಿ[6](ಸೆ ಜನಂ)[6]
ಮೊಲ ಮರಿ ತೆಗೆಯೆ ಸತ್ತಪ
ವೊಲವಿಂದಿರಲಿನ್ನು ಬಲಿಯೆ ತೆಗೆವಿರಿಯೆಂದಂ ೭೨

ಹತ್ತೆಂಟು ದಿವಸ ತೀರಲು
ಮತ್ತಂ ಮೊಲ ಬಲಿ[7]ದ ಶಿಶುಗಳಿಂ[7] ಕೊಂಡೊಯ್ಯಲು
ಹುತ್ತವ[8]ನೊಡೆ[8]ದಾ ಭಕ್ತರು
ಮೊತ್ತದ ಜಡೆಹೊವರನೊವರಿ ಚೆಂದಂಗೆಯ್ವರ್ ೭೩

ಕಡಜಶಿಶು ಬಲಿದು ಪೋದುದ
ದೃಢದಿಂದವರರಿದು ತೆಗೆದು ಶರಿರದ ಧೂಳಂ
ತೊಡೆದು ಮೃದುವಸ್ತ್ರದಿಂದಂ
ಸಡಗರದಿಂ ಮಜ್ಜನಕ್ಕೆ ಬಿನ್ನಪ ಗೈದರ್ ೭೪

---

1. ದ. (ಅಇ). 2. ದೃಕ್ಕಿಂಗುಗೆಯ್ವುವಿ (ಅ) ದೃಗುಗೆಯ್ವುವಿ (ಇ). 3. x (ಇ).
4. ನೆರೆಹುಟ್ಟಿಸಿ (ಅಇ). 5. x (ಇ). 6. x (ಅಇ). 7. x (ಇ). 8. ನೋಡ (ಅಇ).

ಬಿನ್ನಹಮಂ ಕೈಕೊಂಡುಂ
ಉನ್ನತತೈಲವನು ತಂದು ಒತ್ತುವೆವೆನ್ನುತ
ಉನ್ನಿಸುತ ಮಸ್ತಕದೊಳ್
[1]ಭಿನ್ನ[1]ಮದಾಗಿರ್ಪ ರಂಧ್ರವಂ [2]ಕಂ(ಡೆ)[2]ಂದರ್ ೭೫

ಮಸ್ತಕದೊಳ್ ಬಿಲವಿದೆಯಿದ
ವಿಸ್ತರಿಪುದು ಗುರುವೆಯೆಂದು ಬಿನ್ನವಗೈಯ್ಯ[3]ಲ್
(ನ್ಯ)[3]ಸ್ತಮನನಾಗೆ ಲಿಂಗದಿ
ಹಿಸ್ತಿತು ಚಿಜ್ಜ್ವಾಲೆ ತಾಗಿ ಹೆಡ[4](ದ)[4]ಲೆಯೆಂದಂ ೭೬

ಸದ್ಭಕ್ತರು ಕೇಳುತಲುಂ
ತದ್ಬಿಲವಂ ನೋಡಿ ನೋಡಿಯಚ್ಚರಿಪಡುತುಂ
ಅದ್ಭುತ ತಂತಮ್ಮನದ
ಲ್ಲುದ್ಭವಿಸಿದಯೂಹೆಯಿಂದ ಪೊಗಳುತಲಿರ್ದರ್ ೭೭

ವ|| ಈ ಸಿದ್ಧಲಿಂಗೇಶ್ವರನ ಶಿರಸ್ಸಿಂಗಂ [5]ಅಹಂ[5]ಕರಿಸಿ ಶಿರಸ್ಸಂ ಪೋಗಲಾಡಿದ ವಿರಿಂಚಿಯ ಪಂಚಮಶಿರಸ್ಸು[6](ಮುಂ)[6] ಸರಿಯಲ್ಲಂ ಹುಟ್ಟಿದೇಳನೆಯ ದಿನಕ್ಕೆ ತಾರಕನಂ ಕೊಂದ ಷಣ್ಮುಖನಾರುಶಿರಸ್ಸುಗಳ್ಸರಿಯಲ್ಲಂ ರಾಮನಿಂ ಪೊಡೆಸಿಕೊಂಡ ರಾವಣದಶ ಮೂರ್ಧ್ನಿಗಳ್ ಸರಿಯಲ್ಲಂ ಈಶನಿಂ [7]ಹ[7]ರಳುವಿಲ್ಲಿಂದೆಸಸಿಕೊಂಡ (?) ಕೃಷ್ಣನ ಮೂರು ಮಸ್ತಕಂಗಳ್ ಸರಿಯಲ್ಲಂ ತನ್ನಲ್ಲಿ ವೈಕರಣಂಗಳಂ (?) ಕೇಳ್ವ ಸಾವಿರ ವಿದ್ವಾಂಸ[8](ರಂ)[8] ವಿಷವುಗುಳಿ ಕೊಂದ ಶೇಷನ ಸಾವಿರ ಪ್ರಾರಭ್ಯಂಗಳ್ ಸರಿಯಲ್ಲಂ ಮತ್ತಂ ಮೋಟಮಲ್ಲುಗನಿಂ ಗಾಯವಡೆದ ದಶರಯ್ಯನ ಪ್ರೇರಿತದಿರವೊ ಭವಿಯಾಗಿ ಪೂರ್ವರಾಜಂ ಯುದ್ಧಮುಖದಿಂ ಭಂಗಿತನಾಗಿ ಜಂಗಮವೇಷದಿಂ ಬಂದು ತಿವಿದಡೆ ಆ ಜಂಗಮವ ತನ್ನ ಸಬಳಿಗರ್ ತಿವಿಯೆ ಬರೆಯದನರಿದು ಆ ಜಂಗಮವ ತನ್ನೊಡಲೊಳಡಗಿಸಿಕೊಂಡು ಲಿಂಗಾಕಾರವಾಗಿರೆ ಸಬಳದ ತುದಿ ತಾಗಿಯೊಡೆ[9]ದು ಲಿಂ[9]ಗಾಕಾರವಾದ ಸಿಂಧಮರಾಜನ ತಲೆಯಿರವೊ ಸಿರಿಯಾಳಂಗೆ ಕರ್ಬಂ ಪೊತ್ತ ಹರನ ಮೌಳಿಯಿರವೊ ಪಿಟ್ಟವ್ವೆಯ ಮನೆಯ ಮಂಕರಿ ಹೊತ್ತಿದ್ದೀಶನ ನೆತ್ತಿಯಿರವೊ ಕುಲಚ್ಚರೆಯಂ ಕೊಳದೊಳಿರ್ದ ಶಂಕರನಂ ಕರೆದು ತಲೆಯ ಹೆಟ್ಟಿದಂದು ಗುಣಿಹೋದ ಮಹೇಶನ ಮಂಡೆಯೊ ಪೊನ್ನಾಂಬಲದ ತಿಲ್ಲಿವನದಲ್ಲಿ ಮಾಣಿಕ್ಯವಾಚಕರ್ಪೇಳ್ದ

1. x (ಇ). 2. ಡಿಂತೆ (ಅಇ). 3. ಲ್ಯ (ಅಇ). 4. ತ (ಅಇ). 5. x (ಇ). 6. ಗಳ್ (ಅಇ). 7. ಹಹ (ಅಇ). 8. x (ಇ). 9. ದುಲಿಂ (ಅ); ದಲ್ಲಿ (ಇ).

ಸ್ತೋತ್ರಂಗಳಂ ತಪ್ಪಂ ಬರದೋದಲಾತಂ ಕಪ್ಪೆಯಂ ತಾಟಿಸಿಕ್ಕಿ ಶಿರಸ್ಸಂ [1](ಹೆ)[1]ಟ್ಟಿ ರಂಧ್ರವಾದ ಗಿರಿಶನುತ್ತಮಾಂಗದಯಿರವೊ ಕಣ್ಣಪ್ಪನ ಕೆರ್ಪುಗಾಲ ಹರಳೊತ್ತಿ ಛಿದ್ರವಾದ ಕಾಳಹಸ್ತೀಶನ ಆವೊತ್ತಿನಿರವೊ ಅಮುಗಿದೇವಯ್ಯಗಳ ನೆಯ್ಗೆಯ ಮರಂಗಳಂ ಹೊತ್ತಂದು ಕಬ್ಬುನದ ಮೊಳೆಯೊತ್ತಿ ರೋಕ(?) ವಾದ ಕಪಿಲಸಿದ್ಧ ಮಲ್ಲಿಕಾರ್ಜುನನ [2](ಗ)[2]ಟ (?) ದಿರವೊ ಸಾಂಖ್ಯನಾರ್ ಕಲ್ಲಲಿಡೆ ತಾಕಿ ಬಲವಾದ ಶಶಿಧರನ ಕೃಕಾಟಕದಿರವೊ ಅರ್ಜುನಂ ಬಿಲ್ಲ ಕೊಪ್ಪಿಂ ತಿವಿಯೆ ಕುಹರವಾದ ಶರಭ ರುದ್ರನ ತಾನದಿರವೊ ಸುತನಿಲ್ಲದುಣ್ಣೆನೆಂದಡೆ ನಿಂಬಿಯಕ್ಕಂ ಮುಸಲದಿಂದಿಮ್ಮೇಳ ಹೊಡೆದಂದೊಡೆದ ಭೂತೇಶನ ಮಸ್ತಕದಿರವೊ ಕುಷ್ಟಜಂಗಮಪ್ರಸಾದವನೊಲ್ಲೆ ನೆಂದಡೆ ಒನಕೆಯಿಂ ಮೆರೆಮಿಂಡರ್ ಘಾತಿಸಲ್ವಿಸ್ತೀರ್ಣವಾದ ಪಶುಪತಿಯಸ್ರಾದಿರವೊ ಕಲಿಯೆಂಬಾತಂ ದಾರಿಯಂ ಬಡಿವಲ್ಲಿ ಪೊಡೆಯಲೊಡೆದ ವಿಷಗಳನ ಪಕ್ಷದಿರವೊ ಪ್ರಸಾದದಿಂ ತೃಪ್ತನಾಗಿ ಶಿವಯೋಗಮಂಟಪದಲ್ಲಿ ಶಿವಭಕ್ತರ್‌ಸಮೇತವಾಗಿ ಕುಳಿತುಂ ಷಡಕ್ಷರಿಯ ಜಪವುಂ [3]ರುದ್ರಧ್ಯಾಸವುಂ[3] ಶಿವಪೂಜೆಯುಂ, ಸ್ವರೂಪುಚಿಂತನೆಯುಂ ಶಿವಾಗಮಾರ್ಥಜ್ಞಾನಮುಂ ಎಂಬ ಪಂಚಯಜ್ಞಮಂ ಶಿವಶರಣಂ ನಿತ್ಯವುಂ ಮಾಡ ವೇಳ್ಕೆಂದು ಪಂಚಪ್ರಕಾರದ ಯಜ್ಞಂಗಳಂ ಮಾಡುತ್ತಂ ಇರುತ್ತೊಂದಾನೊಂದು ದಿವಸದಲ್ಲಿ ಉಪಮನ್ಯುವಿದ್ದೆಡೆಗಂ ಶಿವಂ ಇಂದ್ರರೂಪಿಂ ಬಂದು ಹರನಿಂದೆ[4]ಗೈ(ಯೆ)[4] ದಂಡದಿಂ ತಿವಿಯೆ ಸುಸ್ಥಿರವಾದ ಶರ್ವನ ಶೀರ್ಷದಿರವೊ ಎಂದಾ ಭಕ್ತರು ಕೊಂಡಾಡು ತ್ತಂ ಆ ರಂಧ್ರದೊಳಮೃತವನ್ನೆರೆದು ಅರಳೆಯಿಂ ಮುಚ್ಚಿ ಮಜ್ಜನಕ್ಕೆರೆದು ಶಿವಾರ್ಚನೆ ಗೆಡೆಮಾಡಿ ಸಿದ್ಧಲಿಂಗೇಶ್ವರಂ ಶಿವಾರ್ಚನಂಗೈದು ಚರಲಿಂಗಂಗಳ್ ಸಹಂ ೭೮

ಉ. ವೃ.

ಸರ್ಪನು ಬಾಲಮೂಷಿಕನ ಕಾಣುತೆ ನಿಬ್ಬರದಿಂದೆ ಕೋಪದಿಂ
ಬರ್ಪುದ ಕಂಡು ಮೂಷಕನು ತಲ್ಲಣಗೊಂಬುತಲೈದಿ ಶೀಘ್ರದಿಂ
ಕೂರ್ಪಿನ ಸಿದ್ಧಲಿಂಗ ಧರಿಸಿರ್ಪೆವರ್ಗಂಥೆಯ ಪೊಕ್ಕಡಂಗಲಾ
ಸರ್ಪನು ಕೂಡೆ ಪೊಕ್ಕು ಮೊರೆದತ್ತದು [5](ಸಿ)[5]ಕ್ಕದ ಕೋಪದಿಂದಲುಂ ೭೯

ಮತ್ತದು ತೋಳಸಂದಿ ಗುದ ಬೆನ್ನುರ ಕಕ್ಷ ಸುವಕ್ಷ ಜಾನು ಕಂ
ದೊತ್ತರದಲ್ಲಿ ಮೂಷಕನುವೋಡಲು ಸರ್ಪನು ಕೂಡೆಯೋಡುತಲ್
ಮತ್ತದ ನುಂಗಲೆಂದುರಗ ಬಾಯಬಿಡುತ್ತ ಬಿಡುತ್ತ ಸುತ್ತುತಂ
ಒತ್ತುತ ಬಾಲವಂ ಮುರಿವ ಸರ್ಪನ ನೋಡುತ ಸಿದ್ಧಲಿಂಗನುಂ ೮೦

---

1. ಪೊ (ಅಇ). 2. ಘ (ಅಇ). 3. x (ಇ). 4. ಗೈ (ಅಇ). 5. ಚಿ (ಅಇ).

ವ॥ ಚಿಕ್ಕಸಂಗಮನಾಥದೇವರ ದಾಸಯ್ಯನ ಸುತನ ನಿರ್ಭೀತಿಗಟ್ಟಿಗೊಂಡಂತಿರ್ದ ಸಿದ್ಧಲಿಂಗೇಶ್ವರಂ

ಉ. ವೃ.

ಪ್ರಾಣದ ಭೀತಿಗಂಜುತಿಲಿ ಬಂದುದು ನಾವದ ಕಾಯುವೇಳ್ಕುಮಿಂ-
ದೂಣೆಯು[1]ಮಿಲ್ಲವೆಂದೆನುತ ಮೂಷಕನಂ ಬಗಲಲ್ಲವುಂಕಲುಂ[1]
ಕಾಣದೆ ಸರ್ಪನೋಡಿದುದು ಬೇಗದಿ ಸುಂಡಿಲಿ ಪೋದುದೆಂಬುತಂ
ಜಾಣನು ಸಿದ್ಧಲಿಂಗನಿಲಿಯುಂ ಬಿಡಲೋಡಿಕದೇ[2]ನನೆ[2]ಂದಪಂ ೮೧

ಕಂ. ಕಂ[3]ಡು(ಂ)[3] ಶಿವಭಕ್ತ್ರಭೂರ್
ಮಂಡಲಕಿದು ಚೋದ್ಯವೆಂದು ಕೊಂಡಾಡುತ್ತಿರೆ
ಕುಂಡಲಿಕುಂಡಲ ಶರಣಂ
ಖಂಡೇಂದುವ ಧರಿಸಿದವನ ಜಾನಿಸುತಿರ್ದಂ ೮೨

ನಾನಾದಿಕ್ಕಿನ ಭಕ್ತರ್
ನಾನಾಪಕ್ವಾನ್ನಫಲಾದಿಗಳಂ [4]ತ(ರುತಲ-)[4]
ನೂನಸದ್ಭಕ್ತಿಯಿಂದಂ
ಜ್ಞಾನಿಯ ನೆರೆ ಪೂಜೆಮಾಡಿ ಪೊಗಳುತ್ತಿರ್ದರ್ ೮೩

ಇದ ಕಂಡು ಶಬರರೆಲ್ಲಂ
ಮುದದಿಂ ಶಿವಭಕ್ತರೆಯ್ದಿ ಕಾಣಿಕೆಗಳನುಂ
ಪದಪಿಂದಿಡ[5](ಲದ ಕಾಣುತೆ)[5]
ಒದಗಿಸಿಕೊಂಡಿರ್ಪ ಬಹಳ ಹೊನ್ನುಮನೆಂದರ್ ೮೪

ಆ ಜಂಗಮವಂ ಬಾಧಿಸಿ
ಮಾಜಿಯೆಕೊಂಡಿರ್ದ ದ್ರವ್ಯವಂ ತೆಕ್ಕೊಂಡುಂ
ಓಜೆಯಲಿ ಬಾಗೆಗೊಂಬುದು
ಉಜ್ಜುಗ ನಮಗೆಂದು ಬಂದರಾ ಶಬರರ್ಕಳ್ ೮೫

1. ವಿಲ್ಲೆಂದೆನುತ ಮೂಸ್ಕನಕವುಂಕ್ಸ್ತಳೊಳೌಂಕಿಕೊಂಡೊಡಂ (ಅಇ). 2. x (ಇ). 3. ಡು (ಅಇ). 4. ತಂದುಂ (ಅಇ). 5. ಲಿಬತ್ತುಲು (ಅಇ).

ರಾತ್ರಿಯೊಳೊಬ್ಬನೆಯಿರ್ಪಾ
ಮಾತ್ರವನರಿಯದೆತಿಯ ಬಳಿಗೆ ಬಂದಾ ಕ್ಷಣದೊಳ್
ನೇತ್ರತ್ರಯನರಿದು ತನ್ನೊಳ್
ಶತ್ರುಗಳಂ[1] ತಗುಳಲೆಂದು[1] ನೆನೆ[2](ದಂ)[2] ಮನದೊಳ್ ೮೬

ಘಟಸರ್ಪನ ರೂಪಿನೊಳುಂ
ಪಟುತರದಿಂ ಬಂದು ಸಿದ್ಧನಿರುತಿಹ ಮನೆಯಂ
ಕುಟಿಲರು ಪೊಗುವುದಕಿಂತಂ
ನಿಟಿಲಾಕ್ಷಂ ಪೊಕ್ಕು ಮುನ್ನಡಗಿರುತಿರ್ದಂ ೮೭

ಬೇಡರು ಬಂದಾ ಕ್ಷಣದೊಳ್
ಗಾಢದಿ ಪೋಗುತವರು [3]ತಮ[3]ಗೃಹದೊಳಗಿರ್ದನ
ಕಾಡುತಲೀಗಲೆ ಕೊಡು ಕೊಡು
ಬೇಡಿದ ಪೊಂ[4]ಗ[4]ಳ(ನು) ಬೇಗವೆಂಬಾ ಕ್ಷಣದೊಳ್ ೮೮

ಯತಿಪನೊರಗಿರ್ದ ಬಿತ್ತಿಯ
ತುದಿ ಪುತ್ತದೊಳಲ್ಲಿ ಕುಳಿತು ತಲೆಯನೆಗಹಿಯೆ
ಖತಿಗೊಂಡು ಸರ್ಪ ನೊರೆಯಲ್
ಜತನಂ ಪಾವುಂಟದೆಂದು ಹೆರೆಸಾರಿರ್ದರ್ ೮೯

ಮ. ವಿ. ವೃ.

ಉರಗಂ ಪಿಂಗಡೆಯಾರ್ಭಟಂಗೊಡುತಲಿರ್ದತ್ತುಂ ಮಹಾಕ್ರೋಧದಿಂ
ಪಿರಿದಪ್ಪಾ ಶಬರಾಳಿ ಮುಂದೆ ಗಜರುತ್ತಂ ಹನ್ಯ (?) ಮಾಳ್ಪಾಗಲಾ
ಗುರುಸಿದ್ಧಂ ನಡುವಿರ್ದನೆಂತೆನೆ ಮಹಾ[5]ವೇಲಾ[5]ಂಧಕಾದ್ಯೈತ್ಯರಿ-
ರ್ವರ ಯುದ್ಧಾಂಗಣಮಧ್ಯದಲ್ಲಳುಕದಿರ್ಪಾ ಶೂಲಿಯಂತೊಪ್ಪಿದಂ ೯೦

ಉರಗೇಂದ್ರಾ[6](ದ್ಭುತಕಳ್ಕದಾ)[6]ಶಬರರಾಗಂ ಹೊನ್ನ ತೋರ್ತೋರಿರು ತೋ-
ರುರದಲ್ಲಿರ್ಪ ಸುಸೆಜ್ಜೆಯೆ[7]ಲ್ಲಿ(ಯು)[7]ದ ತಾತಾರೆಂದು ಬರ್ಪಾಗಲಾ-
ಉರಗಂ ಚೀರುತ ಹುತ್ತದಿಂದಿಳಿದು ಬಂದಾ ಬಾಲದಿಂ ತಾಟಿಸಲ್
ಭರದಿಂದೋಡಿದರಾಗ ಭಿಲ್ಲರುರಗಂ ಪಿಂಪಟ್ಟಿತುಂ ರೌದ್ರದಿಂ ೯೧

---

1. x (ಇ). 2. ದುಂ (ಅಇ). 3. ತಮುದ (ಅಇ). 4. ಳ (ಅಇ) 5 x (ಇ).
6. ಬುರ್ತಕಳ್ಪಾದ (ಅಇ). 7. ಲ್ಲಿ (ಅಇ).

ಭರದಿಂದಾ[1]ಗ ನಿ[1]ಶಾಟರೋಡಲುರಗಂ ದ್ವಾರಾಂತದೊಳ್ ತೆಕ್ಕೆಗ-
ಟ್ಟಿರುತೂರ್ಧ್ವರ್ಕ್ಕೆ ವಿಲಾಸದಿಂ ಪೆಡೆಗೆದುದುರ್ದಂ ಇರ್ಪುದಂ ಕಂಡವರ್
ಸರಳಿಂದೆಚ್ಚಡೊ[2]ಳಕ್ಕೆ[2]ಬಪ್ಪ ಶರವಂ ನೂಂಕುತ್ತಲಾ ಮೂರ್ಧ್ನಿಯಿಂ
ಮೊರೆವುತ್ತಂ ಪರಿವುತ್ತಲೊತ್ತಿ ಮುರಿದೇಳುತ್ತಿರ್ದುದಂ ಕಂಡವುಂ ೯೨

ಕಂ. ಪೊಗಲೀಸದು ಘಟಸರ್ಪಂ
ಮಿಗೆ ಗೋಡೆಯು ಕೆಡಹಿ ಗೃಹದ ಒಳಗಿರುತಿರ್ಪಾ-
ಬಗುತನ ಕೊಂದುಂ ಒಡವೆಯು
ತೆಗೆವೆವುವೆಂದೆಲ್ಲ ಮ[3]ನೆ[3]ಯ ಹಿಂಗಡೆಗೆಯ್ದಲ್ ೯೩

ಅದನರಿದು ಸರ್ಪರಾಜಂ
ಮುದದಿಂ ದೀರ್ಘವಮದಾಗಿ ಬೆಳೆದಾ ಶರೀರದಿ
ಸದನವ ಬಳಸಿಯು ತನ್ನಯ
ವದನವ ಬಾಗಿಲಿಗೆ ಮರೆಯಮಾಡಿದುದಾಗಂ ೯೪

ಅದ ಕಾಣುತೆ ಶಬರರ್ಕಳ್
ಬೆದರ್ದೋಡಿತು[4] (ಮಿದುವೆ)[4] ಭೂತವೆನುತಂ ತಮ್ಮಯ
ಸದನವ ಕಾಣದೆ ಗಿಡುಗಳ
ಪೊದರೊಳು ತಿರುಗಾಡುತಿರ್ದರಾಡುಗಳಂದದಿ ೯೫

ಮರವೆಳೆಗಳ ಪಾಯ್ವುತ್ತಂ
ಮರಳಂ ಮುಕ್ಕು[5]ತ್ತ ಮು[5]ಳ್ಗಳೊಳು ಬೀಳುತ್ತಂ
ಸರಳಿಸಿ ಪರಿದಾಡುತ್ತಂ
ಮರುಳಾಟವನಾಡುತಿರ್ದರಾ ಶಬರರ್ಕಳ್ ೯೬

ಬಿಲದೊಳ್ ಬೀಳುತಲೇಳುತ
ಹೊಲಬರಿಯದೆ ತಮ್ಮ ಗೃಹದ ನೆಲೆಯಂ ಕಾಣದೆ
ಬಲಹೀನಮದಾಗಿ ವನ[6](ದಿ)[6]
ಹಲುಬುತಲಿಹ ಬೇಡರೆಂದರಾಗಂ ತಮ್ಮೊಳ್ ೯೭

---

1. x (ಇ). 2. ಳ್ಳಿಂಕೆ (ಅಇ). 3. x (ಇ). 4. ಮಿದುದು (ಅಇ). 5. x (ಇ).
6. ನದೊಳ್ (ಅಇ).

ಯತಿಪನ ಕೊಲಲೆಂದೆಣಿಸಿ[1](ದ)[1]
[2](ಕ)[2]ತದಿಂ ನಮಗಾಯ್ತೀವಿಧಿ ಮತ್ತಿದು ಪೋದಡೆ
ಸುತ[3](ರ್ಗ್ಗಾ)[3]ತನ ಪೆಸರೆಂದುಂ
ಸತಿಸಹಿತಂ ಬಂದು ಪರ್ವ ಮಾಡುವೆವೆಂದರ್ ೯೮

ಮರುಳ್ತನ ಬಿಟ್ಟತ್ತಾಗಂ
ಹೊರಳ್ಬಂಡವನಿಕ್ಕಿಕೊಂಡು ಸತಿಸಹಿತೈದ-
ಲ್ಲಿರು[4]ಳ್ತಿ(ಳಿ)ದಾ(ಗ)[4]ಳೆ ಹರನುಂ
ತೆರಳ್ವಂ ಅಹಿರೂಹುವಿಟ್ಟು ಕೈಲಾಸಕ್ಕಂ ೯೯

ಬಂದಾ ಶಬರರು ಪರ್ವವ
ಚೆಂದದೊಳಂ ಮಾಡಿ ಸುತರ ಪೆಸರಂ ಕರೆದುಂ
ಬಂದು ಬಂದಿರ್ಪ ಪರುಷೆಯು
ಗೊಂದಣವಂ ನಾವೆ ಕಾವೆವೆಂದೊಂದಿಸಿದರ್ ೧೦೦

ನಿಮಗೆರಡು ಬಗೆದ ಪಾತಕ
ರೆಮಗಂ ದಯದಿಂದ ಭಸಿತವಿಡಿ ನೀವೆಂದುಂ
ಕುಮುದರು ದೈನ್ಯಂ ಬಡುತಿರೆ
ಸುಮನದ ಯತಿ ಭಸಿತವಿತ್ತುಮಂಜ[5]ದಿ(ರೆಂ)ದಂ[5] ೧೦೧

ಶಬರರ್ ಪೋಗೀ [6]ಸುದ್ದಿಯ[6]
ಪ್ರಬಲಂಗಳ ಮಾಡಿ ತಮ್ಮ ಗ್ರಾಮದೊಳೆಲ್ಲಂ
ಅಬಲಾನೀಕಪುರ್ರುಷರು
ಅಬುಜುಬುವೆಂದೆಲ್ಲ ಕೇಳಿ ವಂದಿಸುತಿರ್ದರ್ ೧೦೨

ವ|| ಮತ್ತಮಾ ಸಿದ್ಧಲಿಂಗೇಶ್ವರಂ ಸುಷುಮ್ನಮಧ್ಯದ ಕೃಷ್ಣವರ್ಣದ ಆಕಾರ ಬೀಜಾಕ್ಷರದ [7](ಸತ್ವ)[7]ಗುಣದ ನಾದಾಲಂಕೃತವಾದ ಚತುಷ್ಕಲೆಯಂದೋರ್ಪುವಲ್ಲಿ ಅಗ್ನಿಮಂಡ[8](ಲ)ದಿಂ[8] ಮತ್ತಂ ದಕ್ಷಿಣಸ್ವರದ ನೀಲವರ್ಣದ ಉಕಾರಬೀಜಾಕ್ಷರದ ರಜೋಗುಣದ ಬಿಂದುವಿಂದಲಂಕೃತವಾದ ಜ್ವಲಿನಿ ಕರಿಣಿ ವಾಹಿನಿ ದೀಪನಿ ದ್ಯೋತಿನಿ

1. ಸಿ (ಅಇ). 2. ಮ (ಅಇ). 3. ರಾ (ಅಇ). 4. ಳ್ತಿದಾಳೆ (ಅಇ). 5. ದಿರಿ ಯೆಂದರ್ (ಅಇ). 6. ಶುಧಿಯ (ಅಇ). 7. ಶಕ (ಅಇ). 8. ಲಂ (ಅಇ).

ಸುಪ್ರಭಾತಿನಿ ವಿದ್ಯುತ್ಪುಂಜಿ ಶಿಖಿಪ್ರಭಾತಿನಿ ಶೋಷಣಿ ತಾಪಿನಿ ಪಾಚಿನಿ ಹಾಟಕಪ್ರಭೆಯೆಂಬ ದ್ವಾದಶಕಲೆಯಿಂದೊಪ್ಪುವೆತ್ತ ರವಿಮಂಡಲದಿಂ ಮತ್ತ್ರಮಾ ವಾ[1](ಮಸ್ತ)[1]ರದಲ್ಲಿರ್ಪ ಶ್ವೇತವರ್ಣದ ಮಕಾರ ಬೀಜಾಕ್ಷರದ ತಮೋಗುಣದ ಕಲೆಯಿಂದಲಂಕೃತವಾದ ಪದ್ಮಿನಿ ಶಶಿನಿ ಚಂದ್ರಿಣಿ ಕಾಮಿನಿ ಲಕ್ಷಿಣಿ ಪುಷ್ಪಿಣಿ ಪ್ರಹಸಿನಿ ಅಹ್ಲಾದಿನಿ ಕುಮುದಿನಿ ಅಶಾಗ್ನಿನಿ ವ್ಯಾಪಿನಿ ಮೋದಿನಿ ಪ್ರಮೋದಿನಿ ವಿಕಸಿನಿ ನಂದಿನಿ ಪೂರ್ಣಿನಿಯೆಂಬ ಷೋಡಶಕಲಾಯುಕ್ತವಾದ ಚಂದ್ರಮಂಡಲದಿಂ ಇಂತೀಡಾಪಿಂಗಳ ಸುಷುಮ್ನ ತ್ರಿಕೂಟ ಭೂಮಂಡಲದಲ್ಲಿರ್ಪ ಅಕಾರ ಉಕಾರ ಮಕಾರಂ ಕೂಡಿದ ತಾರಕಬ್ರಹ್ಮದ ಚಿದ್ಬೆಳಗೆ ತಾನಾಗಿ ಸಿದ್ಧಲಿಂಗೇಶ್ವರನಿರುತಿರ್ಪಲ್ಲಿ- ೧೦೩

ಉ. ವೃ.

ಶ್ರೀಗುರುಭಕ್ತಿನಿಷ್ಠರು ವಿಶೇಷಸುಜಂಗಮ ಭಕ್ತಿವಂತರುಂ
ಅಂಗದಲಿಂಗಸಂಗಿಗಳು ನಿರ್ಮಲರೂಪರು ಷಟ್‌ಸ್ಥಲಂಗಳಂ
ಸಾಂಗಮದಾಗಿ ಬಲ್ಲವರು ದುರ್ಗುಣವಿಲ್ಲದ ಶಾಂತಯುಕ್ತರುಂ
ಯೋಗಿಸಮೂಹಸಿದ್ಧನನು ನೋಳ್ಪೊಡೆ ಬಂದುದನೇನನೆಂದಪೆಂ ೧೦೪

ಚಂ. ವೃ.

ನಿರುಪಮರುಂ ನಿರಾವರಣರುಂ ವಿಜಿತೇಂದ್ರಿಯರುಂ ಶಿವಾಂಗರುಂ
ಕರುಣಿಗಳುಂ ವಿಲಾಸಮಯರುಂ ಭಸಿತಾಂಗಿಗಳುಂ ಪವಿತ್ರರುಂ
ಮರಣವಿದೂರರುಂ ಮಲವಿಮೋಚನರುಂ ಶಿವಲಿಂಗನಿಷ್ಠರುಂ
ಪರಮಮಹೇಶರುಂ ದುರಿತದೂರರು ಬಂದರು ದರ್ಶನಾರ್ಥದಿಂ ೧೦೫

ವ॥ ಸಮಸ್ತಪುಣ್ಯಪಾಪಂಗಳಂ ಮಾಡುವಾತನೆಂಬಹಂಕಾರವನುಳ್ಳ ಕ್ರೀಯೆಲ್ಲಂ ಶುಕ್ತಿಯೊಳ್‌ಪತನವಾದುಪಕದಂತೆ ಕಾಲಾಂತರದ ಮೇಲೆ ಫಲಿಸುವುದೆಂಬ ಕರ್ಮಕಾಂಡವನಲ್ಲೆಂದುಂ ಮತ್ತಂ ಸಕಲಕೃತ್ಯಕ್ಕೆ [2](ಕ)[2]ರಣಂಗಳೇ ಕರ್ತೃವಲ್ಲದೆ ನಾನಲ್ಲಂ ನಾನು ಸಾಕ್ಷಿಕವಾಗಿ ಮಾಡಿದ ಕ್ರೀಯೆಲ್ಲಂ ಕಂಜಪತ್ರದೊಳ್ ಪತನವಾದ ಜಲಬಿಂದುವಿನಂತೆ ಪುಣ್ಯಪಾಪಂಗಳು ತಾವೆ ಕೆಟ್ಟುಹೋಹವೆಂಬ ಜ್ಞಾನ[3](ಕಾ)[3]ಂಡವನುಲ್ಲಂಘಿಸಿ ಮತ್ತಂ ನಿಖಿಲ ಕರ್ಮಂಗಳಂ ಮಾಡುವಾತ ನಾನಲ್ಲಂ ಸಾಕ್ಷಿಕನಾದಾತಂ ಮುನ್ನವೆಯೆಲ್ಲಂ ಮಾಡುವಾತಂ ಮಾಡಿಸಿಕೊಂಬಾತನುಂ ಶಿವನೆಯೆಂದು ಮಾಡಿದ ಕ್ರಿಯೆಯೆಲ್ಲಂ ತಪ್ತಲೋಹಾಗ್ರದೊಳ್ ಪತಿತವಾದ ಜಲಬಿಂದುವಿನ ಹಾಗೆಂದು ಭಕ್ತಿಭಾಂಡದಲ್ಲಿ ನಿಂದ ಸದ್ಭಕ್ತರುಂ ಸತ್ಯರುಂ ಶರಣರುಂ ದರ್ಶನಾರ್ಥದಿಂ ಬಂದಾಯತಿಪಂಗೆ ವಂದಸಂಗೈದು ಶಿವತತ್ವಾನುಭವಗೋಷ್ಠಿಯಿಂದಿರ್ಪಲ್ಲಿ ೧೦೬

---

1. ವಕ್ಷ (ಅಇ). 2. ಕಾ (ಅಇ). 3. ಭಾ (ಅಇ).

ಕಂ. ಎಡೆಯೂರೆಂಬಾ ಗ್ರಾಮದಿ
ಮೃಡಭಕ್ತರು ಬಂದು ವಂದಿಸುತ್ತಂ ಸಿದ್ಧಗೆ
ದೃಢದಿಂ ಬಿನ್ನಹ ಮಾಡಿಯು
ಸಡಗ[1]ರ[1]ದೊಡಗೊಂಡು ಪೋದರೆಡೆಯೂರೆಡೆಗಂ ೧೦೭

ಆ ಗ್ರಾಮದೊಳಿರುತಿರ್ಪಂ
ಉಗ್ರಾಕ್ಷನ ಭಕ್ತ ಸಿದ್ಧರಾಮಯ[2]ನೆಂ(ಬಂ)[2]
ಶೀಘ್ರದಿ ಸಿದ್ಧೇಶ್ವರಗಂ
ಉಗ್ರಾಂಬಕಪೂಜೆಗೆಂದು ಭಸಿತವನಿತ್ತಂ ೧೦೮

ಆತನ ಮನೆಗಂ ಪೋಗಿಯು
ಖ್ಯಾತಿವಿದಂ ಮೂರ್ತಿಗೊಂಡು ಮೃದುಗದ್ದು[3]ಗೆ(ಯೊಳ್)[3]
ವಿ[4]ತ್ತ(ರ)[4]ದಿ ಕುಳಿತು ಜಂಗಮ
ದೊತ್ತೊತ್ತೆಯ ನೋಡಿ ನೋಡಿ ಹರ್ಷಿತನಾದಂ ೧೦೯

ಸರ್ವತೀರ್ಥಾಂಬುಸ್ನಾನಕೆ
ಉರ್ವಿಯೊಳುಂ ಭಸ್ಮಸ್ನಾನ[5](ವೆ) ಮಿಗಿಲೆಂ[5]ದುಂ
ಉರ್ವಿವಿಭೂತಿಸ್ನಾನವ
ಸರ್ವದಿನಂ ಮಾಡಲೊಲ್ಲದಾ ಕರ್ಮಿಗಳುಂ ೧೧೦

ನಿತ್ಯಂ ನೀರೊಳ್ ಮುಳುಗಿಯು
ಸತ್ಯಮಿದುಂ ದೇಹಶುದ್ಧಿಯಾಯಿತ್ತೆಂಬರ್
ನಿತ್ಯವು ನೀರೊಳ್ಮುಳುಗುವ
ಮತ್ತೆ ಬಕ[6](ವೇ)[6]ಕೆ ಶುದ್ಧಿಯಾಗದುಮೆನುತುಂ ೧೧೧

ಅವಾಗಂ ನೀರೊಳಗಂ
ತೀವಿರುತಿಹ ಮತ್ಸ್ಯಮಂಡುಕಾದಿಗಳೆಲ್ಲಂ
ತಾವೇ ಶುದ್ಧಗಳಪ್ಪುವೆ
ಓವಿ ತೊಳೆ[7](ಯೆ ತಿ)[7]ಕ್ತಂ ಲಾಭವಹುದೆ ಮಧುರಂ ೧೧೨

1. ರದಿಂ (ಅಇ). 2. ನೆಂಬುವ (ಅಇ). 3. ಗೆಯಿಂ (ಅಇ). 4. ತ್ತ (ಅಇ). 5. x (ಇ). 6. ಯಿ (ಅಇ). 7. ಯಲ್ತಿ (ಅಇ).

ಅದುಕಾರಣ ಜಲಸ್ನಾನಂ
ವಿಧಿಯಲ್ಲಂ ಭಸ್ಮಸ್ನಾನ ವಿಹಿತವೆನುತಂ
ಮೃ[1](ದ್ವಂ)[1]ಗುಲಿ ಮೃದುಹಸ್ತದಿ
ಮುದದಿಂ ಪಿಡಿವುತ್ತ ಶರಿರಕುದ್ಧೂಳಿಸಿದಂ ೧೧೩

ಪರಮಜ್ಞಾನದ ಭೂತಿಯ
ನುರುಸೂಕ್ಷ್ಮಾಂಗದೊಳುದ್ಧೂಳಿಸಿ ಕಾರಣಾಂಗ-
ಕ್ಕುರು ಭಾವಭಸಿತದಿಂದಂ
ಶರಣಕುಲಾಧೀಶಸಿದ್ಧನುದ್ಧೂಳಿಸಿದಂ ೧೧೪

ಮ. ವಿ. ವೃ.

ಪದಿನಾಲ್ಕುಂ ಮುಖವಾದಿಯಕ್ಷಮಣಿಯಂ ಸ್ಥೂಲಾಂಗದಿಂದಾಗವೋ-
ಕ್ತದಿ ತಾಳ್ದಂ ಮನಮುಖ್ಯ ನಾಲ್ಕು ಕರಣಂ ಬುದ್ಧೀಂದ್ರಿಯಂ ಕರ್ಮಮುಂ
ಪದಿನಾಲ್ಕಿಂದ್ರಿಯದಕ್ಷಮಾಲಿಕೆಗಳಂ ಸೂಕ್ಷ್ಮಾಂಗದೊಳ್ ತಾಳ್ದವುಂ
ಸದಪಿಂ ಕಾರಣದೇಹದಲ್ಲಿ ತಳೆದಂ ಸದ್ಭಾವರುದ್ರಾಕ್ಷೆಯಂ ೧೧೫

[2]ವರಸ್ಥೂಲಾಂಗದೊಳಂ ಷಡಕ್ಷರವನುಚ್ಚಾರಂಗಳಂ ಮಾಡಿಯುಂ
ಪಿರಿದುಂ ಕಾರಣದೇಹದಲ್ಲುಸುರಿದಂ ಭಾವಾಸ್ಯದಿಂ ಮಂತ್ರಮಂ[2] ೧೧೬

ವ॥ ಶ್ರೀಗುರುವಿನ ಹಸ್ತಮಸ್ತಕಸಂಯೋಗದಿಂದಾತ್ಮಶುದ್ಧಿಯಾದಂಗೆ ಮರಳಿ ಆತ್ಮಶುದ್ಧಿಯೆಲ್ಲಿಯದುಂ ಪಂಚಾಕ್ಷರಿಯಮಂತ್ರರೂಪನಾದಂಗೆ ಇನ್ನುಳಿದ ಪಾಶುಪತ ಅಘೋರಾಸ್ತ್ರಮಂತ್ರಂಗಳಿಂ ಶುದ್ಧನಪ್ಪೆನೆಂಬ ಮಾತೆಲ್ಲಿಯದುಂ ಲಿಂಗ ಸಿಂಹಾಸನದಾತ್ಮರುಗಳಿಗೆ ಬಹ್ವಾಸನಂಗಳಿಂದೇನು ಪ್ರಯೋಜನಂ ಭಕ್ತಿನ್ಯಾಸ ಚಿತ್ತರುಗಳ್ಗಂ ಕರಾಂಗನ್ಯಾಸಂಗಳಿಂದೇನು ಪ್ರಯೋಜನಂ ದೋಷಶೋಷಣ ಸರ್ವೇಶ ಭಕ್ತಿಪೋಷಣರುಗಳ್ಗಂ ಶೋಷಣಾ[3](ಕ್ರಿಯೆ)[3]ಗಳಿಂದೇನು ಪ್ರಯೋಜನಂ ಶ್ರೀಗುರು ಕರುಣಬಲದಿಂದಲಾದ ಚಿದ್ವಹ್ನಿದಹ[4]ನಾಗ್ನಿ[4]ಗಳ್ಗಂ ಉಳಿದ ದ[5]ಹ(ನ)[5] ಕರ್ಮಂಗ ಳಿಂದೇನು ಪ್ರಯೋಜನಂ ಒಳಹೊರಗೆ ಭಿನ್ನವಿಲ್ಲದೇಕೀಕ[6]ರ(ಣ)[6]ವಾದ ಲಿಂಗಾಂಗಿ ಗಳ್ಗಂ ಭಿನ್ನವಿಟ್ಟಾಹ್ವಾನವಿಸರ್ಜನಗಳಿಂದೇನು ಪ್ರಯೋಜನಂ ಅಭ್ಯಾಸಯೋಗ ಮಾರ್ಗದ ಚಿತ್ತಭ್ರಾಂತಿಯಿಂ ನಾಸಿಕಾಗ್ರಹಣದಿಂ ವಾಯುವನೂರ್ಧ್ವಕಾಕರ್ಷಿಸಿ

1. ದ (ಅಇ). 2 ಅ. ಇ ಎರಡೂ ಪ್ರತಿಗಳಲ್ಲಿ ಈ ವೃತ್ತದ ಉತ್ತರಾರ್ಧವಿಲ್ಲ. ಕವಿಯೇ ಅರ್ಧವೃತ್ತ ರಚಿಸಿರಬಹುದು. 3. ದ್ರಿಯ (ಅಇ). 4. ನಾಂಗಿ (ಅಇ). 5. ಹ (ಅಇ). 6. ರ (ಅಇ).

ಜಠರಾಕಂಚನಂ ಮಾಡಿ [1](ಮುದ್ರಾದಿ ಅಗ್ನಿಲಪನ ?)[1] ಪ್ರಾಚೀವಿಕ್ಷಣ ಮುಂತಾದ ಕರ್ಮಯೋಗದಿಂ ಮೌನಿಯಾಗಿರ್ದಾತಂಗೆ ಶಿವಂ ಮೌನಿಯಪ್ಪನಲ್ಲದೆ ಚಾರಮನ ಭಕ್ತಿಗೆ ಪ್ರಕಟಿಸಿದಂತೆ ಕಾರಣಾನ್ವಿತಂಗೆ ಪ್ರಕಟಿಸುವನೇ ಮಾನಕಂಜಾರನ ಭಾವಕ್ಕೆ ಬಂದಂತೆ ಮೌನಿಗಳ ಭಾವಕ್ಕೆ ಬಪ್ಪನೇ ಕೇಶಿರಾಜನ ಮಸ್ತಕದಲ್ಲಿರ್ಪಂತೆ [2](ಅ)[2] ಸನಾದಿಗಳಂ ಬಯಸುವಲ್ಲಿರ್ಪನೇ ಭೋಗಣ್ಣನ ಪಿಂತೈದಿದಂತೆ ಆಹ್ವಾನಿಸಿದರ್ಗೈದು ವನೇ ಓಹಿಲನ ನೋಟಕ್ಕೆ ಸಂತುಷ್ಟನಾದಂತೆ ಮುದ್ರಾವಾಹನಂಗಳಿಂ ನೋಳ್ಪರ್ಗೆ ಸಂತುಷ್ಟನ[3]ಪ್ಪ ನೇ)[3] ಬಲ್ಲಹರಾಜಂಗೆ ಸ್ಥಿರನಾದಂತೆ ಶೋಷಣಾದಿಗಳ್ಗಂ ಪ್ಲಾವನಾದಿ ಗಳ್ಗಂ ಸ್ಥಿರನಪ್ಪನೇ ಭಕ್ತಿಗಳನಂಗೀಕರಿಸುವಂತೆ ಅರ್ಘ್ಯಂಗಳನಂಗೀಕರಿಸುವನೇ ಸುರಗಿಯ ಚೌಡಯ್ಯಂ ಕೊಡುವ ತುತ್ತಿಂಗಂ ಪ್ರೀತನಾದಂತೆ ಅರಣ್ಯಪತ್ರಿಗಳಿಂ ಮುಚ್ಚಿದಡಂ ಪ್ರೀತನಪ್ಪನೇ ಭಕ್ತಿಯೋಗಕ್ಕಂ ಪ್ರೀತನಪ್ಪಂತೆ ಕರ್ಮಯೋಗಕ್ಕೆ ಪ್ರೀತನಪ್ಪನೇ ಹರನಂತೆಂದು ಅಷ್ಟಾಂಗಭಕ್ತಿಗಳಿಂ ಷೋಡಶೋಪಚಾರಗಳಿಂ ನೃಪವಧೂಪಚಾರಂಗಳಂತೆ ಲಿಂಗಾರ್ಚನೆಯಂ ಮಾಡಲೆಂದು ಬಗೆದುಂ ಹೃತ್ಕಂಜ ಕರ್ಣಿಕಾಂತರಭಾವಿತ ಸ್ವಪ್ರಾಣಲಿಂಗ ಸೆಜ್ಜೆಯಿಂ ಪ್ರಜ್ವಲಿಸುವ ಲಿಂಗವನು ದೃಙ್ಮನ ಪೀಠದಿಂ ಮೂರ್ತಿಗೊಳಿಸಿ ಆ ಲಿಂಗಮೂರ್ತಿಯ ದಿವ್ಯತೇಜದ ಸಂಪತ್ತಿನ ಸ್ನೇಹಭಾವ ಲಾವಣ್ಯಮುಗ್ಧತ್ವರಮ್ಯಲಕ್ಷಣ ರೀತಿ ನೀತಿ ವಿಶ್ರಾಂತಿ ಖಾತ ಕಾಂತಿ ಮೂರ್ತಿ ಸ್ಫೂರ್ತಿ ಯಲ್ಲಿ ಸಿದ್ಧಲಿಂಗೇಶ್ವರನ ದೃಷ್ಟಿಗಳ್ ಸಿಲ್ಕಿ ಮತ್ತಂ ಲಿಂಗವಂ ನೋಳ್ಪನಿಮಿಷ ಕೇಶಿ ಕರುಳಕೇತಯ್ಯಗಳಂತೆ ಎವೆಯಿಕ್ಕದೀಕ್ಷಿಸುತಂ ಗಜೇಶಮಸಣಯ್ಯನಂತೆ ಪರಮ ಪ್ರೀತಿಯಿಂ [4]ನೋ[4]ಡುತಂ ಭೃಂಗೀಶ್ವರನಂತೆ ಅಂಗಗುಣ ಲಿಂಗದೊಳಡಂಗಿಸುವಂತೆ ನಂದೀಶ್ವರನಂತೆ ಅವಿನಾಭಾವಲೀಲೆಯಿಂದೀಕ್ಷಿಸುತ್ತಂ ಇರಲಾ ಲಿಂಗ ಯತಿಪನದೃಷ್ಟಿ ಗಳಂ ಸೆಳೆ[5]ಸೆಳೆ[5]ದುಂ ತನ್ನೊಳಡಂಗಿಸಿಕೊಂಬುತ್ತಿರೆ ಆ ದೃಷ್ಟಿಗಳಂ ಕಡೆಗೆ [6](ತೆಗೆ)[6]ವ ಸಾಮರ್ಥ್ಯಂ ಸಿದ್ಧಲಿಂಗೇಶ್ವರಂಗಂ ಸಾಲದಿರಲುಂ ಅದನಾಲಿಂಗದೇವಂ ಅರಿದು ಚತುರ್ವಿಧ ಪದಾದಿಗಳ್ಗಂ ಬಗ್ಗದ ದಿಂಡೆಯುನೀ ತೆರದಿಂದಾದರುಂ ಬಗ್ಗಿಸಿ ನನ್ನೊಳಗು ಮಾಳ್ಪುದಕ್ಕೆ ಇದೇ ವೇಳೆಯೆಂದು ತನ್ನೊಳ್ತಾಂ ನೆನೆದು ಮತ್ತಂ ದೃಷ್ಟಿಗಳಂ ತನ್ನತ್ತಂ ಬರಸೆಳೆಯೆ ಬಾಗಿದನೋ ಎಂಬಂತೆ ಶಿವನೆಂಬ ಶಿಷ್ಯನ ಕರ್ಣದಲ್ಲಿ ಸಿದ್ಧಲಿಂಗ ಗುರು ಮೂಲಮಂತ್ರವ ಪೇಳ್ವ ಬಗೆಯೋ ಎಂಬಂತೆ ವೇದಾಂತ ಶಂಭುವಿನ ಚರಣಕ್ಕೆರಗಿ ದಂತೆ ಶಂಕರನ ತನುವಂ ಸುತ್ತಿದ ಕಲ್ಪವೃಕ್ಷಲತೆಯಂತೆ ಧಾನು[7]ಷ್ಕಶರಸಂ[7]ಧಾನ ಲಕ್ಷ್ಯದಿಂ ಬಾಗಿದ ಶಬರರುದ್ರನಂತೆ ಪಿತನಂ ಸುತನಾಲಿಂಗಿಸಿದಂತೆ ಗಿರಿಶನ ತನುವ ನಾಲಿಂಗಿಸಿಕೊಂಡಿರ್ಪ ಗಿರಿಜೆಯಂತೆ ಮತ್ತಗಜವಂ ಬಂಧಿಸಿದ ರಜ್ಜುವಿನಂತೆ ಲಿಂಗವಂ ಪರಿರಂಬಣಂಗೈದುಂ ಪರಿಮಳದ್ರವ್ಯವ ಬಾಸಣಿಸಿವ ವಸ್ತ್ರದಂತೆ ಈಶಂಗಂ ಸ್ವಶರೀರಾ

---

1. ಮುದ್ರಾಪ್ರುಗ್ಗಿಲನ (ಅ) ; ಮುದದೃಗ್ಗಿಲನ (ಇ). 2. ಅ (ಅಇ). 3. ಪ್ಪಂತೆ (ಅಇ). 4. ದಾ (ಅಇ). 5. x (ಇ). 6. ತ್ರಗ (ಅಇ). 7. x (ಇ).

ಚ್ಛಾದನಂಗೈದು ಸಮುದ್ರದೊಳ್ಕೂಡಿದ ನದಿಯಂತೆ ಲಿಂಗದೊಳ್ ಮೇಳೈ[1]ಸಿ (ಕ್ಷೀರ)[1] ಕ್ಷೀರದೊಳ್ಬೆರೆತಂತೆ ಲಿಂಗದೊಳ್ಬೆರೆದು ತಪ್ತಲೋಹದೊಳ್ ಜಲಬಿಂದು ಪತನವಾದಂತೆ ಲಿಂಗದಲ್ಲಿ ಲೀಯವಾಗಿರ್ದು ಮತ್ತಂ ತನ್ನ ತಾನೆ ಚಲನಂದೋರಿ ದೃಷ್ಟಿ ಸಾಂಚಲ್ಯವಾಗಿ ಅರ್ಧನಯನನಿಮೇಷಿಯಾಗಿರೆ ಚಿಜ್ಜ್ವಾಲೆಯ ಸೋಂಕಿಂ ಕೆಂಪಡರ್ದ ಕಣ್ಗಳಂ ಎಡಬಲದ ಮಾಹೇಶ್ವರರ್ ಕಂಡು ಕೊಂಡಾಡುತಿರ್ದರದೆಂತೆಂದೊಡೆ
೧೧೭

ಕಂ. ಹರ ತನ್ನ ಮೂರು ಕಣ್ಗಳ
ಹರುಷದಿ ಸಿದ್ಧೇಶಗಿತ್ತುಮಾತನ ಕಣ್ಗಳ
ನುರುಪಡೆದನಲ್ಲದಡೆ ಯತಿ
ವರನ ಸುಕಣ್ಣುಗಳೇಂ ಮುನ್ನ ಕೆಂಪಾಗಿಹವೇ ೧೧೮

ಸ್ಮರ [2](ಯಮ)[2] ತ್ರಿಪುರ [3](ಸು)[3]ಟ್ಟಿಹ
ಹರ ಕಣ್ಗಳನೆತಿಪ ತನ್ನ ಸ್ಮರಿಪರ ಕಾಡುವ
ಸ್ಮರ[4](ಯಮತ್ರಿಪುರರ)[4] ಸುಡಲೆಂ
ದೆರವಿಸಿಯೆ ತಂದ ಬಗೆಯೋಯೆಂದುಂ ನುಡಿದರ್ ೧೧೯

ತುಂಬಿದ ಜಂಗಮತಿಂಥಿಣಿ
ಯಿಂಬಿಂ ಕೊಂಡಾಡುತ್ತಿರಲೆತಿಪತಿ ತನ್ನಯ
ಮುಂಬಿಂ [5]ಪೂ[5]ಜಾದ್ರವ್ಯಕ
ದಂಬಗಳಲ್ಲಿರಿಪ ದೃಷ್ಟಿಯಿಂದಿರುತಿರ್ಪಂ ೧೨೦

ಉ. ವೃ.
ಮಜ್ಜನವಾರಿಯಲ್ಲಿರಿಪ ದೃಷ್ಟಿ ಸುಗಂಧದೊಳಿರ್ಪ ದೃಷ್ಟಿಯಿಂ
ಸಜ್ಜುಕಮೂಥದಲ್ಲಿರಿಪ ದೃಷ್ಟಿ ಸುಧೂ[6]ಪ(ದ)[6]ಧೂಮ್ನದಲ್ಲಿ ನೀ
ರಾಜನಪಲ್ಲಿಯಿಕ್ಕಿದ ಸುದೃಷ್ಟಿ ನಿವೇದ್ಯ ಸುತಾಂಬುಲಂಗಳ
ಲ್ಲುಜ್ಜುಗದಿಂದಲಿಕ್ಕಿದ ಸುದೃಷ್ಟಿಯೊಳರ್ಪಿಸುತಿರ್ದನಾಗಳುಂ ೧೨೧

1. ಸಿ (ಅಇ). 2. ಜವ (ಅಇ). 3. ವ (ಅಇ). 4. ತ್ರಿಪುರವರಜವರ (ಅಇ).
5. x (ಇ). 6. ಪ (ಅಇ).

ಲಿಂಗವ ಮುಟ್ಟಿಮುಟ್ಟಿ [1]ನೆಯಿ[1]ಜೋಂಪಿ[2]ಸಿ (ಜೋಂಪಿಸಿ)[2] ತಾಂ
ತ್ವಗೇಂದ್ರಿಯ
ಕ್ಕಂಗವಿ[3](ಸಿ)[3]ರ್ದ ಪುತ್ತ್ರಗಜದಂತೆ ಪಯೋಜಕೆ ಚಿತ್ರವಿ[4]ಟ್ಟ ಗಾ-[4]
ರಾಂಗನೆಯಂತೆಯುಂ ಪರವೆ[5](ಯ)[5]ಕ್ಷರುಹಾಬ್ಜಕೆ ಚಿತ್ರವಿಟ್ಟನುಂ
ಬೀಗುಣದಂತೆ ಲಿಂಗದೊಳು ಮುಗ್ನಮುದಾಗುತ ಸಿದ್ಧನಿರ್ದನುಂ ೧೨೨

ಗದ್ಗದ ಕಂಠದಿಂದ ಶಿವಕೀರ್ತನೆಗೆಯ್ವುತ ಜೆಹ್ವೆಯಿಂದಲುಂ
ಉದ್ಗತವಾಗಿ ಬಪ್ಪ ಪರಮಾಮೃತವೀಶಗೆ ತೃಪ್ತಿಮಾಡುತುಂ
ಸದ್ಗುರು ಮುನ್ನಿನಂತೆ ಗುಣಯೂಥವೆ ಲಿಂಗದಿ ಮುಗ್ನಮಾಡಿಯುಂ
ತದ್ಗತ ಕಿಚ್ಚು ಬೆಣ್ಣೆ ಜತುಪುತ್ರಿಕೆಯುಗ್ನಿಯೊಲಿರ್ದನಾಗಲುಂ ೧೨೩

ಶಾ. ವಿ. ವೃ.
ಆನಂದಾಶ್ರುವೆ ಮಜ್ಜನಂ ಮನಸುವಸ್ತ್ರಂ ಸತ್ಕ್ರಿಯಾಪ್ರೀತಿಗಂ
ಧಂ ನಿರ್ಭಿನ್ನತಿಲಾಕ್ಷಕಂ ಪುಳಕಪುಷ್ಪಂ ವಾಸನಾಧೂಪಸು-
ಜ್ಞಾನಂ ದೀಪ ಸುತತ್ತ್ವಸಂಪದಿಯಭೂತಿ ಪ್ರಾಣನೈವೇದ್ಯಮಿಂ
[6](ತಾನುಂ ಅಷ್ಟವಿಧಂಗಳಿಂ)[6] ಯಜಿ[7](ಸುತಂ)[7] ಚಿತ್ತದಿಂದೀಶನಂ ೧೨೪

ಕಂ. ದರುಶನ ಪರುಶನದಿಂದಂ
ತರಲಕ್ಷಿತ ಪೂಜೆಯೆಂಟುವಿಧದಿಂ ಮಾಡಿಯು
ಹರುಷಂ ಪೂರಿತವಾಗಿಯು
ಪುರಹರನಂ ಮರಳಿ ಯಜಿಸಲುಜ್ಜುಗಿಸಿದನುಂ ೧೨೫

ಪ್ರಮಥರ ಗೀತಂಗಳನುಂ
ಪ್ರಮುದಿತಮಂ ಕೀರ್ತಿಸುತ್ತ ನೋಡುತ ಮುಟ್ಟುತ
ಸುಮನದಿ ನೆನೆವುತ ಶಿವನಂ
ಪ್ರಮಥರ ಕಥೆಗೆ[8](ಳಿ ಹರುಷದಬ್ಧಿಯೊಳಾಳ್ದಂ)[8] ೧೨೬

1. ತಾಂ (ಇ). 2. ಸಿ. (ಅಇ). 3. ಸ (ಅಇ). 4. ಟ್ರೋಗದವ್ರ (ಅಇ).
5. ಯೋ (ಅ). 6. ಧ್ಯಾನುಂರಾಗಸುಸೀಟಿಯೂಗೆ (ಅಇ). 7. ಸುತಿರ್ದಂ (ಅಇ).
8. ಉತಾನಂದುದಧಿಯೊಳಾಳ್ದಂ (ಅಇ).

ಉ. ವೃ.

ಲಿಂಗವ ನೋಡಿನೋಡಿ ಪ್ರಮಥೇಶ ಸುಖಾಮೃತವೀಂಟಿಯೀಂಟಿಯುಂ
ಲಿಂಗವ ಮುಟ್ಟಿಮುಟ್ಟಿ ಮಯಿರೋಮದ ಕಂಚುಕವೇಳುತೇಳ್ವುವುಂ
ಲಿಂಗವ ಹಾಡಿಹಾಡಿ ಗುಣವೃಂದವ ಲೀಯವ ಮಾಡಿಮಾಡಿಯುಂ
ಲಿಂಗಸುಖಾಬ್ಧಿಮಧ್ಯದಿ ಮುಳುಂಗಿ ಮುಳುಂಗುತಲಿರ್ದನಾಗಳುಂ ೧೨೭

ಈತನ ನೇತ್ರಕಿಂದ್ರನ ಸಹಸ್ರವಿಲೋಚನ ಸಾಟಿಯಲ್ಲವುಂ
ಈತನ ಬಾಹುಗಂ ರವಿಯ ಸಾವಿರಬಾಹುವು ಸಾಮ್ಯವಲ್ಲವುಂ
ಈತನ ಜಿಹ್ವೆಗಂ ದ್ವಿರಸನೇಶನ ಜಿಹ್ವೆ ಸಮಾನವಲ್ಲವುಂ
ಈತನ ಲಿಂಗಪೂಜೆಯರಿದೆಂಬುತ ಜಂಗಮವಾಡಿತಾಗಳುಂ ೧೨೮

ವ॥ ಆ ಸಮಯದಲ್ಲಿ ಸಿದ್ಧಲಿಂಗೇಶ್ವರಂ ಇಷ್ಟಲಿಂಗಕ್ಕಂ ಶೀತಳೋದಕ ಮುಷ್ಣೋದಕ ಮುಂತಾದ ಅರ್ಘ್ಯಪಾದ್ಯಾದಿಗಳಂ ಮಜ್ಜನಕ್ಕೆರೆದು ಗಂಧಪುಷ್ಪಾಕ್ಷತೆ ಗಳಿಂ ಸಿಂಗರಿಸಿ ನೀರಾಜನನೈವೇದ್ಯತಾಂಬೂಲಾದಿಗಳಂ ನೃಪವಧೂಪಚಾರದಂತೆ ಷೋಡಶೋಪಚಾರಂಗಳಂ ಮಾಡುತಂ ಗದ್ಗದಸ್ವರದಿಂ ಕೊಂಡಾಡುವ ನುಡಿ ಮೆಲ್ಲ ಮೆಲ್ಲನೆ ಲಿಂಗದಲ್ಲಡಗುತ್ತಿರೆ ಆನಂದಾಶ್ರು ದೃಷ್ಟಿಗೆ ಮೆಲ್ಲಮೆಲ್ಲನೆ ಮರೆಯಾಗುತ್ತಿರೆ ಸೂತ್ರವಂ ಬರಸೆಳೆಯಲ್ಕಾ ಜಾಲವೆಲ್ಲಂ ಸಿಲ್ಕುವತೀಂದ್ರಿಯಂಗಳೆಲ್ಲಂ ಲಿಂಗದೊಳು ಸಿಲ್ಕೆ ಅಸ್ತಮಯದ ರವಿಯ ಕಿರಣದಂತೆ ಗುಣಂಗಳೆಲ್ಲಂ ಲಿಂಗದೊಳಡಂಗೆ ನಿಸ್ತರಂಗಾ ಬುಧಿಯಂತೆ ನಿಶ್ಚಲಪವನನಂತೆ ನಿರ್ಮೇಘಾಕಾಶದಂತೆ ಇಂದ್ರಿಯಗಜಬಜೆಗಳಳಿದು ಅಭಿನ್ನಾನಂದ ಯೋಗಮುದ್ರೆಯಿಂ ಮೊದಲು ಮಾಡುತಿರ್ದ ಷೋಡಶೋಪಚಾರ ಗಳೆಲ್ಲಂ ಸ್ವಪ್ನ[2](ಮಂ?)[2] ಜಾಗ್ರದೋಳ್ನೋಡುವಂತೆ ಪ್ರತ್ಯಕ್ಷವಾಗಿ ತೋರುತ್ತಿರೆ ಅಲ್ಲಿ ಮನಸಿಂದ ಮಾಡುವ ಪೂಜೆ ಪ್ರಾಣಲಿಂಗಪೂಜೆಯಾಗಿ ಮಾಡುತ್ತಲಿರದೆ ಜಾಗ್ರವಾಗಿ ಅಲ್ಲಿ ಮಾಡುವ ಶೀತೋಷ್ಣಗಂಧೋದಕಾದಿಗಳಿಂದರ್ಘ್ಯಪಾದ್ಯಪುಷ್ಪ ಗಂಧಾಕ್ಷತೆ ಮುಂತಾದ ಉಪಚಾರಂಗಳಂ ಮಾಡುವ ಕರಂ ಲಿಂಗವ ಮುಟ್ಟಿಮುಟ್ಟಿ [3](ಸ್ಪರ್ಶೇಂ)[3]ದ್ರಿಯಕ್ಕೆ ಸಿಕ್ಕಿದ ಮದಗಜದಂತೆ ನಿಷ್ಕಂಪದಿಂದಿರೆ ಲಿಂಗವನೀಕ್ಷಿಸೀಕ್ಷಿಸಿ ಆನಂದಾಶ್ರು ಕವಿದು[4]ದೀ(ಪ)[4]ಪ್ರಭೆಗೆ ಸಿಕ್ಕಿದ ಪತಂಗದಂತೆ ದೃಷ್ಟಿಗ[5]ಳ್(ಲಿಂಗ)[5]ದಲ್ಲಿ ಸಿಕ್ಕಿ[6]ದ(ಂತಿ)ರಲು ಮತ್ತಂ ಕೊಂಡಾಡುವ ನುಡಿ ಗಾಳಕ್ಕೆ ಸಿಕ್ಕಿದ ಮತ್ಸ್ಯದಂತೆ ಲಿಂಗ ದಲ್ಲಿ ಲೀಯವಾಗೆ ಶಿವಸ್ತೋತ್ರವನಾಲಿಸುವ ಕರ್ಣಂಗಳ್ ಘಂಟಾನಾದಕ್ಕೆ ಸಿಕ್ಕಿದ ಮೃಗದಂತೆ ಲಿಂಗಸ್ತೋತ್ರಧ್ವನಿಯಲ್ಲೇ ಮಗ್ನವಾಗೆ ಪ್ರಸಾದವ ಸ್ವೀಕರಿಸುವ

1. ದಲ್ಲಿ (ಅಇ). 2. ಪರುಷುನೇಂ (ಅಇ). 3. ದೀ (ಅಇ). 4. ಳ್ಲಿಂ (ಅಇ).
5. ದಲ್ಲಿ (ಅಇ).

ನಾಸಿಕಂ ಚಂಪಕಗಂಧಕ್ಕೆ ಸಿಕ್ಕಿದ ಭ್ರಮರನಂತೆ ಶಿವಪ್ರಸಾದಗಂಧಕ್ಕೆ ಸಿಕ್ಕಿ ಮಗ್ನವಾಗಿ ಉಸುರ್ನಿಂದು – ಇಂತು ಸ್ವಪ್ನದಲ್ಲಿ ಪೂಜಿಪ ಪ್ರಾಣನ ಪಂಚೇಂದ್ರಿಯಂಗಳೆಲ್ಲಂ ಆತ್ಮಲಿಂಗಪೂಜೆಯಲ್ಲಿ ಜಾಗ್ರದಲ್ಲಿ ಇಷ್ಟಲಿಂಗಪೂಜೆಯಂ ಮಾಡುವಾಗ ಸ್ಥೂಲತನುವಿನ ಪಂಚೇಂದ್ರಿಯಂಗಳೆಲ್ಲಂ ಆಯಿಷ್ಟಲಿಂಗಪೂಜೆಯಲ್ಲಿಯೆ ಮೊದಲು ಹೇಂಗೆ ಸಿಕ್ಕಿದವು ಹಾಂಗೆಯಿಾ ಸೂಕ್ಷ್ಮತನುವಿನಲ್ಲಿ ಸ್ವಪ್ನದಿಂ ಪ್ರಾಣಲಿಂಗಪೂಜೆಯುಂ ಮಾಡುವ ಚಿತ್ಪ್ರಾಣಸ್ವರೂಪನಾದ ಸಿದ್ಧಲಿಂಗಂಗೆಯಾ ಪ್ರಾಣಲಿಂಗದಲ್ಲಿ ಚಿತ್ಪ್ರಾಣನ ಪಂಚೇಂದ್ರಿಯಗಳೂ ಸಿಕ್ಕಿ ನೆನೆವ ಮನಂ ನಷ್ಟವಾಗಿ ಕಾರಣತನುವಿನ ಭಾವದಿಂ ಗ್ರಹಿಸಿದ ಭಾವದ ಪಂಚೇಂದ್ರಿಯಂಗಳು ಭಾವಲಿಂಗದ ಪೂಜೆಯಲ್ಲಿಯೆ ಸಿಕ್ಕಿ ಆ ಭಾವ ನಿರ್ಭಾವವಾಗಿ ಒಳಹೊರಗೆ ತೆರಹಿಲ್ಲದೆ ನಿವಾತಜ್ಯೋತಿಯಂತೆ ದೀಪವನೊಳಕೊಂಡ ಸ್ಫಟಿಕದ ಘಟದಂತೆ ಮತ್ತಂ ಲಿಂಗದಲ್ಲಿ ಮನವನಿಂಬಿಟ್ಟ ತಂಗಟಮಾರಣ್ಣನಂತೆ ಕಳೆದುಕೊಂಡ ಲಿಂಗದಲ್ಲಿ ಪ್ರಾಣವನಿಂಬಿಟ್ಟ ಚಿ[1](ಕ್ಕ)[1]ಲಿಂಗಣ್ಣ ದೊಡ್ಡಲಿಂಗಣ್ಣನವರಂತೆ ಅಂಗಡಿಯಲ್ಲಿರಿಸಿದ ಲಿಂಗದಲ್ಲಿ ಪ್ರಾಣವನಿಂಬಿಟ್ಟ ಕಮಲಾಯಿಯಂತೆ ಕನ್ನದಿಂ ಹೋದಲಿಂಗದಲ್ಲಿ ಪ್ರಾಣವನಿಂಬಿಟ್ಟ ಸತ್ಯಣ್ಣನಂತೆ ಬಿಜ್ಜಳನೃಪಂ ತಸ್ಕರತ್ವದಿಂ ತರಿಸಿದ ಲಿಂಗದಲ್ಲಿ ಪ್ರಾಣವನಿಂಬಿಟ್ಟ ಚಂಡೇಶ ಚಾಮಯ್ಯನಂತೆ ಗ್ರಾಮಸೂರೆಯಿಂ ಹೋದ ಲಿಂಗದಲ್ಲಿ ಜೀವವನಿಂಬಿಟ್ಟ ಹೆಗ್ಗಡೆಹೋರಿಯಂತೆ ಮತ್ತಂ ಲಿಂಗ ನೈಷ್ಠಿಕೆಯನುಳ್ಳ ನುಲಿಯ ಚೆಂದಯ್ಯಂ ಕೊಂಡಗುಡಿಯ ಕೇಶಿ ಸತ್ಯೇಶ ಚಾಮಯ್ಯ ಅಜಗಣ್ಣ ಮುಂತಾದವರಂತೆ ಸಿದ್ಧಲಿಂಗೇಶ್ವರಂ ತನುತ್ರಯದಲ್ಲಿ ಲಿಂಗತ್ರಯಪೂಜೆಯಂ ಜಾ[2]ಗ್ರತ್[2] ಸ್ವಪ್ನ ಸುಷುಪ್ತಿಯಿಂ ನಿಬ್ಬೆರಗುವಟ್ಟಿರೆಯಿರೆ ೧೨೯

ಉ. ಮಾ. ವೃ.

ಇಂತಿಹ ಸಿದ್ಧಲಿಂಗನನು ಪಂತಿಯ ಜಂಗಮ ಬಾಳವೇಳೆಯಾ
ಯ್ತೆಂತು ಮಹೇಶ್ವರರ್ಗೆ ತಳುವಾದಪುದೂಟವುಮೆಬ್ಬಿಸೆಂಬುತುಂ
ಭಕ್ತಜನರ್ಗೆ ಪೇಳೆಯವರೆಬ್ಬಿಸಿ ಚಿತ್ರಿತ[3](ಚಿತ್ರದ)[3]ಂತೆಯುಂ
ಖ್ಯಾತಿಯುತಂ ನಿಶಬ್ದದೊಳಿರುತ್ತಿರಲಾಶ್ಚರಿಬಟ್ಟರಾಗಳುಂ ೧೩೦

ಚಂ. ಮಾ. ವೃ.

ಭಸಿತ ಸುರುದ್ರವಕ್ಷಮಣಿದಾಳ್ಪುದರಿಂ ಘನಭಕ್ತನಾಗಿಯುಂ
ಮಿಸುಪ ಸುಮಂತ್ರಜಾಪ್ಯದಿ ಮಹೇಶ್ವರ ಮಜ್ಜನದೊಳ್ ಪ್ರಸಾದಿಯುಂ
ಕುಸುಮದಿ ಪ್ರಾಣಲಿಂಗಿಯುಪಹಾರದಿಶಾರಣಸೆಜ್ಜೆಗೈಕ್ಯನಾ-
ಗೆಸೆದಿಹ ಭಾವವೋ ಯತಿಯ ಕಾರಣ ಕಾಣಿಸದೆಂದರಾಗಳುಂ ೧೩೧

---

1. ಗ (ಅಇ). 2. ಗ್ರ (ಅಇ). 3. ಪುತ್ರನ (ಅಇ).

ಮ. ವಿ. ವೃ.

*ಧರೆವರ್ಷಾಚರಕಂ ಚಿವಪ್ಪುವಪುವಂ ಗೌರಂಗೆ ವಹ್ನ್ಯಂಗಮುಂ
ಹರಗಂ ಮಾರುತಗಾತ್ರಮುಂ ಚರಕೆ ಕಂಕ್ಷೇತ್ರಪ್ರಸಾದಕ್ಕೆಯುಂ
ಪರಮಾತ್ಮಾರ್ಪಣವಂ ಮಹಾಶಿವನಿಗಿತ್ತುಂ ತೂಷ್ಣದಿಂ ತಾನುಮಿ-
ಪ್ಪಿರವೋ ಸಿದ್ಧನ ಸಿದ್ಧಿ ಕಾಣಿಸದುಮೆಂಮುಂ ದೈನ್ಯದಿಂ ಪೇಳ್ವರುಂ (?) ೧೩೨

ಕಂ. ಶರಿರಾದಿ ಪದಾರ್ಥವನುಂ
ಹರಗರ್ಪಿಸಿ ದಾಸೋಹದ ಪದದನುವಿನ ಘನ
ದುರುತರದ ತತ್ತ್ವಭಾವದ
ಪರಜೊಮ್ಮದಿ ಬೆರೆ[1](ತ)[1] ನಿಚ್ಚೆರಗಿಸಿರವೊ ಪರವೊ ೧೩೩

ಘನತರದಾತ್ಮಂಗದಿ ನೆರೆ
ಯನುವಿನ ಕರಣಸಮಾಧಿಯ ಕರಪೀಠದೊಳುಂ
ಸನುಮತದೊಳಿರ್ಪ ಲಿಂಗದ
ನೆನಹಿನ ಫಳನೀಗಳಲ್ಲಿನ ತಳಲೊ ಯೇನೋ[2]* ೧೩೪

ಸಚ್ಚಿದಾನಂದರೂಪಿನ
ಬೆಚ್ಚುಕತಂ ಸಿಕ್ಕದ ಘನಪರವಶದಿರವೋ
ಮೆಚ್ಚಿ ಶಿವಲಿಂಗಪತಿಯೋ
ನಿಚ್ಚಟದಿಂ ನೆರೆಯಲಿರ್ಪರೊಂದಾದಿರವೊ ೧೩೫

ವ || ಮತ್ತಂ ಪೃಥ್ವಿಯಂಗವಾಗಿ ಪೃಥ್ವಿಯ ಭಯವಿಲ್ಲದಿರೆ ಅಪ್ಪುವಿನಂಗವಾಗಿ ಅಪ್ಪುವಿನ ಭಯವಿಲ್ಲದಿರೆ ಅಗ್ನಿಯಂಗವಾಗಿ ಅಗ್ನಿಯಭಯವಿಲ್ಲದಿರೆ ಮರುತನಂಗವಾಗಿ ಮರುತನ ಭಯವಿಲ್ಲದಿರೆ ಗಗನದಂಗವಾಗಿ ಗಗನದಭಯವಿಲ್ಲದಿರೆ ಆತ್ಮನಂಗವಾಗಿ ಆತ್ಮಭಯವಿಲ್ಲದಿರೆ ನಿಶ್ಶಂಕನಾಗಿ ಲಿಂಗದಲ್ಲಿ ವ್ಯೆಮರೆದಿಪ್ಪಿರವೊ ಮತ್ತಂ ಆಚಾರಲಿಂಗವೇ ದೇಹವಾಗಿ ಗುರುಲಿಂಗವೆಯಾತ್ಮನಾಗಿ ಶಿವಲಿಂಗವೆ ಪ್ರಾಣವಾಗಿ ಚರಲಿಂಗವೇ ಇಂದ್ರಿಯಂಗಳಾಗಿ ಪ್ರಸಾದಲಿಂಗವೇ ವಿಷಯಂಗಳಾಗಿ ಮಹಾಲಿಂಗವೇ ತೃಪ್ತಿಯಾಗಿ ಆತೃಪ್ತಿಘನವಾದುಬ್ಬಸದಿಂ[3](ಗ)[3]ಳವು ಸೊಕ್ಕಿಯುಸುರ್ನಿಂದು ನುಡಿಯಡಗಿರ್ದಪನೋ ಯೆಂಮ ಸಕಲಮಾಹೇಶ್ವರರ್ಸಂದೇಹದಿಂ ಚರಲಿಂಗಗಳ್ಗಂ ಪೇಳುತಿರ್ಪಲ್ಲಿ ದರ್ಶನಾರ್ಥ

---

* ಈ ಪದ್ಯದ ಅರ್ಥ ಸ್ಪಷ್ಟವಾಗುತ್ತಿಲ್ಲ. 1. (ಅ೩). 2 * ಈ ನಾಲ್ಕನೆಯ ಸಾಲಿನ ಅರ್ಥ ಸ್ಪಷ್ಟವಾಗುತ್ತಿಲ್ಲ. 3. ಕ (ಅ೩).

ದಿಂದೊರ್ವ ಚರಲಿಂಗಂ ಬಂದು ವಂದನಂಗೈದು ಮೂರ್ತಿಗೊಂಡಿದೇನೆಂದು ಕೇಳೆ ಸಿದ್ಧ ಲಿಂಗಂ ಶಿವಾರ್ಚನಂಗೆಯ್ವುತ್ತಿರ್ದು ನಿಶ್ಚಲದಿಂದಿರ್ಪಂ ಏನೆಂದರಿಯೆವೆಂದವನಲಾ ಚರಲಿಂಗಂ ನುಡಿದಂ ೧೩೬

ಉ. ವೃ.

ಇಷ್ಟದಿ ನಟ್ಟ ದೃಷ್ಟಿಯದು ಶಾಂಭವಿಮುದ್ರೆ ಸುಜಾಗ್ರದಲ್ಲಿಯೇ
ದೃಷ್ಟವು ನಷ್ಟವಾಗಿ ಘನ ಖೇಚರಮುದ್ರೆ ಸುಸ್ವಪ್ನದಲ್ಲಿಯೇ
ಇಷ್ಟದ ಕೂಟಜಾನದ ಸುಮುದ್ರೆ ಸುಷುಪ್ತಿಯದಲ್ಲಿ ಮೌನದಾ
ಜೇಟದಿ ಸಿಕ್ಕಿ ಸಿದ್ಧನಿಹ[1]ನೆಂದನು[1] ಜಂಗಮರಾಯನರ್ತಿಯಿಂ ೧೩೭

ಯೋಗಸಮಾಧಿಯಲ್ಲಿಹಗೆ ದುಷ್ಟಸಮಾಧಿಯ[2]ದೇಕೆ[2] ಶೋಕಯೋ-
ಗಾಂಗಿಗೆ ಶೋಕವೇಕೆ ಗುರುವಿರ್ಪನು [3]ಲಿಂಗದಿ[3] ಲೀಯವಾಗಿಯುಂ
ರಾಗವಿರಾಗವಿಲ್ಲದಗೆ ರಾಗವ ಮಾಡಲು ತಾನೆಯೆಚ್ಚತುಂ
ಈಗವೆ ನಿಮ್ಮ ನೋಡುವನುವೆಂದನು ಯೋಗವಿದಂ ವಿಚಾರದಿಂ ೧೩೮

ಕಂ. ಆ ಮಾತನು ಕೇಳ್ದಾ ಕ್ಷಣ
ಪ್ರೇಮದಿ ವೀಣೆಗಳಂ ಪಿಡಿದಿರ್ವರು ಭಕ್ತರು
[4](ಪೆರ್ಮೆಯಿನಾಶ್ರುತಿವಿಡಿದುಂ)[4]
ಆ ಮಹಿ [5](ಮರು ತಾ)[5]ರ ಮಧುರ ಮಂದ್ರದಿ ಪಾಡಲ್ ೧೩೯

ಗಾನದಿ ಶಿವನಂ ಒಲಿಸಿಯು
ಜ್ಞಾನಿಯು ತಾನಾದ ಸಿದ್ಧಬುದ್ಧಯ್ಯಗಳುಂ
ಗಾನದಿ ಹರನಂ ಭಜಿಸಿದ
ನೂನದ ತಿರುನೀಲಕಂಠಪಾಣರುಗಳನುಂ ೧೪೦

ಹಾಡಿ ಶಿವನಿಂದ ಪೊನ್ನಂ
ಗಾಢದಿ ಪಡೆದತುಳಗಾನಭದ್ರಯ್ಯಗಳುಂ
ಹಾಡಿ ಮೆಚ್ಚಿಸಿದ ನಂಬಿಯ
ಹಾಡೀಶನ ನೇಮ[6](ದಾ)[6] ತಿರುಜ್ಞಾನಿಗಳಂ ೧೪೧

---

1. ಹಂ (ಅಇ). 2. ತಯದೇಕ (ಅಇ). 3. ನಿತನ್ಮನ (ಅಇ). 4. ಪೆರ್ಮೆಯೊಳ್ ಶ್ರುತಿಯನಾಲ್ದಿದಂ. (ಅಇ). 5. ಮಾತಾರ್ (ಅಇ). 6. ವಣೆದ (ಅಇ).

ಶಿವನಿಂ ಹಾಡಿಸಿ ಶತ್ರುವ
ಜವದಿಂದೋಡಿಸಿದ ಶಂಕರಯ್ಯನ ಚರಿತೆಯು
ಭವಹರನ ಪೊಗಳಿ ಕದವಂ
ಹವಣಿಂ ತೆಗೆಯಿಸಿದ ವಾಗಿಶಯ್ಯನ ಪಾಡಲ್ ೧೪೨

ಧವಳಾರದ [1](ಪಾರ್ವತಿಯುಂ)[1]
ಭವಹರನಂ ಪೊಗಳ್ವ ವಿಮಳದೇವನ ಬೊಂತಾ-
ದೇವಿಯು ಚರಿತೆಯು ಮಲ್ಲಿಕಾ-
ದೇವಿಯು ಚರಿತೆಯು ವೇಳ್ದರಾ ಭಕ್ತರ್ಕಳ್ ೧೪೩

ಸಕಲೇಶರ ಮಾದರಸರ
ಚಿಕ್ಕಲಿಗೆಯು ಮಾದಾಯಿ ಧವಳಿದೇವಯ್ಯಗಳಂ
ಚೊಕ್ಕಟಮಾಗಿಯೆ ಹಗಲಿರು-
ಳುಕ್ಕಿಯೆ ಹಾಡಿದರು ಬಿಡದೆ ದಿನಮೂರ್ತನಕಂ ೧೪೪

ತಂದನ ತಾನರ ಕ[2](ಥ)[2]ನವ
ನೊಂದುಂಗೆಯಿಂದೀಶನನ್ನು ಪೆಗಲೊಳಗಾಂತುಂ
ಹಿಂದುಮುಂದಾಗಿ ಹಾಡಿದ-
ಛಂದದ ಹನು[3](ಮಂತ)[3]ಗಿಂದ ಮಿಗಿಲೆಂದೆನಿಸಲ್ ೧೪೫

ಸ್ತ್ರೀಪುನ್ನಪುಂಸವರಿದುಂ
ಆ ಪರಿದ್ವಾತ್ರಿಂಶರಾಗಮಿಶ್ರವನರಿದುಂ
ದೀಪಿತ ಕಾಲವನರಿದುಂ
ಚೋಪಾನದಿ ಪಾಡೆ ಮೂರು ದಿನ ಪರ್ಯಂತಂ ೧೪೬

ಹಾಡಲು ಯತಿಪನ ಭಾವಂ
ಕೂಡಲು ಚಿತ್ಪ್ರಾಣನ ಮೈ ಜುಮ್ಮಿಂ ಕಂಪಿಸಿ
ಕೂಡೆಕೂಡೊಡನೆ ಪಾಡ-
ಕೂಡಡಗಿತು ಸ್ವಪ್ನ ಜಾಗ್ರಕೈದಿದನಾಗಳ್ ೧೪೭

---

1. ಪರ್ವತೆಯುಂ (ಅ) ; ಪರ್ವತತೆಯುಂ (ಇ). 2. ದ (ಅಇ). 3. ಮಾಸ್ನು (ಅಇ).

ಮುನ್ನೀ ಸ್ತೋತ್ರದ ಸೊಲ್ಲುವ
ಚೆನ್ನಾಗಿಯೆವೋದುತಲ್ಲಿ ಪೂಜಾದ್ರವ್ಯವ
ಉನ್ನಿಸಿ ಪಿಡಿಯಲ್ಕರವಂ
ಮನ್ನಣೆಯಿಂ ನೀಡೆ ಭಕ್ತರುಘೇಯುಘೇಯೆಂದರ್ ೧೪೮

ಭಕ್ತರು ಹರ್ಷಂದಳೆವುತ
ಮುಕ್ತಿಪದಕ್ಕಾಶ್ಚರ್ಯವೆಂದು ನಂದಿಸುತಿರೆ
ಶಕ್ತರಿರ ನಿಮ್ಮ ಮನಸಿನ
ಯುಕ್ತಿಯ ಬಲ್ಬುಜೆಗಳೇನುವೆಂದಂ ಸಿದ್ಧಂ ೧೪೯

ಅವರೆಂದರ್ ಮೂರ್ ದಿವಸಂ
ಭವಹರಪೂಜೆಯಲಿ ನಿಮಗೆ ಪರವಶವಾಗಲ್
ಹವಣರಿಯದೆ [1](ಈಜಂಗಮ)[1]
ಜವದಿಂ ನಿಮ್ಮಿರವ ಪೇಳ್ದರೆಂದುಂ ತೋರ್ದರ್ ೧೫೦

ವ|| ಅಂತು ತೋರುತಾಶ್ಚರ್ಯಂಬಟ್ಟು ತಮ್ಮೊಳ್ತಾವು ಕೊಂಡಾಡುತ್ತಿರ್ದರ ದೆಂತೆಂದೊಡೆ ಕಲ್ಯಾಣದೊಳ್ ಬಸವೇಶ್ವರಂ ಬಿಜ್ಜಳನ ಸಭಾಸ್ಥಾನದಲ್ಲಿರ್ದು ಪ್ರಸಾದ ಮಂ ಮುಟ್ಟಬಹ ಬೆಕ್ಕಂ ಹೊಡೆದು ನೃಪಂಗೆ ದೃಷ್ಟಮಂ ತೋರಿದಂ ಹಗರಣಿಗರ ವಾರ್ತಾಕಾಫಲಮಂ ಲಿಂಗಮಂಮಾಡಿದಂ ಮತ್ತೊಂದುದಿವಸಂ ಪನ್ನೆರಡು ಖಂಡುಗ [2]ಯಾ[2]ವನಾಳಮಂ ಮೌಕ್ತಿಕಮಂ ಮಾಡಿ ರಂಗವಾಲಿಗೆಂದೊಬ್ಬ ಜಂಗಮಕಿತ್ತಂ ಮತ್ತೊಂದು ದಿವಸಂ ಓರ್ವ ಜಂಗಮಂ ಬಂದು ಸ್ಮರದಹನಭಸಿತವೇಕಮುಖರುದ್ರಾಕ್ಷೆ ಸುರಲೋಕಮರುಗ ಜಲಚರಂ ಮುಟ್ಟದುದಕಮಂ ಬೇಡಲ್ ಇತ್ತಂ ಮತ್ತೊರ್ವ ಜಂಗಮಂ ನೊಸಲಕಣ್ಣ ಬೇಡಲಿತ್ತಂ ಮತ್ತೊರ್ವ ಜಂಗಮಂ ನೀಲಾಂಬಿಕೆಯುಟ್ಟ ಸೀರೆಯಂ ಸೆಳೆಕೊಂಡೊಯ್ಯೆ ನಸುನಗುತಲಿರ್ದಂ ಮತ್ತೊಂದು ದಿನವೋರ್ವ ಜಂಗಮಂ ಗಂಗಾದೇವಿಯ ಕಪೋಲಗಳಂತಾಟ ರತ್ನದೋಲೆಗಳಂ ಕಿತ್ತುಕೊಂಡೊಯ್ಯೆ ಅಟ್ಟ ಹಾಸದಿಂ ನಗುತಿರ್ದಂ ಮತ್ತೊಂದು ದಿನ ಓರ್ವಭಕ್ತಂ ಎಳೆಗರುವಿನ ಹಾಲನೀವು ವೆನಲು ಕರುವ ಕರೆದಿತ್ತಂ ಮತ್ತೊಂದು ದಿನವೋರ್ವ ಜಂಗಮಂ ಸಹಸ್ರಚಂಪಕದಲರ ವ್ರತವೆನಲುಂ ಕರವೀರಂಗಳ ಚಂಪಕಕುಸುಮಂಗಳಂ ಮಾಡಿತ್ತಂ ಮತ್ತೊರ್ವ ಜಂಗಮಂ ಚಿತ್ರದ ಪಲಸಿನ ಪಣ್ಣಂ ಮೆಲವೇಳ್ಕೆಂದೊಡೆ ಕೊಯ್ದು ನಿಜಹಣ್ಣಂ ಮಾಡಿತ್ತಂ ಮತ್ತೊಂದು ದಿನವೋರ್ವ ಬಂಕಯ್ಯನೆಂಬಾತಂ ಬಸವಾ ಕಠಾರದಿಂ ಶಿವಿ[3](ದ)[3]ಹೆನಾಂ ನೀಂ ಬಯಲಾಗಿ ತೋರೆಂದು ಶಿವಿಯೆ ಬಯಲಾಗಿ ತೋರಿದಂ

1. ಸವಿನಯವೆನು । ನಿಜಂಗಮ (ಅಇ). 2 x (ಇ). 3. ಯ (ಅಇ).

ಬಸವನೊಂದು ದಿನ ಪವಡಿಸಿರ್ಪಲ್ಲಿ ಉರಗಂ ಮುಟ್ಟೆ ತಾನೆ ಮರಣವಾಗೆ ಅವಕಸುವಿತ್ತಂ ಬಂದಿಕಾರಂ ಕಪಟಜಂಗಮವಾಗಿ ಬರೆ ನಿಜಜಂಗಮವಾಗಿ ತೋರಿದಂ ಮತ್ತೊಂದು ದಿನ ಬಿಜ್ಜಳನ ಸಭೆಯೊಳಿರ್ದು ಯೋಜನಾಂತರದಲ್ಲಿ ಬೀಳ್ವ ಗೊಲ್ಲತಿಯ ತಕ್ರಘಟವಂ ಪಿಡಿದು ನೃಪಂಗೆ ದೃಷ್ಟವಂ ತೋರಿದಂ ಬಿಜ್ಜಳಂ ಸಹಸ್ರತಕ್ರಘಟಂಗಳಂ ಸಹಸ್ರ ಭಟರಿಂ ಪಿಡಿಯಿಸಿ ಬಸವ ಬಸವಾಯೆಂದೆಲ್ಲವಂ ಹಾಕಿಸಲೆಲ್ಲವಂ ಪಿಡಿದಂ ಹನ್ನೆರಡು ಸಾವಿರ ವಿಟಜಂಗಮರ ಲಿಂಗಂಗಳಂ ತಾನೆ ಪೂಜಿಸಿ ಅವರವರ ಲಿಂಗಂಗಳ ಪ್ರಸಾದಂಗಳನವರವರಿಗೆ ಕೊಟ್ಟು ಸಟೆಯೆಂದ ಬಿಜ್ಜಳಂಗೆ ದೃಷ್ಟವಂ ತೋರಿದಂ ಬಿಜ್ಜಳನ ಸಂಗಡಂ ಬಸವೇಶಂ ವೈಹಾಳಿಯ ಹೋಹಾಗಲೊಬ್ಬ ಭಕ್ತಂ ಬೀದಿಯಲ್ಲಿ ನಿಂದು ತನ್ನಮಗನಂ ಬಸವಾ ಪ್ರಸಾದವಿದೆಕೋಯೆನೆ ತಾಂ ಬಂದು ಈಸಿಕೊಂಡಂ ಅದ ಕಂಡು ಬಿಜ್ಜಳಂ ಅಂಗಡಿಯಲ್ಲಿರ್ಪ ಕಜ್ಜಾಯಂಗಳ ನೇಜೆ[1](ಯು)[1]ದೊಳ್ತಿವಿದೆತ್ತಿ ಬಸವಾ ಲಡ್ಡುಕಂಗಳ್[2](ವೆ)[2] ಕೋಯೆನಲು ಹುಳಿತದೆಯೆನಲು ಹುಳುವುದುರುತಿರ್ದವುಂ ಮತ್ತೊಂದು ದಿನ ಜೈನದಾಸಂ ಭಕ್ತದಾಸಿಯೊಳ್ಕೂಡಿರಲವಳ ಬೋಧೆಯಿಂ ಜೈನರ ಮನೆಯತ್ತ ಸುಳಿಯದಿರೆ ಬಿಜ್ಜಳನರಿದು ಕರಸಿ ಕೇಳಿವಡೆ ಲಿಂಗದೇಹಿಯೆನೆ ತೋರು ಲಿಂಗವನೆನೆ ಒಡಲಂಸೀಳಿ ಲಿಂಗವಂ ತೋರಿ ಮುನ್ನಿನಂತೆ ಪ್ರಾಣವಿತ್ತಂ ಕಾಳಕೂಟ ವಿಷವಂ ಕೊಂಡು ವಾದಿಗಳಂ ಗೆಲಿದಂ ಮತ್ತೊಂದು ದಿನಂ ಜೀವಿತವನಿಕ್ಕುವ ಜೌಳಿಗೆಗಳಂ ಜಂಗ[3]ಮಂ[3] ಬೇಡಲಿತ್ತು ನೃಪಂಗೆಂದಿನಂತಿತ್ತಂ ಮತ್ತೊಮ್ಮೆ ವೈಹಾಳಿ ಹೋಹಾಗ ಒಬ್ಬಗೊರವಂ ಪ್ರಸಾದವೀಯಲುಪದರೊಳುಂ ಕೂದಲಿರೆ ನಿಮ್ಮ ದೇವರ್ಗೆ ಕೇಶವುಂ[4]ಟೆ (ಎಂದೆನೆ)[4] ಲಿಂಗದಲ್ಲಿ ತೋರಿದಂ ಕನ್ನದ ಬ್ರಹ್ಮಯ್ಯಂ ಬಿಜ್ಜಳನ ಮನೆಯ ಕನ್ನವಿಕ್ಕೆ ನೃಪಂ ಕೋಪಿಸೆ ಬಸವಂ ಕನ್ನದ ಮಣ್ಣಂ ಚಿನ್ನವಂ ಮಾಡಿ [5]ಮೆರೆ[5]ದಂ ಮತ್ತೊಂದು ದಿನಂ ನೂರೆಂಟು ಕರಣಶಾಲೆಯ ಲೆಕ್ಕಮಂ ಈಗಲೆ ಒಪ್ಪಿಸೆಂದೆನೆ ಹನ್ನೊಂದು ದಿನ ಸೂರ್ಯನಂ ತಡೆದು ಲೆಕ್ಕವನೊಪ್ಪಿಸಿದಂ ಮತ್ತೊಮ್ಮೆ ಯುಂಗುರವಂ ತೆಗೆಸು ನಮಿಸೆನೆ ಬರಿಯ ಗದ್ದುಗೆಗೆ ನಮಿಸೆ ಉರಿಯೆ ನಂದಿಸಿದಂ ಊಟವನ್ನಿಕ್ಕಿ ಪ್ರಭುವಂ ಮೆಚ್ಚಿಸಿದಂ ಧೂಪದ ಮಂಚಣ್ಣಗಂ ಅಸುವಿತ್ತಂ ಕೇತಕೀ ಪುಷ್ಪಂಗಳಂ ಪರಿಪೂರ್ಣಭಾವ[6]ದಿಂ[6] ದರ್ಪಿಸಿಯೆಲ್ಲಾ ಲಿಂಗಗಳಲ್ಲಿ ತೋರಿಸಿದಂ ನೀರ ಹರವಿಯೊಳ್ ಘಟ್ಟಿಯುಂ ತೋರಿದಂ ಸತ್ತ ಕರುವಂ ಹೊತ್ತು ಹೋಹಾತನಂ ನಿಜ ಭಕ್ತನಂ ಮಾಡಿ ಸತ್ತ ಕರುವಿಗಸುವಿತ್ತು ನೃಪಂಗೆ ತೋರಿದಂ ಗೃಹಾಗ್ರದಲ್ಲಿರ್ದ ಕೂಷ್ಮಾಂಡಫಲದಲ್ಲಿ ಲಿಂಗಮಂ ತೋರಿದಂ ಭಸಿತವಿಕ್ಕಿದ ಸುರೆಯ ಘಟದೊಳಗಮೃತಮಂ ತೋರಿದಂ ಕಾಳಾಸಂಕೊಡುವ ಮೋಹಿನಿಯುನಿಟ್ಟ ನಿಂಬೆಹಣ್ಣಂ ಲಿಂಗ[7]ವಂ ಮಾ[7]ಡಿದಂ ಶಿವನಾಗಮಯ್ಯನ ಬೆರಳೊಳಮೃತವಂ ಕರೆದಂ ಕೇತಕೀಹೂವೆ ಹಾವಾಗಿ

1. ಯೋ (ಅಇ). 2. ವೀ (ಅಇ) 3. ಮವಂ (ಅಇ) 4. ಟೆಂದು (ಅಇ). 5. x(ಇ). 6. x (ಇ). 7. x (ಇ).

ಮೂಗೆಕಚ್ಚೆ ಸತ್ತ ಬಿಜ್ಜಳಂಗಸುವಿತ್ತಂ ಮತ್ತೊರ್ವ ಜಂಗಮಕ್ಕೆ ಮೂಗಳ ತೊಗರಿಯುಂ ಮಾಣಿಕಂ ಮಾಡಿತ್ತಂ ಮತ್ತೊಂದುದಿನ ಓರ್ವಜಂಗಮಂ ಬಂದು ಮನೆಯುಂ ಸೂರೆಯುಂಬೇಡಲಿತ್ತಂ ನೃಪನ ವಾರಕದೊಡವೆಯುಂ ಮರಳಿ ನೃಪಂಗಿತ್ತಂ ಮತ್ತೊರ್ವಂ ವಾರಕದಶ್ವಮಂ ಕೇಳಲಿತ್ತು [1]ನೃಪಂಗೆ ಲಾ[1]ಯದೊಳ್ ತೋರಿದಂ ಮೋಟಮಲ್ಲುಗನಂ ನಿಜಲಿಂ[2](ಗಿಯುಂ)[2] ಮಾಡಿದಂ ಕಾಷ್ಟದ ರೂಹಿನ ಜಂಗಮಕ್ಕಸುವಿತ್ತಂ ರೇವಣಸಿದ್ಧನಿಂ ದಹನವಾದ ಬಿಜ್ಜಳನರಮನೆಯನೆಂದಿನಂತೆ ಪಡೆದಂ ಶಿವಭಕ್ತಲಿಂಗದೊಳಗಾದುದನಣಕಿಸಿದ ನೃಪಂಗೆ ತನ್ನ ಹೃತ್ಕಮಲಮಂ ಬಗೆದು ತೋರಿದಂ ಬಿಜ್ಜಳಂ ಕಳೆದ ಚೆನ್ನಬಸವೇಶ್ವರನಯನಂಗಳಂ ಕೊಟ್ಟಂ ಅಗ್ಘಣಿಹೊನ್ನ[3]ಯ್ಯನಿಂದಾದ ಬಿಜ್ಜ[3]ಳನ ಕುಷ್ಟಮಂ ಬಿಡಿಸಿ ಸಿರಿಯನಿತ್ತಂ ಚಿತ್ರದ ಜಂಗಮರಂ ನಿಜಜಂಗಮವಂ ಮಾಡಿಯಸುವಿತ್ತಂ ಮಡಿದುಪ್ಪಲಿಗರಿಗಸುವಿತ್ತಂ ನೃಪಂ ಕಪಟದಿಂ ನಾಗಾಯಬಳಿಗೆ ಕಳುಹೆ ಶಿಶುವಾಗಿರ್ದಂ ಮೊರವಾಕೆ ಕೈಮುಗಿಯೆ ನೃಪಂ ನಗೆ ಸತ್ತಾತಂಗಸುವಿತ್ತಂ ಕುಸುಮವಾದ ಬೇವಿನ ವೃಕ್ಷಮಂ ಕಂಡು ಶಿವಂಗರ್ಪಿತವೆನೆ ನೃಪಂ ಹಾಸ್ಯವಾಡೆ ಯೆಲ್ಲಾ ಲಿಂಗಂಗಳಲ್ಲಿ ತೋರಿದಂ [4]ಕನ್ನದಮಾರ[4]ಯ್ಯಂಗಳಂಗಸಹಿತಂ ಸಿಕ್ಕೆ ಬಿಜ್ಜಳಂ ಶೂಲಕ್ಕೆ ತೆಗೆಸಿದೊಡೆ ಪ್ರಾಣವಿತ್ತಂ ಕರೆಸುತಂಪಂ ಬಿಜ್ಜವಾಡಪಲ್ಲಿ ಮಹದೇವಿಯಕ್ಕಗಳು ಶಿವಲಿಂಗಕ್ಕೆ ಪಡಿಬೋನಮಂ ಸಲಿಸುತ್ತಿರಲೀಶನಿನ್ನುಂ ತಾರೆನಲು ಇಕ್ಕಿದಂ ತುಂಡಿರಲಿಲ್ಲವೆಯೆಂದದ್ದಲಿಸಿ ಕಟವಾಯುಂ ತಿವಿಸಿ ಬಸವೇಶ್ವರಂ ಬಿಜ್ಜಳನಾಸ್ಥಾನದಲ್ಲಿರ್ದರಿದು ನಗುತ್ತಿರೆ ನೃಪನಿದೇನೆಂದುಕೇ[5]ಳೆ ಹೇಳೆ[5] ದೂತರಂ ಕಳುಹಿ ದೃಷ್ಟವಂ ತೋರಿದಂ ಕಾರ ಹುಣ್ಣಿವೆಯಲ್ಲಿ ಮಣ್ಣೆತ್ತಿಗಸುವಿತ್ತಂ ಮತ್ತೊಮ್ಮೆ ಕಾಳಿಮರಸಂ ಬಸವನಂ ಜರೆದು ದರಿದ್ರನಾಗಿ ದೇಶಾಂತರಕ್ಕೆ ಹೋಗೆ ದರಿದ್ರಂ ಬಿಡದಿರೆ ಬಸವನುಂ ಗುರುವನಾಂ ತೆಕ್ಕೊಂಬೆನೆಂದು ಬರುತ್ತಿರೆ ಒಂದು ಹೆಣಂ ಕೇಳ್ದು ಗುರುಲಿಂಗ ಜಂಗಮ[6]ವಂ[6] ಹಳಿವಂಗೆ ಸಿರಿ ಬಹುದೇ ಎಂದು ಪೇಳೆ ಅದನರಿದು ಬಸವಂ ನಗಲು ನೃಪಂ ಕೇಳೆ ದೃಷ್ಟಮಂ ತೋರಿದಂ [7](ಏರಂಡ)[7]ದ ಕೊನರಂ ಮೆದ್ದು ಸತ್ತ ಬಸವಂಗಸುವಿತ್ತಂ ಈದ ಹೆಬ್ಬುಲಿಯುಂ ಕಪಿಲೆಯುಂ ಮಾಡಿ ಕರೆದಂ ಶಿವಭಕ್ತರಂ ಕೊಲ್ವಕೋಣನಂ ನೋಟಮಾತ್ರದಿಂ ಕೊಂದಂ ಓಲಗದೊಳಿರ್ದು ಬಸವಂ ನಗಲು ನೃಪನಿದೇನೆನೆ ಗುಜ್ಜರದೇಶದಲೊಬ್ಬ ಭಕ್ತಂ [8](ಸೊ)[8]ಪ್ಪೆಯನಂಬುತವನೆಯೆಂಪಡೆ ದೂತರಂ ಕಳುಹಿ ದೃಷ್ಟಮಂ ಕಂಡಂ ಪಾದತೀರ್ಥವೆ ಪರುಷವೆಂದು ಕಬ್ಬಿನವ ಹಾಕಿ ದೃಷ್ಟವಂ ತೋರಿದಂ ಬಿಜ್ಜಳಂ ಮತ್ತೊಂದು ದಿನಂ ಬಸವನ ಮುದ್ರೆಯುಂಗುರವಂ ತೆಗೆದುಕೊಂಡು ಹೊರಡಿಸೆ ಹೋಗಿ ಮತ್ತಿಗಟ್ಟದ ಹಳ್ಳದಲ್ಲಿ ಕುಳಿತರೆ ದರ್ಶನಕ್ಕೆಂದು ಬಂದ ಕಲ್ಲಿನಾಥನ ಗೊಡ್ಡಾಕಳಂ ಕರೆದು ಸರ್ವೇಶ್ವರಯ್ಯನ ನೇಮವಂ ಸಲಿಸಿದಂ ಮತ್ತಂ ಸರ್ಪನ

---

1. x (ಇ). 2. ಗವಂ (ಅಇ). 3. x (ಇ). 4. x (ಇ). 5. x (ಇ).
6. x (ಇ). 7. ಯರಂದ (ಅಇ). 8. ಸ (ಅಇ).

ನೇವಣಮಂ ಸಿದ್ಧಿಸೆಟ್ಟಿಯಲೊತ್ತೆಯಿಟ್ಟುದನರಿದು ಬಿಜ್ಜಳಂ ಕರೆದು ಪ್ರಧಾನಿಕೆಯಂ ಮರಳಿತ್ತಂ ಮತ್ತೊರ್ವ ಮೋಟಭಟಂಗೆ ಕರಚರಣವಂ ಕೊಟ್ಟಂ ಗಾರೆಯ ಸುಣ್ಣವಂ ಪ್ರಸಾದವೆಂದೆನೆ ಕೈಕೊಂಡಂ ಮತ್ತಂ ಕಿನ್ನರಯ್ಯ ಮೇದರಕೇತಯ್ಯಂಗಳೊಡನೆ ತನ್ನ ಪ್ರಾಣವಂ ಬಿಟ್ಟಂ ಮತ್ತಂ ಮಡಿವಾಳಮಾಚಯ್ಯನಿಂದೆದ್ದಂ ಸ್ವಲಿಂಗವನ[1]ನ್ಯ[1]ರಿಂ ಮುಟ್ಟಲೀಸದ ಬೊಮ್ಮಯ್ಯಂ ಪರಲಿಂಗವ ಮುಟ್ಟುವ ನೇಮದ ಬೊಮ್ಮಯ್ಯಂಗಳ್ಗೆ ತನ್ನ ಪ್ರಾಣವಂ ಕೊಟ್ಟಂ ಮರಳಿ ವೀರಭದ್ರಯ್ಯನಿಂದೆದ್ದಂ ಮತ್ತೊಂದು ದಿನದಲ್ಲಿ ಬಸವೇಶ್ವರಂ ತನ್ನ ಲಿಂಗದೇವರ್ಗೆ ಷೋಡಶೋಪಚಾರಂ ಮಾಡುತಿರ್ಪಲ್ಲಿ ಒರ್ವ ಜಂಗಮಂ ದರ್ಶನಾರ್ಥದಿಂ ಬಂದು ದ್ವಾರಪಾಲಕರಿಂ ತಿರುಗೆ ಪ್ರಾಣವಾ ಜಂಗಮ ದಲ್ಲಿಯೇ ಲೀಯವಾಗೆ ಚೆನ್ನಬಸವೇಶ್ವರಂ ಸ್ತೋತ್ರಂ[2]ಗೆ[2]ಯ್ದೊಂದುದಿನದ ಮೇಲೆಯೂ ಜಂಗಮಂ ಬರೆ ಮರಳಿ ಬಸವೇಶ್ವರನ ಪ್ರಾಣಂ ಬಂದುದೆಂದು ಪೂರ್ವಪ್ರಸಂಗದಿಂ ಕೇಳ್ದೆವು ಇಂದೀ ಸಿದ್ಧಲಿಂಗೇಶ್ವರಂ ತನ್ನ ಲಿಂಗದಲ್ಲಿ ಮೂರುದಿವಸಂ ಲೀಯ ವಾಗಿರ್ದುದಂ ಕಂಡೆವೆಂದು ಆಶ್ಚರ್ಯಂಬಟ್ಟ ಸಮಸ್ತಮಹೇಶ್ವರರು ಕೊಂಡಾಡುತ್ತಿರೆ ಸಿದ್ಧೇಶಂ ಸರ್ವಮಹೇಶ್ವರರ್ ಸಹಂ ಶಿವಪ್ರಸಾದದಿಂ ತೃಪ್ತನಾಗಿರುತಿರ್ದಂ

ಮ. ವಿ. ವೃ.

ಪರಮೇಶಂ (ಗಿರಿಶಂ) ಸುಧಾಕರಕರಂ ಕಾಲಾಂತಕಂ ಶಂಕರಂ
ಉರಗೇಂದ್ರಾಭರಣಂ ವಿನಾಯಕಪಿತಂ ಗಂಗಾಧರಂ ಕಾಮಸಂ-
ಹರಸೌಖ್ಯಾಕರ ರಕ್ಷಿಕೆಮ್ಮುಮನು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮ ಜಟಾಧರಂ ಪುರಹರಂ ಭರ್ಗಂ ಶಿವಾವಲ್ಲಭಂ

ಗದ್ಯ: ಇದು ಸಕಲ ಸುರಗಣಮಣಿಮಕುಟರಚಿತದ್ಯುಮಣಿಪ್ರಭಾಧಿಕ್ಯ ಮಾಣಿಕ್ಯದ್ಯುತಿಪುಂಜಮಂಜುಲರಂಜಿತಸಂಪಚ್ಚರಣನೆನಿಪ ಭೂತೇಶ್ವರ ಶ್ರೀಪಾದ ಪಯೋಜಮಕರಂದರೋಲಂಬಮಾನ ಚೆನ್ನವೀರೇಶ್ವರಾಭಿಧೇಯ ವರ ಜಂಗಮದೇವ ವಿರಚಿತಮಪ್ಪ ಷಟ್‌ಸ್ಥಲವಲ್ಲಭ ಮಹಾಪ್ರಬಂಧದೊಳು ಸಿದ್ಧಲಿಂಗೇಶ್ವರಶಿವಯೋಗ ಸ್ಥಿತಿಕಥನಂ ಚತುರ್ಥಾಶ್ವಾಸಂ ಸಮಾಪ್ತಂ.

---

1. x (ಇ). 2. (ಇ).

# ಪಂಚಮಾಶ್ವಾಸಂ

## ನಾನಾಮಾಹಾತ್ಮ್ಯ ರಥೋತ್ಸಾಹ ಕಥನಂ

ಕಂ. ಶ್ರೀಪತಿಪೂಜಿತ ಚರಣ ಶ-
ಚೀಪತಿನತಮಹಿಮನೆ ವಾಣೀಶ್ವರನುತನೆಯು-
ಮಾಪತಿ ಪಶುಪತಿ ದೇವನೆ
ಕಾಪಾಲಿಯೆ ರಕ್ಷಿಸೆಮ್ಮುಮಂ ಭೂತೇಶಂ ೧

ಯತಿಪತಿ ಶಿವಶಾಸ್ತ್ರಗಳೊಳ್
ಸತತಂ ಶಿವತತ್ತ್ವಾನುಭವಂಗಳ ತಾನರಿ-
ವುತ ಮುದದಿಂದಿರಲಾಗಂ
ಖತಿಗೊಳುತೆಯ್ದಿತ್ತು ಋತವಾಸಂತಕವಾಗಲ್ ೨

ರಸೆಯಂ ಕಾಹೇರಿಸುತಂ
ದೆಸೆಯಂ ಸಂತಾಪಿಸುತ್ತ ತೃಣಕುಲಲತೆಗಳ
ಸಸಿಯಂ ಸೀವುತ್ತಾಗಂ
ಪಸರಿಸುತಿರ್ಕುಂ ಬೇಗ ನಿದಾಘಮಮೋಘಂ ೩

ಬೆಟ್ಟಂಗಳ ಸೀಳುತ್ತಂ
ನಿಟ್ಟೊರಸುತ ಮೃಗಖಗಾದಿ ಜೀವಂಗಳನುಂ
ಸುಟ್ಟುರುಪುತ ವೃಕ್ಷಂಗಳ
ಕಟ್ಟುಗ್ರದಿ ಬಂದುದಾಗ ಬೇಸಗೆ ರಸೆಗಂ ೪

ಧರೆಯು ತಟಾಕಂಗಳಿಂಗಲು
ಧರೆಗಂ ಜಲವಿಲ್ಲವೆಂದು [1]ಬಿ[1]ಸಿಲಂ ಹಿಳಿದುಂ
ಧರೆಯೊಳ್ತೀವಿದ ರವಿಯಂ
[2](ಬು)[2]ರುತರದಂತಿರೆ ಮರೀಚಿಕಾಜಲಜಲದೊಳ್ ೫

---

1. x (ಇ). 2. ಬ (ಅಇ).

ಚಂ. ಮಾ. ವೃ.

ರವಣನುಮೆಂಬ ದೈತ್ಯನನು ಕೊಲ್ಲಲು ಕಾರಿದ ಸೂರ್ಯವೀಟಿಯೋ
ವಿವಿಧಕಪೀಂದ್ರನಂ ಕೊಲುವ ಸೂರ್ಯನ ಚಿತ್ತದ ರೌದ್ರದುಷ್ಣವೋ
ರವಿವರ ಮೆಚ್ಚಿ ಕರ್ಣನಿಗೆ ತೋರುವ ಕಾಯದ ಕಾಂತಿಪೊತ್ತವೋ
ಕವಿದು ಸುಕೇಶಗಂ ಕಿರಣದೋರುವ ಭಾವವೊಯೆಂಬೊಲಿರ್ದುದುಂ ೬

ಮನುಜರುಮುಷ್ಣತಾಪದೊಳು ಕಂದುತಲಿರ್ಕು ತಟಾಕ[1](ನೇ)[1]ಕದಿಂ
ಘನತರಮುಷ್ಣನೀರೊಳಗೆ ಕೂಪ್ಪುದಿಗೊಂಬುತಲಿರ್ಕುಮೀನ್ಗಳುಂ
ಅನಲದ ಸೋಂಕಿಸಂತೆ ಧರೆ ಸೋಂಕಿದ ಪ್ರಾಣಿಯು ಸೀವುತಿರ್ಕುಗುಂ ೭
ವನದಡಿಗೈದಲಗ್ನಿಯೆ-ಡೆಗೈದಿದ ಭಾವವ ತೋರುತಿರ್ದುದುಂ

ಘನತರಮುಷ್ಣಕಾಲದೊಳು ಭಕ್ತರು ಲಾಮುಚಭಿತ್ತಿಯಿಂದ ಚಂ
ದನಘನಸಾರಸಾ[2](ರ)[2]ಣೆಯ ಕತ್ತುರಿವೇದಿಕೆ[3](ಯಿಂದ)[3] ರಂಭನೂ-
ತನದಳದೌಘಮೇಲ್ವೊದಕೆಯಿಂದಲು ರಂಜಿಪ ಮಂಟಪಾಂತದೊಳ್
ಘನಮಹಿಮಾನ್ವಿತಾಂಗನನು ಪೂಜಿಸುತಿರ್ದರದೇನನೆಂದಪೆಂ ೮

ವ|| ಆ ಕುಸುಮಮಂಟಪದಲ್ಲಿ ಮೂರ್ತಿಗೊಂಡಿರ್ದ ಸಿದ್ಧಲಿಂಗೇಶ್ವರಂಗೆ ಸುರಹೊನ್ನೆಯಲರ ಪಾದಕಟಕದಿಂ ದುಂಡುಮಲ್ಲಿಗೆಯ ಹಾರದಿಂ ಪಾರಿಜಾತವಲರ ಮುದ್ರೆಯುಂಗುರಂಗಳಿಂ ಕನ್ನೈದಿಲಲರ ಕಂಕಣದಿಂ ಪಾ[4]ದರಿ[4]ಪುಷ್ಪದ ಬಾಹುಪೂರದಿಂ ಕರ್ಣಿಕಾರ ಪ್ರಸವಸಂಜಯದ ಭುಜಕೀರ್ತಿಗಳಿಂ ಕೇತಕೀಸಣ್ಣ ಸುಣ್ಣೆಸಳ್ಗಳ ಫಣಿಕುಂಡಲಂಗಳಿಂ ಚೆಂಗಣಗಿಲ ಪ್ರಸೂನಂಗಳಕಿರೀಟದಿಂ ಚಂಪಕದ ಬಿರುಮುಗುಳ್ಗಳ ಗೊಂಡಣದ ಪದಕದಿಂ ಪುಂಡರೀಕದೆಸಳ್ಗಳ ಧೌತಯುಗದಿಂದಲಂಕರಿಸಿ ಭಜಿಸುತಿರ್ಪಲ್ಲಿ ಆ ಪೂಜೆಯ ಸುಖಂಗಳ ಲಿಂಗಕ್ಕರ್ಪಿ[5]ಸುತಾ[5] ಸಿದ್ಧಲಿಂಗೇಶ್ವರನಿರೆಯಿರೆ - ೯

ಕಂ. ಕಲಿಕಾಲ ಕಲ್ಮಷಕ್ಕಂ
ಚಲದಿಂದೆಡೆವಿಡದೆ ವಿಮಳ ಸದ್ಭಕ್ತಿಯನುಂ
ನೆಲೆಯಾಗಿ ಪಿಡಿದರೆಯ್ದುದ-
ರೊಲವಿಂದೆತಿಪನ ನೋಳ್ಪನುರಾಗದ ರಾಗಂ ೧೦

ಶಶಿಧರನ ವೇಷದವರ್ಗಂ
ವಸನಾನ್ನ ಸುವರ್ಣಮುಖ್ಯ[6](ಮಂ ಕೊಟ್ಟುಂ ಮಂ)-[6]
ದಿಸಿಯವರ ಪ್ರಸಾದವ ಸಂ-
ತಸದಿಂ ಪಡೆದವರ್ಗೈದಿದರುಂ ಸಂಭ್ರಮದಿಂ ೧೧

1. ನೀ (ಅಇ). 2. ದ (ಅಇ). 3. ಯುಂತ (ಅಇ.) 4. x (ಇ). 5. x (ಇ).
6. ಮಾದಕೊಟ್ಟಾಂಟ್ಬೊಂ (ಅಇ).

ಆನೆಂಬ ಮಮತೆಯಳಿದುಂ
ಮಾನಸ ಮುಂತಾದ ತ್ರಿಕರಣದಿಂ ಚರಸೇವೆಯ
ಜಾನಿಸಿ ಮಾಡುವ ಭಕ್ತರು
ಮೌನದೊಳೈದಿಪರು ಬಹಳ ಬಹಳೋನ್ನತಿಯಿಂ ೧೨

ಏಕನೆಂದೆನಿಪ ಶಿವನೊಳ-
ಗೇಕತ್ವದಿ ಕೂಡಿ ಹರನ ಮಹಿಮೆಯ ತಳೆದುಂ
ಲೋಕಾಚಾರವ ನೂಂಕಿದ
ಜೋಕೆಯ ಚರರೈದಿದಪುಣ್ಯ[1](ಪ)[1]ಣ್ಯಾಧಿಪರುಂ ೧೩

ವ|| ಲಿಂಗದೊಳ್ ಸಟ್ಟದೃಷ್ಟಿಯ [2]ನಿಶ್ಚಲತೆಗ[2]ಟ್ಟಗೊಂಡವಿರಳಸಮಾಧಿಯ ಆನಂದರಸವೊಸರುವಶ್ರುಜಲದ ದಟ್ಟೈಸಿ ನೆಗೆವ ಮೈಪುಳಕದ ಸ್ವೇದವೂರತೆಯ ಅವಿರಳಯೋಗಾನಂದದ ಅಕುಟಿಲತ್ವದೊಳೊಲಿದು ಸಿದ್ಧಶೀಕರಿಯೊಳಿರ್ಪ ನಿಃಕಳಂಕರೆಂದೆನಿಪ ಜಂಗಮಲಿಂಗಸಂಚಯಂ ಮತ್ತಂ ಅಂಗದ ಮೋಹಮಂ ಮರೆದು ಪಂಚೇಂದ್ರಿಯಸಂಗಸುಖಂಗಳಂ ಹರಿದುಂ ಲಿಂಗನಿರೂಪದಿಂ ಬಂದ [3]ಪದಾರ್ಥ[3]ವಂ [4]ಶಿವ[4]ಭಾವದಿಂ ಸವಿದುಂ ಲೌಕಿಕರ ಹಂಗಂ ಹಳಿದುಂ ಕಾಲಕಾಮಾದಿಗಳ ಬಲುಹಂ ಭಂಜಿಸಿ ನಿಸ್ಪೃಹತೆಯಿಂ ನಿತ್ಯನಿರ್ವಾಣಪದದ ಸಿಂಹಾಸನದ ಕಂಜನಾಳದ ಪವನನನೆತ್ತೂರ್ಧ್ವದ ನಿರಂಜನಮಹಾಲಿಂಗಯೋಗದೊಳು ನಿತ್ಯರಾದ ಚರಲಿಂಗಗಳೆಯ್ದಿ ಸಿದ್ಧಲಿಂಗೇಶ್ವರಂಗಂ ವಂದನಂಗೈದು ಸಮೀಪದಲ್ಲಿ ಕುಳಿತುಂ ಶಿವತತ್ವಾನುಭಾವ ಗೋಷ್ಠಿಯಿಂದಿರ್ಪಲ್ಲಿ ಸದ್ಭಕ್ತರುಗಳ್ ಬಂದುಂ — ೧೪

ಉ. ಮಾ. ವೃ.

ಓವಿ ತಟಾಕ ಹಳ್ಳ ತೊರೆ ಸಂಚಯವಿಂಗಿ[5](ರಲೀ)[5]ಶಪೂಜೆ[6](ಗಂ)[6]
ಬಾವಿಗಳನ್ನು ತೋಡೆ ಜಲವೇಳವು ನೀರುಗಳಿಲ್ಲವೀಗಳುಂ
ಸಾವಿರಸಂ[7](ಖ್ಯೆಯಿಂದ)[7] ಜನಕೂಡಿತವರ್ಗಳು ನೀರುಮಿಲ್ಲ[8](ದಾ)[8]
ಭಾವಜವೈರಿಪೂಜೆಗಳ ಮಾಡಲುಮಿಲ್ಲದೆ[9](ಯಿ)[9]ರ್ಪುದೆಂದರುಂ ೧೫

ಅಂತದ ಕೇಳ್ದು ಸಿದ್ಧಗುರುವೀ ತೊರೆಯಲ್ಲಿಯೆ ನೀರು ಬೇಗದಿಂ
[10](ಸಂತತ)[10]ವಾಗಿ ಬರ್ಪು[11](ದಲೆ)[11]ಯಂಜದಿರೆಂಬುತ ಪೇಳ್ದ ಕಾಲದೊಳ್
ಸಂತಸ[12]ದಿಂದ[12]ವುಕ್ಕಿ ತೊರೆ ಬುದ್ಬುದ ತುಂತುರಿನಿಂ ಕಣಾಳಿಯಿಂ
ಮುಂತೆ ಪ್ರವಾಹಮಾಗಿ ಪರಿದತ್ಯೂರತುಂ ಅದನೇನನೆಂದಪೆಂ ೧೬

---

1. ಪು (ಅಇ). 2. x (ಇ). 3. x (ಇ). 4. x (ಇ). 5. ವೀ (ಅಇ).
6. ಯುಂ (ಅಇ). 7. ಟೇಭಕ್ತ (ಅಇ). 8. ದೆ (ಅಇ) 9. ಖ (ಅಇ).
10. ಶೀತಳ (ಅಇ). 11. ತವೆ. (ಅಇ). 12. x (ಇ).

ಭಕ್ತರು ಕಾಣುತಚ್ಚರಿಯ[1](ನೈದು)[1]ತಲೆಂದರು ತಮ್ಮೊಳಾಗಲುಂ
ಗೌತಮನುಂ ಭಗೀರಥನು ಗಂಗೆಯು ತಂದಪೆನೆಂದುಮೀಶನಂ
ಚಿಂತಿಸನಂತಕಾಲವಿರುತಿರ್ದರು ಸಿದ್ಧನು ಬೇಡಿತಾಕ್ಷಣಂ
ಭಕ್ತರಿಗಿತ್ತನೆಂದುಮವರೆಲ್ಲರು ಕೀರ್ತಿಸಿತೇನನೆಂವವೆಂ ೧೭

ಸೊನ್ನಲ ಸಿದ್ಧರಾಮ[2]ನ ತಟಾ[2]ಕಕೆ ಶಂಕರನಿಂದು ಬಂದೊಲುಂ
ಮನ್ನಣೆಯಿಂದ ಬಂದ ತೊರೆನೀರೊಳು ಭಕ್ತರು ಮಜ್ಜನಾದಿಯಂ
ಸನ್ನುತದಿಂದ ಮಾಡಿ ಚರಲಿಂಗಕೆ ಮಜ್ಜನ ಭೋಜನಾದಿಯಂ
ಬಿನ್ನಣದಿಂಪ ಮಾಡಿದರು ಬೇಗದಿ ತಮ್ಮ ವ್ರತಂಗಳೆಲ್ಲಮಂ ೧೮

ಆ ಯೆಡೆಯೂರಿನಿಂ ಹೊಳಲುಗುಂದದ ಭಕ್ತರು ತಮ್ಮ ಗ್ರಾಮಕಂ
ಮಾಯವಿದೂರನಂ ಬಿಜಯಮಾಡಿಸಿಕೊಂ[3](ಡೊಡ)[3]ಪೋಗಿ ಪ್ರೀತಿ[4]ಯಿಂ[4]
ದಾ ಯಮವೈರಿ ಸಿದ್ಧಗುರುಲಿಂಗನ ಪೂಜಿಸಿ ಪೂಜೆಯಂದಮಂ
ಪ್ರೀಯದ ಭಕ್ತರಿಂದ ಕಯಿಕೊಂಬುತಲಿರ್ದ ವಿಚಾರ[5](ಸಾ)ರ[5]ದಿಂ ೧೯

ಒಂದಿನ ಸಿದ್ಧಲಿಂಗಗುರುವೊರ್ನೆ ದೇವಿಯ ಗೇಹದೊತ್ತಿನೊಳ್
ಚಂದದಿ ಗುಂಡುವೊಂದಿರಲು ಕುಳ್ಳಿತುಮಿರ್ದನು ಯೋಗಯೋಗದಿಂ
ಸಂದುದು ಸೂರ್ಯನಸ್ತಮಯು ಬಿನ್ನಹ ಮಾಡಿದ ಭಕ್ತರೆಲ್ಲರುಂ
ಸಂದಿಯು ಗೊಂದಿ ವೃಕ್ಷ ತೊರೆ ತೀರದಿ ನೋಡಿಯುಂ ಕಾಣದಾದರುಂ ೨೦

ಕಾರ್ಮುಗಿಲೊಡ್ಡಿ ಮಿಂಚುಗಳ ಮೊತ್ತದ ಮೇಘನಿನಾದದಿಂದಲುಂ
[6](ಉರ್ವಿಯು)[6] ಸುತ್ತಿಮುತ್ತಿಡಿದ ಕತ್ತಲೆ ಮೊತ್ತದಿ ಸಿದ್ಧನೊರ್ವನೇ
ಪೆರ್ಮೆಯೊಳಿರ್ಪನೆಂದರಿದು ಶಕ್ತಿಯು ಭಕ್ತಿಯ ತಾಳಿ ತನ್ನೊಳುಂ
ಕೂರ್ಮೆಯೊ[7](ಳೊಂದಿ)[7] ಬಿನ್ನಹವ ಮಾಡಲು ಬಂದಳುಮರ್ತಿಯರ್ತಿಯಿಂ ೨೧

ವಾರಿಜನೇತ್ರ ಬಿಂಬಧರ ಚಂಪಕನಾಸಿಕ ವಜ್ರದಂತ ಕಂ-
ಠೀರವಮಧ್ಯದುನ್ನತಪಯೋಧರ ಕುಂಕುಮಕಾಯಕಾಂತಿಯಿಂ
ಸಾರಸುಕೀರವಾಚಕಸುಚಂದಿರಮಂಡಲದಾಸ್ಯದಿಂದಲುಂ
ಪಾರಮಶೋಭವೆತ್ತುರುವಿಳಾಸಿನಿಯರ್ ಒಡನೆಯ್ದಲೆಯ್ದಿದಳ್ ೨೨

---

1. ಮಾಡು (ಅಇ). 2. x (ಇ). 3. ಡುವು (ಅಇ). 4. x (ಇ). 5. ಚಾ (ಅಇ).
6. ಊರ್ಪಿಯು (ಅಇ). 7. ಳ್ಕಾಡಿ (ಅಇ).

ಕಸ್ತೂರಿ ಸಾದು ಕುಂಕುಮ ಜವಾದಿ ಸುಚಂದನವಾದಿ ಗಂಧಮಂ
ವಿಸ್ತರದಿಂದ ಕಾಯದೊಳು ಲೇಪಿಸಿಕೊಂಡು [1](ದುಕೂಲವಸ್ತ್ರಮಂ)[1]
ಸ್ವಸ್ತದೊಳುಟ್ಟು ಮುತ್ತಿನ ರವಂಕಿಯ ತೊಟ್ಟು ವಿರಾಜಿಸುತ್ತಿಹಾ-
ಸುಸ್ಥಿರದಾಳಿವಂಗಡದೊಳೈದಿದಳಾಗಳೆ ಶಕ್ತಿ ಶಕ್ತಿಯಿಂ ೨೩

ಮುತ್ತಿನ ಬೊಟ್ಟು ಹಾರಮಣಿಗಂಕಣ ನೂಪುರದೋಲೆ ರತ್ನ ರ-
ತ್ನೋತ್ತಮಕಾಂಚಿದಾಮ ವರ ಮುದ್ರಿಕೆಯುಂಗುರಬಂಧಿ ಬಂಧಿಯಿಂ
ದುತ್ತಮ ರತ್ನಕೊಪ್ಪು ಮಣಿವೇಂಟೆಯ ಮುಂಟಿಕೆ ಕೀಲ ಕಂಕಣಾ-
ದುತ್ತಮ ರತ್ನದಾಭರಣದಾಳಿಯರೈದಿ[2](ದರೈದಲೈದಿದಳ್)[2] ೨೪

ಕಿನ್ನರಿವೀ[3]ಣೆ(ಯಿಂದೆ)[3] ಸರಮುಂಡಲ ಕುಂಚ ಕಳಾಂಜಿ ಪಾದುಕಂ
ಕನ್ನಡಿ ಗಂಧ ಕಸ್ತೂ[4]ರಿ(ಯು)[4] ಕರ್ಪುರ ಕಜ್ಜಳವಾದಿಯಾಗಿಹಾ-
ಬಿನ್ನಣವಾದ ಮಾಣಿಕ ಕರಂಡಕ ಸಂಚಯವಾದಿಯಾದವಂ
ಮನ್ನಣೆಯಿಂದಲಾಗ ಪಿಡಿದೆಯ್ದಿದ ನಾರಿಯರಿಂದ ನಿಂದಳುಂ ೨೫

ಜಾತಿಯ ಚಂದ್ರಲೇಖೆಯನು ಏಳಿದ ಮಾಡುವ ಕೋರದಾಡೆಯಿಂ
ಖ್ಯಾತಿಯ ವಾಮಹಸ್ತದೊಳಗಿರ್ಪ ವಿಶಾಲದ ಬಾಳು ಬಟ್ಟಲಿಂ
ದ್ಯೋತಿಯ ಬೀರುತಿರ್ಪ ಕರವಾಳು ತ್ರಿಶೂಲ ಸುಢಕ್ಕೆಯಿಂದಲುಂ
ಪ್ರೀತಿಯೊಳುಟ್ಟ ರಕ್ತ[5](ವಸನಂಗಳಿ)[5]ನಿಂದಳು ಚಿತ್ರಚಿತ್ರದಿಂ ೨೬

ಭಾಳವಿಲೋಚನಂ ಕಿರಿಟ ಕುಂಡಲ ಕಂಕಣ ನೂಪುರಂಗಳಿಂ
ತಾಳಿಯು ರತ್ನಹಾರ ಭುಜಕೀರ್ತಿಯುಮಂಗುಲಿ ಮುದ್ರಿಕಂಳಿಂ
ಮೇಳವಿಸಿರ್ದ ಕಾಂತಿ ದಶದಿಕ್ಕಲಿ ಬಿಂಬಿಸೆ ಜ್ಯೋತ್ಸ್ನೆಯಂದದಿಂ
ದೀಳಿಸಿ ಹಸ್ತಮಂ ಮುಗಿದು ನಿಲ್ಲಲು ವಾಮದ ಪಾಳಿಪಾಳಿಯೊಳ್ ೨೭

ಆರಿವಳಾರು ನಿಂದವಳು ನಿನ್ನಯ ನಾಮವದೇನುಮಾವ ಠಾ-
ವೂರುಮದೆಲ್ಲಿಯಿರ್ಪೆ ಘನಕತ್ತಲೆ ರಾತ್ರಿಯೊಳೇಕೆ ಬಂದೆ ನೀಂ
ಕಾರಣವೇನುವೆನ್ನ ಬಳಿಗುಜ್ಜುಗವಾವುದು ಪೇಳುಮಿಷ್ಟಮಂ
ನಾರಿಯೆಯೆಂದು ನಿರ್ಭಯದಿ ಕೇಳ್ದನು ಬೇಗದಿ ಸಿದ್ಧಸಿದ್ಧನುಂ ೨೮

1. ವುಸಂಣ್ಣದೂಟಮಂ (ಅ) ; ವುಸಂಪಣದೂಟಮಂ (ಇ). 2. ದಲೈದಿದಳ್ (ಅಇ).
3. ಣೆ (ಅಇ). 4. ರಿ (ಅಇ). 5. ಕ್ತಸನರಿಂದಲು (ಅಇ).

ಕಂ. ನಾಂ ಹೊಳಲುಗುಂದದಲ್ಲಿಯ
ಮಹದೇವಿಯದೆನ್ನ ಪೆಸರುಮೀ ವನದೊಳಗಂ
ಬಹುಕಾಲದಿಂದಲಿರ್ಪೆಂ
ಮಹಿಮಾನ್ವಿತ ಗುರುವೆಯೆಂಪಳ್ಕಮಲದಕಮಲೆ ೨೯

ದೇವನೆಯೆನ್ನಯ ಗೃಹಮಂ
ಪಾವನಮಾಡುವುದು ಬಂದು ಮೀ ರಾತ್ರೆಯೊಳುಂ
ಈ ವಿಧಕೆ ಭಸಿತ ನಿಮಗೆಂ-
ದೋವಿಯೆ ಬಿನ್ನವಿಸಿ ದೇವಿ ವಿಧಿಯಿಂ ವಿಧಿಯಿಂ ೩೦

ಆ ದೇವಿಯ ಭಕ್ತಿಯನುಂ
ಮೂದೇವರ ದೇವನೆತಿಪನೊಪ್ಪುತ್ತಾಗಂ
ಆದರದಿ ಭಸಿತವಿಡಿದುಂ
ಮಾದೇವಿಯ ಪಣೆಯೊಳಿಟ್ಟನಚಲಂ ಅಚಲಂ ೩೧

ವ || ಮತ್ತಮಾ ಸಿದ್ಧಲಿಂಗೇಶ್ವರನಂ ಮಹಾದೇವಿ ಕೈಗೊಟ್ಟು ತನ್ನ ಸದನಕ್ಕಂ ಬಿಜಯಂಗೆಯ್ಸಿಕೊಂಡೆಯ್ದುಂ ಪಾದಾರ್ಚನೆಯಂ ಮಾಡಿ ತೀರ್ಥಂದಳೆದುಂ ಮೃದುಗದ್ದುಗೆಯಿಂ ಮೂರ್ತಿಗೊಳಿಸಿ ಕಸ್ತೂರಿ ಕರ್ಪುರ ಮುಂತಾದನುಲೇಪನಂಗಳಂ ಪಾದಕ್ಕನುಲೇಪಿಸಿ ಜಾಜಿ ಮುಂತಾದ ಹೂವಿಂ ಶೃಂಗರಿಸಿ ಮುತ್ತಿನಾರತಿಗಳನೆತ್ತಿ ದವಳಾರಂಗಳಂ ಪಾಡುತಂ ಮತ್ತಂ ಷಟ್ಸಮ್ಮಾರ್ಜನೆಯಂ ಮಾಡಿ ಮೌಕ್ತಿಕ ಚೂರ್ಣದಿಂ ರಂಗವಾಲಿಯಂ ರಚಿಸಿ ಶಿವಾರ್ಚನೆಗೆಡೆಮಾಡಿಸಿ ಶಿವಭಕ್ತರಿಂ ಸವೆದ ನಿವೇದ್ಯಮಂ ನೀಡಿಸಿ ಆತನ ಕರುಣಪ್ರಸಾದ ಪ್ರಸನ್ನತೆಯಿಂ ತನ್ನಾಳಿಯರ್ ಸಹಂ ಕೈಕೊಂಡುಂ ಮತ್ತಂ ಕಿನ್ನರಿ ವೀಣೆ ಸರಮಂಡಲ ಮುಂತಾದವಂ ಬಾಜಿಸುತ್ತಂ ಪಾಡುತ್ತಂ ನೃತ್ಯಂಗಳನೆಸಗುತ್ತಂ ಬೆಳಗಪ್ಪನ್ನೆಗಂ ಭಜಿಸುತ್ತಿರಲಿತ್ತಂ ಬೆಳಗಾಗೆ ಸಿದ್ಧಲಿಂಗೇಶ್ವರನನರಸಿಕೊಂಡು ಬಂದ ಮಾಹೇಶ್ವರರ್ಕಂಡುಮಾಶ್ಚರ್ಯಂಬಟ್ಟು ಮತ್ತಂ ಪೂರ್ವದಲ್ಲಿ ರೇವಣೇಶ್ವರಂ ಮೈಲಾರನಿಂ ಪೂಜೆಗೊಂಡಂ ಮತ್ತಂ ಕಂಚಿಯ ಗಾಣದಲ್ಲಿ ಕಲ್ಲಿಸೆಟ್ಟಿಯು ಕೊಟ್ಟಿಗೆಯೊಳಿರ್ಪಲ್ಲಿ ಸಿರಿಸರಸ್ವತಿಯ[1]ರ್ಧ[1]ರಾತ್ರಿಯಲ್ಲಿ ಭಜಿಸಿದರೆಂಬುದಂ ಕೇಳ್ದೆವುಂ ಮತ್ತಂ ಕಾದಕಬ್ಬುನದ ಕಂಥೆಯಂಧರಿಸಿದ ಪಡವಿಡಿಕಂಥೆಯದೇವರುಂ ಉತ್ತರದೇಶದಲ್ಲಿ ಜಂಗಮರಕ್ತದಿಂ ಸ್ನಾನಮಾಡಿದ ದುರ್ಗಿಯ ದುರ್ಗುಣಮಂ ಸಂಹರಿಸಿ ಆ ದುರ್ಗಿಯಿಂ ಪೂಜೆಗೊಂಡರೆಂಬುದಂ ಕೇಳ್ದೆವುಂ ಈಗಲೀ ಸಿದ್ಧಲಿಂಗೇಶ್ವರಂ ದುರ್ಗಿಯಿಂ ಪೂಜೆಗೊಂಡುದಂ ಪ್ರತ್ಯಕ್ಷವಾಗಿ ಕಂಡೆವೆಂದು ಕೊಂಡಾಡುತ್ತಿರೆ ೩೨

---

1. ರ್ಧಮ (ಅ೩).

ಕಂ. ನಾಗಸಮುದ್ರದ ಭಕ್ತ-
ರ್ನಾಗಾಜಿನಧರನ ಶರಣನೆಡೆಗೆಳ್ತಂದುಂ
ಆಗಲೆ ತಮ್ಮಯ ಗ್ರಾಮಕೆ
ಬೇಗದಿ ಬಿನ್ನಹವ ಮಾಡಿ ಕರಕೊಂಡೊಯ್ದರ್ ೩೩

ಗುಡಿ ತೋರಣ ಶೋಭನದಿಂ
ಮೃಢಭಕ್ತರ ಜಯಜಯರವ ಸಂಭ್ರಮದಿಂದಂ
ಪೊಡೆವಖಿಳ ವಾದ್ಯದಿಂದಂ
ಸಡಗರಿಸುತ್ತಿತಿಯನೊಯ್ದರಾ ಭಕ್ತರ್ಕಳ್ ೩೪

ಆ ಭಕ್ತರಿಂದ ಪೂಜೆಯ
ಶಾಂಭವಗುರು ಸಿದ್ಧಲಿಂಗ ಕೈಕೊಂಬುತ್ತಿರೆ
ಕುಂಭಿನಿಗಂ ಕಾರ್ಗಾಲಂ
ಸಂಭ್ರಮದಾಗುತ್ತ ತೋರಿತಾ ಸಮಯದೊಳುಂ ೩೫

ಕೆಂಜಾಜಿ ಕುಸುಮಮಾದುವು
ಮಂಜುಲವಹ ಜಾತಕಕ್ಕೆ ದೀಪನವಾದುವು
ರಂಜಿಸಿದವು ಕಾರ್ಮುಗಿಲ್ಗಳು
ಭೂಜಾಗ್ರದ ನವಿಲು ನಟಿಸಿದವು ನವವಿಧದಿಂ ೩೬

ಗಂಧರ್ವರ ನಗರಂಗಳು
ಸಂದಣಿಸುತ ಬಂದು ನಿಂದು ಗಗನಾಂಗಣದೊಳ್
ಒಂದೊಂದು ಹೊಂದೆ ಚಂದದಿ
ಮುಂದೈಸಿತು ತಮವು ನಭದ ನಾಲ್ಕುಂ ದೆಸೆಯೊಳ್ ೩೭

ಶಿತ ಶೋಣ ನೀಲ ಪಿಂಗಳ
ಯುತವಾದ ಪಾಂಡುವರ್ಣವಾಗಿಹ ಧನುಗಳು
ಅತಿಶಯದಿಂದಂ ಗಗನದಿ
ಪ್ರತಿದಿನದಿಂ ತೋರುತಿರ್ದವಾ ಕಾಲದೊಳುಂ ೩೮

ಗುಳ್ಳದ ಸರೀಶ ಪೂಪಿನ
ಒಳ್ಳಿತಹ ಕನಕಮುದಯವು ಚಂದ್ರನ ರುಚಿಯೊಳ್
ಬಲಾರಾತೀಶ ಧನದನ
ಜಲಾಧಿಪರ ದೆಸೆಯ ಮಿಂಚು ಮಿಂಚಿತ್ತಾಗಳ್ ೩೯

ವ॥ ಇಂತಪ್ಪ ಕಾರ್ಗಾಲದೊಳೊಂದು ದಿನಂ ಸಿದ್ಧಲಿಂಗೇಶ್ವರನ ದರ್ಶನಕ್ಕಂ ಲಿಂಗಪ್ರಸಾದವಲ್ಲದೊಲ್ಲದ ಲಿಂಗಸಂಗಿಗಳು ಸಂಗವಲ್ಲದೊಲ್ಲದ ಲಿಂಗಾನುಭಾವವಲ್ಲದನ್ಯ ನುಡಿಯಂ ಕೇಳದ ಲಿಂಗಪೂಜೆಯಲ್ಲದನ್ಯವನರಿಯದ ಸರ್ವೇಂದ್ರಿಯಂಗಳ ಭೋಗಮಂ ಲಿಂಗಭೋಗೋಪಭೋಗವಾಗಿ ಭೋಗಿಸಬಲ್ಲ ಲಿಂಗವಂತರುಂ ಮತ್ತಂ ಕಾಮಶರ ಜಾಲಕ್ಕೆ [1](ಸೋಂಕ)[1]ದ ಶೀಲದ ಕಾಲಂಗೆ ಬೆಂಗೊಡದ ಶೀಲದ ಕೋಪಾನಲಜ್ವಾಲೆ ಯೊಳು ಸಂತಾಪಿಸದ ಶೀಲದ ಲೋಭಕೂಪದೊಳು ಮುಳುಂಗದ ಶೀಲದ ಮೋಹ ಪಾಶವಂ ಪರಿವಶೀಲದ ಮದಮತ್ಸರಂಗಳಿಚ್ಛೆಗೆ ನಡೆಯದ ಶೀಲದ ಶೀಲವಂತರುಂ ಮತ್ತಂ ಶಿವಶರಣಸಂಗ ಶಿವತತ್ತ್ವಗೋಷ್ಠಿ ಶಿವಭಕ್ತನಿಷ್ಠಾಪರರಪ್ಪ ಶಿವಭಕ್ತರುಂ ಜಂಗಮತಿಂಥಿಣಿಯುಂ ಬಂದು ವಂದಿಸೆ ಆ ಭಕ್ತಜಂಗಮದೇವರ್ಸಹಂ ತಾಂ ಪುರ ಬಹಿರ್ವಳಯದುದ್ಯಾನದೊತ್ತಿನ ಹಸೆಯ ಮೇಲೆಯಿಕ್ಕಿದ ಮೃದುಮಧುರ ಗದ್ದುಗೆಯಿಂ ಕುಳಿತು ಶಿವತತ್ತ್ವಾನುಭಾವಗೋಷ್ಠಿಯಿಂದಿರ್ಪಲ್ಲಿ ೪೦

ಉ. ಮಾ. ವೃ.

ಮೇಘದ ಘರ್ಜನಾಳಿ ಸಿಡಿಲುಂ ಬಿರುಗಾಳಿಯು ಕೂಡಿ ವೃಷ್ಟಿಯಿಂ
ಭೋರ್ಗರೆಯುತ್ತಲೈದಿಯುದ ಕಾಣುತಲಾಕ್ಷಣವೊತ್ತಿಲಿರ್ಪ ಸಾ-
ಕ್ಷಾದ್ಘನಲಿಂಗಭಕ್ತರು ಮಹೇಶ್ವರರೂಪಿನ ಸಿದ್ಧಲಿಂಗನಂ
ಆ ಘನವೃಷ್ಟಿ ಬರ್ಪುತದೆ ದೇವರುಮೇ[2](ಳ್ವುದು)[2]ಮೆಂದರಾಗಳುಂ ೪೧

ಬಂದರೆ ಬಂದು ಪೋದಪುದು ನಮ್ಮನದೇನನು ಮಾಡಲಕ್ಕುದುಂ
ಎಂದರೆ ದೇವಪಾದಸರಸೀರುಹದೊತ್ತಿ[3](ನೊಳಿ)[3]ರ್ಪ ನಮ್ಮನುಂ
ಇಂದಿನ ವೃಷ್ಟಿಕೊಂದಪುದುಯೆಂದರೆ ಪೋಪುದು ನೀವುಮೆಂದೊಡೇಂ-
ಸೌಂದರರೂಪ ನಿಮ್ಮಗಲಿ ಪೋಪಡೆ ಚಿತ್ತವುಮಿಲ್ಲವೆಂದರುಂ ೪೨

ದೇವರು ಕಲ್ಲಿನಾಥನಿಹ ಗೇಹವು ಹತ್ತಿರವಿಪ್ಪುದೀಗಳೇ
ದೇವರು ನಮ್ಮ ರಕ್ಷಿಸಲು ಚಿತ್ತವಿಸೆಂಬುತ ಬಿನ್ನ ಮಾಡಲುಂ
ಪಾವನಮೂರ್ತಿಯೆದ್ದೊಡನೆ [4](ಯೆದ್ದಿ)[4]ತು ಜಂಗಮ ಪುಂಜ ಕೂಡೆಯುಂ
ಭಾವಜವೈರಿಭಕ್ತರುಗಳೆಯ್ದುತಲಿರ್ದುದು ಕೂಡೆ ಸಿದ್ಧನೊಳ್ ೪೩

ಶೀಕರದಬ್ಬರಕ್ಕೆ ಭಯಗೊಂಬುತ ವೃದ್ಧನದೊರ್ವ ಜಂಗಮಂ
ಆಕರಿಸುತ್ತ ನೇಲ್ವ ಜಡೆ ಬಿಟ್ಟಿಹ ಕಚ್ಚುಟ ಜೋಲ್ವ ಧೋತ್ರದಿಂ
ಪಕ್ಕದೊಳೌಂಕಿಕೊಂಡ ವರಕಂಥೆಯು ದಂಡ ಕಮಂಡಲೊಕ್ಕಯಿಂ
ದಿಕ್ಕನೆ ಪೋಪುದೆಂದೆಡಹುತಿರ್ದನು ವೃಷ್ಟಿಯ ಭೀತಿಯೆಂತುಟೋ ೪೪

---

1. ಸಂಕಿಸ (ಅ೩). 2. ಳ್ವರು (ಅ೩). 3. ಲಿಮಿ (ಅ೩). 4. ಯಿದಿ (ಅ೩).

ಚಂ. ಮಾ. ವೃ.

ಬಿರುಬಿರನೋಡಿ ಪೋಗುತಿಹ ಬಾಲಕಜಂಗಮ ಮೇಘನಾದದಿಂ
ಬರಸಿಡಿಲೆದ್ದು ತೋರಲದ ಕಾಣುತೆ ತಗ್ಗುತೆ ಮುಚ್ಚಿ ಕಣ್ಗಳಂ
ಬಿರುದನಿಯಿಂದೆ ಕೈಗಳೆರಡಂ ಶಿರವಗ್ರಕೆಯೊಡ್ಡಿಕೊಂಡುವುಂ
ಮರೆಮರೆಯಿಂದ ಜಂಗಮರ ಸಂವಣಿಯಿಂ ಬರುತಿರ್ದನಾಗಳುಂ ೪೫

ಉ. ಮಾ. ವೃ.

ಮುಂಗಡೆಯೋಡಿ ಪೋದ ಶಿವಭಕ್ತರು ಮಕ್ಕಳು ಕಲ್ಲಿನಾಥನಾ
ಬಾಗಿಲು ಬೀಗವಿಕ್ಕಿರಲು ಕಾಣುತೆ ಜೇಗದಿ ಸಿದ್ಧನೊತ್ತಿಗಂ
ಲಾಗಿನೊಳೈದಿ ಬೀಗದಿ ಕದಂ ಸಲೆಮು[1](ದ್ರೆಯೊಳಿರ್ಪುದೆಂದಡಾ)[1]
ಬೀಗವ ಕೀಳ್ವೆವೆಂಬವರ ಜಂಕಿಸುತೆಯ್ದಿದ ಮೆಲ್ಲಮೆಲ್ಲಗಂ ೪೬

ಚಂ. ಮಾ. ವೃ.

ಮಳೆಹನಿ ಬಂದುದೊತ್ತಿಲಿದೆ ಬೇಗವ ಕೀಳ್ವುದುಮೆಂದ ಭಕ್ತರೊಳ್
ಮಳೆಬರೆ ಲಿಂಗಗೇಹಗದಗೀಳ್ವುದು ಯೋಗ್ಯಮೆಯಂಗ ತೋವಡಂ
ಹಳಸುವುದೇ ಕವಾಟವನು ಕೀಳದಿರೇ[2](ಎನೆ)[2] ಸಿದ್ಧಲಿಂಗನೊಳ್
ವಿಳಸದಿನಾಳೆ ಗೇಹ[3](ದಕದಂ)[3]ಗಳ [4](ನಿಕ್ಕುವೆ)[4]ವೆಂದರಾಗಳುಂ ೪೭

ಪುರಹರಗೇಹವಾಗಿಲನು ಕೀಳ್ವುದು ಯೋಗ್ಯಮುದಲ್ಲವೆಂದಡಂ
ಗುರುವರ ನೀವು ವೃಷ್ಟಿಯೊಳು ತೊಯ್ದಿಹಿರೆಂದೊಡೆ ನಾನು ತೋದಡೇಂ
ಶರಿರವು ಕಂಡಿಕೆಟ್ಟಪುದೆಯೆಂದಡೆ ಭಕ್ತರು ನಾವು ತೋದಪೆಂ
ಗುರುಚರತೋಪರೆಂದೆನಲುವಿಾಶನು ತೋಯ[5](ಲಿ)[5]ವಿಾಶನೆಂಬುತಂ ೪೮

ಕದದ ಬಿಲಾಂತದಲ್ಲಿ ಕಡೆಗಣ್ಣಿನೊಳೀಕ್ಷಿಸೆ ಕಲ್ಲಿನಾಥನುಂ
ಬೆದರುತ ಗರ್ಭಗೇಹದ ಕವಾಟಯುಗಂ ಢಣನಾದ ಪೂರ್ಣ್ಕವಂ
ತದ ತೆಗೆದುಂ ದುಡುಂದುಡನೆ ಬಂದವು ಮುಂದಣ ದೊಡ್ಡಬಾಗಿಲುಂ
ಕದುಬುತ ಗಿರ್ರುಗಿರ್ರೆ[6](ನುತಲಾ)[6] ಕದಬೀಗವು ಬಿದ್ದವಾಕ್ಷಣಂ ೪೯

1. ದ್ರಿಸದೆ ಜೀಯ್ಯಾಯೆಂದಡಾ (ಅಇ). 2. ಸು (ಅ). 3. ಕರರಂ (ಅಇ).
4. ನೀಕು (ಅಇ). 5. ಲು (ಅಇ). 6. ನಲು (ಅಇ).

ಉಘೆಉಘೆಯೆಂ[1](ದೆನುತ್ತೆ)[1] ಚರಲಿಂಗವು ಪೊಕ್ಕರು ಭಕ್ತರೆಲ್ಲರುಂ
ಮಿಗೆ ಮೃದುಪೀಠವಿಕ್ಕಿದರು ಸಿದ್ಧನು ಕುಳ್ಳಿರೆ ಕು[2](ಳ್ಳಿತೆ)[2]ಲ್ಲರುಂ
[3](ಬ)ಗೆ[3] ಮಿಗೆ ಚೋದ್ಯ ಬಾಗಿಲನು ಬೇಗದಿ ಸಿದ್ಧಗೆ ಕಲ್ಲಿನಾಥನುಂ
ತೆಗೆದನುವೆಂದು ಕೀರ್ತಿಸುತಲಿರ್ದುದು ಭಕ್ತಸಮೂಹವಾಗಲುಂ ೫೦

ವ|| ಸೌರಾಷ್ಟ್ರಸೋಮೇಶ್ವರಂ ಓಹಿಲರಾಜಂಗಂ ಕೂಡಲಸಂಗಮನಾಥಂ ಬಸವೇಶ್ವರಂಗಂ ಹುಲಿಗೆರೆಯ ಸೋಮೇಶ್ವರಂ ಆದಿಮಯ್ಯಂಗಂ ಕಾಳಹಸ್ತೀಶ್ವರಂ ಕಣ್ಣಪಯ್ಯಂಗಂ ತಿರುವಾರೂರ ತ್ಯಾಗನಾಥಂ ಸಂಬ್ಯಣ್ಣಂಗಂ ಮುದನೂರ ದಾಸಿಮಯ್ಯಂಗಂ ರಾಮೇಶ್ವರಂ ಸಾಸಲು ಭೈರಿದೇವಂಗಂ ಸೋಮೇಶ್ವರಂ ಕೈಲಾಸಾಧೀಶ್ವರಂ ನಿಂಬಿಯಕ್ಕಂಗಂ ಕಲ್ಯಾಣದ ತ್ರಿಪುರಾಂತಕೇಶ್ವರಂ ಕಿನ್ನರಯ್ಯಂಗಂ ತಿರುಮಡ ಬ್ರಹ್ಮೇಶ್ವರಂ ತಿರುಜ್ಞಾನಿ ವಾಗೀಶರುಗಳ್ಗಂ ಬಾಗಿಲಂ ತೆಗೆದುದುಂ ಪೂರ್ವಕಥೆಗಳೊಳು ಕೇಳ್ದೆವು ಈಗಲೀ ಸಿದ್ಧಲಿಂಗೇಶ್ವರಂಗಂ ನಾಗಸಮುದ್ರದ ಕಲ್ಲೇಶ್ವರಂ ಕದಂ ತೆಗೆದುದಂ ಕಣ್ಣಾರ ಕಂಡೆವೆಂದು ಸಮಸ್ತ ಮಾಹೇಶ್ವರರಾಶ್ಚರ್ಯದಿಂ ಕೊಂಡಾಡುತ್ತು ಮಿರೆಯಿರೆ ೫೧

ಶಾ. ವಿ. ವೃ.

ಒಂದೊಂದಾಗಿಯೆ ಬೀಳ್ವ ವೃಷ್ಟಿ ಜಲಬಿಂದ್ವಾಘಂಗಳಂ ನುಂಗುತಂ
ಸಂದಾನಂದದೆ ಚುಂಚು[4](ವಿಂ)[4]ಕದುರ್ಂಕುತಂ ಹೊತ್ತೆತ್ತುತಂ ಪಕ್ಕದೊ-
ಳ್ಪಿಂದಾಲಿಂಗಿಸುತಂತವಂ ಪೊಡೆದು ಕಾಲಿಂದೊತ್ತಿ ನೂಂಕುತ್ತಲುಂ
ಬಿಂದ್ವಾನೀಕದಿ ನರ್ತಿಸಿತ್ತುಭರದಿಂದಂ ಚಾತಕಂ ಚೆಲ್ವಿನಿಂ ೫೨

ಕಂ. ಘನಗರ್ಜನೆಯಿಂ ಮಿಂಚಿಂ
ಘನಮಾರುತನಬ್ಬರದಿಂ ಮೊಳಗಿನ ಭರದಿಂ
ಘನತರಜಲಬಿಂದುಗಳಿಂ
ಘನದಿಂ ಸರಿವಳೆಗಳೆರಗಿ ನಿಂದಿತ್ತಾಗಂ ೫೩

ಮತ್ತಾ ದೇವಾಲಯದಿಂ
ಉತ್ತಮಭಕ್ತರ್ಕಳೆಲ್ಲ ಸದನಕ್ಕೆತಿಯಂ
ಬಿತ್ತರದಿ ಬಿಜಯಗೈಸಿಯು
ಭಕ್ತಿಯೊಳುಂ ಭಜಿಸುತಿಪ್ಪ ವೇಳೆಯೊಳಾಗಂ ೫೪

1. ದು (ಅ೩). 2. ಳ್ಳುತ್ತುಮೆ (ಅ೩). 3. ಮಿ (ಅ೩). 4. ಲಿಂ (ಅ೩).

ಮಂಗಲವೆಂಬೂರಿಂದಂ
ಮಂಗಲಮಯ ಭಕ್ತರೈದಿ ವಂದಿಸಿ ಸಿದ್ಧಗೆ
ಪೊಂಗಿ ಬಿನ್ನೈಸಿಯೆಲ್ಲರು
ಹಿಂಗದೆ ಕರಕೊಂಡು ಪೋದರಾ ಗ್ರಾಮಕ್ಕಂ ೫೫

ಕಳಸಕನ್ನಡಿಗಳಿಂದಂ
ನಳಿನಾಕ್ಷಿಯುರ್ಪಾಡುತಿರ್ಪ ಶೋಭನದಿಂದಂ
ವಿಳಸದಿ ಸಿದ್ಧನನಿದಿರ್ಗೊಂ
ಡೆಳಸಿಯೆ ಭಜಿಸುತ್ತಮಿರ್ದರಾ ಭಕ್ತರ್ಕಳ್ ೫೬

ಭೋರೆಂದಿರುಳ್ಪಗಲ್ಮಳೆ
ಜೋರೆಂದಾವಾಗ ಬಿಡದೆ ಕರೆವುತ್ತಿರ್ಕುಂ
ಪಾರಾವಾರವು ಧರೆಯೊಳ್
ಪೂರೈಸಿತೊಯೆಂಬ ತೆರದೆ ತೋರಿತ್ತಾಗಂ ೫೭

ಇಳೆಯಾಂಡಗುಡಿಮಾರಯ್ಯ-
ನಳವಳ ನೋಡಲ್ಕೆ ಹರನು ಕಳುಹಿದ ಮಳೆಯೊ
ವಿಳಸದಿ ಸಿರಿಯಾಳುವನುಂ
ಇಳಿವಂಗೆಯ್ಯಲ್ಕೆ ಬಂದ ಮಳೆಯೋಲ್ತೋರ್ಕುಂ ೫೮

ಸಿಂಧುಬಲ್ಲಾಳನ ಮನ
ದಂದವ ನೋಡಲ್ಕೆ ಶಿವನು ಕಳುಹಿದ ಮಳೆಯೋ
ಇಂದುಧರಂ ನಮಿನಂದಿಗೆ
ಕುಂದದೆ ಸುರಿಸಿರ್ದ ಮಳೆಯೊಯೆಂಬಂತಿರ್ಕುಂ ೫೯

ತಿರುಕುರುಪೆಯ ತೊಂಡರ್ಗಂ
ಹರಸುರಿಸಿದ ಮಳೆಯೋ ಗಜೇಶಮಸಣಯ್ಯನ
ಹರಪೂಜಾಕಾಲದಿ ಶಿವ
ಸುರಿಸಿದ ಪೆರ್ಮಳೆಯೊಯೆಂಬಂತಿ[1](ರ)[1]ತಿಭರದಿಂ ೬೦

---

1. ರ್ (ಅ೩).

ಪುಷ್ಪದ ತೋಂಟಗಳಿಂದಂ
ಬಪ್ಪುದನರಿದೀಶ ಪರಮಹಂಸಯ್ಯನ ಮನ
ದೊಪ್ಪವ ನೋಡಲ್ಕಂ ಹರ
ಬಲ್ಪಿಂ ಸುರಿಸಿದ ವೃಷ್ಟಿಯೆಂಬೊಲ್ಪ್ಪೋರ್ಕುಂ ೬೧

ತಿರುನಾಳ್ಪೋವರ ಮನವಂ
ಹರ ನೋಡಲು ತಂ[1]ದ[1] ಮಳೆಯೊ ಹಂಪೆಯೊಳಿರುತಿಹ
ಹರಿಯಣ್ಣಗಳಂ ನೋಳ್ಪೊಡೆ
ಹರ ಸುರಿಸಿದ ಮಳೆಯ ತೆರದಿ ಸುರಿವುತ್ತಿರ್ಕುಂ ೬೨

ಹರಿಯುರಿಬೇವಡೆಯಿಂದಂ
ಸುರಿಸಿದಮಳೆಯಂತೆ ಹರಿಯ ಪಶುಗಳ ಕಾಪಂ-
ದಿರದೆರಗಿದ ಪೆರ್ಮಳೆಯೊ
ಗಿರಿಜೆಯ ತಪದೊಳ್ ಸು[2]ರಿ(ಸಿದ)[2] ವೃಷ್ಟಿಯೊಯೆನಿಕುಂ ೬೩

ಸಿದ್ಧರಾಮೇಶದೇವರು
ಮಂದಾರ ವೃಕ್ಷದಡಿ[3]ಯ(ಲ್ಲಿಹ)[3] ಲಿಂಗವ ತ-
ಪ್ಪಂದೆರಗಿದ ಮಳೆಯೋಯಂ
ಬಂದದಿ ಬಿರುಮಳೆಯು ಸರಿವಳೆ ಕರೆವುತ್ತಿರ್ಕುಂ ೬೪

ಇಂತಿಹ ಕಾರ್ಗಾಲದೊಳುಂ
ಕಂತುಹರಾಜ್ಞೆಯೊಳು ಬರ್ಪ ದ್ರವ್ಯಂಗಳನುಂ
ಸಂತಸದಿಂದೀಶಗರ್ಪಿಸು-
ತಂತಕಹರಪೂಜೆಯೊಳ್ನಿರದಿರ್ದನೆತಿ[4](ಪಂ)[4] ೬೫

ಅಲ್ಲಿಗೆ ನೆರೆಯೂರಿಂದಂ
ಬಲ್ಲಿದ ಭಕ್ತರ್ಕಳೆಲ್ಲ ಬಂದುಂ ವಂದಿಸಿ
ಇಲ್ಲಿದೆ ಹತ್ತಿರ ಹಳ್ಳಿಯು
ನಿಲ್ಲದೆ ಬಿಜಮಾಡವೇಳ್ಕುವೆಂದೊಂದಿಸಿದರ್ ೬೬

---

1. ಮ್ಮ (ಇ). 2. ರ (ಅಇ). 3. ಯ (ಅಇ). 4. ತೀಶಂ (ಅಇ).

ಆ ಭಕ್ತರ ಬಿನ್ನಹವಂ
ಶಂಭು ಸುಖಾಗಾರ ಸಿದ್ಧ ಕೈಕೊಂಡೆದ್ದರೆ
ಕುಂಭಿನಿ ಬೆಸ[1](ಲಾ)[1]ದಂತೆಯು
[2](ಶಂಭು)[2]ಸುಖಾಚಾರಚರವು ನ[3](ಡೆದ)[3]ತ್ತಾಗಂ ೬೭

ಬರುತಿರಲಿದಿರೊಳಗಿರ್ದುದು
ನೆರೆ ತೆರೆ ಬುದ್ಬುದ ಕಣಾಳಿಯಿಂ ತುಂತುರಿನಿಂ
ಮೊರಹಂ ಬೀರುತ ಭಯದಿಂ
ಭರದಿಂ ಪರಿವುತ್ತಿರೆ ಸರಿ[4](ಚ್ಛ)[4]ರಥಿಯು ಗುಣ್ಪಿಂ ೬೮

ಕೆರೆಗಳೊಡೆದೊಡೆದು ಕೂಡಿದ
ತೊರೆತೊರೆಗಳ್ಕೂಡಿ ಭರದಿ ಕುಜಮನೆ ಮನುಜರು
ಕುರಿ ಗಜ ಮುಂತಾದಖಿಳವ
ಮರೆ ಮಾಡದೆ ಹೊತ್ತು ತೋರುತ್ತೈದುತಿರ್ದುದು ೬೯

ಅದ ಕಾಣುತೆ ಸಕಲಚರಂ
ಬೆದರುತ ಭಕ್ತರ್ಕಳೆಲ್ಲವಿಂದಿನ ಪಯಣವ
ಹಿಂದಕೆ ತಿರುಗುವುದೆನುತಂ
ಸಂದೇಹಿಸಿ ನುಡಿದರೆಲ್ಲ ನದಿತೀರದೊಳುಂ ೭೦

ಗಂಗೆ ತಾನೇನ ಮಾಳ್ಪಳು
ಲಿಂಗಾಂಗಿಯುನೆಂದು ಸಿದ್ಧ ಪೊಕ್ಕಾ ಕ್ಷಣದೊಳ್
ಗಂಗೆಯು ನಿಂದಿತ್ತಾಗಂ
ಮುಂಗಡೆಯೊಳು ತಾಯಿಮಳಲು ಕಾಣಿಸುತಿ[5](ರ್ಕುಂ)[5] ೭೧

ವರದೇವಗಂಗೆಯೊಡನಂ
ತುರುಸಿದ್ಧನ ಮಹಿಮೆವೇಳ ಪೋಪಲ್ತಾನುಂ
ಪರಿಗಗನದುದ್ದಮಾಗಿಯು
ಗಿರಿಯೊಳ್ಪರಿರಂಜಿಸಿ[6](ದುದು ಉ)[6]ನ್ನತದಿಂದಂ ೭೨

---

1. ನಾ (ಅಇ). 2. ಕುಂಭ (ಅಇ). 3. ಡದು (ಅಇ). 4. ಸ್ಸ (ಅಇ).
5. ರ್ದುಂ (ಅಇ). 6. ತ್ತು (ಅಇ).

ಸೋಮಾಸಿಮಾರದೇವನು
ಕಾಮಾರಿಯ ನಿರ್ಮಾಲ್ಯದ ಪೂಸರಮಂ ತಾಂ
ಪ್ರೇಮದಿ ಕಾವೇರಿಯೊಳುಂ
ಆ ಮಹಾತ್ಮ ನೀಡಲ್ಕಿಂದಂತದುಮೆಸೆಗುಂ ೭೩

ಮಳಲ್ಗಾಣಿಪ ಪಥದೊಳಗಂ
ಮಳಲ್ಗುಪ್ಪೆಯ ಮಾಡುತೆಯ್ದಿ ವಿಟಜಂಗಮರುಂ
ವಿಳಸದಿ ಭಕ್ತರ್ಬಂದರು
ಹೊಳೆಯಾಚೆಯ ದಡದಿ ನಿಂದು ಗಂಗೆಯೊಳೆಂದಂ ೭೪

ಎಲ್ಲರು ಬಂದರು ಭಕ್ತರು
ಮೆಲ್ಲನೆ ನೀನೆಯ್ದು ಗಂಗೆಯುಪಟಳಮಾಡದೆ
ನಿಲ್ಲದೆ ನಾಂ ಪೋಗುವೆನೆಂ
ದುಲ್ಲಾಸದಿ ನುಡಿಯೆ ಗಂಗೆ ಪರಿ[1](ದ)[1]ತ್ಯಾಗಂ ೭೫

ವ || ಆ ಸಮಯದೊಳ್ ಸಿದ್ಧಲಿಂಗೇಶ್ವರನ ಬೆಂಬಳಿಯೊಲಿರ್ಪ ಜಂಗಮ ತಿಂಥಿಣಿ ಭಕ್ತಸಮುದಯಂ ಕಂಡಾಶ್ಚರ್ಯದಿಂ ಕೊಂಡಾಡುತ್ತುಮಿರ್ದರದೆಂತೆನೆ: ತಿರುಜ್ಞಾನ ಸಂಬಂಧಿಗಳ್ಗಂ ಕಾವೇರಿಯೆಂಬ ನದಿ ಮತ್ತಂ ವಾಗೀಶದೇವಯ್ಯಂಗಂ ಕಾವೇರಿಯುಂ ಮಡಿವಾಳಯ್ಯಂಗಂ ಭೀಮರತಿ ಬಸವೇಶ್ವರಂಗಂ ಕೃಷ್ಣವೇಣಿ ಗುಂಡಮ್ಮಂಗಂ ಮಲ ಪ್ರಹಾರಿ ಮುಸುಟೆಯ ಚೌಡಯ್ಯಂಗಂ ಹೆದ್ದೊರೆ ಹಂಪೆಯ ಹರೀಶ್ವರಂಗಂ ಪಂಪಾ ನದಿ ಸಾಸಲಭೈರದೇವಯ್ಯಂಗಂ ಹೇಮಾವತಿನದಿ ಅಲ್ಲಮಪ್ರಭುವಿಂಗಂ ಭಾಗೀರಥಿ ರೇವಣಾಸಿದ್ಧೇಶ್ವರಂಗಂ ಮಾಸನೂರ ಮದಗವೆಂಬ ನದಿ ದೇವರದಾಸಂ ಮದುವಿಗೆ ಪೋಪಂದು ಕಾವೇರಿ ರೇವಯ್ಯ ದೇವಯ್ಯನವರುಗಳ್ಗಂ ಸಮುದ್ರಂ ಕುತ್ತಾಂಡಿದೇವ ರೆಡೆಗೆ ಪೋಪ [2](ಚೇ)[2]ರಮಂಗಂ ಕೂಪಾನದಿ ಕೇಶಿರಾಜಂಗಂ ಹೆದ್ದೊರೆ ಭವಿಯ ಹರುಗೋಲನೊಲ್ಲದ ಪ್ರಸಾದಿದಾಸಯ್ಯಂಗಂ ರಕ್ಕಸಿಯೆಂಬ ನದಿ ಗಜೇಶ ಮಸಣಯ್ಯಂಗಂ ಹೆದ್ದೊರೆ ಹುಚ್ಚವಿರೂಪಾಕ್ಷನೆಂಬ ವಿರಕ್ತಂಗಂ ಪಾತಾಳಗಂಗೆ ಹೆಂಡದ ಮಾರಯ್ಯಂಗಂ ಕಪ್ಪಿನಿ ಇವು ಮುಖ್ಯವಾ[3]ದನಂತ[3]ನದಿಗಳು ಶರಣರ್ಗೆ ತೆರಪು ಗೊಟ್ಟವೆಂದು ಪೂರ್ವಕಥೆಗಳೊಳ್ಕೇಳ್ದೆವು ಈ[4]ಗ[4] ಸಿದ್ಧಲಿಂಗೇಶ್ವಂಗಂ ಮಂಗಲದ ತೊರೆ ತೆರಪುಗೊಟ್ಟುದಂ ಕಂಡೆವೆಂದು ಕೊಂಡಾಡುತ್ತಿರಲು ಆ ಗ್ರಾಮವಂ ಪೊಕ್ಕು ಯತಿಪ ಅಲ್ಲಿಯ ಪದಾರ್ಥಮಂ ಕೈಕೊಂಬುತ್ತಿರ್ಪಲ್ಲಿ ಅತ್ತಲಾ ಹುಲಿಯೂರೆಂಬುದರಲ್ಲಿ

1. ದು (ಅಇ). 2. ಜೋ (ಅಇ). 3. ದಂನತ್ತ (ಅಇ). 4. ಗಲೀ (ಇ).

[1]ಮಾ[1]ಹೇಶ್ವರಜ್ವರಂ ಪೊಕ್ಕು ಮನುಷ್ಯರಂ ಸಂಹರಿಸುತ್ತಿರೆಯಾ ಊರ ಭಕ್ತರೆಲ್ಲಂ ನೆರೆದು ಸಿದ್ಧಲಿಂಗೇಶ್ವರನಂ ಬಿಜಯಂಗೈಸಿತಂದೊಡೀಜ್ವರಂ ಪೋಪುದೆಂದು ಬಂದು ವಂದಿಸಿ ಬಿನ್ನಪಂಗೈದು ಸಮಸ್ತ ಮಾಹೇಶ್ವರರ್ಸಹಂಬಿಜಂಯಂಗೈಸಿಕೊಂಡೊಯ್ವ ಪಥದಲ್ಲಿ ೭೬

ಚಂ. ವೃ.

ಅರಮನೆಯಂತೆ ತೋಟ ಘನಚಾಗಿಗಳಂತೆಯು ತಾನದಿಂದಲುಂ
ವರಬಿಲುಗಾರನಂತೆ ಧನುವೃಕ್ಷವು ಕೀಚಕನಂತೆ ಕೀಚಕಂ
ಸುರಗಿಗಳಂತೆಯುಂ ಸುರಗಿ ಚೆಲ್ವಿನ ರಾವಣನಂತೆ ರಾವಣಂ
ಸರಿಗುಣನಾಮದಿಂದೆ ಕುಜವೊಪ್ಪಿತುವರ್ಜುನನಂತೆಯರ್ಜುನಂ ೭೭

ಸುರುಚಿರ ಕರ್ಣಪೂರ ಘನಕೆಂದಳಿರಾಗಿಹ ಕರ್ಣಪೂರದಿಂ
ದುರುತರ ಬ್ರಹ್ಮವೃಕ್ಷವರೆ ಶೋಭಿತಮಾಗಿಹ ಬ್ರಹ್ಮವೃಕ್ಷದಿಂ
ದುರುಶಿವವೃಕ್ಷಯೂಥಗಳ ರಾಜಿಗಳಿಂ ಶಿವವೃಕ್ಷರಾಜಿಯುಂ
ಸುರಭಿಗಳಿಂದಲುಂ ಸುರಭಿಯೂಥದಿನೊಪ್ಪಿತನೂನ[2]ಕಾ(ನ)[2]ನಂ ೭೮

ಉ. ಮಾ. ವೃ.

ಭಂಡಿರಿಭಂಡಿರಂ ಬದರಿ ಕೇಸರಿ ಕೇಸರಿ ನೆಲ್ಲಿ ನೆಲ್ಲಿಯುಂ
ಖಂಡಿತ ವಿಲ್ಲವಾಗಿ ಘನತಾಪಸ ತಾಪಸ ಜೀವ ಜೀವದಿಂ
ದಿಂಡುಗಜಂಬ್ವಜಂ ಬ್ವಜಯುದಿಂ ಜಯದಿಂಪಜ ಶೃಂಗಿ ಶೃಂಗಿಯಿಂ
ದಿಂಡಸುಗರ್ದ ಭಾಂಡಕುಲವಿರ್ದಪರಣ್ಯದಿ ಕುಂಭಕುಂಭಿಯುಂ ೭೯

ತಿಂದು[3](ಕ ಕಾ)[3]ರ ತಿಂದುಕ [4](ಕು)[4]ಬೇರಕುಬೇರ ವಿನೇತ್ರನೇತ್ರದಿಂ
ಗಂಧಸುಗಂಧ ವಿಟ್ಖದಿರದುತ್ಖದಿರಂ ನತಮಾಲ ಮಾಲಿಕಂ
ಕುಂದಕ ಕುಂದ ಚಿತ್ರಕತಿಲಕಂ ತಿಲಕಂ ಘನಪಂ[5](ಶ)[5] ಪಂ[6](ಶ)[6]ದಿಂ
ಸಿಂಧುಕ ಸಿಂಧುತೋನ್ನತ ವಸುಂ ವಸುವೊಪ್ಪಿತು ವೃಕ್ಷವೃಕ್ಷದಿಂ ೮೦

ವಂದನಿಪಾರಿಭದ್ರವನ ಚಂಪಕಚಂಪಕಪಾರಿಭದ್ರದಿಂ
ಸಂದ್ಯನ ವಜ್ರವಜ್ರೆ ರುಚಕಂ ರುಚಕಂ ವರಗ್ರಂಥಿಗ್ರಂಥಿಯಿಂ
ಬಂಧುರದೆಕ್ಕೆ ಕಕ್ಕೆ ಘನಸಿಂಪಿಲಿ ಸಿಂಪಿಲಿ ಶೂಲಿ ಶೂಲಿಯಿಂ
ನಾದಕುಜಂಗಳಿಂ ಗಹನಪಾವಕ ಪಾವಕದಿಂದಲೊಪ್ಪಿತುಂ ೮೧

1. ಮ (ಇ). 2. ಕಾ (ಅಇ). 3. ಕಾಕ (ಅಇ). 4. ಕೂ (ಅಇ). 5. ಸ (ಅಇ).
6. ಸ (ಅಇ).

ಭೀತಕಿ ಭೀತಕೀನಿಕರ ಫೇನಿಲ ಫೇನಿಲ ಚೋರೆ ಚೋರೆಯಿಂ
ದುತ್ತರೆ ಚಿಂಚ ಚಿಂಚಕ ವಿಕಂಕತಕಂ ಗಿರಿ ಚೂತ ಚೂತದಿಂ
ಶೀತಲ ಶೀತಲಂಗಳುರುಝೂಟವಿ ಝೂಟವಿಶಾಲಶಾಲದಿಂ
ದಂತಶಠಂ ಶಠಂ ಮದನರೋಚನ ರೋಚನವಿಕ್ರರಣ್ಯದೊಳ್ ೮೨

ಆ ವನಮಧ್ಯದಲ್ಲಿ ಕರಿ ಸಿಂಹ ವೃಕಂ ಕಿಟಿಯೌತುರುಕ್ಷ ಸು-
ಸ್ವಾವಿಕಃಕಂದಳೀಶಶರುಶಂಬರ ಹೊನ್ಮೃಗ ಖಡ್ಗಿ ರೋಹಿಷಂ
ಗಾವಲರಂಕುರಾಮುಚಮುರೀಮೃಗಕಾಸರ ಹಿಂಸಿರಂಗಳುಂ
ತೀವಿರುತಿರ್ದವುಂಮದಗಿಸೂಚಕ ಸೂಚಕವೇನನೆಂದಪೆಂ ೮೩

ಚಾತಕ ನೀಲಕಂಠ ಝುಷ ಪಾರಿವ ಕೀಚಕ ನೀಲಕಂಠಕಂ
ತಿತ್ತಿರಿ ತಾಮ್ರಚೂಡ ಸತಪತ್ರಕ ಕರ್ಕರ ಕರ್ಕರೇಟು ವಾ
ಸಂತಕ ಘೋಷಸಾರಸ ಬಲಾಕ ಭರದ್ವಜ ಭೃಂಗ ಭೃಂಗಗಳ್
ಪ್ರೀತಿಯೊಳಿರ್ದವಲ್ಲಿ ಶುಕ ಕಾಕ ಚಕೋರ ಸುಕಂಕ ಕಂಕಗಳ್ ೮೪

ಮ. ವಿ. ವೃ.

ಗುರುಸಿದ್ಧೇಶ್ವರ ನಿಃಕುಲತ್ವವನಿರಾಶಾನೀಕವಮಂ ಧೈರ್ಯಮಂ
ವರಶಾಂತ್ಯೋನ್ನತಮಂ ವಿಲಾಸಗುಣಮಂ ನಿಃಕ್ರೋಧಮಂ ನೋಡಲೆಂ-
ದುರು ರುದ್ರಂ ಜವದಿಂ ಭವಾನಿಸಹ ದೇವವ್ರಾತಮಂ ಕೂಡಿ ಶಾ-
ಬರರೂಪಂ ಧರಿಸೆಯ್ದಿದಂ ಗಹನಕಂ ಸಾರಾನ್ವಿತಂ ಸಾರದಿಂ ೮೫

ಶಿರದೊಳ್ ಕಟ್ಟಿದ ಕೇಕಿಪಕ್ಷದುರು ಮತ್ಸ್ಯಂ ನಾಗನಾಗಂ [1]ಮು[1]ಹಾ
ಕಿರಿ ಮುಂತಾದವರಲ್ಲಿಯುದ್ಭವದ [2](ಮುಕ್ತಾ)[2]ಹಾರಮಂ ಕಂಠ[3](ದಿಂ)[3]
ದಿರೆ ನೀಲಾಂಬರದಂಗಿ ರಂಜಿಸಿ ಮುಖಂಗೆಂ ಣ್ಣ ಕೆವಿಮ್ರಸೆಯಿಂ
ದುರು ದೀರ್ಘಾಂಗವಜಾನುಬಾಹುವಸಿತಾಂಗಚ್ಛಾಯೆಯಿಂದೆಯ್ದಿದಂ ೮೬

ಕಂ. ಶ್ರುತಿವಚನವೀಸುವಲೆಯುಂ
ನತ ವೈದಿಕ ದಡಿಬಲೆ ಮಂತ್ರಂಗಳೆ ತಡೆವಲೆ
ಸತತಂ ಮಾಯಾಶಕ್ತಿಯೆ
ಚತುರಿನ ತೆರೆವಲೆಗಳೊಪ್ಪಿದುವು ರುದ್ರನೊಳುಂ ೮೭

---

1. x (ಇ). 2. ಮೌಕ್ತಾ (ಅ); ಮೌಕ್ತಿ (ಇ). 3. ವಿಂ (ಅಇ).

ಉರುಧರ್ಮಬಿಲ್ಲಿನಿಂದಲು
ವರಗುಣವರಿವಂಬುಭಕ್ತಿ ಬತ್ತಳಿವೇದಕು-
ಕ್ಷುರವಾದ ತರ್ಕಹಾಸುಂ
ಕರಣಮೃಗಂ ಬೀಳ್ವ ಬೇಂಟೆ ವೇಷದೊಳಿರ್ದಂ ೮೮

ಮನಮಾರುತ ಬಿಲ್ಲಿಂದಂ
ವಿನಯ[1](ದೊ)[1]ಳೇಕೋಭಾವದ ಶರಸಂಧಾನದಿ
ಘನ[2]ದ[2]ಹಂಕಾರ ಮೃಗಗಳ
ಸನುನಯದಿಂದೆಸೆವ ಶಬರಿಯುಮೆ ತಾನಾದಳ್ ೮೯

ಸಿರಿ ಸರಸ್ವತಿ ಸಾವಿತ್ರಿಯು
ಸುರನಾರಿಯರಸುರನಾರಿಯರ್ಮುಂತಾದರು
ಗಿರಿಜೆಯೊಳು ತಾವು ಕೂಡಿಯು
ಭರದಿಂದ ಪುಳಿಂದಿವೇಷಮಂ ತಾಳ್ದಿರ್ದರ್ ೯೦

ಗುಂಜಿಯ ದಂಡೆಗಳಿಂದಂ
ಮಂಜುಮಾಗಿಹ ಪೊಂಬುಲಿ ತೊವಲ ರಕ್ಕೆಗಳಿಂ
[3](ಮಂಜು)[3]ಲ ತಳಿರ್ಗಳ ಕೊಡೆಯಿಂ
ರಂಜಿಸಿತು ಶಂಬರರೂಪು ಸುರನಾರಿಯರೊಳ್ ೯೧

ಜಂಬುಫಲಕಾಂತಿಶರಿರದಿ
ತುಂಬಿಯ ಕಾಂತಿಗಳ ಹಳಿವ ಕುಂತಳಸಿರಿಯಿಂ
ಇಂಬಿಂ ಪಿಡಿದಿಹ ಗಾಳದಿ
ಯಿಂಬಾದುದು ಶಬರಲೀಲೆ ಸುರನಾರಿಯರೊಳ್ ೯೨

ಕಿ[4](ರು)[4]ಗಿನ್ನರಿಯೊರೆ ಚಿಮ್ಮುರಿ
ಕಿರುಗಡಕುಂ ಸಣ್ಣರೇಖೆ ಭಸಿತಂ ಪಣೆಯೊಳ್
ಕಿರುಸುರಗಿ ಸೊಂಟದಲ್ಲಿರೆ
ಕಿರುವರೆಯುದ ಶಬರಲೀಲೆಯೊಪ್ಪಿತು ಸುರರೊಳ್ ೯೩

---

1. ದ (ಅಇ). 2. ದನು (ಅಇ). 3. ಸಂಜ (ಅಇ). 4. ರ (ಅಇ).

ಬಿಲ್ಲಾಳ್ಗಳ ವೊತ್ತಗಳಿಂ
ಕಲ್ಲಿ ಬಲೆ [1]ದೀ[1]ಹ ಖಗ ಮೃ[2]ಗ[2]ತಹ ಶಾಬರದಿಂ
ಚೆ[3](ಲ್ವಿ)[3]ನ ಪುಳಿಂದಿಯರಿಂದಂ
ಉಲ್ಲಾಸದಿ ಪೊಕ್ಕ ವನವಶಾಬರರುದ್ರಂ ೯೪

ವ॥ ಭಿಲ್ಲರು ಬೆಳ್ಳಾರ್ಪರ್ಟಂಗೈದು ಬಲೆಯಂ ಹರಹಿ ಸರುವಂ ಕಟ್ಟಿಯುಲುಹ ನಾರ್ೈದು ಸನ್ನೆಗೆಯ್ದು ಸೊಕ್ಕಿನ ಧೂಪವಿಕ್ಕಿ ದೆಸೆದೆಸೆಗಳೊಳ್ನಿಂದುಂ ವಾದ್ಯಂಗಳಂ ಮೊಳಗಿ ದನಿದೋರಿ ಮೃಗಂಗಳನ್ನೆಸುತ್ತಿರಲುಂ ಆ ಮೃಗಂಗಳ್ ಬೆದರ್ದು ಎಚ್ಚಂಬು ಸಹಂ ಸಿದ್ಧರಾಮೇಶ್ವರನ ಬಳಿಗೈದುವ ಮೃಗದಂತೆ ಗಾಯಂವೆರಸಿಯೋಡುವ ಹೆಣಗಳಂ ವನಜಂ ಹರನ ಶಾಪದಿಂ ವರಾಹನಾಗಿ ವಿಕ್ರಮನಬಲಮಂ ಸಂಹರಿಸುತಿರ್ದ ಪಂದಿಯ ರೌದ್ರದಂತೆ ಕೋಪದಿಂ ಶಬರರಂ ಸಂಹರಿಪ ದಂಷ್ಟ್ರಂಗಳಂ ತಿವಿವ ಪುಳಿಂದಿಯರಿಂ ಪಿಂಗಳನೆಂಬ ಯತಿಯ ಶಾಪದಿಂ ಬಾಲಾರ್ಕಯತಿಪಂ ವ್ಯಾಘ್ರನಾಗಿಯಾರ್ಭಟಿಸಿದಂತೆ ಆರ್ಭಟಿಸುತಿರ್ಪ ವ್ಯಾಘ್ರಂಗಳಂ ಸುರಗಿಯಿಂದಿರಿವ ಕಿರಾತಸಂದೋಹಂಗಳಂ ಸರಯೂ ನದಿಯ ತೀರದಲ್ಲಿರ್ಪ ಅಜನ ಚತುರಂಗ ಬಲಮಂ ಸಂಹರಿಪ ಶಾಪದತ್ತಗಜದಂತೆ ಶಬರರಂ ಸದೆಬಡಿವ ಮದೇಭಂಗಳಿಂ [4](ಎಸೆ)[4]ವ ಪುಳಿಂದ ಸಂದೋಹಂಗಳಿಂ ದೀರ್ಘ ಶೃಂಗಮುನಿಯ ಶಾಪದಿಂ ಖೇಟಕನೆಂಬ ಗಂಧರ್ವ ಹರಿಣನಾಗಿ ಸಾಸಲಭೈರವೇಶ್ವರನ ಬಾಣಹತಿಗಂ ಬೀಳ್ವಂತೆ [5](ಎಸು)[5]ಗೆಯುಬ್ಬರಕಂ ಡೆಂಡಣಿಸಿ ಬೀಳ್ವ ಹರಿಣಂಗಳಂ ಮತ್ತಂ ಶಿವಪ್ರಿಯ್ಯಮುನೀಶ್ವರನ ಶಾಪದಿಂದೊರ್ವ ಕಿನ್ನರಂ ಸಿಂಹಮಾಗಿ ಕಣ್ಣಪ್ಪನ ಪಡೆಯ ಸಂಹರಿಸುವಂತೆ ನಿಶಾಟಕುಲಮಂ ಕೊಲುವ ಸಿಂಹಂಗಳಂ ಇರಿವ ನಿಷಾ ಸಂದೋಹಮಂ ಮಹಿಷಾಸುರನಂ ಕೊಲ್ವ ದುರ್ಗಿಯಂತೆ ಕಾಡುಕೋಣಂಗಳಂ ಇರಿವ ನಿಶಾಚರಿಯಂತೆ ಈಶನೊಳ್ಕಾಳಗಮಂ ನೆಗಳುವ ಭಲ್ಲೂಕಾಸುರನಂತೆ ಸೊಕ್ಕಿದ ಕರಡಿ ಗಳಂ ಪೊಡೆವ ಮಾಲಾಜಾಲಮಂ ಮತ್ತಂ ಚಿತ್ರಶೇಖರ ಸೋಮಶೇಖರನವರಂತೆ ಸಿಂಹಂಗಳ ಬಾಲಂಗಳಂ ಕೊಯ್ವ ನಾಹಲರಂ(ತೆ) ತೆಲುಗ ಜೊಮ್ಮಣ್ಣನ ಬಾಣಕ್ಕೆ ಬೀಳ್ವ ಸಮಸ್ತ ಮೃಗಂಗಳಂತೆ ವನಚರರಬಾಣಹತಿಯಿಂ ಬೀಳ್ವ ಮೃಗಖಗ ಸಂದೋಹಂ ಗಳಂ ಸಿದ್ಧಲಿಂಗೇಶ್ವರಂ ನೋಡುತ್ತಂ ಸಮಸ್ತ ಮಾಹೇಶ್ವರರ್ಸಹಂ ಬರ್ಪಲ್ಲಿ ೯೫

ಕಂ. ಶಬರೇಶ್ವರ ಕಾಣುತಲುಂ
ಶಬರಕುಲಂಸಹಿತಲೆಯ್ದಿ ಬೊಬ್ಬಿರಿವುತಿರ-
ಲಬುಜ ಭವಾಂಡಂ ನಡುಗಲ್
ಶಬರೇಶಂ ಒತ್ತಿ ಮುತ್ತಿಕೊಂಡುಂ ಯತಿಯಂ ೯೬

1. ದಿ (ಅ೩). 2. ಗವ (ಅ೩). 3. ಲ್ವ (ಅ೩). 4. ಯೆಸ (ಅ೩).
5. ಯೆಸ (ಅ೩).

ಸಂಗಡ ಬಹ ಮಾಹೇಶ್ವರ
ವಂಗಡಮಂ ಬಿಡದೆಯೆಲ್ಲರಂ ನಿಲ್ಲಿಸುತಂ
ಮುಂಗಡೆ ಬೆಂಗಡೆ ನಿಂದುಂ
ಜಂಗಮರೆಲ್ಲ[1](ರ) ಸುಲಿ[1]ಗೊಂಡೆದ್ದದ್ದಲಿಸಲ್ ೯೭

ಬೆವರ್ವಾಸವ ಸಿದ್ಧೇಶಂ
ಭವನಂ ನೋಡುತ್ತ ತೆಗೆದು ಕೈಯೊಳು ಪಿಡಿ[2](ದುಂ)[2]
ಭವನ ಕರುಣದಿ ಶಬರನೆ
ಯುವಿರತ ಬದುಕೆಂದು ಹರಸಿಯೆ[3]ತ್ತಿದ[3] ಕೈಯಂ ೯೮

ಕೆಲರ್ಜಂಗಮ ಬೆವರ್ವಾಸವ
ವೊಲವಿಂದೆತ್ತುತ್ತೆ ಮಗನೆ ಪಿಡಿ ಪಿಡಿಯೆನುತಂ
ಕೆಲಕೆಲದ ಶಬರರುಗಳಂ
ಬಲಗೈಯಿಂ ನೆಗಹಿ ತೋರುತಿರ್ದರುಮಾಗಂ ೯೯

ಕೆಲರ್ದೋತ್ರವ ಕೆಲರ್ಟೊಪ್ಪಿಯ
ಕೆಲರ್ಕಂಥೆಯ ಕೆಲರ್ಕುರ್ಪಸ ಕೆಲರ್ಪುಸ್ತಕಮಂ
ಕೆಲರ್ವಸ್ತ್ರವ ಕೆಲರ್ಕೈಪಂ
ಬಲಗೈಯಿಂ ಪಿಡಿದು ನೆಗಹಿ ಕೋಕೋಯೆಂದರ್ ೧೦೦

ಯತಿಪನ ಸದ್ಗುಣಶಾಂತಿಯ
ನತಿಶಯ ನಿರಾಶಾಗುಣಕಂ ನಿರ್ಮತ್ಸರದು-
ನ್ನತಕಂ ಶಬರಾಧೀಶಂ
ಅತಿಶ[4]ಯ(ಮಂ)[4]ಒಟ್ಟು [5]ತಾನೆ[5] ಬೆರಗಾಗಿರ್ದಂ ೧೦೧

ಹರನೊಳು ಯುದ್ಧಂ ಮಾಡ-
ಲ್ಪುರುಹೂತಂ ಬಂದು ನಿಂದು ಬೆರಗಾಗಿರ್ದೊಲ್
ಸುರಧೇನುಗಾಯ್ವ ದಿಳಿಪಂ
ಹರಿಯಂ ಕೊಲಲೆಂದು ಬಗೆದು ಬೆರಗಾಗಿರ್ದೊಲ್ ೧೦೨

1. ಲ್ಲಂ ಸುಲಿಗೆ (ಅಇ). 2. ದಾ (ಅಇ). 3. ತ್ತಿ (ಅ). 4. ಯ (ಅಇ).
5. ತನ್ನ ತಾನೆ (ಅಇ).

ಸುರನಿಕರಂ ಬೆರಗಾಗಿರೆ
ಪುರಹರನೆಂದೆಂಬಶಬರ ವಂದಿಸಿ ಸಿದ್ಧಗೆ
ವರಸುಲಿಗೆಗಳಂ ಒಲ್ಲೆವು
ಪುರಕಂ ಮಿಗೆ ಪೋಪುದೆನಲು ನುಡಿದಂ ಸಿದ್ಧಂ ೧೦೩

ನನಗೆನ್ನ ಭಕ್ತರೀವರು
ನಿನಗಾರ್ಕೊಟ್ಟಪರು ಮಗನೆ ಕಂತೆಯ ನೀನುಂ
ಅನುವಿಂದರಸಲು ಬದುಕುವೆ
ಮುನಿ[1]ಸೇತಕೆ[1] ಶಬರಯೆನಲು ಹರ ನಸುನಕ್ಕಂ ೧೦೪

ನನ್ನಯ ವಸ್ತುವಿಗೆಲ್ಲಂ
ನನ್ನಿಯಿದಂ ನಿನಗೆ ನಾನು ಭಕ್ತಿಗಳಿಂದಂ
ಮನ್ನಿಸಿದೆನೆಂದು ಶಬರಂ
ಬಿನ್ನವಿಸಿಯೆ ನಿಷ್ಕಲಂ ಸಹ ಬಯಲಾದಂ ೧೦೫

ಅದ ಕಂಡು ಸಕಲ ಭಕ್ತರು
ಪೊದವಿರ್ದೀ ಶಬರವೇಷಿ ಶಿವ ತಾನೆಂದುಂ
ಮುದದಿಂ ತಮ್ಮೊಳ್ತಾವುಂ
ಹದುಳದಿ ಪೊಗಳ್ವರಂತೆನಲಾಗಂ ನುಡಿದರ್ ೧೦೬

ವ || ಓಹಿಲನ ಮನವಂ ನೋಡಲೆಂದು ಸೌರಾಷ್ಟ್ರಸೋಮೇಶ್ವರಂ ವ್ಯಾಧ ರೂಪಿಂದೆ ಬಂದುದಂ ಅರ್ಜುನನೊಳುಂ ಯುದ್ಧವಂ ಮಾಡಲೆಂದು ಕಿರಾತವೇಷದಿಂ ಬಂದುದಂ ವೇಳ್ವಾತಯ್ಯಗಳ ಗುರುಭಕ್ತಿಯುಂ ನೋಡಲೆಂದು ಹರಂ ಶಬರವೇಷದಿಂ ಬಂದುದಂ ಅಗ್ಘಣಿಹೊನ್ನಯ್ಯಂಗಂ ಪುಳಿಂದ ರೂಪಿಂ ಬಂದುದಂ ಸಾಸಲಭೈರವೇಶ್ವರ ನೊಳ್ಕಾಳಗಕ್ಕೆ ಬಂದ ಕಾಲಕಂಧರನ ಲುಬ್ಧರೂಪಮಂ ನಂಬ್ಯಣ್ಣನ ಸುಲಿಗೆಯುಂ ತೆಗೆಯಲ್ಬಂದ ಚಂದ್ರಧರನ ನೀಲಾಟರೂಹುವಂ ಬ್ರಹ್ಮನ ಶಿರಸ್ಸನೆಚ್ಚ ಕಂಡಕ [2](ಲೀ)[2]ಲೆಯುಂ ಕೃಷ್ಣನ ಮೂರು ಶಿರಸ್ಸಂ ಬಿಡಿವಿಲ್ಲಿಂ ದೆಸೆಯಲ್ಕೈದಿದ ಪುರಹರನಾರಣ್ಯ ಚರಮೂರ್ತಿಯುಂ ಕಲಿಕಾಮದೇವಂಗಂ ಸಹಕಾರಿಯಾಗಿ ಚತುರಂಗಬಲವಂ ಕೂಡಿ ಕೊಂಡು ಬಂದ ರುದ್ರನ ರೂಪುವಂ ಉಪಮನ್ಯುವಿಂಗೆ ಚಾತುರಂಗಬಲಮಂ ತೋರಿದ ಶಂಕರನ ರೂಪಮಂ ತ್ರಿಪುರಸಂಹರದ ಲೀಲೆಯುಂ ತಾರಕನಂ ಕೊಲಲೆಯ್ದಿದ ಷಣ್ಮುಖ ನವತಾರದ ಲೀಲೆಯುಂ ದಕ್ಷಸಂಹಾರಕ್ಕಂ ನಡೆದ ವೀರೇಶ್ವರನವತಾರದ ಲೀಲೆಯಂ

---

1. ಸಿತಕೇ (ಅ೩). 2. ವಿ (ಅ೩).

ಕಳ್ಳರು ಕೊಂಡೊಯ್ವ ವೇಶ್ಯಾಸ್ತ್ರೀಯರಂ ಬಿಡಿಸಿಕೊಂಡ ಕಾಳಹಸ್ತೀಶ್ವರನ ಲೀಲೆಯುಂ ರತ್ನಗಣೇಶ್ವರನಮೇಲೆ ದಂಡೆತ್ತಿನಡೆದ ಶಿವನಲೀಲೆಯುಂ ಪೂರ್ವಕಥೆಗಳೊಳ್ ಕೇಳ್ದೆವು ಈಗಲೀ ಸಿದ್ಧಲಿಂಗೇಶ್ವರನ ಮನಮಂ ನೋಡಲೆಂದು ಪುರಹರಂ ಶಾಬರಲೀಲೆಯಿಂ ಬಂದು ಸಿದ್ಧಲಿಂಗಂಗೆ ವಂದಿಸಿ ಭಕ್ತಿಮಾಡಿದುದಂ ಪ್ರತ್ಯಕ್ಷಂ ಕಂಡೆವೆಂದು ಆಶ್ಚರ್ಯ ಯುಕ್ತರಾಗಿ ಕೊಂಡಾಡುತ್ತಿರೆ ಆಯತಿಸಂ ಹುಲಿಯಾರಂ ಪೊಕ್ಕು ಅಲ್ಲಿಯ ಭಕ್ತರಿಂ ಪೂಜೆಗೊಂಬುತ್ತಿರೆ ಆವೂರಲ್ಲಿರ್ದ ಜ್ವರಂ ಆ ಕ್ಷಣದಲ್ಲಿಯೇ ಪೋಗೆ ಅದಂ ಕಂಡಾಶ್ಚರ್ಯಂ ಬಟ್ಟು ನಿಖಿಲಭಕ್ತರ್ಮತ್ತಂ ದ್ರಾವಿಡದೇಶದ ಶಿವಪುರದಲ್ಲಿಯ ಜ್ವರಂ ತಿರುಜ್ಞಾನ ಸಂಬಂಧಿಗಳುಂ ಬರೆ ಹೋಯಿತ್ತೆಂಬುದಂ ಉತ್ತುಂಗಚೋಳಂ ಕೃತಾಂತನ ಮೇಲೆಂದುಂ ಎಡದಕಾಲೊಳ್ ತೊಡರುಗಟ್ಟಿದಾಗಳೆ ಆತನಾಳ್ವ ದೇಶದಲ್ಲಿರ್ದ ಜ್ವರಂ ಹೋಯಿತೆಂಬುದಂ ಕಲ್ಯಾಣದೊಳೊರ್ವ ಶಿವಭಕ್ತಂಗೆ ಬಂದಜ್ವರಂ ಸಗರದ ಬ್ರಹ್ಮಯ್ಯನಂ ಕಾಣುತ್ತೆ ಹೋಯಿತೆಂಬುದಂ ಒರ್ವ ಜಂಗಮಕ್ಕೆ ಬಂದ ಜ್ವರಂ ವೀರ ಸಂಗಯ್ಯ ಬಂದಾಗಲೆ ಹೋಯಿತೆಂಬುದಂ ಪೂರ್ವಪುರಾತನರ ಪ್ರಸಂಗದೊಳ್ ಕೇಳ್ದೆವುಂ ಈ ಸಿದ್ಧಲಿಂಗೇಶ್ವರಂ ಹುಲಿಯೂರುದುರ್ಗಮಂ ಪೊಕ್ಕಾಕ್ಷಣಮಾ ಜ್ವರಂ ಹಾರಿಹೋದುದಂ ಪ್ರತ್ಯಕ್ಷ ಕಂಡೆವೆಂದು ನಿಖಿಲ ಮಾಹೇಶ್ವರರು ಕೊಂಡಾಡುತ್ತ ಯಿರೆಯಿರೆ ೧೦೭

ಉ. ಮಾ. ವೃ.

ಚಂಪಕನಾಸಿಕಂ ಭ್ರಮರಕುಂತಳ ಕಂಜದಳಾಕ್ಷ ಜಾಜಿಯಾ-
ಕಂಪಿನಕಾಯ ಬಿಂಬಧರ ಭವ್ಯಾರ್ಘ[1](ಟಾಭಪಯೋದ)[1]ಸಿಂಹದಾ
ಯಿಂಪಿನ ಮಧ್ಯ ಕೀರವಚ ರಂಭದಕಂಬದ ಪೋಲ್ವ ಯೂರುವಿಂ-
ದೊಪ್ಪುವ ವಾಮಲೋಚನೆಯರೆಯ್ದಿದರಾಗಳೆ ದರ್ಶನಾರ್ಥದಿಂ ೧೦೮

ಮುತ್ತಿನ ಬೊಟ್ಟು ಪೂರ್ಣಶಶಿಮುತ್ತಿನ ಹಾರವೆ ತಾರಸಂಚಯಂ
ಮುತ್ತಿನ ತೋರಮೂಕುತಿಯೆ [2](ಶುಕ್ರ)[2]ನು ಮುಟ್ಟಿಹ ಸಣ್ಣದೂಟದಾ
ಕಾಂತಿಯೆ ಜೊನ್ನವಾಗೆ ಗಗನಾಂಗನೆ ಶ್ರೀಗುರುಸಿದ್ಧಲಿಂಗನಂ
ಮುಕ್ತಿಯ ಬೇಡ ಬಂದಪಳೊಯೆಂಬೊಲು ಬಂದಳು ನಾರಿಯೊರ್ವಳುಂ ೧೦೯

ನಾರಿಯರೆಲ್ಲ ಬಂದು ಗುರುಸಿದ್ಧಗೆ ವಂದಿಸಿ ರಾತ್ರಿಯಾಗಲಾ
ಊರೊಳಗೊಂದು ಗೇಹದೊಳು ನಿದ್ರಿಸಲೆಲ್ಲರುಮಲ್ಲಿಯೊರ್ವಳುಂ
ತೋರಿಯ ಮುತ್ತುಮೂಗುತಿಯ ಕಪ್ಪಳು ಮೆಲ್ಲ[3](ಸೆಯೆ)[3]ಚ್ಚತಾಗಳುಂ
ಸೂರನು ಬಂದಕಾಲದೊಳು ನಂಬುಗೆಮಾಡಲುವೇಳ್ಕುಮೆಂದರುಂ ೧೧೦

---

1. ಟೋಪಕುಚಂ (ಅಇ). 2. ಸುಕ್ರ (ಅ) ; ಸುಕ (ಇ).

ಮೂಗುತಿ ಕಮ್ಮದಿಲ್ಲವೆನುತಂ ಗುರುಸಿದ್ಧನ ಪಾದದಾಣೆಯುಂ
ಇಕ್ಕಿಯೆ ಪೋಪುದೆಲ್ಲರೆನೆ ಬಂದು ಯತೀಶನ ಪಾದದೊತ್ತಿನೊಳ್
ಚಕ್ಕನೆ ಕಯ್ಯನೆತ್ತಿಯತಿಯಾಣೆಯನಿಕ್ಕಿಯೆ ಗೆದ್ದರೆಲ್ಲರುಂ
ಸೊಕ್ಕಿದ ನಾರಿಚೋರೆ ಕರವೆತ್ತಿದಳಾಗಳದೇನನೆಂಪಪೆಂ ೧೧೧

ಮೂಕುತಿಗಳ್ಳೆಯಲ್ಲಯತಿಯಾಣೆಯೆನುತ್ತಲು ಕೈಯನೆತ್ತಲಾ
ಲೋಕಿಸೆ ಲೋಕವೆಲ್ಲ ಕರನಿಂದುದುಮಂತರದಲ್ಲಿ ಕಾಶಿಯೋ
ಳ್ಯಾಕನು ಬಾದರಾಯಣನುಮೆತ್ತಿದ ಹಸ್ತವು ನಿಂದುತೋರುವೊಲ್
[1](ಆಕೆಯ ಕೈಗಳಾಗಲುರೆ ಕೀಲಿಸೆ ನಿಂದುವು)[1]ಚೋದ್ಯಮೆಂಬಿನಿಂ ೧೧೨

ವ|| ಅದಂ ಕಂಡುಭಕ್ತರಾಶ್ಚರ್ಯಂಬಟ್ಟು ಕಾಶಿಯೊಳ್ ಭಾಸ್ಕರರಾಜಂ ಸೂರ್ಯನಾರೋಗಣೆಗೆ ರತ್ನಪರಿವಾಣದೊಳಂ ಭಕ್ಷ್ಯಾನ್ನಪಾನಾದಿಗಳಂ ಕಳುಪಲ್ಪೋಪ ನಿತರೊಳ್ಕಾರಿಕಾಲಚೋಳನಭಟರೆಯ್ದಿ ಚೋಳನೃಪನ ಪಾದದಾಣೆಯನಿಡೆಯಂತರ ದಲ್ಲಿಯೆ ನಿಂದಿರ್ದ ಪರಿವಾಣದ ತೆರನಲ್ಲಂ ಬಾಚರಸರ ಲೆಕ್ಕನಿಮಿತ್ತಂ ಬಸವೇಶ್ವರಂ ಹನ್ನೊಂದು ದಿನಂ ಅಂತರೀಕ್ಷದಲ್ಲಿ ಸೂರ್ಯನಂ ನಿಲಿಸಿದಂತಲ್ಲಂ ಹರಿಗೋವರ್ಧನ ಗಿರಿಯಂ ನೆಗಪಿದಂತಲ್ಲಂ ಬಸವೇಶ್ವರಂ ಅರುಹವಾದದ ವಿಚಾರಣರಕ್ಷೆಯನಂಬರ ತಳಕಿಟ್ಟು ನಿಲಿಸಿದಂತಲ್ಲಂ ಬಸವೇಶ್ವರಂ ಗೊಲ್ಲತಿಯ ಕೊಡನಂ ಅಂತರದಲ್ಲಿ ನಿಲಿಸಿ ದಂತಲ್ಲಂ ಸಾಸಲಭೈರವನ ಮಹಾದೇವಿ ಸಣ್ಣಕ್ಕಿಯ ಥಳಿಪ ವೇಳೆಯೊಳ್ ಜಂಗಮ ದೇವರು ಬರೆ ಕಾಣುತಲೊನಕೆಯುಂ ಬಿಡಲಂತರದಲ್ಲಿ ನಿಂದಂತಲ್ಲಾ ತಿರುಚಿಟ್ಟಂಬಲನ ಕೈಯ ಕುಸುಮಕರಂಡ ಸಹಂ ಹರಂ ನೆಗಹಿ ಅಂತರದಲ್ಲಿ ನಿಲಿಸಿದಂತಲ್ಲಂ ಮಡಿ ವಾಳಯ್ಯಂ ಬಿಜ್ಜಳನ ಪಟ್ಟದಾನೆಯ ಸೀಳ್ದಿಡಲೋಸ್ಕರಂ ಹರಭಕ್ತರ ಸೀರೆಗಳನಂಬರ ತಳಕಿಟ್ಟು ಅಂತರದಲ್ಲಿ ನಿಲ್ಲಿಸಿದಂತಲ್ಲಂ ಜಲಂಧರಂ ಕೃಷ್ಣನ ತಿರುಪಿಟ್ಟಡೆ ಬಹಿರಾ [2]ವ(ರ)[2]ಣದಲ್ಲಿ ಸಿಕ್ತಿದಂತಲ್ಲಂ ಹಡಪದಪ್ಪಣ್ಣಂ ಕುಲಗಿರಿಗಳಂ ಬೆರಳಕೊನೆಯಲ್ಲಿ ನಿಲಿಸಿದಂದವಲ್ಲ ಸಿದ್ಧಲಿಂಗೇಶ್ವರನ ಪದಕಮಲದಾಣೆಯೆಂದು ನೆಗಹಿದ ಹಸ್ತಂ ಅಂತರ ದಲ್ಲಿ ಸಿಕ್ಕಿರುತ್ತಿರೆಯಿದು ಮಹಾಚೋದ್ಯವೆಂದೆಲ್ಲರುಂ ಕೊಂಡಾಡುತ್ತಿರೆಯಾ ನಾರಿ ತನ್ನತೋರದುರುಂಬಿನಲ್ಲಿರ್ದ ತೋರಮೂಕುತಿಯುಂ ಎಡದ ಹಸ್ತದಿಂ ತೆಗೆದು ಸಿದ್ಧ ಲಿಂಗೇಶ್ವರನ ಮುಂಪಕ್ಕಿಟ್ಟಡೆ ಬಲದ ಹಸ್ತವೆಂದಿನಂತಾದುದು ಅವಳ್ನಾಣ್ಚಿಪೋದಳು ಮತ್ತಂ ಶಿವಮಾಹೇಶ್ವರರ್ಸಹಂ ಸಿದ್ಧಲಿಂಗೇಶ್ವರಂ ಆರೋಗಣೆಗೆ ಬಿಜಯಂಗೆಯ್ವ ಪಥದಲ್ಲಿ ೧೧೩

1. ಆಕೆಯಿಗಳುಂ ಕೀಳಿಸುತ್ತವಿರೆ ಬಾರದೆ ನಿಂದುದು (ಅ೩). 2. ವ (ಅ೩).

ಉ. ಮಾ. ವೃ.

ರಾಜರ ಯುದ್ಧದಲ್ಲಿ ಪತಿ ದೂರದ ಊರಲಿ ಸತ್ತನೆಂಬುತುಂ
ಮಾಜದೆ ಕೇಳ್ದು ನಾರಿಯುರಿವಗ್ನಿಯ ಕೊಂಡದಿ ಬೀಳ್ವೆನೆಂಬುತುಂ
ರಾಜಿಪಕೇತಕೀದಳಸಮೂಹದ ದಂಡೆಯ ಮಂಡೆಯಿಂದಲುಂ
ಮಂಜುಲಮೌಕ್ತಿಕಾಭರಣ ಕಸ್ತುರಿ ಲೇಪನದಿಂದಲಾಗಳುಂ ೧೧೪

ವಾದ್ಯರವಂಗಳಿಂ ಜನದ ಸಂದಣಿಯಿಂ ಘನವೀರಬೊಬ್ಬೆಯಿಂ
ಬೀದಿಗಳಲ್ಲಿ ನಿಂದು ಕುಣಿದಾಡುತ ಪಾಡುತ ಬಪ್ಪ ನಾರಿ ತಾಂ
ವಾದ್ಯರವಂಗಳಿಂದಭವಭಕ್ತರ ತಿಂಥಿಣಿಯಿಂದಲೈದುವಾ
ಸಿದ್ಧಗೆ ವಂದಿಸಲ್ಪತಿಬ[1](ರ್ದುಂಕೆನೆ)[1]ನಾರಿಯ ಭಾಗ್ಯವೆಂತುಟೋ ೧೧೫

ಈಗಲೆ ಸಾಯುತಿರ್ಪನಗೆ ನೀಂ ಬದುಕೆಂಬುದು ಚೋದ್ಯವೆಂದಡಂ
ಅಂಗನೆ ತಾಳು ಮೂರು ದಿನ ನಿನ್ನಯ ಗಂಡನು ಬಪ್ಪನೆಂದಡಾ
ಹೆಂಗಸು ನಿಲ್ಲೆ ಮೂರುದಿನಕ್ಕೈದಿದ ನಾಯಕ ತನ್ನ ನಾರಿಗಂ
ಮಂಗಲವಪ್ಪ ಸೀರೆ ಮಣಿಭೂಷಣವಂ ಕೊಡಲೆಂದು ಬೇಗದಿಂ ೧೧೬

ವ|| ಆ ನಾಯಕಂ ಬಂದುದಂ ಕಂಡಾಶ್ಚರ್ಯಂಬಟ್ಟು ಸಮಸ್ತಭಕ್ತಜನಂ ವಿಮಾನದ ಮುಂದೆ ಮೆರೆದು ಪೋಪಾಕೆ ಬಸವೇಶ್ವರಂಗಂ ಕರಕಮಲಮಂ ಮುಗಿಯೆ ಬದುಕೆಂದು ಹರಸಿ ಆ ಹೆಣಕ್ಕಸುವಿತ್ತಂದವಲ್ಲಂ ಮುಸುಟೆಯ ಚೌಡಯ್ಯನಂ ನಮಸ್ಕರಿಸಿದ ನಾರಿಗೆ ಆಶೀರ್ವಾದವ ಮಾಡಿದ ಮರುದಿನಕ್ಕಸುವಿತ್ತಂದವಲ್ಲಂ ವಿಮಾನದ ಪಿಂತೆಯುಳುತುಂ ಪೋಪ ನಾರಿಯ ದೈನ್ಯಕ್ಕಂ ಮರುಗಿ ಆ ಶ್ರವಕ್ಕಸುವಿತ್ತ ಸಿದ್ಧರಾಮನಂತಲ್ಲಂ ಸರ್ಪದಷ್ಟದಿಂ ಮೃತವನ್ನೈದಿದ ನೃಪವಧು ದೈನ್ಯಂಬಡೆಯುವಳ ಪತಿಗಸುವಿತ್ತ ವೇಮನಾರಾಧ್ಯರಂತಲ್ಲಂ ಬಾಲಕನ ಮಾತಿಂಗೊಲಿದು ಚಿಕ್ಕ ಮಾದಣ್ಣಂಗಸುವಿತ್ತ ಸಕಲೇಶಮಾದರಸರಂತಲ್ಲಂ ತಿರುನಾವಲೂರ ಕಾವೇರಿಯಿಂ ಸ್ನಾನವಂ ಮಾಡಿ ಕಮಂಡಲದಲ್ಲುದಕವಂ ತರುವಲ್ಲಿಯಿದಿರಾಗಿ ಹೆಣನಂ ತರುತ್ತಿರೆ ಯುದಕವಂಸುರಿ[2](ದು)[2] ಹೆಣಕ್ಕಸುವಿತ್ತ ತಿರುಮಾಳಿಗೆಯ ದೇವರ ತೆರನಲ್ಲಂ ಅಡವಿಯಲ್ಲಿ ಸರ್ಪದಷ್ಟದಿಂ ಮೃತವಾದ ಗಂಡನೊತ್ತಿನಲ್ಲಿ ಕುಳ್ಳಿತು ದುಃಖಂಗೆಯ್ವ ಬಾಲಕಿಗೋಸುಗಲಾ ಪೆಣಕ್ಕಸುವಿತ್ತ ತಿರುಜ್ಞಾನ ಸಂಬಂಧಿಯಂತಲ್ಲಂ ಈ ಸಿದ್ಧಲಿಂಗೇಶ್ವರಂ ಮೆರೆವಾಕೆಯಂ ಮೂರುದಿನಕ್ಕೆ ಪತಿ ಬಹನೆಂದು ಸೂಚಿಸಿದುದು ಮಹಾಶ್ಚರ್ಯವೆಂದು ಕೊಂಡಾಡುತ್ತಿರೆ ಆರೋಗಣೆಯ ಮಾಡಿರುತ್ತಿರೆ (?) ಭಂಡಿಯ ಹಳ್ಳಿಯ ಭಕ್ತರೆಯ್ದು

1. ದುಕೆಂದನು (ಅಇ). 2. ಯಲಾರದ (ಅಇ).

ಬಿನ್ನಪಂಗೈಮು ತಮ್ಮೊರ್ಗೆ ಪ್ರೀತಿಯಿಂ ಬಿಜಯಂಗೆಯ್ವಿಕೊಂಡೊಯ್ವು ಭಜಿಸೆ ಆ ಭಕ್ತಿಯಂ ಕೈಕೊಂಡುಂ ಸಕಲಮಾಹೇಶ್ವರರ್ ಸಹಂ ಮರಳಿಯೆಡೆಯೂರಿಂಗಂ ಬರ್ಪ ಪಥದಲ್ಲಿ ೧೧೭

ಉ. ಮಾ. ವೃ.

ಕ್ರೂರಭುಜಂಗನಾ ಪಥದಿ ಪೋಪ ಮನುಷ್ಯರು ಮುಖ್ಯವಾದ ಸಂ-
ಚಾರಿತ ಪ್ರಾಣಿಸಂಕು[1]ಲ(ವ)[1] ಕಾಣುತೆ ನಿಬ್ಬರದಿಂದ ಬಂದುವುಂ
ದಾರಿಯು ಕಾದುಕೊಂಡುರಗಕಚ್ಚಲುವೌಷಧ ಮಂತ್ರ ತಂತ್ರವಾ-
ಪಾರವನೇನ ಮಾಡಿದರೆ ಕೊಳ್ಳದೆ ಸಾವುತಲಿರ್ಕುಂ ಪ್ರಾಣಿಗಳ್ ೧೧೮

ಇಂತುಮನೇಕನೇಕ ಮರಣಂಗಳನೆಯ್ದಲು ದೇಶವೆಲ್ಲ[2](ವುಂ)[2]
ಭೀತಿತರಾಗಿ ಜೋಗಿಗಳಿಗಂ ಬಹುದ್ರವ್ಯವಕೊಟ್ಟು ಸರ್ಪನಂ
ಆತುರದಿಂದ ಕೊಲ್ಲೆನಲೊಡಂಬಡುತೆಯ್ದಿದ[3]ಸಿದ್ಧ[3]ಸಂಕುಳಂ
ಉತ್ತಮಪುದ್ದುಮಂತ್ರಕಡೆಯೌಷಧಿಯಂ ಜನದಿಂದಲಾಗಳುಂ ೧೧೯

ಸರ್ಪನನಡ್ಡಗಟ್ಟಿಯದು ಕಾಣುತಲುಬ್ಬುತ ಕೋಪವುಕ್ಕುತಂ
ದರ್ಪದಿ ಬಂದು ಜೋಗಿಗಳು ಮಂತ್ರಿಪ ಮಂತ್ರವ ಚಡ್ಡೆಗೊಳ್ಳದಾ-
ಳಾರ್ಪಿನೊಳೋ[4](ಡುತುಂ)[4] ಕೆಲರ ಕೊಂದಿತು ಕೊಂದರು ಮತ್ತೆ ಸರ್ಪನಂ
ಕೂರ್ಪಿನೊಳೆಯ್ದೆ ಸಿದ್ಧಕುಲವಿದ್ದಿತುಮಲ್ಲಿಯೆ ಸತ್ತ ಸರ್ಪನುಂ ೧೨೦

ಎಲ್ಲರ ಕೊಲ್ಲುತಿರ್ಪುರಗ ಸತ್ತುದ ನೋಡುವ ಬನ್ನಿಯೆಂಬುತಂ
ನಿಲ್ಲದೆ ಸುತ್ತಣೂರುಗಳ ಕಾಪಿನಿಯರ್ಕಳು ಬಾಲವೃದ್ಧರುಂ
ಲೋಲರು ಮುಖ್ಯವಾದ ನರರೆಲ್ಲರು ನೋಡುತ ಚೋದ್ಯ ಮಾಡುತಂ
ಎಲ್ಲರು ಪೋಗೆ ಮೂರುದಿವಸಂಗಳು ತೀರಲು ಸರ್ಪನಿರ್ದುದಂ ೧೨೧

ಅಂತದ ಕಾಣುತಂ ಗುರುವು ತನ್ನಯ ಪಾದದಿ ಭೋಗಿ ಭೋಗಮಂ
ಒತ್ತಲು ಸತ್ತದೇಹದೊಳು ಪ್ರಾಣವು ತುಂಬಲುಮಾಗ ನಾಗನಂ
ಭಕ್ತರು ಕಾಣುತಂ ಬೆದರಿಯೋಡಲು ಮತ್ತದು ಭೀಮ ಭೀಮವಂ
ಚಿತ್ರಕೆ ಬಿತ್ತುತಂ ಪೆಡೆಯನೆತ್ತಿಯು ಸುತ್ತಲುನೋಡುತೋಡ್ಸ್ರಂ ೧೨೨

---

1. ಲ (ಅಇ). 2. ರುಂ (ಅಇ). 3. ಸದ್ದ (ಇ). 4. ಡಿಯೋಡಿ (ಅಇ).

ದ್ವಿಸಂಧಿ ಭುಜಂಗವಿಜೃಂಭವೃತ್ತ.

[1]ಮತ್ತಾದೀರ್ಘಾಂಗಂ ರೌದ್ರಂ ಭೂತದಿ ಪೆಡೆಯೊಳು ಧರೆಯುಸುಮಿಮ್ಮೆಯಪ್ಪ ಳಿಸುತ್ತಲೊ-
ಮ್ಮುತ್ತಾಕಾಶಕ್ಕೊಮ್ಮಿಂಗಂ ನೋಡುತಲಿ ಸುರಪುರದೆಸೆಯನೀಕ್ಷಿಸುತ್ತಲು ಮುಮ್ಮೆಯುಂ
ಶಕ್ತ್ಯಾಭೀಳಂ ಹಾಳಾಹಾಳಾಗ್ನಿಯನುಗುಳುತ ಮರುತನ ನುಂಗುತ್ತಾ ಯತಿಶನಿಗಂ (?)
ಸುತ್ತೆಂಟುಂ ದಿಕ್ಕಿಂದಂ ಸಿಂದೀಕ್ಷಿಸುತೆಡಬಲಕೊಲೆದು ಭಜಂಗ ಜೃಂಭಿ ಸುತಿರ್ದುದುಂ[1] ೧೨೩

ಉ. ಮಾ. ವೃ.

ಆರನು ಕೊಲ್ಲಬೇಡಮಿವರಾರಿಗೆ ಕಾಣಿಸಬೇಡ ನೀನುವುಂ
ದೂರಕೆ ಪೋಗಿ ಬಾಳ್ವುದೆನೆ ಸಿದ್ಧನ ಪಾದಕೆ ಬಿದ್ದು ಮಂಥ್ರಿಯಾ-
ಆ ರಜದಿಂ ಪೊರಳ್ದುತಲು ದೈನ್ಯದಿ ನೋಡುತಲೆದ್ದುಮಾಕ್ಷಣಂ
ಓರೆಗೆ ಪೋಗೆ ಕೀರ್ತಿಸುತಲೈದಿ[2]ತು (ಮಾಗಳೆ)[2] ಭಕ್ತಸಂಕಳುಂ ೧೨೪

ವ॥ ಆ ಭಕ್ತರಾಶ್ಚರ್ಯಯುತರಾಗಿ ಹಾವಿನಹಾಳಕಲ್ಲಯ್ಯಂ [3]ತ(ನ್ನ)[3]ನಾಡಿ ಮೃತವಾದ ಸರ್ಪಂಗಸುವಿತ್ತಂ ಸತ್ತುರಗನಂ ಗೃಧ್ರತಿನುತಿರೆ ಜೈನರ್ಬಿಡಿಸಿ ತಂದು ಶಿವಧರ್ಮಯ್ಯನ ಮುಂದಿರಿಸಿ ನಿಮ್ಮ ಶಿವನಾಭರಣದ ವಿಧಿಯ ನೋಡೆಂದು ಅಣಕಿಸೆಯಾ ಪನ್ನಗಂಗಸುವಿತ್ತಂ ಬಸವೇಶಂ ತನ್ನ ಕಚ್ಚಿ ಸತ್ತ [4](ದ್ವಿರಸ)[4]ನಂಗವಿತ್ತಂ ಬಾಲಸಂಗಮನಾಥಂ ಭೋಗಿಯ ಪದಕವಂ ಮಾಡಿ ಒತ್ತೆಯಿಟ್ಟರಿಸಿ ಮತ್ತಂ ಅದಂ ಬಿಡಿಸಿಕೊಂಡು ಅದಕ್ಕಸುವಿತ್ತಂ ಸಾಸಲಭೈರವೇಶ್ವರಂ ತನ್ನ ಪದಸರಸಿರುಹಮಂ ತಿಂದು ಮೃತವಾದ ವ್ಯಾಳ್ಯಂಗಸುವಿತ್ತಂ ಎಂಬುವಂ ಪೂರ್ವಪುರಾತನರ ಕಥೆಗಳೊಳ್ ಕೇಳ್ದಿವುಂ ಇಂದೀ ಸಿದ್ಧಲಿಂಗೇಶ್ವರಂ ಕುಂಭಿನೀಶ್ರವಕ್ಕಸುವಿತ್ತುದಂ ಪ್ರತ್ಯಕ್ಷವಾಗಿ

1. ಈ ಪದ್ಯ ಅಇ ಎರಡೂ ಪ್ರತಿಗಳಲ್ಲಿ ಈ ಕೆಳಗಿನಂತಿದೆ.
ಮತ್ತಾದೀರ್ಘಾಂಗಂ ರವುದ್ರ ಭೂತದಿ ಪೆಡೆಯೊಳು ಧರೆಯುಸು ಮಿಮ್ಮೆಯಪ್ಪಳಿ ಸುತ್ತಲೊಂ।
ಮುತ್ತಾಕಾಶ ಕೊಮ್ಮಿಗ ನೋಡುತ್ತ ಸುರಪುರ ದೆಸೆಯ ನೀಕ್ಷಿಸುತ್ತಲು ಮುಂಮೆಯುಂ।
ಶಕ್ತ್ಯಾಖಿಳಾ ಹಾಳಾಹಾಲಾಗ್ನಿಯನುಗುಳುತ್ತ ಮರುತನ ನುಂಗುತ್ತಾ ಯತೀಶಂಗಂ।
ಸುತ್ತೆಂಟು ದಿಕ್ಕಿಂದಂ ಸಿಂದೀಕ್ಷಿಸುತ್ತೆಡಬಲ ಕೊಲೆದು ಭುಜಂಗಂ ಜೃಂಭ ಸುತಿರ್ದುದುಂ॥

2. ಕು (ಅಇ). 3. ತ (ಅಇ). 4. ದಿರರಸನ (ಅಇ).

ಕಂಡೆವೆಂದು ನಿಖಿಲಮಾಹೇಶ್ವರರ್ಕೊಂಡಾಡುತ್ತಂ ಮತ್ತಂ ಭುಜಂಗಕುಲದ ಬಾರಿ ಬರೆ ತನ್ನ ಶರೀರವ ಖಗಪತಿಗಿತ್ತು ಪವನಾಶನ ಪ್ರಾಣವಂ ಪಡೆವ ಜೀಮೂತನಂ ಪಂಚಶತ ಜಿಹ್ಮಗ (?) ಕುಲಂಗಳ ಪ್ರಾಣವಂ ಯಜ್ಞದಿಂ ಪಡೆವ ಕಪ್ರುದೇವಿಯಂ (?) ಸಿದ್ಧ ಲಿಂಗೇಶ್ವರಂಗಂ ಸರಿಯೆಸಲ್ಬಹುದೆ ಎಂದು ಕೊಂಡಾಡುತ್ತಿರೆ ಯತಿಪಂ ಎಡೆಯೂರಂ ಪೊಕ್ಕು ಪೂಜೆಗೊಂಬುತ್ತಿರೆ ಆ ಊರೊಳೊಂದು ಗೃಹಮಂ ಅಗ್ನಿ ದಹಿಸುತ್ತಿರ್ಪಲ್ಲಿ ಮಾರ್ಜಾಲಶಿಶುಗಳ್ ಮೃತವಾಗೆ ಪೆಣ್ಬೆಕ್ಕು ದುಃಖಂಬಡುತ್ತಿರೆ ಆದರ ಮರಿಗಳ್ಗಸುವಿತ್ತಂ ಅದಂ ಭಕ್ತರ್ಕಂಡು ಸೊನ್ನಲಾಪುರದೊಳೊಂದು ಗೃಹಂ ದಹನವಪ್ಪಲ್ಲಿ ಪೆಣ್ಬೆಕ್ಕು ಸಿಕ್ಕಿ ಮೃತವಾಗೆ ಅದರ ಶಿಶುಗಳ್ ದುಃಖಂಬಡುತ್ತಿರೆ ಸಿದ್ಧರಾಮೇಶಂ ಕಂಡು ಆ ಬೆಕ್ಕಿಗಂ ಅಸುವಿತ್ತನೆಂಬರುಪೂರ್ವದಲ್ಲಿ ಈಗ ಸಿದ್ಧಲಿಂಗೇಶ್ವರಂ ಬಿಡಾಲಶಿಶುಗಳ್ಗಸುವಿತ್ತುದಂ ಪ್ರತ್ಯಕ್ಷಂ ಕಂಡೆವೆಂದು ಕೊಂಡಾಡುತ್ತಿರ್ಪ ಸಮಯದಲ್ಲಿ ಹೆಬ್ಬೂರಿಂ ಭಕ್ತರ್ಬಂದು ವಂದನಂಗೈದು ಬಿನ್ನಪಂ ಮಾಡಿ ತಮ್ಮೂರ್ಗೆಬಿಜಯಂಗೈಸಿ ಕೊಂಡೊಯ್ಯೆ ಆ ಊರಲ್ಲಿ ಪೂಜೆಗೊಂಡಿರ್ಪಲ್ಲಿ – ೧೨೫

ಉ. ಮಾ. ವೃ.

ನಾಕದ ಗಂಗೆ ದೇವಗಜ ಬ್ರಹ್ಮನ ಹಂಸೆಯುಪೇಂದ್ರತಾರ್ಕ್ಷ್ಯ ಭೂ-
ಲೋಕದ ಸಿಂಹ ಮುಖ್ಯವಹವರ್ಜುನದ್ರವ್ಯಗಳನ್ನು[1](ಮಾ ಅಧೋ)[1]
ಲೋಕದ ಶಂಖಪಾಲ ಭುಜಗಂಗಳು ಮುಖ್ಯಮದಾದ ಪಾಂಡುರಾ-
ನೀಕದ ದ್ರವ್ಯವೆಲ್ಲ ಗುರುಸಿದ್ಧನ ಕೀರ್ತಿಯ ಸೋಂಕಲಾ[2](ರ)[2]ವುಂ ೧೨೬

ಈಶನ ಲೋಕದಲ್ಲಿ ಗುರುಸಿದ್ಧನ ಕೀರ್ತಿಯ ಕೀರ್ತಿಸುತ್ತಲುಂ
ಕಾಸ್ಯಪ ಲೋಕದಲ್ಲಿ ಗುರುಸಿದ್ಧನ ಕೀರ್ತಿಯ ಕೀರ್ತಿಸುತ್ತಲುಂ
ಕಾಸ್ಯಪಪುತ್ರಲೋಕದೊಳು ಸಿದ್ಧನ ಕೀರ್ತಿಯ ಕೀರ್ತಿಸುತ್ತಲುಂ
ಬೀಸರಹೋಗದಂತಖಿಳರೆಲ್ಲರು ಕೀರ್ತಿಸುತಿರ್ದರಾಗಳುಂ ೧೨೭

ಸಿದ್ಧನಪಾದದಾಣೆಗಳು ಸಿದ್ಧನ ಸುದ್ದಿಯ ಪೇಳ್ವ ಮಾತುಗಳ್
ಸಿದ್ಧನ [3](ವ್ಯೈಮೆ)[3] ಸಿದ್ಧನ ಮಹೋನ್ನ[4](ತಿ)[4] ಸಿದ್ಧನ ಮೂರ್ತಿ ಲೀಲೆಗಳ್
ಸಿದ್ಧನ ಜಾಣ್ಮೆ ಸಿದ್ಧನ ಮೃದೂಕ್ತಿಮತಂ ಗುರುಭಕ್ತಿಯುಕ್ತಿಗಳ್
ಸಿದ್ಧನ ಶಾಂತಿ[5]ದಾ[5]ಂತಿಗಳು ತುಂಬಿಹುದಾವಗ ಮೂರುಲೋಕದೊಳ್ ೧೨೮

---

1. ಪಾತಾಳ (ಅಇ). 2. ದ (ಅಇ). 3. ಮಾತ್ಮೆ (ಅಇ). 4. ತೆ (ಅಇ).
5 ಶಾ (ಇ).

ವ॥ ಮತ್ತಮಾಗಳುಂ

ಉ. ಮಾ. ವೃ.

ಜಂಗಮಲಿಂಗಪೂಜಕರು ಜಂಗಮಪಾ[1]ದ(ದ)[1] ತೀರ್ಥಸೇವಿತ-
ರ್ಜಂಗಮಲಿಂಗಭಾಕ್ತಿಕರು ಜಂಗಮಲಿಂಗದ ಸೇವಸೇವಿತ-
ರ್ಜಂಗಮಲಿಂಗಜೀವನವೇ ಜೀವನವಾಗಿಹ ಯುಕ್ತಯುಕ್ತಿಕ-
ರ್ಜಂಗಮಲಿಂಗನಿಷ್ಠೆಯುತರೆ[2](ಯ್ಬುರು)[2] ಸಿದ್ಧನ ದರ್ಶನಾರ್ಥದಿಂ ೧೨೯

ಕಂ. ಕರಡೆ ಕಂಸಾಳವಾನಕ
[3]ಬುರುಗಿಂದಂ[3] ಕಹಳೆ ವೃಷಭಧ್ವಜ ಚಪ್ಪರದಿಂ
ಬಿರುದಿನ ಕಂಬಿಗಳಿಂದಂ
ಪರುಷೆಯ ಜನವೆ[4]ಯ್ದಿ (ಬೀಡು)[4]ಬಿಟ್ಟತ್ತಾಗಂ ೧೩೦

ಅಂಗಡಿ ಗುಡಿಗೋಪುರದೊಳ್
ಜಂಗಮರ ಮಠಂಗಳೊಳು ತುಂಬಿಂಬು ಸಾಲದೆ
ಅಂಗಡಿಬೀದಿಯ ಬಸವನ
ಮಂಗಲವಹ ಕಂಬದೊತ್ತಿನೊಳ್ಕಿಲ[5](ವಿರ್ಕುಂ)[5] ೧೩೧

ಆ ಪರುಷೆಯೊಳೊರ್ವ[6](ಂಗನೆ)[6]
ಗೋಪತಿನತಶರಣಶೇಷಮುಂ ಕೊಳಲೆಂದುಂ
ರೂಪಿನ ಕದಳೀಫಲಗಳ
[7](ತಾ)[7]ಪರಿಯಾಣದೊಳು ತೀವಿ ತಂದವಳೆಂದಳ್ ೧೩೨

ದೇವನೆ ಗುರುಸಿದ್ಧೇಶನೆ
ಪಾವನಚರಿತಾರ್ಥಯೆನ್ನ ರಕ್ಷಿಸಲೋಸುಗ
ಈವುದು ಪ್ರಸಾದವೆನ್ನ-
ಲಾ ವನಿತೆಗೆ ಶೇಷವಿತ್ತ ಗುರುಸಿದ್ಧೇಶಂ ೧೩೩

[8]ಪ್ರ[8]ಸಾದವನಾ ನಾರಿಯು
ಸೂಸದವೊಲ್ತಂದು ಬಸವಸಿದಿರೊಳ್ಮಡಗಿಯು
ಮೀಶಾರ್ಚನೆ ಮಾಡಿಯು ತಾ
ಶೇಷ[9]ವ(ನಾ)[9]ಸವಿವೆನೆಂದು ಮುಖದೊಳಿವಾಗಲ್ ೧೩೪

1. ದ (ಅಇ). 2. ಯ್ದಿತು (ಅಇ). 3. ಬುರುಸಿಂದಂ (ಅ); ಬರುಸಿಂದಂ (ಇ).
4. ಯ್ದಿ (ಅಇ). 5. ವಿರ್ಪುದೂ (ಅಇ). 6. ನಾರಿಯು (ಅಇ). 7. ರಾ (ಅಇ).
8. ಪ್ರಾ (ಇ). 9. ವ (ಅಇ).

ಕಲ್ಲಿನ ಕಂಬದ ವೃಷಭಂ
ಮೆಲ್ಲನೆಯಾ ನಾರಿ ಕಾಣದಂದದಿ ಶೇಷವ
ಉಲ್ಲಾಸದಿ ಸನಿವೃತ್ತಿರ
ಲೆಲ್ಲವನಾ ನಾರಿ ಕಂಡು ಅಕಟಕಟೆಂದಳ್ ೧೩೫

ಪರಿವಾಣವ ಸೆಳೆಕೊಳ್ಳಲು
ಗುರುಶೇಷವ ಕಲ್ಲಬಸವ ತಾ ಸೆಳಕೊಳ್ಳಲ್ತ-
ಸ್ಕರವೃಷನಿದೆಂದು ಬಯ್ವುತ
ವರ ವೃಷಭನ ಜಿ[1](ಹ್ವಾ)[1]ಶೇಷ ಸೆಳೆವುತಿರ್ದಳ್ ೧೩೬

ಉರು ಕ[2](ರ) ತನ್ನ(ಯ)[2] ಜಿಹ್ವೆಗೆ
ಭರದಿಂದೈದುವುದ ಕಂಡು ವೃಷಭಂ ಬೇಗದಿ
ಗುರುಶೇಷವ ನುಂಗಿಯೆಂದಿನ
ಪರಿಯಲ್ಲಿರುತಿರಲು ನೋಡಿ ಸಿಡಿಮಿಡಿಗೊಂಡಳ್ ೧೩೭

ಬಸವನ [3](ನಿಟ್ಟಿಸಿ)[3] ನೋಡುತ
ಮಿಸುನಿಯ ಪರಿಯಾಣ ಬರಿಯದಿರೆ ಕಾಣುತ್ತಂ
ಹಸನಾ[4](ಯ್ತೆ)[4]ನಗೆ ಶೇಷವೆಂ
ದುಸುರುತ್ತಂ ಸುಯಿದು ಸುಯಿದು ಬಳಲುತ್ತೆಂದಳ್ ೧೩೮

ಕಲುರೂಹಿನ ಬಸವಂಗ-
ಳ್ಗೊಲವಿಂದೆತಿಶೇಷ ಕರ್ಪಣಂಗೊಂಡಿ[5](ರಲಾ)[5]
ಚಲಗ್ರಾಹಕ ಶಿವಭಕ್ತರ್
ಗೆಲವಿಂದೆತಿಶೇಷ ಸಿಕ್ಕೆ ಬಿಡುವರೆಯೆಂದಳ್ ೧೩೯

ಮತ್ತಾ ಗುರುಸಿದ್ಧೇಶಗೆ
ಮತ್ತೇ[6]ಭ[6]ಗಮನೆ ವೃಷಭನ ಹದನಂ ನುಡಿದುಂ
ಮತ್ತೆತಿಶೇಷವ ಪಡೆದುಂ
ಮುಕ್ತಿಪದಂ ತಾನೆಯಾಗಿ ಸುಖದೊಳಗಿರ್ದಳ್ ೧೪೦

---

1. ಹ್ವೆ (ಅಇ). 2. ಕರಕರತನ್ನ (ಅ) ; ಕರಕರತನ್ನ (ಇ). 3. ನೀಕ್ಷಿಸಿ (ಅಇ).
4. ದುವೆ (ಅಇ). 5. ವೆ (ಅ) ; ಡೀ (ಇ). 6. ಭದ (ಅಇ).

ವ|| ಆದಂ ಕಂಡಾಶ್ಚರ್ಯದಿಂ ನಿಖಿಲಭಕ್ತರುಂ ಬಾಹೂರ ಬೊಮ್ಮಯ್ಯಂ ಕಲ್ಲನಂದಿಗೆ ಕಬ್ಬುವೇೞಿಸಿ ತಟಾಕದೊಳ್ ಜಲವಂ ಕುಡಿಸಿದುದಂ ಮತ್ತಂ ಗುಜ್ಜರಾತಿಯ ದೇಶದೊಳ್ ರಾವುತಂ ಬಸವನ ಮುದ್ರೆಯುಂಗುರವಿಕ್ಕಿ ನೃಪನಾಸ್ಥಾನದೊಳ್ ಕುಳಿತಿರೆ ಆ ನೃಪಂ ಉಂಗುರವಲ್ಲಿರ್ಪುದು ಬಸವನಾದರೆ ಖಾಣವ ಮೇಯ ಬೇಕಲಾ ಎನೆ ಉಂಗುರದ ಬಸವಂಗಂ ಖಾಣವಂ ಮೇಯಿಸಿದುದಂ ಪೂರ್ವಪ್ರಸಂಗದೊಳ್ ಕೇಳ್ದಿವುಂ ಈ ಸಿದ್ಧಲಿಂಗೇಶ್ವರನ ಪ್ರಸಾದರೂಪವಾದ ಬಾಳೆಯ ಪಣ್ಗಳಂ ತುಪ್ಪವನುಂ ಕಲ್ಲನಂದಿ ಭಕ್ತಿಯಿಂದ ಸವಿದುದಂ ಪ್ರತ್ಯಕ್ಷಂ ಕಂಡೆವೆಂದು ಕೊಂಡಾಡುತಿರೆಯಿರೆ ಆ ಸಮಯದಲ್ಲಿ ವೃಷಭನಪುರದಿಂ ಭಕ್ತರೆಯ್ದಿ ಯತಿಪತಿಗಂ ವಂದಿಸಿ ತಮ್ಮೂರ್ಗಂ ಬಿಜಯಂಮಾಡವೇಳ್ಕೆಂದು ಭಸಿತಮುಮನಿತ್ತು ಬಿನ್ನಹಂ ಮಾಡಲಂತಾಗಲೆಂದು ಬಂದು ಗೂಳೂರಭಕ್ತರಿಂ ಪೂಜೆಗೊಂಬುತಿರ್ಪಲ್ಲಿ ೧೪೧

ಉ. ಮಾ. ವೃ.

ನಿತ್ಯರು ಸತ್ಯಶಾಂತಿದಯವಂತರು ಭಕ್ತಿಯ ಭಾವಭಾವಕ-
ಮುರ್ಕ್ತಿಗಧೀಶರಂ ಪರಮಶಂಬರದಾರಕ[1](ವೈರಿಕೀರ್ತಕ)[1]
ಮರ್ತ್ಯಕಧೀಶರುಂ ಸಕಲಶಾಸ್ತ್ರವಿಚಾರದ ಪುಣ್ಯಪುಣ್ಯರುಂ
ಸ್ವಸ್ತ್ರದೊಳೆಯ್ದಿತುತ್ತಮರು ಸಿದ್ಧನನೋಳ್ಪೊಡೆ ರಾಜರಾಜರುಂ ೧೪೨

ಭಕ್ತರ ಗೇಹದಲ್ಲಿ ರಜಚೋಹರಿಸುತ್ತಲು ತಂದ ಧಾನ್ಯದೊಳ್
ಭಕ್ತರಿಗಿಕ್ಕುತಿರ್ಪ ರಜಬೋಹರಿ ಲಿಂಗಯುನಿರ್ಪ ಗೇಹದೊಳ್
ಭಕ್ತರು ತಂದು ತಂದು ಬಹುಸಾಧನದ್ರವ್ಯವ ಕೂಡಲಿಕ್ಕಿಯುಂ
ಮತ್ತವರೈದಲಾ ಮನೆಯ ನಾರಿಯು ಚೋರೆಯದೇನನೆಂದಪೆಂ ೧೪೩

ಕಂ. ಯತಿಪತಿಯ ಕುರಿ[2]ತ[2] ಪರ್ವಕೆ
ಜತನದಿ ಮಡಗಿರ್ದ ಸಕಲದ್ರವ್ಯವನಾಗಂ
ಸತಿ ನೋಡಿ ತಾಳಲಾರದೆ
ಚತುರತೆಯಿಂ ಕದ್ದು ಳೊಂದು ಬದನೆಯಕಾಯಂ ೧೪೪

ಇದ ಸುಟ್ಟು ಮೆಲ್ವೆನೆಂಬುತ
ಮುದದಿಂದಾ ಚೋರೆ ನಾರಿಯೊಲೆಯೊಳಗಿಡಲದು
ಮೊದ[3](ಲದು ಇ)[3]ರ್ದಂತಿರ್ದುದು
ಸದರವೆ ಯತಿಗೆಂಪೊಡವೆಯ ಮೆಲುವುದು ಧರೆಯೊಳ್ ೧೪೫

1. ಕೀರ್ತಿ ತೀರ್ಥಕ (ಅ) ; ಕೀರ್ತಿ ತಿರ್ದಕ (ಇ.) 2. ತು (ಅಇ). 3 ಲಂದರ್ಗಂ (ಅಇ).

ಕಳಸಜನಪ್ಪಣೆಯಿಲ್ಲದೆ
ಜಳನಿಧಿಯುಪಕರಣಸುಂಗೆಯುಪಜಯುವಾಃಯಿತು
ಫಲಮಂ ದಹಿಸಿದೊಡೆನ್ನಂ
ಖಳನೆಂದೆತಿ ಹತಿಸುವನೆಂದಂಜುತಲಗ್ನಿಯು ೧೪೬

ಸುಡಲಂಜಿ ಸುಮ್ಮನಿರಲಾ
ಮಡದಿಯುದಂ ತೆಗೆದು ನೋಡಿ ನೆರೆಮನೆಯೊಳಗಿಹ
ಮಡದಿಯರ ಕರೆದುತೋರುತ
ಮಡಗಿದೆನಗ್ನಿಯೊಳಿದು ಬೇಯುದ ಪರಿಯೇ[1](ನಾ)[1] ೧೪೭

ಅಕ್ಕ ಕೇಳಿದಕೆ ಕಿಚ್ಚಂ
ಕಕ್ಕುಲಿತೆಯುದಾಯಿತು ನಮ್ಮ ನೀರೊಲೆಯೊಳಂ
ಚಿಕ್ಕಂ ಇಕ್ಕಿದು ಬೇವುದು
ಇ[2](ಕ್ಕಾ)[2] ಮತ್ತೆರಡು ಕರಿಷ ಕಟ್ಟಿಗೆಗಳನೆನೆ ೧೪೮

[3](ಅಂತಕ್ಕೆಂದಶ್ಮಂತದೊ)[3]
ಳಂತದನಿರಿಸಲ್ಕೆ ದೀರ್ಘವೃಂತಂ ಎಂದಿನ
ಶಾಂತಿಯು ಬಿಡದಿರೆ ಕಾಣುತ
ಲಿಂತೀ ನೀರೊಲೆ ನೀರೊಲೆಯಾಯ್ತಿದಕೆಂದಳ್ ೧೪೯

ನಾರಿಯು[4](ರು)[4] ದುಃಪ್ರದರ್ಶಿಯು
ಸಾರಿಯೆ ನೋಡಲ್ಕೆಸುರುಮರಳುತ್ತಿರಲುಂ (?)
ಗಾರಂ ಸಾಲದುಮೆನುತಂ
ಬೋರುವೆ ಬೆರಣೆಗಳ ತೆಗೆದು ಪಸರಿಸಿ ನೆಲದೊಳ್ ೧೫೦

ಅದರೊಳ್ ವಾರ್ತಾಕಿಯನುಂ
ಹುದುಗಿಯುಮಂತದರ ಮೇಲೆ ಪಸರಿಸಿ ಕರಿಷವ
ಅದರೊಳಗಗ್ನಿಯನುಂ ತಾಂ
ಹುದುಗಲ್ದಹಿಸಿತ್ತುವಗ್ನಿ ಬೆರಣೆಯನೆಲ್ಲಂ ೧೫೧

---

1. ನೆಂದಳ್ (ಅಇ). 2. ಕ್ಕಂ (ಅಇ). 3. ಅಂತಾಗಲೆಂದಶ್ಮಂತದ (ಅಇ).
4. ರಿ (ಅಇ).

ವ|| ಆ ವಾರ್ತಾಕಿಯ ಫಲಂ ಬೇಯದಿರ್ದುದಂ ಕಂಡು ಬೆಕ್ಕಸಂಬಟ್ಟು ಕ್ಕಜಂಗೊಂಡಾ ಕಮಲಾಕ್ಷಿಯರುಂ ಮಹಾಸನದೊಲೆಯೊಳ್ ದ್ವಿಯಾಮಂ ಜ[1](ಲಾ)[1]ಶ್ರಾಂತದೊಳೇಕಯಾಮಂ ಬೆರಣಿಯತಾಳುಬೋರುವೆಯೊಳೇಕಪ್ರಹರಂ ಪಾಕಮಂ ಮಾಡೆ ಬೆರಣಿ ಬೆಂದುವಲ್ಲದೆ ಕಾಯಿಬೆಂದುದಿಲ್ಲಂ ಈ ಫಲವೆಲ್ಲಿಯದೆಂದು ಕೇಳಲು ನೆರೆಯೂರಭಕ್ತರುಂ ಸಿದ್ಧಲಿಂಗನ ಪರ್ವಕ್ಕೆಂದು ತಂದ ಕಾಯ್ಗಳೊಳೊಂದಂ ಬಾಯೊರೆತುಂ ತೆಗೆದೆವೆನಲವರೆಂದರು ೧೫೨

ಕಂ. ಇದ ಸಿದ್ಧಲಿಂಗದೇವ-
ಗೋದವಿಯೆ ತೋರುವೆವುಮೆಂದು ಪರಿವಾಣದೊಳುಂ
ಮುದದಿಂದಿರಿಸಿಯೆ ವಸ್ತ್ರಮ
ನದಕಂ ಪೊದಿ[2]ಸಿ(ಯೆ)[2] ಶೃಂಗರಿಸಿವ[3](ರಾ ಕಾ)[3]ಯಂ ೧೫೩

ಶೋಭನಮಂ ಪಾಡುತ್ತಂ
ಆ ಬದನೆಯ ಕಾಯ ತಂದು ಮಡದಿಯರೆಲ್ಲರು
ಈ ಭುವನದ ರುದ್ರನೆಯಿದ
ಲೋಭಿಸಿ ಲಿಂಗಪನ [4]ಮಡದಿ[4] ಕದ್ದಳುವೆಂದಳ್ ೧೫೪

ಬಂಜೆಯವಳ್ಬಾಯೊರತುಂ
ಸಂಜೆಯು ತನಕಿದನುಮಗ್ನಿಯೊಳ್ ಮಡಗಿರಿಸಲ್
ಮಂಜಾಗಲಗ್ನಿ ಕಾಯಿ[5]ಗೆ[5]
ಅಂಜುತಲಿವಳ್ತಂದಳಿದಕೊ ಫಲವೆಂದೆಂದರ್ ೧೫೫

ಕಂದದು ತೊಟ್ಟಿನ [6]ಕಡೆ[6] ಕ-
ಪ್ಪೊಂಪದು ಪಸುರ್ಗಂದದಿದೆಕೊಯೆನಲೆತಿಯೆಂದಂ
ಬೆಂದ[7](ಪುದೀ)[7] ಫಲವಿವಳ್ಗಂ
ಮುಂದಿದರಿಂ ಸುತನ ಪಡೆವಳೆಂದಂ ಮುದದೊಳ್ ೧೫೬

ಮತ್ತಾ ಕಾಯಂ ದಹಿಸಿಯು
ಭಕ್ತಿಯೊಳುಂ ಮೆಲುಲುಮವಳ್ಗೆ ಗರ್ಭಂ ತೋರಿಯು
ಉತ್ತಮಸುತನಂ ಪೆತ್ತುಂ
ಬಿತ್ತರದಿಂ ಕರೆದಳೆತಿಯಪೆಸರಿಂ ಸುತನಂ ೧೫೭

1. ಲ (ಅಇ). 2. ಸಿ (ಅಇ). 3. ಕಾರ್ (ಅಇ). 4. ಮಾಡಿ (ಅ). 5. ಸೆ (ಇ).
6. x (ಇ). 7. ಹಿದೀ (ಇ).

ವ॥ ಆದಂ ಕಂಡಾಶ್ಚರ್ಯಂಬಟ್ಟು ಸಮಸ್ತಮಾಹೇಶ್ವರರುಂ ಶ್ರೀಪತಿಪಂಡಿತರ ದಸರಿಯ ಸೀರೆಯಂ ಅಗ್ನಿ ಸುಡಲಂಜಿತ್ತುಂ ಶ್ರವಣರು ಕಳುಹಲ್ಪಂದುಂ ತಿರುಜ್ಞಾನ ಸಂಬಂಧಿಗಳಿತ್ತ ಗುಡಿಯ ಹೊರವಳಯದೊಳೊಟ್ಟಿರ್ದ ಚಂದಕತೃಣವಂ ದಹಿಸ ಲಂಜಿತ್ತುಂ ಶ್ರಾವಕರ್ ವಾಗೀಶ್ವರದೇವರ ಕೈಕಾಲ್ಗಳಂ ಕಟ್ಟಿ ಕೆಂಡದ ಕೊಂಡದೊಳ್ ನೂಂಕೆಯಾತನಂ ಪಚನಿಸಲಂಜಿತ್ತುಂ ಶಿವಂ ಸಟ್ಟುಗವಂ ಬಯಲು ಮಾಡಲ್ಕುಡಿವ ಪಾಯಸದೊಳ್ ಕಯ್ಯಿಕ್ಕಿ ತೊಳಸಿದ ಬಾಣಸದ ಭೀಮಯ್ಯನ ಹಸ್ತವ ಮುಟ್ಟ ಲಂಜಿತ್ತುಂ ಉಪ್ಪಗಿರಿಯೊಳ್ ವರದಾನಿರಾಮಯ್ಯಂ ಜೈನರೊಳ್ವಾದಿಸಿ ಬಸವಪುರಾಣದ ಪುಸ್ತಕವಂ ಹುತಹವನೊಳಿಡೆ ಸುಡಲಂಜಿತ್ತುಂ ಮಾಣೂರ ಏಕೋಬಾಹುಯೆಂಬ ಶಿವ ಕವೀಶ್ವರನ ಗೃಹಕಂ ಸುರಿತಾಳಂ ಕಿಚ್ಚನಿಕ್ಕಿಸಿದರೆ ದಹಿಸಲಂಜಿತ್ತುಂ ಎಂದು ಪೂರ್ವ ದಲ್ಲಿ ಪೇಳ್ವುದಂತೆ ಕೇಳ್ದೆವುಂ ಸಿದ್ಧಲಿಂಗನ ಪರ್ವಕ್ಕೆಂದು ತಂದ ಭಾಂಡಾಕಿಫಲಮಂ ಅಪ್ಪಣೆಯಿಲ್ಲದೆ ದಹಿಸಲಂಜಿದುದಂ ಪ್ರತ್ಯಕ್ಷವಾಗಿ ಕಂಡೆವೆಂದು ಕೊಂಡಾಡುತ್ತಿರೆಯಿರೆ ೧೫೮

ಚಂ. ವೃ.

ಪುರಹರಭಕ್ತನೋರ್ವ ಗುರುಸಿದ್ಧಗೆ ಭಕ್ತಿಯೊಳಿತ್ತು ಭೂತಿಯಂ
ಇರುಳೊಳು ತನ್ನ ಗೇಹದೊಳು ಶಂಕರಪೂಜೆಯ ಮಾಡವೇಳ್ಪುವೆಂ
ದುರುಚರಲಿಂಗಮೂರ್ತಿಗಳನೇಕರಿಗೊಂದಿಸಿ ಭಕ್ತಿಯಿಂದಲುಂ
ಕರೆಕರೆತಂದೆತೀಶನ ಸಮೀಪ(ದಿ)[5]ಕುಳ್ಳಿರಿಸಿರ್ದನಾಗಳುಂ ೧೫೯

ಬಹಳ ಯತೀಶರ್ಯೆದಿರಲು ಭೋಜನಪಾತ್ರೆಗಳಾಗವೇಳ್ಕುವೆಂ
ದು ಹವಣಿಸುತ್ತೆ ಭಕ್ತರ ನಿಕೇತನಸಂಚಯಕ್ಕೈದಿಯುಂತವರ್-
ಬಹುಜರ ತಾಗಿಜದ್ದವರ ಗೇಹಕೆ ಗಂಗಳವನ್ನುಕೊಟ್ಟೊಡಂ
ವಹಿಲದೊಳೆಯ್ದಿ ಕೊಲ್ವುದದು ಪಾತ್ರದ ಬೆಂಬಳಿ ಜೀರ್ಣವೆಂಬುವಂ ೧೬೦

ಕೇಳಿದ ನಂಟರಿಲ್ಲೆನಲು ಚಿತ್ತವು ನೋವುದುವೆಂದು ಬಾಗಿಲಂ
ಮಾಳಿಗೆ ಬೀಗಮುದ್ರೆಗಳ ಮುದ್ರಿಸಿಕೊಂಡಿರೆ ಬಂದುಮಾತನುಂ
ಪೌಳಿಯ ಬಾಗಿಲೊತ್ತಿನಲಿ ನಿಲ್ಲುತ ಭಕ್ತರ ನಾಮನಾಮವಂ
ಹೇಳುತ ಕೂಗಿಕೂಗಿ ಕರೆವುತ್ತಿರೆ ಸುಮ್ಮನೆಯಿರ್ದರೆಲ್ಲರುಂ ೧೬೧

---

1. ದಲಿ (ಅಇ).

ಇಂತುಮನೇಕಪೊತ್ತುಮುರೆಪೋಗಲು ಚಿಂತಿಸುತಾತನೈದಿಯುಂ
ಕಂತುಮದಾಪಹಾರ ಗುರುಸಿದ್ಧನೆ ಪಾತ್ರೆಗಳಿಲ್ಲವೊಂದುವುಂ
ಮುಂತಣ ಬಾಗಿಲಿಕ್ಕಿ ಶಿವಭಕ್ತರುಮಿರ್ಪರು ಕೂಗೆಕೇಳರುಂ
ಇಂತಿದಕೇನ ಮಾಳ್ಪೆ ಚರಯೂಥಕೆ ತೃಪ್ತಿಗಳಿಲ್ಲವೆಂದನುಂ ೧೬೨

ಅರ್ಧಮರಾತ್ರೆಯಾಗುತಿದೆಮಿಸ್ಸುವು ಪೋಗಿ ಕವಾಟದೊತ್ತಿನೋ-
ಳ್ಸಾರ್ದದನೊತ್ತಿ ನೂಂಕಿ ಕರೆಯೆಂದೆಸಲಾತನು ಬಂದುಬಾಗಿಲಂ
ಸಾರ್ದಡೆ ಬೀಗಮುದ್ರೆಗಳುಮೆಲ್ಲ ಸಡಿಲ್ತಿರೆ ಪೊಕ್ಕು ಗೇಹದ-
ಲ್ಲಿರ್ದರ ಕಂಡು ಪಾತ್ರೆಗಳ ಬೇಡಲು ಕೊಟ್ಟರು ನಾಚಿವಂದದಿಂ ೧೬೩

ಕಂ. ಮತ್ತೊರ್ವಳ್ ಪಾತ್ರಂಗಳ
ಬಿತ್ತರದಿಂದೌಸಿಕೊಂಡುಮಿಲ್ಲಾಯೆಂದಳ್
ಭಕ್ತಂ ಬಂದಂ ಪ್ರೀತಿಯೊ-
ಳುತ್ತಮಚರಯೂಥಕಿಕ್ಕಿ ಕರುಣವ ಪಡೆದಂ ೧೬೪

ಬಾಗಿಲ ಬೀಗಗಳೆಲ್ಲಂ
ಬೇಗದಿ ಕಳೆಯಲ್ಕೆಯೆಲ್ಲರಚ್ಚರಿವಡುತುಂ
ನಾಗಾಭರಣಂ ತಾನೇ
ಬಾಗಿಲ್ಗಳ ತೆಗೆದನೆಂದರಾ ಭಕ್ತರ್ಕಳ್ ೧೬೫

ಯತಿಪನಭೋಜನಕೆಂಬಾ
ಮಿತಿಯಿಂ ತಳಿಗೆಗಳ ಕೇಳ್ವುದಿಲ್ಲಾಯೆಂದಾ-
ಸತಿಗೃಹದ [1](ಭಾಜ)[1]ನಂಗಳ್
ಸತಿ ಮಡಗಿದಠಾವಿನ[2](ಲಿ)[2]ಯದೃಶಂಗಳಾದುವು ೧೬೬

ವ || ಪ್ರಭಾತಮಾಗಲೊಡಂ ಭಕ್ತರದಂ ಕೇಳ್ದು ಚೋದ್ಯಂಮಸಗಿ ಬಾಗಿಲ್ಗಳ ಬೀಗಂಗಳುಂ ತಮ್ಮ ತಾವೆ ಕಳಲ್ವುದಕ್ಕುಂ ಬೆಕ್ಕಸಂಬಟ್ಟುಂ ಸಿದ್ಧಲಿಂಗೇಶ್ವರನೂಟಂ ತಳುವಾದಪುದೆಂದು ಶಿವಂ ಬಾಗಿಲ್ಗಳಂ ತಾನೆ ತೆಗೆದನೆಂದು ಕೊಂಡಾಡುತ್ತಂ ಮತ್ತಂ ಪರಿಯಾಣಂಗಳಂ ಕೊಡದೆ ಇಲ್ಲಾಯೆಂದಳ ಗೃಹದ ಭಾಜನಂಗಳೆಲ್ಲಂ ಇಲ್ಲವಾಗಿರಲ ದಕ್ಕಂ ಆಶ್ಚರಿಯಂಬಟ್ಟುಂ ತಿರುನೀಲಕಂಠರಲ್ಲಿ ಶಿವಂ ಮಡಗಿದ ಕರ್ಪರಂ ಬಯಲಾ ದಂತೆ ಅಮರನೀತಿಯ ಗೃಹದಲ್ಲಿ ಶಿವಂ ಮಡಗಿದ ಕಚ್ಚುಟಂ ಬಯಲಾದಂತೆ ಗಂಗಳಂ

1. ಭಾಜಿ (ಅ) ; ಬಾಜಿ (ಇ). 2. ಲ್ಲಿ (ಅಇ).

ಬಯಲಾದವೆಂನುಂ ಮತ್ತಂ ಸಮಿಸಂದಿಯೆಂಬಾತಂ ನೀಲಕಂಠಂಗಂ ಘೃತದೀಪ ಸಹಸ್ರ ವ್ರತಮಂ ನಡೆಸುತ್ತಿರ್ಪಲ್ಲಿ ಶ್ರಾವಕರ್ಕಂಡಸಹ್ಯಂಬಟ್ಟುಂ ತುಪ್ಪವಂ ಕ್ರಯಕ್ಕೀಯದಿರೆ ಘೃತಸಹ ಭಾಂಡಂಗಳ್ ಬಯಲಾದುದಂ ಕೇಳ್ದಿವುಂ ಈ ಸಿದ್ಧ ಲಿಂಗೇಶ್ವರಗಸಹ್ಯದಿಂ ಪಾತ್ರಂಗಳಂ ಕೊಡದಿರಲು ಬಯಲಾದುದಂ ಪ್ರತ್ಯಕ್ಷವಾಗಿ ಕಂಡೆವೆಂದು ಕೊಂಡಾಡುತ್ತಿರೆಯಿರೆ ೧೬೭

ಚಂ. ಮಾ. ವೃ.

ಯತಿಪತಿಯೊಂದಿನಂ ಶಿವನನರ್ಚಿಸ ಕಾಲದಿ ಮಲ್ಲನೆಂಬುವಂ
ಹುತವಹನೇತ್ರದೀಶನನು ಪೂಜಿಪೆನೆಂಬುತ ಸಿದ್ಧನೊತ್ತಿಯೊಳ್
ಚತುರತೆಯಿಂದ ಕುಳ್ಳಿತವ ಲಿಂಗವನರ್ಚಿಸುತಿರ್ದ ಕಾಲದೊಳ್
ಯತಿಪನ ತೀರ್ಥವನ್ನುಯೆಡೆಮಾಡುತಲಿರ್ಪುದ ಕಂಡು ಪ್ರೀತಿಯಿಂ ೧೬೮

[1](ಪರಮಯತೀಶನಿಂದೆ ಪರತೀರ್ಥವ ಕೊಳ್ಳುವ ಆಸೆಯಿಂದ ತಾಂ)[1]
ಶರಣೆಸುತಾಗ ಬಟ್ಟಲೊಳು ನೀಡಿಸಿಕೊಂಡದ ಲಿಂಗಪೂಜೆಯಂ
ತ್ವರಿತದಿ ಮಾಡಿಕೊಂಡು ಚರತೀರ್ಥವ ಕೊಂಬೆನುವೆಂಬುತಾಗಲುಂ
ಪುರಹರಪೂಜೆಗೈದುಮುದ ಚೆಲ್ಲಿದ ವಿಸ್ಮೃತಿಯಿಂದ ತೀರ್ಥಮಂ ೧೬೯

ವ್ಯವಹರ[2](ಲೀನ)[2] ಚಿತ್ತದೊಳು ಬೇಗದೊಳಿದ್ದವ ಸಿದ್ಧಲಿಂಗಗಂ
ಜವದೊಳಗೊಂದಿಸ್ಟೈದಿಪನು ಪಂತಿಯು ಜಂಗಮವಾಗ ಕಾಣುತಂ
ಭವಹರತೀರ್ಥಮಜ್ಜನದ ಸಾಲೆಯೊಳಿಟ್ಟರೆಕೊಂಡರಿತ್ತಲುಂ
ವ್ಯವಹರಿಸುತ್ತಿಹಂಗೆ ಬಯಲಾ[3](ಯಿತುವಾಗ)[3]ದು ಲಿಂಗವಾಕ್ಷಣಂ ೧೭೦

ಅಂಬರಮಧ್ಯದಲ್ಲಿ ದಿವಸೇಶ್ವರನಿರ್ಪುದ ಕಾಣುತಾತನುಂ
ಶಂಬರವೈರಿಸಂಹರನ ಪೂಜೆಯ ಮಾಡುವ ಕಾಲವೆಂಬುತಾಂ
ಇಂಬಿನ ಗೇಹಕ್ಕೈದಿ ಚರಣಂಗಳ ಕರ್ಚಿ ಕುಳಿತ್ತು ಸೆಜ್ಜೆಯಾ-
ಜೆಂಬಳಿವಸ್ತ್ರಗ್ರಂಥಿಯನು ಬಿ[4](ಚ್ಚಿದ)[4] ಲಿಂಗವ ಕಾಂಬ ಪ್ರೇಮದಿಂ ೧೭೧

ಸೆಜ್ಜೆಯ ವಸ್ತ್ರದಲ್ಲಿ ಶಿವಲಿಂಗವ ಕಾಣದೆ ಜೀವ ಹಾರಿದೊಲ್
ಜಜ್ಜರಿತಾಂಗನಾಗಿಯುವನೆದ್ದು ಗೃಹಾಂಗಣದಲ್ಲಿ ಬೀದಿಯೊಳ್
ಉಜ್ಜುಗದಿಂದ ಮುನ್ನವೆಡೆಯಾಡಿದ ದಾರಿಯು ಸಂದಿ ಸಂದಿಯೊಳ್
ಸಜ್ಜನನಂತೆ ಲಿಂಗವನು ನೋಡಿಯು ಕಾಣದೆ ಭೀತಿಪಟ್ಟನುಂ ೧೭೨

1. x (ಅಇ). 2. ಪ (ಅಇ). 3. ಗಿರ್ಪು (ಅಇ). 4. ಟ್ಟನು (ಅಇ).

ಕಾಣಿರೆ ಲಿಂಗದೇವರನು ಕಂಡವರಿತ್ತರೆ ಹೊನ್ನನೀವೆನುಂ
ಕಾಣಿರೆ ಲಿಂಗದೇವರನು ಬಿದ್ದುದು ಬೀದಿಯೊಳೆಂಬುತೆಲ್ಲ[1](ರಂ)[1]
ಮಾಣದೆ ಮಲ್ಲಸೆಟ್ಟಿ ಶಿವಲಿಂಗವ ಕೇಳಲು ನೋಡಿ ಬೀದಿಯೊ-
ಳ್ಕಾಣದೆ ಪೋದ ಲಿಂಗವನು ಕಂಡವರೀವುದು ಮೆಂದು ಸಾರಿದರ್ ೧೭೩

ಲಿಂಗವನೆಲ್ಲನೋಡಿಮುದಕಾಣೆವುಮೆಂಬುತ ಪೇಳಲೆಲ್ಲರುಂ
ಲಿಂಗದ ಸೆಜ್ಜೆವಸ್ತ್ರವೊಳವಸ್ತ್ರವುದಾರಮುಮಿರ್ದಲಿಂಗವುಂ
ಹಿಂಗಿದ ಭಾವವೇನೆನುತ ಚಿಂತಿಸಿ ತನ್ನೊಳು ಕಂಡೆನೆಂತೆನಲ್
ಲಿಂಗವನರ್ಚಿಪಾಗಲೆಯು ತೀರ್ಥವು ಬಂಪಡೆ ವೇಳೆಸಪೋದುದಂ ೧೭೪

ಸಿದ್ಧನ ಪಾದಕಂಜಯುಗದೊತ್ತಿಗೆ ಪೋಗಿಯು ದೀರ್ಘದಂಡದೊ-
ಲ್ವಂದಿಸಿ ದೇವದೇವಚರಲಿಂಗವೆ ರಕ್ಷಿಸು ನಿನ್ನ ತೀರ್ಥವುಂ
ಮುಂದಿಹ ಪಾದಶಾಲೆಯೊಳ[2](ಗಿಟ್ಟಿರೆ)[2] ವಿಸ್ಮೃತಿಯಿಂದಲಾಗಳುಂ
ಮಂದಮತಿ[3](ಜ್ಞ)[3]ನಾದೆ ಬಯಲಾ[4](ದುದು)[4] ಲಿಂಗವುಮೆಂದ ಸಿದ್ಧನೊಳ್
೧೭೫

ಕಂ. ತೀರ್ಥವ (ಚೆಲ್ಲಲು) ಲಿಂಗಂ
ವ್ಯರ್ಥಮದಾಯಿತ್ತು ಕೇಳ್ಪುದುದರಪರಾಧಕೆ
ತೀರ್ಥವ ಕೊಂಡಡೆ ನಿನಗಂ
ಅರ್ಥಿಯೊಳುಂ ಬಂದು ಸೆಜ್ಜೆಯೊಳಗಿರುತಿಹು[5](ದುಂ)[5] ೧೭೬

ಎಂದೆನೆ ತೀರ್ಥವನಾಂ ಕೊಂ-
ಬಂದಮದೇನೆನೆ ನೀಂಚೆಲ್ಲಿದ ತೀರ್ಥಮುವೊದ-
ಲೊಂದಿದ ಮಜ್ಜನಸಾಲೆಯೊ-
ಳಂದದಿ ತುಂಬಿದ ತೀರ್ಥವ ಕೇಳು ನೀನೆಂದಂ ೧೭೭

ಯತಿಪನೆಯಾ ತೀರ್ಥವನುಂ
ಪ್ರತಿರಹಿತನೆ ಕೊಂಬೆ ಲಿಂಗಪೂಜೆಯು ಮಾಳ್ಪಿಂ
[6](ಅತನುಹರ)[6]ನ ನೋಡುವೆನೆಂ-
ದತಿಶಯದಿಂ (ವಸ್ತ್ರವಿಡಿಸಲಿ)ರ್ದುದು ಲಿಂಗಂ ೧೭೮

1. ರುಂ (ಅಇ). 2. ಗೆಟ್ಟಿದೆ (ಅಇ). 3. ಗ್ನ (ಅಇ). 4. ದಂ (ಅಇ)
5. ದಂ (ಅಇ). 6. ಹುತವಹನೇತ್ರ (ಅಇ).

ಅದ ಕಂಡು ಚೋದ್ಯ ವಡುತಂ
ಮುದದಿಂ ಶಿವಪೂಜೆಗೈದು ತೀರ್ಥವ ಕೊಂಡಂ
ಇದನರಿದುಮಖಿಲಭಕ್ತರು
ಅದುಭುತದಿಂ ಪೊಗಳುತಿರ್ದರದನೇನೆಂಬೆಂ ೧೭೯

ವ|| ಕೇಶಿರಾಜಂ ತೊರೆಯ ತೀರದೊಳ್ ಕುಳಿತು ಶಿವಾರ್ಚನಂಗೈವುತಿರಲ್ಗರುತ್ಮಂಕೊಂಡೊಯ್ಯೆ ಮರಳಿ ಬರಿಸಿದುದಂ ಕುಲಚ್ಚರೆಯನ ಕರಸ್ಥಲದ ಲಿಂಗವಂ[1]ಗೋ[1]ಪಾಲರು ಕಾಸಾರದೊಳಿಡಲ್ಮರಳಿ ಬರಿಸಿದುದಂ ಪುಷ್ಪದತ್ತಯ್ಯನ ಸಜ್ಜೆಯ ಲಿಂಗಂ ಬಯಲಾಗಿ ಮತ್ತಾತನ ಸ್ತೋತ್ರಕ್ಕಂ ಮೆಚ್ಚಿ ಬಂದುದಂ ದಕ್ಷಿಣಾಪುರದ ಬೇಳೆಯಯ್ಯಗಳುಮನೇ[2](ಕ)[2]ಕಾಲ [3]ಬಿದ್ದೊಡೆದು[3] ಸೀಳಿ[4]ದ (ಲಿಂಗದ)[4] ಹೋಳಕೆಗಳಂ ಒಂದುಗೂಡಿದುದಂ ಪೂರ್ವಪುರಾತನರ ಕಥೆಗಳೊಳಂ ಕೇಳ್ದವುಂ ಇಂತೀ ತೀರ್ಥವಂ ಉದಾಸೀನವಂ ಮಾಡಿದುದರಿಂ ಬಯಲಾದ ಲಿಂಗಪನ ಲಿಂಗಂ ಸಿದ್ಧಲಿಂಗೇಶ್ವರನಿಂ ಬಂದುದಂ ಪ್ರತ್ಯಕ್ಷಂ ಕಂಡೆವೆಂದು ಸಕಲಮಾಹೇಶ್ವರರ್ ಕೊಂಡಾಡುತು ಮಿರೆಯಿರೆ ೧೮೦

ಉ. ಮಾ. ವೃ.

ಮಜ್ಜನಮಾಡವೇಳ್ಕುಮೆಸುತಂ ಶಿವಭಕ್ತರು ಸಿದ್ಧಲಿಂಗಗಂ
ಪ್ರಜ್ವಲಿಸುತ್ತಲಿರ್ಪಘನಭಸ್ಮವ ಮುಂಗಡೆಯಿಕ್ಕಿಯೊತ್ತಿನೊಳ್
ಸಜ್ಜನರೆಲ್ಲ ವಂದಿಸಿಯು ಬಿನ್ನಹ ಮಾಡಲುವೊಪ್ಪಲಾಕ್ಷಣಂ
ಮಜ್ಜನಕೆಂದು ಹಾಲವನು ತಂದರು ಭಕ್ತರದೇನನೆಂದಪೆಂ ೧೮೧

ಸ್ನಾನವ ಮಾಡಲೆಂದು ಜನಸಂಚಯ ವೈ[5]ದಿತು[5] ತೋಪು ದೇಗುಲಂ
ಉನ್ನತ ತಂಪು ತುಂಬಿದ ತಟಾಕದ ತೀರದಿ ಗೋಪುರಂಗಳೊಳ್
ಸನ್ನುತವಾದ ಬಟ್ಟಬಯಲುಂ ಚರಲಿಂಗಗಳಿಪ್ಪ ಗೇಹಗಳ್
ಭಿನ್ನಮದಿಲ್ಲದಂತೆ ಜನ ತೆಕ್ಕನೆ [6]ತೀವಿತು[6] ಭೂಮಿ ಕುಗ್ಗುವೊಲ್ ೧೮೨

ವಿಷ್ಟರದಗ್ರದಲ್ಲಿಯೆತಿ ಕುಳ್ಳಿರೆ ಮಸ್ತಕರಂಧ್ರದಲ್ಲಿಯುಂ
ಶ್ರೇಷ್ಠಮದಪ್ಪ ಹಾಲುವನು ನೀಡಲು ಹೀರುತಲಿರ್ದುದಾಗಲುಂ
ವಿಷ್ಟಪಕದ್ಭುತಂ ಇದೆನುತೆಲ್ಲರು ನೋಡುತ ತಮ್ಮೊಳೆಂದರುಂ
ದೃಷ್ಟಮದಾಗಿ ಆರು ಕೊಳಗಂಗಳ ಹಾಲನು ಹೀರಿತೀಗಳುಂ ೧೮೩

1. x (ಇ). 2. ನೇ (ಅಇ). 3. ಬಿ ದೊಡ್ಡದು (ಅಇ). 4. ದ (ಅಇ).
5. ದಿ (ಇ). 6. ತಿವಿದು (ಇ).

ಸೂರನು ಪಶ್ಚಿಮಾಂಬುಧಿಯ ಸಾರ್ದನು ಶೀತಳಗಾಳಿ ಬಂದುದುಂ
ಕ್ಷೀರವು ಬೇಡ [1](ವಿ)[1]ಸ್ಕ್ಕಿ ಗುರುಸಿದ್ಧಗೆ ಉಷ್ಣದ ನೀರಮಜ್ಜನಂ
ಓರಣಮಾಗಿ ನೀಡಿಮೆಸುತಂ ಶಿವಸಾಸಿರನಾಮ ಪಾಣಿನೀ-
ಚಾರಸುಮಂತ್ರ ರುದ್ರಜಪವೋದುತ ನೀಡಿದರಾಗ [2](ಮಜ್ಜನಂ)[3] ೧೮೪

ವ॥ ಇಂತು ಮಜ್ಜನಕ್ಕೆರೆದು ಮೃದುವಸ್ತ್ರದಿಂದಂಗದ್ರವಮಂ ತೊಡೆದುಂ ಮುತಿನಾರತಿಗಳಂ ಎತ್ತಿ ದುಕೂಲಮಂ ಪೊದಿಸಿ ಶೃಂಗರಿಸಿ ವಾದ್ಯರವಂಗಳಂ ಮೊಳೆಸುತ್ತುಂ ಶೋಭನಂಗಳಂ ಪಾಡಿಸುತಂ ಪಾಠಕಜನಕೊಂಡಾಡೆ ಮತ್ತಂ ಶಿರದ ರಂಧ್ರಕಂ ಭಕ್ತರಾಶ್ಚರ್ಯದಿಂ ವರವಂಡಿದೇವಯ್ಯಂ ಪುಷ್ಪವಂತರುವಲ್ಲಿ ಹಾಸ್ಯವಾಡಿದಡೆ ಕರಂಡದಿಂ ಹೊಡೆವರೊಡೆದ ಮೃಡನ ಮಸ್ತಕವೊ ಅರುಂಧತಿಯನೆತ್ತಿಯುಂ ದರ್ವಿಯಿಂ ಘಾತಿಸಲೊಡೆದ ಹರನ ಶಿರವೊ ಘಂಟಾಕರ್ಣಂ ಕಂಬಿಯಿಂ ತಿವಿದಡೊಡೆದ ನೀಲಕಂಠನ ಮೂರ್ಧ್ನಿಯಿರವೊ ಕರಿಕಾಲಚೋಳನ ಭಟರು ವೇಣುದಂಡದಿಂ ಹೊಡೆದಡೊಡೆದ ಪಶುಪತಿಯ ಮಸ್ತಕದಿರವೊ ಆರ್ಯಮರಾಜ ಕಾಚದಿಂ (?) ತಿವಿಯಲೊಡೆದ ಶಂಕರ ಶೀರ್ಷವೊ ಸತ್ಯಕ್ಕಂ ಸಟ್ಟುಗದಿಂ ಹೊಡೆದೊಡೊಡೆದ ತ್ರಿಲೋಚನನ ಕೃಕಾಟಕದಿರವೊ ಎಂದು ಕೊಂಡಾಡುತ್ತಂ ಮತ್ತಂ ಚಿಪ್ಪರಿಗೆಯ ಭೋಗೇಶ್ವರಲಿಂಗದ ಮಸ್ತಕದೊಳೆರಡು ಪಡಿ ತೈಲವಿಂಗುವುದುಂ ಅದುಂ ಸರಿಯಲ್ಲಂ ಮತ್ತಂ ಸಿದ್ಧರಾಮೇಶ್ವರಂ ತಿರುಮೂಲದೇವಯ್ಯಂ ತುಪ್ಪದರಿಯಮರಾಜಂ ಗೊಲ್ಲಳ ಚಂಡೇಶಂ ಚಿಕ್ಕದೇವಿ ಮುಂತಾದವರಿಂ ಅಮೃತಮಜ್ಜನಮಂ ಕೈಕೊಂಡ ಪರಮೇಶ್ವರನಮಜ್ಜನಕಿಂ ಮಿಗಿಲಾಗಿದ್ದ ಮಜ್ಜನವೆಂದು ಕೊಂಡಾಡುತ್ತಿರೆಯಿರೆ ೧೮೫

ಕಂ. ತುಮಕೂರಿಂದಂ ಭಕ್ತರು
ಕುಮುದಾಕ್ಷಿಯರ್ ಪಾಡುತಿರ್ಪ ಶೋಭನದಿಂದಂ
ಪ್ರಮುದಿತ ಕನ್ನಡಿ ಕಳಶದಿ
ಸುಮನಸವಾದ್ಯಗಳ ರವದಿಯ್ಯೆದಿದರಾಗಂ ೧೮೬

ಯತಿಪತಿಯ ಪದಸರಸಿಜ
ಕ್ಕತಿಶಯದಿಂದೆರಗಿ ಭಸಿತವಂ ಮುಂದಿಟ್ಟು-
ಪ್ರತಿಮನೆಯೆಮ್ಮನು ಸಲ[3](ಹಲು)[3]
ಸಂತಸದಿಂ ಬಿಜೆಮಾಡವೇಳ್ಕುಮೆಂದರ್ನಯದಿಂ ೧೮೭

1. ಲಿಸ್ನುಗು (ಅ); ಲಿಂಗಸುರು (ಇ). 2. ಸ್ನಾನಕ್ಕಂ (ಅಇ). 3. ಹು (ಅಇ).

ಬಿನ್ನಹವಂ ಕೈಕೊಂಡುಂ
ಮನ್ನಿಸುತಂ ಭಕ್ತರುಗಳ ನಗರವ ಪೊಕ್ಕುಂ
ನಿರ್ಣಯದಿಂದಂ ಭಕ್ತಿಯ
ಉನ್ನತವಂ ಕೈಕೊಂಬುತ್ತಿರ್ದುಂ ಮತ್ತಂ ೧೮೮

ತುಮಕೂರ್ಗೆ ತೆಂಕದೆಸೆಯೊಳ್
ಪ್ರಮುದಿತದಿಂ ನೆಲಸಿ ಪೂಜೆಗೊಳ್ಳುತ್ತಿಹ ಬಸವನ
ವಿಮಳಿನ ಗೇಹದೊಳಾಗಂ
ಪ್ರಮಥರ ವಚನಾನುಭಾವಗೋಷ್ಠಿಯೊಳಿರ್ದಂ ೧೮೯

ಆ ಸಮಯದಿ ದರ್ಶನಕೆಂ
ದೋಸರಿಸದೆ ಪೊಡೆವ ಸಕಲವಾದ್ಯರವಕ್ಕಂ
ಆಸೆಗಳು ಬಿದಿರವಾಗಲು
ಸಾಸಿರಸಂಖ್ಯೆಯ ಜನಂಗಳೆಯ್ದಿತ್ತಾಗಂ ೧೯೦

ಭಸಿತದ ಘುಟಿಕೆಗಳಂ ಸಂ-
ತಸದಿಂ ಕಾಣಿಕೆಯನಿತ್ತು ವಂದಿಸುತೆಲ್ಲಂ
ಭಸಿತದ ಘುಟಿಕೆಗೆ ಕೆಯ್ಯಂ
ಸಸಿನದೊಳಾನಲ್ಕೆ ಕೊಡುತಲಿರ್ದನೆತೀಶಂ ೧೯೧

ಜನಸಂಚಯ ತಾವೆಲ್ಲಂ
ಮನದೊಳಗೊಂದೊಂದು ಬಯಕೆಯಂ ಬಯಸುತ್ತಂ
ವಿನಯದಿ ತಮತಮಗೆಂದುಂ
ಘನಭಸಿತವ ಪಿಡಿವುತಿರ್ದರಾ ಸಮಯದೊಳಂ ೧೯೨

ವೈಷ್ಣವನೊರ್ವಂ ಬಂದುಂ
ಉಷ್ಣಾಂಬಕ ಶರಣಕೊಡುವ ಭಸಿತದ ಘುಟಿಕೆಯು
ವಿಷ್ಣು [1](ಮುಖ)[1] ಲಿಂಗವಾದಡೆ
ಕೃಷ್ಣ [2](ನ ವರ್ಜಿಪೆ)[2]ನು ಬಳಿಕ ಭಜಿಸುವೆನಿವನಂ ೧೯೩

---

1. ಮತ (ಅ) ; ಮತ್ತ (ಇ). 2. ತ್ಯಜಿಸು (ಅಇ).

ಎಂದೂಹಿಸಿ ಮನದೊಳಗಂ
ಅಂದಮದಾಗಿರ್ಪ ಭಸಿತಘುಟಿಕೆಗಳೆರಡಂ
ತಂದುಯತಿಯ ಹಸ್ತಕ್ಕಂ
ಮಂದಿಯ ಸಂದಣಿಯ ಬಗಿದು ವಂದಿಸಿ ಕೊಟ್ಟಂ ೧೯೪

ಘುಟಿಕೆಗಳೆರಡಂ ಪಿಡಿದುಂ
ನಿಟಿಲಾಕ್ಷನ ಶರಣನವನಿಗೊಂದುಮನೀಯಲ್
ಪಟುತರ ಲಿಂಗಾಕಾರದಿ
ತಟಿತ್ಕೋಟಿಪ್ರಭೆಯು ಮೀರಿ ತೋರುತಿರ್ದುದು ೧೯೫

ಉರುಲಿಂಗದೇವರೀಯಲು
ಉರಿಲಿಂಗಂ ಪೆದ್ದಣಯ್ಯಗಳ ಕರಕಮಲದಿ
ಉರುತರಕಾಂತಿಗಳೆಸೆವಾ
ಪರಬ್ರಹ್ಮದ ಲಿಂಗ ತೋರುವೊಲ್ ತೋರಿದುದು ೧೯೬

ಅನಿಮಿಷದೇವಯ್ಯಂಗಂ
ವಿನಯದಿ ನಂದೀಶನಿತ್ತ ಲಿಂಗದ ಕಾಂತಿಯು
ಘನದಂತೆ ತೋರುತಿರ್ದುದು
ವಸುವಿಂದೆತಿ ಕೊಟ್ಟ ಭಸಿತ ಲಿಂಗದ ಕಾಂತಿಯು ೧೯೭

ಭರದಿಂ ಚಿಕ್ಕಲೆ ತೆಗೆದುಂ
ಇರದೆ ಶಿವಾಚಾರಿ ಭೀಮರಸರ ಹಸ್ತದು-
ತ್ಕರಲಿಂಗದೊಲು ರಾಜಿಸು
ತಿರುತಿರ್ದುದು ಲಿಂಗವಾಗ ದಾಸನ ಕರದೊಳ್ ೧೯೮

ಮೃಗಯಾ ನೆವದಿಂ ಸಾಸಲ
ಮಿಗೆ ಭೈರವ ಪಿಡಿದ ಲಿಂಗದೊಲ್ ಕಾಂತಿಯು ತಾಂ
ಮಿಗೆ ಪ್ರಜ್ವಲಿಸುತಿರ್ದುದು
ಸುಗುಣಂ ಶಿವಸಿದ್ಧನಿತ್ತ ಭಸಿತದ ಲಿಂಗಂ ೧೯೯

ಕೆರೆಯೊಳು ಪೊಕ್ಕಾ ಮೊಲನಂ
ಬಿರಿಸಿಂದಂ ಪಿಡಿಯಲ್ಕಡುಲಿಂಗಾಕಾರದೊ-
ಳುರೆ ಕಾಟನ ಕರದೊಳಿರ್ಪ
ತೆರದೊಲು ರಾಜಿಸಿತು ಲಿಂಗ ದಾಸನಕರದೊಳ್ ೨೦೦

ವ॥ ಆಪಂ ಕಂಡು ಸಮಸ್ತಮಾಹೇಶ್ವರರಾಶ್ಚರ್ಯದೊಳೊಂದಿವರಾಗಿ ಜೈನ ದೇಸಿಂಗರಾಯಂ ತನ್ನ ಪಟ್ಟದ ರಾಣಿಯಪ್ಪ ಶಿವಭಕ್ತೆ ಸುಗ್ಗಲೆಗಂ ಪೂಚೆಂಡಂ ತೋರಿ ಲಿಂಗಮಂ ಮಾಡೆಂದು ಪರಿಹಾಸದಿಂ ನುಡಿಯಲ್ಕಾನ್ನಗುರು ದಾಸಯ್ಯನಂ ನೆನೆದು ನೋಡಿದಾಗಂ ಚಂದ್ರಕಾಂತದ ಲಿಂಗವಾದುದಂ ಮತ್ತಂ ವನಕೇಳಿಯಲ್ಲಿ ಸೌಂದರಂ ಮುಂದಿರ್ವ ಕುಸುಮಮಂ ಲಿಂಗಾಕಾರಮಂಮಾಡಿ ಪರಪೆಗಿತ್ತುದಂ ದಕ್ಷಿಣಾಪುರದ ಬೇಳೆಯಯ್ಯಂಗಳ್ ವಿರೂಚಿರಾಯನ ಚಾವಡಿಯೊಳಿರ್ಪಲ್ಲಿಯೊರ್ವ ಸೂಳೆ ಮೀನಮಂ ತೋರಿ ಲಿಂಗಮಂ ಮಾಡೆಂಪಡೆ ಚಂದ್ರಕಾಂತದ ಲಿಂಗಮಂ ಮಾಡಿತ್ತುದಂ ಮತ್ತಂ ಬಸವೇಶ್ವರಂ ಸೂ[1]ಳೆ(ಗೆ)[1] ನಿಂಬೆಯ ಹಣ್ಣಂ ಲಿಂಗಮಂ ಮಾಡಿತ್ತುದಂ ಮತ್ತಂ ಬಿಜ್ಜಳನ ಮೋಹಿನಿಯುಂ ಚರಲಿಂಗವಿಟ್ಟ ನಿಂಬಿಯ ಹಣ್ಣಂ ಬಸವೇಶ್ವರಂ ಲಿಂಗಮಂ ಮಾಡಿತ್ತುದಂ ಬಾಹೂರಬೊಮ್ಮಯ್ಯಂ ಯಾವನಾಳ (?) ರಾಶಿಯುಂ ಲಿಂಗಮಂ ಮಾಡಿತ್ತುದಂ ಪೂರ್ವ ಕಥೆಗಳೊಳ್ ಕೇಳ್ದೆವುಂ ಈ ಸಿದ್ಧಲಿಂಗೇಶ್ವರಂ ಭಸಿತಘುಟಿಕೆಯುಂ ಲಿಂಗಮಂ ಮಾಡಿ ವೈಷ್ಣವಗಿತ್ತುದಂ ಪ್ರತ್ಯಕ್ಷಕಂಡೆವೆಂದು ಕೊಂಡಾಡುತ್ತಿರೆಯಿರೆ ಮತ್ತೊಂದು ದಿನದಲ್ಲಿ ೨೦೧

ಭುಜಂಗವಿಜೃಂಭಿತವೃತ್ತ.

ಸಿದ್ಧೇಶಂಗಾ ಊರ[2](ಲ್ಲಿಪ್ಪೊ)[2]ರ್ವಪುರಹರಪದಕಮಲಭಕ್ತೆ ಮಲ್ಲಕನೆಂಬವಳ್
[3](ಎಂ)[3]ವಂತುಂಟಾವಂತಿ[4](ರ್ಪಾ)[4] ತಂ[5](ಡು)[5]ಲವನರುಗೊ[6]ಳಗ(ವನು)[6]
ಮಿಸಲೆಂದು ಮಡಗಿರು-
ತ್ತಿರ್ದುಂ ತನ್ನಾಭೀಷ್ಟಂಗೊಂಡುಂ ಪಡಿಯ ಪಚನಿಸಲವನು ಊಟಮಾಡಲು
ತಂಡುಲಂ
ಇರ್ದ[7](ರ್ದಂತಂ)[7] ಮಾಯಂ ಆಗಲ್ ಹರಕೆಯ [8](ಕರಕರಿಕವ)[8]
ದೇನನೆಂದಪೇನದ್ಭುತಂ ೨೦೨

ಮತ್ತೊಬ್ಬಳ್ಹೆಲ್ಲನ್ನಾನೂರಂ ಗುರುವರಗೆ ಹರಕೆಯೆನುತಿರ್ದುತೊಂದಿನ ಸಂಟನೆಂ-
ಬಾತಂ ಐದಲ್ಕಾಂವೊಂದು ಬೆಲ್ಲವನು [9]ತೆಗೆದು[9] ಬಳಸಲಪೆಲ್ಲ ಶೂನ್ಯಮದಾಗಲುಂ
ಮತ್ತಾ ತಪ್ಪಿಂಗಂ ಎಂಟು[10](ಂ ದೀನರ ?)[10]ವನು ಹರಕೆದೆಗೆ[11](ದು)[11]
ವಾಮಲೋಚನೆ ಭೀತಿಯಿಂ
ಮತ್ತೆಲ್ಲಾ ನಾರೀಯೂಥಂ ಅಂಜುತಲಿಹುದನವರತವದೇನನೆಂದಪೆನದ್ಭುತಂ
೨೦೩

1. ಳಿ (ಅಇ). 2. ಲಿಪ್ಪ (ಅಇ). 3. ಇ (ಅಇ). 4 ರ್ಪ (ಅಇ). 5. ಡು (ಅಇ). 6. ಳವು (ಇ). 7. ರ್ದಾಗಂ (ಅಇ). 8. ಬಿರಿಸನ (ಅಇ). 9. x (ಇ). 10. ದಿನೂರು (ಅಇ). 11. ದಳು (ಅಇ).

ಅಲ್ಲಿ ಪೂರ್ವಂ ಪ್ರಾಭೂಸೆಟ್ಟಿಂಬುವನು ಹರಕೆ[1](ಯನೆತಿ)[1]ಗೆಯೇಳು
ನೂರೆಳೆನೀರ್ಗಳಂ
ಉಲ್ಲಾಸಂಮಿಕ್ಕೊಂದು ಬಾಲಂ ಅಳುತಿರೆ ಕೊಡಲುಮು[2](ವರೊಳಿರ್ಪ)
ನೀರ್ಗಳು[2]ಯಿಂಗಲುಂ
* ಎಲ್ಲಂ ಚೋದ್ಯಂಮಾಡುತ್ತಿರ್ದಾಗಲವನು ಬಿವರುತಲಿ ಭಯಂಗೊಳುತ್ತೆಯೆ
ಮೂವಡಿಂ
ದೆಳ್ನೀರಂ ತಂದಿತ್ತಂ ತಾನಾಯತಿವರಗೆಯದರಿರವನೇನನೆಂದಪೆನದ್ಭುತಂ* ೨೦೪

ಮತ್ತಲ್ಲೊರ್ವಳುಂ ಚೌಳ್ನೀರಂ ಪಡೆಪವ ಚರಕೆಡೆ[3](ಗೊಡುತುಂ ಅದಂ
ಬಿಡುತುಂದಲಂ)[3]
ಮತ್ತಂ ಸೀನೀರಿಂದಂ ತಾಂ ತೀರ್ಥವನು ಪಡೆದು ಮಡಗಲದಾ ಕ್ಷಣಂ
ಬಯಲಾಯಿತುಂ
ಇಂತೀ ಮೂಸೂರ್ಳಂ ತಾಂ ತೀರ್ಥಂ ಬಡೆದು ಪಿಡಿದು ಮಡಗಲು [4](ತೊಟ್ಟನೆ)[4]
ಬಯಲಾಗಲುಂ
ಮತ್ತಂ ತಪ್ಪುಂಟೆಂದು ತಾಂ ತೀರ್ಥವನು [5]ಬಿಡದೆ[5] ಪಡೆದಳದೇನ
ನೆಂದಪೆನದ್ಭುತಂ ೨೦೫

ವ॥ ಆ ವೂರೊಳೊರ್ವ ಶಿವಭಕ್ತಮುದ್ದಪನ ಗೃಹದೊಳೆತೀಂದ್ರಂ ಶಿವಾರ್ಚ ನಂಗೈದು ಪ್ರಸಾದಕುಸುಮಂಗಳಂ ಆ ಮುದ್ದಪನ ವನಿತೆ ಮಾಹೇಶ್ವರರ್ಗೆಲ್ಲಂ ಎರಡೆರಡು ಕುಸುಮಂಗಳಂ ಎಡೆಮಾಡಿ ತನ್ನ ಶಿವಾರ್ಚನೆಗೆಂದು ಕಳಸಿಗೆ ತುಂಬಿ ಪೂವಂ ಮಡಗಲವುಂ ಬಯಲಾಗಿಯೆರಡು ಪುಷ್ಪವಿರಲು ಆಶ್ಚರ್ಯಂಬಟ್ಟಾ ಹವನಂ ಎಲ್ಲಾ ಮಹೇಶ್ವರರ್ಗಂ ಹೇಳಿ ತಪ್ಪುಂಟೆಂದು ಯತೀಶಂಗೆ [6](ಅರುಹಿ ಕ್ಷಮೆಯಂ ಬೇಡಿಯೆಡೆ)[6]ಮಾಡಿಸಿದಳುಂ ಮತ್ತಾ ಊರಲ್ಲೊರ್ವ ಶಿವಭಕ್ತಂ ಸಿದ್ಧಲಿಂಗೇಶಂಗೆಂದು ಕುರಿತ ನೆಲ್ಲವರೆಕಾಯಂ ತಾಂ ಮೆಲುವೆನೆಂದು ಪಾಕವಂಮಾಡೆ ಪಾಕವಾಗದಾದವುಂ ಮತ್ತೊರ್ವಂ ಹೊಲವರೆಯ ಕಾಯಿಗಳುಂ ಸಿದ್ಧಂಗೆಂದು ಕುರಿತವುಂ ತಾಂ ಪಾಕವಂ ಮಾಡಲ್ಬೇಯದಾದವುಂ ಅವಂ ಮೆಲಲು ವಿಷಂಗಳಾದವುಂ ಇಂತನೇಕ ಮಹಾತ್ಮೆಗಳಂ ತೋರುತ್ತಂ ಪೂಜೆಗೊಳುತ್ತಂ ಇರ್ದ ಸಿದ್ಧಲಿಂಗೇಶ್ವರನೊಂದಾನೊಂದು ದಿನದಲ್ಲಿ

1. ದೆಗದೆತಿ (ಅಇ). 2. ವೆಲ್ಲನೀರ್ಗಳುಂ (ಅಇ). * ಯೆಲ್ಲಂ ಚೋದ್ಯಂ ಮಾಡ್ತು ತಿರ್ದಾಗಲವನು ಬೆದರುತ ಭಯಂಗೊಂಡು ಮೂವಡಿಯಾ। ದೆಳೆ ನೀರಂ ತಂದಿತ್ತಂ ತಾಂ ಯೆತಿವರಗೆಯದರಿರವನದನೇನನೆಂದಪೇನದ್ಭುತಂ–ಹೀಗೆ ಛಂದೋಭಂಗಗೊಂಡಿದೆ.
3. x (ಅಇ). 4. ವುಂಬ (ಅಇ). 5. x (ಇ). 6. x (ಅಇ).

ಮತ್ತಂ ವಿಚಿತ್ರಭಿತ್ತಿಯಿಂ ನಾನಾವಿಚಿತ್ರತರಮಾದ ಸೀರೆಗಳ ಚಂದ್ರಾತಪಂಗಳಿಂ ಕಿತ್ತಿಳೆ ನಾರಂಗ ದಾಡಿಮ ಹೊಂಬಾಳೆ ಮೊದಲಾಗಿ ಕಟ್ಟಿರ್ದ ನಾನಾಫಲಂಗಳಿಂ ಸಿಂಗರಂಬೆತ್ತ ಪುರಾಣಮನೋದುವ ಶಿಲಾಮಂಟಪದ ಸಿಂಹಪೀಠಾಗ್ರದೊಳಿಕ್ಕಿದ ಮೃದುಮಧುರ ಹಂಸತೂಳತಲ್ಪದ ಮೇಲೆ ಹರಹಿದ ಜಾತಿಯಲರಗ್ರದೊಳು ಮೂರ್ತಿಗೊಂಡು ಮತ್ತಂ ಎಡಬಲದಲ್ಲಿ ಕುಳಿತ ಮಾಹೇಶ್ವರರ ತಿಂಥಿಣಿಯಿಂ ಪುರಾಣಕಥಾವಿಷಯಂಗಳಂ ಕೇಳಿ ತತ್ಸುಖಾನಂದಮಂ ಪ್ರಸಾದಲಿಂಗಾರ್ಪಣಂಗೈದುತಿರ್ದನದೆಂತೆಂದೊಡೆ ೨೦೬

ಕಂ. ಶಂಕರಗಂ ಪೌರಾಣವ
ಬಿಂಕದೊಳಂ ಪೇಳ್ವ ಮಾಯಿಭಟ್ಟರ ಚರಿತೆಯ
ಶಂಕರ[10]ಲೀಲಾ[10]ಕಥನವ
ಶಂಕರಭಕ್ತರ್ಗೆ ಪೇಳ್ವ ಬಲಹರಿದೇವನ ೨೦೭

ಶಿವನಿಗೆ ಪೌರಾಣವನುಂ
ಅವಿರತ ಕೇಳಿಸುವ ಮಾಯಿದೇವನ ಚರಿತೆಯ
ಶಿವಭಕ್ತ ನಾರಿಯರಿಗಂ
ಶಿವಪೌರಾಣಗಳ ಪೇಳ್ವ ಮಾಯಿಯ ಕಥನವ ೨೦೮

ಪೌರಾತನರ ಕಥೆಗಳನುಂ
ಪೌರಾತರ ನಾರಿಯರ್ಗೆ ಪೇಳುವ ಪ್ರೀತಿಯ
ಪೌರಾತರ ರೆಬ್ಬವ್ವೆಯ
ಪಾರಿಯ ಚರಿತೆಗಳ ಕೇಳುತಿರ್ದನೆತೀಶಂ ೨೦೯

ವ॥ ಅದಂ ಕೇಳುತಿರ್ಪಲ್ಲಿ

ಚಂ. ಮಾ. ವೃ.
ದಿನಮಣಿಪಶ್ಚಿಮಾಂಬುಧಿಯ ಸಾರಲುತಾವರೆ ನೋವುಪೊತ್ತಲುಂ
ವಿನಯದಿ ನಾಗರೀಕಜನ ಸಿಂಗರಿಸುತ್ತಿಹ ಪೊತ್ತು ಪಂಚಬಾ-
ಣನು ಕರಿಗಬ್ಬುವಿಲ್ಲಗೊಲೆಗೈಯುವಪೊತ್ತು ರಥಾಂಗ ಸಂಚಯಂ
ದಿನಪನ ನೋಡಿ ದುಃಖಿಸುವ ಪೊತ್ತುರು ತಂಪಿನ ಪೊತ್ತುಮಿರ್ದುದುಂ ೨೧೦

1. ವಿಲಾಸ (ಇ).

ಖಗಗಳು ವೃಕ್ಷಕೋಟರಸಮೂಹವ ಸಾರೆ ಮನುಷ್ಯಸಂಕುಲಂ
ನಗರಸಮೂಹವಂ ಜವದಿ ಸಾರೆ ಪಶುವ್ರಜ ಸಾರೆಯೂರುಮಂ
ಮೃಗಕುಲದಿಕ್ಕೆ ಸಂಚಯುವ ಸಾರೆ ತಮಂಥವು ಸಾರೆ ಪಶ್ಚಿಮಾ-
ನಗಶಿಖರಾಗ್ರಮಂ ದಿನಪ ಸಾರಲು ಸಾರಿಯದಾಯ್ತು ಮಾ ದಿನಂ ೨೧೧

ಉ. ಮಾ. ವೃ.

ಪಶ್ಚಿಮನಾರಿ ನೋಳ್ಪ ಮಣಿದರ್ಪಣಮೋ ಸುರರುಂಬ ರತ್ನದಾ
ಮೆಚ್ಚಿನ ಪಾತ್ರೆಯೋ ಪವಳಹೆಜ್ಜೊಡರೋ ಸಿರಿದೇವಿ ಹಸ್ತದಾ
ನಿಚ್ಚಟರತ್ನಕಂದುಕವೊ [1](ತಾಸು)[1]ರುಗೇಂದ್ರಫಣಾಸುರತ್ನವೋ
ಹೆಚ್ಚಿರಥಾಂಗದುಃಖದುರಿಯೋಯೆನಲೊಪ್ಪಿತುಮರ್ಕಬಿಂಬವುಂ ೨೧೨

ಕಂ. ಅರೆಮುಗಿವುತ್ತಿರಲ[2](ಂಬುಜ)[2]
ಅರೆವಿರಿವುತ್ತಿರಲು ಕುಮುದಮಾ ಸಮಯದೊಳುಂ
ಅರೆಮೈವನ[3](ಧಿ)[3]ಯೊಳಿಳಿದಂ
ಅರೆಯಾಗಿಯೆ ತೋರುತಿರ್ದ ಪಶ್ಚಿಮದಿಸೆಯೊಳ್ ೨೧೩

ಕೆಂಬೆಳಗಿಂ ಮುಳುಗುತ್ತಿರ
ಲಂಬರವುಂ ಸಂಜೆ ಮುಳುಗುತಿರೆ ತಂಬೆಲದಿಂ
ಮಬ್ಬಿಂ ಮುಳುಗುತ್ತಿರೆ ಧರೆ
ಇಂಬಿಂ ಧರೆಯಾರೆಯಾಗಿ ಮುಳುಗುತ್ತಿರ್ದಂ ೨೧೪

ಕೋಕಂಗ[4](ಳ್ಬಹು)[4]ದುಃಖದಿ
ಘೂಂಕಗಳ್ ದೃಷ್ಟಿಹರುಷದಿಂದಂ ಮುಳುಗ-
ಲ್ಲೋಕಂಗಳು ಮುಳುಗೆ ನಿಸಿಯೊ-
ಲ್ಲೋಕಾಕ್ಷ(ನಪರಾ)ಬ್ಧಿಯೊಳ್ಮುಳುಗಿದನಾಗಳ್ ೨೧೫

ಮುಗಿವಬುಜವ ಕಾಣುತ್ತಂ
ನಗುವಂತರಳಿದವು ಕುಮುದಕುಲಮಾ ಸಮಯದಿ
ಮಿಗೆ ದುಗುಡದಿ [5](ಕೋಕಿಗಳುಂ)[5]
ಪಗಲಾಣ್ಮನ ನೆನೆದು ಬಳಲುತಿರ್ದ[6](ವು ಸತತಂ)[6] ೨೧೬

1. ಉ (ಅ೩). 2. ಜ್ಜಜಂ (ಅ೩). 3. ದೊ (ಅ೩.) 4. ಮುಳುಗಲ್ (ಅ೩).
5. ಚಕ್ರವಾಕಂ (ಅ೩). 6. ವು (ಅ೩).

ಶಾ. ವಿ. ವೃ.

ಸರ್ವೇಶಂ ನೆಲಸಿರ್ಪ ಗೇಹಗಳೊಳಂ ಸಂಧ್ಯಾಸಮುದ್ಭೂತ[1](ಸಂ-)
ಧ್ಯಾವೀಣಾ[1]ಡಮರುಂ ಮೃದಂಗ ಬುರುಗುಂ ವಾಸಾರಿ ಭೋರೀನಿನಾ-
ದೊರ್ವಿಂ ವಾರವಧೂಜನಾನಿಕರಗೀತಾದ್ಯಪ್ರಣಾಟ್ಯೋರ್ತಿತಾ-
ಸರ್ವಾಲಂಕರಣಾದಿ ಸಿಂಜಿನಿರವಂ ಪೊಣ್ಮಿತ್ತುಮಾ ಸಂಜೆಯೊಳ್ ೨೧೭

ಕಂ. ವೀರೇಶ ದಕ್ಷಯಜ್ಞಾದಿ
ಸೂರನ ಶರಿರವನು ತರಿಯೆ ಕಿರಣಗಳೆಲ್ಲಂ
ಊರಂ ಪೊಕ್ಕಡಗಿಪ್ಪೊಲ್
ಸೇರಿರ್ದವು ಪಲವು ದೀಪವಾ ಮನೆಮನೆಯೊಳ್ ೨೧೮

ಕಪ್ಪಿನ ಸೀರೆಗೆ ಮುತ್ತಂ
ತಪ್ಪದೆ ಸೇರಿಸಿದ ತೆರದಿಯಾಕಾಶದೊಳುಂ
ಇಪ್ಪವುಮುಡುಗಣತತಿಗಳ-
ವೊಪ್ಪವನೇನೆಂಬೆನವರ ಬಹಳೋನ್ನತಿಯಂ ೨೧೯

ದಿನನಾರಿಯ ಕಂದರದೊಳ್
ಮಿನುಗುವ ಮೌಕ್ತಿಕದ ಹಾರಮಂ ದಿವಸೇಶಂ
ವಿನಯದಿ ಪರಿದಡೆ ಕೆದರಿಯು
ಮಿನುಗುವ ಮುತ್ತುಗಳ ತೆರದಿ ಭಗಣಗಳೆಸೆಗುಂ ೨೨೦

ಬ್ರಹ್ಮಾಂಡವೆಂಬ ಚೀರದಿ
ಬ್ರಹ್ಮಂ ಕತ್ತುರಿಯು ಪುಡಿಯು ತುಂಬಿದನೆಂಬೊಲ್
ಬ್ರಹಾಂಡದೊಳುಂ ತುಂಬಿಹ
ಹೆಮ್ಮೆಯು ತಮದಿರವ ನಾನದೇನೆಂದುಸುರ್ವೆಂ ೨೨೧

ಪರಶಿವನ ಘೋರಮೂರ್ತಿಯ
ಶರಿರದ ಸುಚ್ಛಾಯೆ ಲೋಕಮಂ ತುಂಬಿದವೊಲ್
ಧರೆಯೊಳ್ ಕಿಕ್ಕಿರಿಗಿರಿದುಂ
ಉರುತರದಿಂ ತೀವಿತಾಗ ತಮದಶದಿಸೆಯೊಳ್ ೨೨೨

---

1. ಸಂಧ್ಯಾವೀಣಾ (ಅಇ).

ಜಾರರಿಗಂ ಚೋರರಿಗನು-
ಸಾರಿಯು ತಾನಾಗಿ ಬ್ರಹ್ಮ ತಮವಂ ಸೃಜಿಸಿಯು
ಧಾರುಣಿಯೊಳ್ ತೀವಿದ ವೋಲ್
ಘೋರಾಂಧಂ ತುಂಬಿತದರಯಿರವತಿಚೋದ್ಯಂ ೨೨೩

ವ॥ ಮತ್ತಮಾ ವೇಳೆಯಲ್ಲಿ ಜಾರಚೋರರಂ ವರ್ಣಿಸಬಾರದದೆಂತೆಂದೊಡೆ ಪುಷ್ಕಳಿ ಸೌಂಡಕರುಂ ಭಾವಕಿಮೋಟರುಂ ಯಶೋಧರನಾರಿ ಕೃಷ್ಣಗೋವರುಂ ಮತ್ತಂ ಕೀಚಕ ರಾವಣ ಶೂದ್ರಿಕ ವೀರಾದಿಗಳ್ಕಿಟ್ಟುದರಿಂ ವರ್ಣಿಸಬಾರದು ಸಿದ್ಧ ಲಿಂಗೇಶ್ವರಂ ಶಿವಾರ್ಚನೆಗೆಯ್ವ ಪೊತ್ತಿನೊಳುಂ ೨೨೪

ಕಂ. ಮೂಡಣದಿಕ್ಕೆಂಪೇರ-
ಲ್ಕೋಡಿತು ತಮ ದೆಸೆದೆಸೆಗೆ ಮಿಗೆ ಪಸರಿಸೆಜೊನ್ನ
ಕೂಡೆ ಚ[1](ಕೋರಂ ನಲಿಯ)[1]-
ಲ್ಗಾಢದಿ ನೆರೆ ತೋರಿತಾಗ ಚಂದ್ರನ ಬಿಂಬಂ ೨೨೫

ಯತಿ[2](ಶ)[2]ಗೆ ಪೂಮಳೆಗರೆವುದ
ನತಿಶಯದಿಂ ನೋಡ ಬಂದನೆಂಬೊಲ್ ಚಂದ್ರಂ
*ವಿತತಹಿಮಾಂಶುವನುಂ ಕೆದ
ರುತ್ತೈದಿದನಿಂದ್ರಾದಿಯ ಸಿಂಹಾಸನಕಂ* ೨೨೬

ಉ. ಮಾ. ವೃ.
ಪೂರ್ವದಿಶಾಂಗನಾಕರದರತ್ನದಕಂದುಕವೋ ವಿನೋದದಿಂ
ಶಾರ್ವರಿನಾರಿ ಕಂಧರದಿ ಕಟ್ಟಿದ ರತ್ನದ ದೊಡ್ಡ ತಾಲಿಯೋ
ಪಾರ್ವತಿ ನೋಡುತಿರ್ಪ ವರರತ್ನದ ದರ್ಪಣವೋ ಅಮರ್ತ್ಯರುಂ
ಉರ್ವಿಗೆ ತೋರ್ಪ ರತ್ನಘಟವೋಯೆನಲೊಪ್ಪಿತು ಚಂದ್ರಬಿಂಬವುಂ ೨೨೭

ಕಂ. ಕಮಲನ ಕಮಲಂ ಸೋಂಕ-
ಲ್ಕಮಲಂಗಳ್ಕುಮುದಮಾಗೆ ಕಮಲಗಳೆಲ್ಲಂ
ಕಮಲಕೆ ನಲಿವುತ್ತಿರಲಾ-
ಕಮಲಾಂಕಂ ಕಮಲಗಳನಂ ಕೆದರುತಿರ್ದವು ೨೨೮

---

1. ತುದೋನ್ನರಿಸು (ಅಇ). 2. ಪತಿ (ಅಇ.) * ಈ ಪದ್ಯ ಮೂಲದಲ್ಲಿ ಈ ಕೆಳಗಿನಂತಿದೆ–ವಿತತಹಿಮಾಂಶುವ ಕೆದನು-1 ರ್ತ ತುಳದೊಳ್ಪಡಿದಸಿಂದ್ರದಿ ಸಿಂಹಾ ಸನಕ್ಕಂ (ಅಇ).

ಉ. ಮಾ. ವೃ.

ಅಂಬರಭೂಮಿಯಲ್ಲಿ ಘನಶಂಕರಮೂರ್ತಿಯ ಕಾಂತಿ ತುಂಬಿತೋ
ಶಂಬರವೈರಿವೈರಿಯುಹ ಸಿಪ್ಪ[1](ನ ಅಂಗದಭೂತಿ)[1]ಕಾಂತಿಯೋ
ಅಂಬಿಕೆ ಕೊಟ್ಟ ಮೌಕ್ತಿಕದ ಮಂಡನಕಾಂತಿಯ ಪೊತ್ತ ತೀವಿತೋ
ಯೊಂಬೊಲು ಸಾಂದ್ರಚಂದ್ರಿಕೆ ವಿರಾಜಿಸಿತಾಗಲದೇನನೆಂದಪೆಂ ೨೨೯

*ಅಂಬರಶಂಬರವ್ಯಾಕರಮುಂ ಮಕರಾನಿಮಿಷಾಳಿಯಾಳಿಯಿಂ
ಬೆಂಬಳಿ ಕರ್ಕಟಂ ಚರಿಪಕರ್ಕಟ ರಂಜಿಪುದುಂ ಗೃಹಂಗೃಹಂ
ಯಿಂಬಿನ ಶಾರದಂ ಮಿಸುಪ ಶಾರದಮುಜ್ವಲಮಾದ ಜ್ಯೋತ್ಸ್ನೆಯುಂ
ತುಂಬಿದ ದುಗ್ಧಸಾಗರವೊಲಿರ್ದುದು ವೀಚಿಯ ವೀಚಿಯಂದದಿಂ* (?) ೨೩೦

ದಕ್ಷನ ಜನ್ನಶಾಲೆಯೊಳು ಭದ್ರನುಪೊದ್ದಡೆ ಕಂದುಕಟ್ಟಿತೋ
ಯಕ್ಷರು ಸಿಂಧುವಂ ಮಥಿಪ ಕಾಲದೊಳೊತ್ತಲು ಕಂದು ನಿಂದುದೋ
ತಕ್ಷಕ ತೋಡಿತಿಂದು ಘನಹಾಲುವ ಕಾರಲು ನಿಂದಿತೆಂಬೊಲುಂ
ಈಕ್ಷಿಸ ಮರ್ತ್ಯಸಂಚಯಕೆ ಚಂದ್ರನ ವಕ್ಷ ಕಳಂಕ ತೋರಿತುಂ ೨೩೧

ಕಂ. ಬೆ[2](ಳ್ತಿ)[2]ಂಗಳೆಂಬಬುಧಿಯಂ
ಉತ್ತರಿಸಲು ಚಂದ್ರ ಕುಳಿತ ಹರಿಗೋಲೆಂಬೊಲ್
ಸುತ್ತಿದಪರಿವೇಷಂ ತಾಂ
ಬಿತ್ತರದಿಂ ತೋರುತಿರ್ಕು ಗಗನಾಂಗಣದೊಳ್ ೨೩೨

ಆ ಸಮಯದಿಯಾವೂರೊಳ-
ಗೀಶನ ಪೂಜಕನು ಹಲಗಿಸೆಟ್ಟಿಯೆಂದೆಂಬುವ
ಭಾಸುರಭಸಿತವ ತಂದುಂ
ಈಶನ ಪೂಜಿಪಡೆ ಮುದದೊಳಿತ್ತಂ ಯತಿಗಂ ೨೩೩

---

1. ವಘುಧೂಳಿತ (ಅಇ).

* ಈ ಪದ್ಯ ಎರಡೂ ಪ್ರತಿಗಳಲ್ಲಿ ಈ ಕೆಳಗಿನಂತಿದ್ದು ಸರಿಯಾಗಿ ಅರ್ಥವಾಗುತ್ತಿಲ್ಲ.
ಅಂಬರ ಶಂಬರವ್ಯಾಕರಮು ಮಕರಾ ನಿಮಿಷಾಳಿಯ।
ಬೆಂಬಳಿಕರ್ಕಟಂ ಚೆರಿಪ ಕರ್ಕಟರಂಜಿಪ ತುಗೃಹಂಗೃಹಂ।
ಯಿಂಬಿನ ಸಾರದಂ ಮಿಸುವಸಾರದ ಮುಜ್ಯಮುಸುಜ್ಯತ್ಸ್ನಿಮು।
ತುಂಬಿದ ದುಗ್ಧಸಾರವೊಲಿಮುರ್ದು ವಿಜೆಯ ವಿಜೆಯುಂ ಪಲುಂ॥

2. ತ್ತಿ (ಅ).

ಪೌರಾಣಗೋಷ್ಠಿ ಮುಗಿದುಂ
ಮಾರಾರಿಯ ಪೂಜೆಗೆಂದುಮಯೆದಾ ಕ್ಷಣದೊಳ್
ಓರಂತೆ ಮುಂದೆ ಪಿಡಿದಿಹ
ಚಾರುಪಲಕ್ಕಿಯೊಳು ಕುಳಿತು ಬರುತಿಪ್ಪಾಗಂ ೨೩೪

ವ॥ ಯಮುನರಸಿಯುಂ ರವಿಸಿದ ಪಾತಕಮಂ ಪರಿಹರಿಸವೇಳ್ಕೆಂದಗ್ನಿದೇವಂ ಬಂದು ಪಲವು ದೀಪಾಕಾರಂಗಳಂ ತಾಳ್ದು ಸಿದ್ಧಲಿಂಗೇಶ್ವರನೋಲೈಸುತಿರ್ದಪನೋ ಎಂಬಂತೆ ಎಡಬಲದಿ ಪ್ರಜ್ವಲಿಸುತಿರ್ಪ ಪಲವು ದೀವಟಿಗೆಗಳಂ ಪಿಡಿದ ಭಕ್ತಜನ ಸಂದೋಹಂಗಳಿಂ ಸ್ತ್ರೀಯರೆಲ್ಲರೊಳ್ಳಮಪ್ರೀತಿಯಿಲ್ಲದುದರಿಂ ಕ್ಷಯರೋಗವಡೆಗೊಳಲದಂ ಪರಿಹರಿಸವೇಳ್ಕೆಂದು ತನ್ನ ಕಿರಣವ್ರಜಂಗಳಿಂ ಚಂದ್ರಂದ್ವಿರೂಪಿಂ ಭಜಿಸುತಿರ್ದಪನೆಂಬಂತೆ ನವರತ್ನಖಚಿತಸುವರ್ಣದಂಡಂಗಳಿಂ ರಮ್ಯವಾದುಭಯಚಾಮರಗಳಿಂ ಢಾಳಿಸುವ ಭಕ್ತಕನ್ನಿಕೆಯರಿಂ ದಕ್ಷಯಜ್ಞದೊಳ್ ವೀರೇಶ್ವರನಿಂದಾದ ತೊಡೆಯ ನೋವಂ ಪರಿಹರಿಸವೇಳ್ಕೆಂದು ವಾಯುದೇವಂ ಬಂದು ವ್ಯಜನಮಂ ಪಿಡಿದೋಲೈಸುತಿರ್ದಪನೊಯೆಂಬಂತೆ ನವರತ್ನಖಚಿತತಾಲವೃಂದಂಗಳಂ ಪಿಡಿದು ಬಪ್ಪ ಭಕ್ತಕುವರನಿವಹಂಗಳಿಂದಂ ಮತ್ತಂ ಶಂಖಭೇರಿಕಂಸಾಳಕಹಳೆತಿತ್ತಿರಿವೌರಿಬುರುಂಗುಬೊಂಬುಲಿಮಾನಕ ಪಟಹಡೌಡೆವಾಸಾದಿವಾದ್ಯರವಂಗಳ್ಗೆ ದಶದಿಸೆಗಳ್ ಕಿವುಡಾಗುತ್ತಿರೆ ಮತ್ತಂ ಪೊಗಳ್ವ ವಂದಿಗಳ ನಿನಾದಸಂದಣಿಯಿಂ ಸಿದ್ಧಲಿಂಗೇಶ್ವರಂಬಂದು ಸರ್ವಮಾಹೇಶ್ವರರ್ಸಹಂ ಪಾದಾರ್ಚನೆಯ ಮಾಡಿಸಿಕೊಂಡುಂ ನಾನಾವಿಚಿತ್ರತರ ಪಟ್ಟವಸ್ತ್ರಂಗಳಿಂದಂ ಮೇಲ್ಕಟ್ಟುಕಟ್ಟಿ ನವರತ್ನಕುಚ್ಚುಗಳಿಂ ಜಲ್ಲಿಗಳಿಂ ಪೊಂಬಾಳೆಗಳ್ಮೊಂತಾದ ಪುಷ್ಪಜಲ್ಲರಿಗಳಿಂ ಕಿತ್ತಳೆ ನಾರಂಗ ದಾಡಿಮಾದಿ ಫಲಂಗಳಿಂ ರಂಜಿತಮಾದ ಶಿವಪೂಜಾಗೃಹದೊಳಿಕ್ಕಿರ್ದ ಮೃದುಮಧುರ ಗದ್ದುಗೆಯೊಳ್ಮೂರ್ತಿಗೊಂಡು ಮತ್ತಂ ಎಡಬಲದ ಗದ್ದುಗೆಯೊಳ್ಕಿಕ್ಕಿರಿದು ಕುಳ್ಳಿರ್ದ ಚರಲಿಂಗಂಗಳ ತಿಂತಿಣಿಯುಂ ನೋಡಿ ಹರುಷಂದಾಳುತ್ತಂ ಮತ್ತಂ ಷಟ್ಸಮ್ಮಾರ್ಜನೆಯುಂ ಎಸಗಿಯುದರನ್ನದಿ ಮೌಕ್ತಿಕ ಚೂರ್ಣದಿಂ ವಿಚಿತ್ರಕಳಿತಕಮಲಬಂಧಮುದ್ರಾದಿಗಳಂ ರಚಿಸಿ ಪೂತೋದಕಂತೀವಿರ್ದ ರತ್ನಕಲಶಮನಿರಿಸಿ ಹಸ್ತೋದಕವಟ್ಟಲಂ ಶೀತೋದಕಮುಷ್ಣೋದಕಂಗಳಂ ಇರಿಸಿ ಪ್ರಜ್ವಲಿಪುಭಯಕರ್ಪೂರದೀಪಂಗಳಂ ಇರಿಸಿ ರಜತವಡ್ಡಣಿಗೆಯುಗ್ರದೊಳು ರಂಜಿಪ ಭವ್ಯರ್ಪರಿವಾಣದೊಳಿರ್ಪ ಗಂಧೋದಕ ಪುಷ್ಪೋದಕ ರತ್ನೋದಕ ಅರ್ಘ್ಯಪಾದ್ಯಾಚಮನಾದಿಯಾದ ದ್ರವ್ಯಂಗಳಂ ವಿವಿಧಗೋಕರ್ಣಾಕಾರರತ್ನಚಷಕಂಗಳಿಂ ಮತ್ತಂ ಪಂಚಾಮೃತ ಪಂಚಗವ್ಯಾದಿಗಳಿಂ ಗಂಧಪುಷ್ಪಾಕ್ಷತೆಧೂಪದೀಪ ನೀರಾಜನನೈವೇದ್ಯತಾಂಬೂಲಛತ್ರಚಾಮರವ್ಯಜನಘಂಟೆದರ್ಪಣಶಂಖುಮುಂತಾದುಪಕರಣಂಗಳಿಂ ರಮ್ಯಮಾಗಿ ರಾರಾಜಿಸುತ್ತಿರೆ ಶಿವಾರ್ಚನಂಗೈವುತಿರ್ದನದೆಂತೆಂದೊಡೆ. ೨೩೫

ಕಂ. ಭೂತಿ ರುದ್ರಾಕ್ಷೆಯ ತಾಳ್ದು
ಪ್ರೀತಿಯೊಳುಂ ಮಂತ್ರ ಜಪಿಸಿ ಭೂತೇಶ್ವರನಂ
ಆಂತು ಕರಕಮಲದೊಳಗಂ
ಆತುರದಿಂ ಭಜಿಸುತಿರ್ದನೆತಿವರನಾಗಂ ೨೩೬

ಲಿಂಗವ ನೋಡುತ್ತಂ ತ-
ನ್ನಂಗವನಡಗಿಸುತ ಭಜಿಸಿ ತಡಬಡಗೊಳುತುಂ
ಲಿಂಗಕೆ ಮಜ್ಜನಕೆರೆವುದ
ಹಿಂಗಿಯೆ ಶ್ರೀಖಂಡಪಿಂಡವಿಕ್ಕಿದನಾಗಳ್ ೨೩೭

ಮತ್ತಂ ಪಂಚಾಮೃತಮಂ
ವ್ಯಕ್ತಮದಾಗಿರ್ಪ ಪಂಚಗವ್ಯಸ್ನಾನವ
ಬಿತ್ತರದಿಂದೆರೆದಕ್ಷತೆ
ಸ್ವಸ್ತ್ರದೊಳಿಡುತಿರ್ದ ಶಿವನ ಗೋಮುಖದೆಡೆಯೊಳ್ ೨೩೮

ತಾಂಬೂಲವನರ್ಪಿಸಿದಾ-
ಬೆಂಬಳಿ ನೈವೇದ್ಯವಿಡುತ ಮಜ್ಜನಕೆರೆದುಂ
ಅಂಬಕತ್ರಯನಂ ಭಜಿಸುತ
ಲಂಬಿಂದಿರುತಿರ್ದನೆತಿಪನಾ ಸಮಯದೊಳುಂ ೨೩೯

ದ್ರೋಣಕುಸುಮಗಳ ವೃಷ್ಟಿಯು
ಹೂಣಿಯು ಬಿರುವಳೆಯು ಮಲರ ಸರಿವಳೆ ಮತ್ತಾ
ಊಣೆಯವಿಲ್ಲದ ಸೋನೆಯು
ಮಾಣದೆ ಕರೆಯಿತ್ತೆತಿಯ ಶಿವಾರ್ಚನೆ ಕಾಲದಿ ೨೪೦

ಅದ ಕಾಣುತ ಚರಸಂಚಯ
ಮುದದಿಂದಂ ಸದ್ಭಕ್ತಸಮಿತಿಯಾಶ್ಚರಿಯದೊ-
ಳೊಂದಿದ ಮನರಾಗುತ್ತಂ
ಅವರ್ಚದುರಿಂ ಪೊಗಳುತಿರಲು ಸುರಿದಿತ್ತಾಗಂ ೨೪೧

ವ॥ ಮತ್ತಂ ಪೂರ್ವವಲ್ಲಿ ಮಣ್ಮಳೆಯಿಂ ಸತ್ತ ಚೋಳನ ಸುತಂಗಂ ಪೊಮ್ಮಳೆಗರೆದುದಂ ರಾಮಣಯ್ಯಂ ಕುರಿತ ಹಾಸರಗಲ್ಲ ಮೇಲೆ ಲಿಂಗಂಗಳ ವೃಷ್ಟಿ ಸುರಿದುದಂ ಕೋಟಿಯ ಶಿವದೇವಯ್ಯಂಗಂ ಧಾನ್ಯದ ಮಳೆಗರೆದುದಂ ಕೇಳ್ದಿವುಂ

ಇಂದಿನ ದಿನದಲ್ಲಿ ತುಂಬೆಯಲರವೃಷ್ಟಿ ಸುರಿದುದಂ ಸಿದ್ಧಲಿಂಗನಿಂ ಕಂಡೆಪೆಂದು
ಕೊಂಡಾಡುತ್ತಿರಲೆತಿಪಂ ಲಿಂಗಪೂಜೆಯುಂ ಮುಗಿದು ಚರಲಿಂಗಂಗಳ್ಸಹಂ ಪ್ರಸಾದದಿಂ
ತೃಪ್ತನಾಗಿ ಶಿವಯೋಗನಿದ್ರೆಯಿಂದಿರ್ಪಲ್ಲಿ ೨೪೨

ಮ. ವಿ. ವೃ.

ಶಿವಗೇಹಾನಿಕರಪ್ರಭೂತವಿಲಸಚ್ಛಂಖಾನಿನಾದಂ ಸುಷು-
ಪ್ತಿವಧೂವ್ಯೂಹಕರಾಜ್ಯಕಂಕಣನಿನಾದಂ ಕುಕ್ಕುಟಾನೀಕಕಾ-
ಲವನಾಲೋಕಿಸಿ ಸೂಚಿಪೋನ್ನತನಿನಾದಂ ಕಂಜವೃಂದಂಗಳೊ-
ಳ್ನವರೋಲಂಬಕುರುಂಬಮಾಧುರನಿನಾದಂ ಪೊಣ್ಮಿತಾ ಪೇಳೆಯೊಳ್ ೨೪೩

ಉಡುಜಾಲದ್ಯುತಿಚಂದ್ರಕಾಂತಿವ್ರಜಭಾನುದ್ಯೋತಿಗಂ ಓಡುತಿ-
ರ್ಪುಡುನಾಥಂ ಗಗನಾಂತರಾಳದೊಳು ನಿಂದಿರ್ದಂ ಸಹಸ್ರಾಂಶುತಾಂ
ನಿಡುರಕ್ತಾನ್ವಿತಕಾಂತಿಯೂಥವನುಪೂರ್ವಾದ್ರೀಂದ್ರದತ್ತಂ ಮಹಾ-
ದೃಢದಿಂ ತೋರುತಿರಲ್ಕೆಯಂಡು ಪರೆದತ್ತಂ ಗಾಢದಿಂಗಾಗಲುಂ ೨೪೪

ಉ. ಮಾ. ವೃ.

ಬಾನೊಳು ಭಾನುರಶ್ಮಿಮುಸುಕಲ್ಕೆ ಕಳಂಬ ಕಳಂಬಕಾಯಿತುಂ
ನೂನಬಲಂ ನಿಶಾಚರ ನಿಶಾಚರಕಾಯ್ತು ಬಲಂ ವಿಲಾಸಮುಂ
ನನ್ನಿಯೊಳೆತ್ತಿ ಕಟ್ಟಿ ಕುಮುದಂ ಕುಮುದಂಗಳ ತಾಳ್ಮವಾಗಲುಂ
ಬಾನು ಸುಕಾಂತಕಾಂತಿಗಳ ಬೀರುತಮುಷ್ಣವ ತಾಳುತಿರ್ದವುಂ ೨೪೫

ಅದ್ರಿಯನದ್ರಿಯೇರಿ ಕರವರ್ಣಕರಂಗಳಬೀರೆಲೋಕ್ರಮೊ-
ಳ್ಮುದ್ರಿಸಿಕೊಂಡುಮಿರ್ಪತಿಮಿರಂತಿಮಿರಾಳಿಯೊಳೋಡೆಘರ್ಮಘ-
ರ್ಮಾದ್ರಿಯಶೀತಯೂಥವನುಜಾರಿಸೆತಾರೆಯತಾರೆಯಲ್ಲಿಯೇ
ಭದ್ರಿಸಿಭದ್ರದಿಂದಮಿನನಿರ್ದನುರತ್ನದಚೆಂಡಿನಂದದಿಂ ೨೪೬

ಕಂ. ಖಗಚಯ ಸಾಲ್ಬೆಗೆವುತ್ತಿರೆ
ಮೃಗಸಂಚಯುವೆಳೆಬಿಸಿಲ್ಗೆ ಕಾತರಿಸುತ್ತಿರೆ
ನೆಗವುತ್ತಿರೆವುದಯಾದ್ರಿಯ
ಖಗನತುರಂಗವಾ ಸಮಯದಿಂಮುನ್ನವೆ ತಾಂ ೨೪೭

ಭೂಪಾಳಿಯು ಮುಂತಾದವ-
ನಾಪಾರವ ಭಕ್ತರೊಲಿದು ಪಾಡಲು ಸಿದ್ಧಂ
ಜೋಪಾನದೊಳುಪ್ಪವಡಿಸಿ
ಕಾಪಾಲಿಯ ಭಜನೆಗೆಯ್ವನೆಂದೆಂಬಾಗಳ್ ೨೪೮

ಬಾಲಾರ್ಕನುದಯದಿ ತಮ್ಮ
ಬಾಲಕರೇಳ್ವುದಕೆ ಮುನ್ನಲೆದ್ದಾ ಬಾಲಕಿಯ
ಬಾಲಕವನೊದರಿ ಕಟ್ಟಿಯು
ಬಾಲಾರ್ಕಧರಶರಣಂಗೆರಗೆಡೆಮಾಡಿದರ್ ೨೪೯

ವ || ಇಂತು ಶಿವಾರ್ಚನೆಗೆಡೆಮಾಡೆ ಶಿವಾರ್ಚಸಂಗೆಯ್ವ ಚರಲಿಂಗಂಗಳ್ಸಹಂ ಶಿವಾನುಭವಗೋಷ್ಠಿಯಿಂ ಸಿದ್ಧಲಿಂಗೇಶ್ವರಂ ಅನುಭವಮಂಟಪದೊಳಿರ್ಪಲ್ಲಿ ೨೫೦

ಉ. ಮಾ. ವೃ.

ಗೋಣಿಗಜಾತಿಯಲ್ಲಿ ಮಿಗೆ ನಾರಿಯದೊರ್ವಳು ತನ್ನ ಗಂಡನಾ-
ಆಣತಿಯಿಂದ ನೀರ ತರವೇಳ್ಕುಮದೆಂಬುತ ತನ್ನದೇಹದಾ
ತ್ರಾಣಕೆ ತಕ್ಕ ದೊಡ್ಡ ಘಟಮಂ ಪಿಡಿದೆಯ್ದಿ ತಟಾಕತೀರದೊ-
ಳ್ಮಾಣದೆಯಿಕ್ಕಿ ತನ್ನಮುಖಮಂಡಲವಂ ತೊಳೆವುತ್ತಲಿರ್ದಳುಂ ೨೫೧

ಭಂಗಗಳೊತ್ತಿಯೊತ್ತಿ ತಟದಿಂ ಘಟ ಮುಂದಕೆ ಸಾಗುತಿರ್ದುದುಂ
ಅಂಗನೆ ಕಾಣುತಂ ಭರದಿ ಭೀತಿ[1](ತಳಾಗುತೆ ಕೆಟ್ಟೆನೆಂಬುತುಂ)[1]
ಜಂಗಿಸಿ ಕುಂಭವನ್ನು ಪಿಡಿವುತ್ತಿರೆ ಮಾರುತನೆತ್ತಿ ಬೀಸಲುಂ
ಲಂಘಿಸಿ ಪೋದುದಾಗ ಘಟಮುಂಪಕೆ ಘಾತದಿ ನೀರಮಧ್ಯಕಂ ೨೫೨

ಕಂ· ಘಟ ಪೋದುದೆಂದುಮುಂಗುಲಿ
ಚಿಟುಕಗಳಂ ಒತ್ತಿಕೊಳ್ಳುತೇಗುವೆನೆನುತಂ
ಪಟುತರದುಃಖದೊಳಿರುತಿರೆ
[2](ಪಿಟ)[2]ರಂತುತಟಾಕಕ್ಕಪಿಟಮುಧ್ಯಕ್ಕೆಯ್ದಿತು ೨೫೩

ಆ ಊರನಾಳ್ವವೈಷ್ಣವ
ಭೂವರನಾ ಸಮಯದಲ್ಲಿ ವೈಹಾಳಿಯನುಂ
ಸಾವಾಸಿಗಳೊಡಪೋಗುತ
ಲಾವನಿತೆಯ ದುಃಖಗಂಡು ವಿಚಾರಂಗೆಯ್ಯಲ್ ೨೫೪

ಹರವಿ ನೀರೊಳಗೆ ಪೋದುದು
ಪುರುಷಂ ಇದನರಿದಡೆನ್ನ ನೀರಲ್ಲದ್ದಿಂ
ದಿರದೆ ಸಂಹರಿಪನೆಂದುಂ
ವರಯುವತಿಯು ನುಡಿದು ನೃಪಗೆ ಘಟವಂ ತೋರ್ದಳ್ ೨೫೫

1. ತಾಳಾಗ ಕಟ್ಟೆಂಬುತಾಗಳುಂ (ಅಇ). 2. ಬಟ (ಅಇ).

ಅದ ಕಂಡು ನೃಪತಿ ಹಾಸ್ಯದಿ
ಮೊದಲಿರ್ಪಲ್ಲಿಗೆ ಘಟವೆ ಬಾರದಿರ್ದಡೆ ನಿಸ-
ಗೊದವಿದೀ ಊರ ಸಿದ್ಧನ
ಪದದಾಣೆಯೆನುತ್ತೆ ನೋಡೆ ತಿರುಗಿದುದಾಗಳ್ ೨೫೬

ಸಿದ್ಧನೆಂದೆಂಬ ಜಂಗಮ
ನಿದ್ದಿಹನೀ ಊರಿನಲ್ಲಿ ಪೂಜಿಪರೆಲ್ಲರು
ಸಿದ್ಧಿಸುವುದದ ನೋಳ್ಪೆನೆನು-
ತದ್ದಲಿಸುತ್ತಾಣೆಯಿಕ್ಕೆ ತಿರುಗಿದುದಾಗಳ್ ೨೫೭

ಸಿದ್ಧರಾಮೇಶದೇವಂ
ಹೊದ್ದಿಯು ಪಾತಾಳಲೋಕದಮೃತತೆಗೆವಂ-
ತದ್ದಲಿಸಿ ಭಕ್ತರಾಣೆಯ
ತದ್ಭೃತ್ಯರಿಂ ಕೇಳ್ದು ತಿರುಗಿದೊಲ್ ತಿರುಗಿದುದುಂ ೨೫೮

ಮೊದಲಿರ್ದಾ ಠಾವಿಂಗಂ
ಹದುಳದಿ ಘಟವೆಯ್ದೆ ಪ್ರೀತಿಯೊಳಗಾ ನೀರಂ
ಮೃದುಲಾಂಗಿ ತುಂಬಿ ತನ್ನಯ
ಚಮುರಿಕೆಯಿಂ ಕಳಸವಿಡಿದು ನೆಗಹುತ್ತಿರ್ದಳ್ ೨೫೯

ಆಸೆ ಮಿಸುಕದೆ ಜಲ ತುಳುಕದೆ
ರಸೆಯಂ ಬಿಟ್ಟೂರ್ಧ್ವಕೆಯ್ದುದಲ್ಲಿಯೆಯಿರಲುಂ
ಶಶಿವದನೆಯೆತ್ತಲಾರದೆ
ಬಸವಳಿದುಂ ಕರೆದೊಳೊರ್ವನನ್ನೆಗಹೆಂಬುತ ೨೬೦

ಮತ್ತೊರ್ವ ಬಂದು ಪಿಡಿಯೆಂ
ದೆತ್ತಲು ಜಲಘಟವವಂಗೆಯೇಳದೆಯಿರಲಾ
ಮತ್ತಿರ್ವರು ಕೂಡಿ ನೆಗಹ-
ಲ್ಕತ್ತಿತ್ತಂ ಮಿಸುಕದಿತ್ತು ಘಟಗಿರಿಯೊಲ್ತಾಂ ೨೬೧

ಹತ್ತೆಂಟು ಕೂಡಿ ನೆಗಹಲ್
ಮತ್ತಾ ಘಟ ಕದಲದಿರಲು ನೃಪ ತಾನೆಂದಂ
ಮತ್ತೇಭಗಮನೆಯ ನೆತ್ತಿಗೆ
ಮತ್ತೀ[1](ಗ)[1]ಯೇಳ್ವು[2]ದೆಂ(ದೆ)[3]ತಿಯಾಣೆಯುಸಿಟ್ಟಂ ೨೬೨

1. ವೆ (ಅಇ). 2. ದೆಂ (ಇ).

ಆಣೆಯುನಿಟ್ಟೆತ್ತೆ ಕಲಶಮ
ದೇಣಾಕ್ಷಿಯ ಮಸ್ತಕಾಗ್ರದೊಳ್ ತಾಂ ಕುಳಿತುಂ
ಏಣಾಂಕಧರ ಚರಲಿಂಗ
ನಾಣತಿಯಿಂ ಲಘುವಾಗಲ್ಪೊತ್ತೆತ್ತಿದಳುಂ ೨೬೩

ಲೀಲೆ ಹಿಡಿದವಳು ಕುಣಿವುತ
ಮೇಲೆನಿಸುವ ಗೀತಗಳನು ಹಾಡುತಾತ್ತಡುತ
ಬಾಲಿಕೆ ತಲೆದಿರುಹುತ್ತಂ
ಭಾಳಾಕ್ಷನ ರೂಪು ಯತಿಯ ಸನ್ನಿಧಿಗೆಯ್ದಳ್ ೨೬೪

ನೃಪಮಂತ್ರಿ ಬಲಸಮೇತಂ
ಚಪಲತ್ವದೊಳೆಯ್ದಿ ಯತಿಗೆತುಳಿಲ್ಗೆಯ್ದಾಣೆಯ
ಕಪಟದೊಳಿಕ್ಕಿದ ತೆರನಂ
ಸುಪಥದಿ ಘಟ ಬಂದ ತೆರನ ಬಿನ್ನಪಗೈದಂ ೨೬೫

ಘಟವೇಳದಿರಲುಮಾಣೆಯ
ಪಟುತರದಿಂದಿಕ್ಕಿ ಪೊರಿಸಿ ಲೀಲೆಯೊಳ್ಯೆದಿದೆ
ನಿಟಿಲಾಕ್ಷ ನಿನ್ನ ಮಹಿಮೆಯ
ದಿಟವರಿಯದೆ ಆಣೆಯಿಟ್ಟ[1](ಅಪರಾಧಿಯುನಾಂ)[1] ೨೬೬

ಕ್ಷಮಿಸು ಕೃಪಾಕರಗುರುವೇ
ಕ್ಷಮಿಸೆನ್ನಜ್ಞಾನತಿಮಿರನಿವಾರಣಸೂರ
ಕ್ಷಮಿ[2](ಸು ಅನಾಥ)[2]ರ ಬಂಧುವೆ
ಕ್ಷಮಿಸೆಂದೆರಗಿರ್ದ ನೃಪಗೆ ಕರುಣ[3](ಂದೋರ್ದಂ)[3] ೨೬೭

ಆ ಜಲ ತೀವಿದ ಕಳಸವ
ಪೂಜಿಸಿ ಬದುಕೆಂದು ನಾರಿಗೆತಿಪಂ ಪೇಳಲು
ಓಜೆಯೊಳು ಘಟವ ಭಜಿಸುತ
ರಾಜೀವಾಸ್ಯೆಯಿರುತಿರ್ದಳಾಘಟ[4](ಮಂ ತಾಂ)[4] ೨೬೮

1. ಪರಾಧಿಯಾ (ಅಇ). 2. ಸಥಾ (ಅಇ). 3. ಮದಾದಂ (ಅಇ). 4. ಮತಂ (ಆಇ).

ಸುತರಿಲ್ಲದರ್ಗೆ ಸುತರಂ
ಸತತಂ ಧರ್ಗಕ್ಷಿ ಸಂಗುಳರ್ಗಂಘ್ರಿಗಳಂ
ಅತಿಶಯವೆನೆ ಕೊಡುತಂ ಘಟ-
ನುತಜನದಿಂ ಪೂಜೆಗೊಂಬುತಂ ನೆಲಸಿ[1](ರ್ಕುಂ)[1] ೨೬೯

ವ|| ಅದಂ ಕಂಡು ಸಕಲಮಾಹೇಶ್ವರರಾಶ್ಚರ್ಯಂ ಮಸಗಿ ಶಿವನಾಣೆಯುಂ ಮೀರಲಂಜಿದ ತಿರುನೀಲಕಂಠರದಂತಿರಲಿ ಸಿದ್ಧಲಿಂಗನಾಣೆಯುಂ ಜಲಘಟಮೀರಲಂಜಿದುದು ಮಹಾಚೋದ್ಯವೆಂದು ಕೊಂಡಾಡುತ್ತಿರೆ ಮತ್ತಮೊಂದು ದಿನದಲ್ಲಿ ಯತೀಂದ್ರನ ದರ್ಶನಕೆಂದು ಬಂದು ಬಿಟ್ಟಿರ್ದ ಪರುಷೆಯೊಳೊಂದುಸಡ್ಡಂ ಬೆದರ್ದು ಹೇರ ಬಿಸುಟ್ಟೊಡೆ ಹರದನಾ ವೃಷನಂ ಬೆಂಬಳಿಯಲೋಡಲದುಂ ಸಿಕ್ಕದಿರೆ ಪೋದರೆತಿಯಾಣೆ ನಿಲ್ಲೆನಲು[2](ಮದುದು)[2]ಲ್ಲಿಯೇ ನಿಂದುದುಂ ಸಮೀಪಕ್ಕೆ ಬಾಯೆಂದು ಮರಳಿ ಆಣೆಯ ನಿಡೆ ಸಮೀಪಕ್ಕೆಯ್ತುತುಂ ಅದಂ ಕಂಡು ಸರ್ವಜನಕೊಂಡಾಡುತ್ತಿರೆಯಿರೆ ಮತ್ತಮಾ ಸಿದ್ಧಲಿಂಗೇಶ್ವರನ ರಥೋ[3](ತ್ಸವ)[3]ಮಂ ನೋಡಲೆಂದು ನಾನಾದಿಕ್ಕಿನ ಪರುಷೆಯ ಜನವೆಯ್ದುತಿರುತಿರ್ದುದು ಅದೆಂತೆಂದೊಡೆ ೨೭೦

ಉ. ಮಾ. ವೃ.

ತಾಮ್ರಕಿರೀಟಸಂಚಯುಗಳಿಂ ಘನತಾಮ್ರದ ಕಂಕಣಂಗಳಿಂ
ತಾಮ್ರದ ದಂಡ ಕಪ್ಪರ ಕಮಂಡಲ ತಾಮ್ರದ ಕಚ್ಚುಟಂಗಳಿಂ
ತಾಮ್ರದ ಕಂಥೆ ಪಾದುಕೆಗಳಿಂ ಮೃದುತಾಮ್ರದ ಕುಂಡಲಂಗಳಿಂ
ತಾಮ್ರವಿಭೂಷಲಂಕರದಿ ರಾಜಿಪ ಜಂಗಮವೆಯ್ದುತಾಗಳುಂ ೨೭೧

ಲೋಹದ ಟೊಪ್ಪಿ ಕಂಥೆ ಕರದಂಡಕಮಂಡಲ ಲೋಹಪಾತ್ರೆಯಿಂ
ಲೋಹದ ಕುಂಡಲಂ ಪದಕ ಲೋಹದ ಕಂಕಣ ಪಾದುಕಾಳಿಯಿಂ
ಲೋಹದ ಕಚ್ಚುಟಂ ಮಿಸುಪ ಲೋಹದ ಸೆಜ್ಜೆ ಸುಲೋಹಸೂತ್ರದಿಂ
ಲೋಹವಿಭೂಷ[4](ಣಂಗಳಲಿ)[4] ರಾಜಿಪ ಜಂಗಮರೈದಿತಾಗಳುಂ ೨೭೨

ರಜತಕಿರೀಟದಿಂ ರಜತಕಂಥೆಕಮಂಡಲ ಕರ್ಪರಂಗಳಿಂ
ರಜತದ ದಂಡದಿಂ ರಜತಕೋವಣ ಪಾದುಕಸಂಚಯಂಗಳಿಂ
ರಜತದಕುಂಡಲಂ ರಜತಕಂಕಣದೊಡ್ಯಣದಂದುಕಂಗಳಿಂ
ರಜತವಿಭೂಷಧಾರಣದಿ ರಾಜಿಪ ಜಂಗಮವೆಯ್ದುತಾಗಳುಂ ೨೭೩

---

1. ರ್ದಮ (ಅಇ). 2. ಮಾನಸ್ಯುನ (ಅಇ). 3. ತ್ಸಾಹ (ಅಇ). 4. ಲಂಕರಿಸಿ.

ಕನಕಕಿರೀಟದಿಂ ಕನಕಕಂಥೆಕಮಂಡಲಕರ್ಪರಂಗಳಿಂ
ಕನಕದದಂಡದಿಂ ಕನಕಕೋವಣಪಾದುಂಕಸಂಚಯಂಗಳಿಂ
ಕನಕದಕುಂಡಲಂ ಕನಕಕಂಕಣದೊಡ್ಯಾಣಪಂದುಕಂಗಳಿಂ
ಕನಕವಿಭೂಷಧಾರಣದಿ ರಾಜಿಪ ಜಂಗಮವೆಯ್ದಿತಾಗಳುಂ ೨೭೪

ರತ್ನಕಿರೀಟಸಂಚಯುಗಳಿಂ ನವರತ್ನದ ಕಂಕಣಂಗಳಿಂ
ರತ್ನದ ದಂಡಕರ್ಪುರಕಮಂಡಲರತ್ನದ ಕಚ್ಚುಟಂಗಳಿಂ
ರತ್ನದಕಂಥೆ ಪಾದುಕೆಗಳಿಂ ಘನರತ್ನದ ಕುಂಡಲಂಗಳಿಂ
ರತ್ನವಿಭೂಷಧಾರಣದಿ ರಾಜಿಪ ಜಂಗಮವೆಯ್ದಿತಾಗಳುಂ ೨೭೫

ಪಟ್ಟುಕಿರೀಟಕಂಥೆಗಜದಂತಪಹಾವುಗೆನಂದಿಕುಂಡಲಂ
ಪಟ್ಟಿನ ಸೆಜ್ಜೆವಸ್ತ್ರಶಿವಸೂತ್ರವುವಿದ್ರುಮದಂಡನೀಲದಾ
ಪಟ್ಟಿನ ವಸ್ತ್ರಧೌತಯುಗಪಚ್ಚೆಕಮಂಡಲು ನೀಲಕಂಕಣಂ
ಪಟ್ಟಿನ ಪುಂಜಿದಾರವವರ್ಗೈದಿವರಾಗಳೆ ದರ್ಶನಾರ್ಥದಿಂ ೨೭೬

ಕಂ. ಕಾಷಾಂಬರ ಕಿರಿಟಂಗಳ
ಕಾಷಾಂಬರ ಕಂಥೆಧೋತ್ರಬೆವರ್ವಾಸಂಗಳ
ಕಾಷಾಂಬರ ಚೋಳಕಗಳ
ಕಾಷಾಂಬರ ಕೋವಣದವರ್ಗೈದಿತ್ತಾಗಂ ೨೭೭

ರುದ್ರಾಕ್ಷೆ ಪಟಿಕ ಮೌಕ್ತಿಕ
ಭದ್ರಾಕ್ಷಿಯು ವಜ್ರ ನೀಲಲಿಂಗಾಕ್ಷಿಗಳಿಂ
ವಿದ್ರುಮವಾದಿಗಳಿಂದಂ
ಭದ್ರಾಂಚಿತ ಕಿರಿಟಗಳವರ್ಗೈದಿತ್ತಾಗಂ ೨೭೮

ವಲಯಿತವೇತ್ರದ ವೇಣಿನ
ಸುಲಭಮದಾಗಿರ್ಪ ವೀರವಿದ್ರುಮಗಳ ನೆರೆ
ವಿಲಸದ್ಯೋಗದ ದಂಡವ
ಗೆಲವಿಂ ಪಿಡಿದವರ್ಗೈದಿತು ಧರೆ ಬೆಸಲಾದೊಲ್ ೨೭೯

ಉ. ಮಾ. ವೃ.

ಕಂಬಲ ಟೊಪ್ಪಿ ಕಂಬಲದ ಕುಪ್ಪಸ ಕಂಬಲಕಂಥೆಜೋಳಿಯಿಂ
ಕಂಬಲದಂಗವಟ್ಟುವುರುಕಂಬಲಸೂತ್ರದ ಸೆಜ್ಜೆಯಿಂದಲುಂ
ಕಂಬಲಧೋತ್ರ ಕಂಬಲದ ಕಚ್ಚುಟ ಕಂಬಲಭೂತಿಚೀರದಿಂ
ಕಂಬಲದಾರ[1](ದಂದ)[1]ದೊಳು ರಾಜಿಪ ಜಂಗಮರ್ಬೈದಿತಾಗಳುಂ ೨೮೦

ವ॥ ಭೂಭಾಗದೊಳೂರಿದ ಚರಣಂಗಳಂ ಸೆಳೆಸೆಳೆದು ನಡೆಯಲಾರದೆ ಮೆಲ್ಲ ಮೆಲ್ಲನೆ ಹೆಜ್ಜೆಯಿಕ್ಕುತಂ ವಿಶೀರ್ಣ ಕಂಬಲಂಗಳಿಂ ವಿಶೀರ್ಣ ಕೌಪೀನಂಗಳಿಂ ಅತಿ ನಮ್ರ ಪೃಷ್ಟಭಾಗಂಗಳಿಂ ಕಂಪಿಸ ಮಸ್ತಕಂಗಳಿಂ ಭಂಗುರ ದಂತಂಗಳಿಂ ಮಲಿನ ಕೃತಲೋಚನಂಗಳಿಂ ಶುದ್ಧ ತ್ರಿಪುಂಡ್ರ ಭಸಿತೋದ್ಧೂಳನಂಗಳಿಂ ಅಬದ್ಧಲಂಬಮಾನ ಜಟಾವ್ರಜಂಗಳಿಂ ಭುಜವಿನ್ಯಸ್ತ ಯೋಗಪಟ್ಟಿಕೆಗಳಿಂ ವಿಭೂತಿಪಾತ್ರಂಗಳಿಂ ಸಜ್ಜಿಕಾವ್ರಜಂಗಳಿಂ ವಾಯುವಿಂ ಕಂಪಿಸು ಕೃಶ ದೇಹಂಗಳಿಂ ಸಿಂಗರಂಬೆತ್ತ ಕಾಶಿಕೇತಾರ ಶ್ರೀಶೈಲ ಸೇತುಬಂಧ ಗೋಕರ್ಣಂಗಳ್ಮೊದಲಾದ ಶಿವಕ್ಷೇತ್ರಂಗಳೊಳ್ ಸುಳುಹು ದೋರಿ ಲೋಕಪಾವನಂ ಮಾಳ್ಪ ಸಾಮರ್ಥ್ಯಯುತರಾದ ವೃದ್ಧಜಂಗಮರ್ಬೈದಿತುಂ ಮತ್ತಂ ಪೂಗಭಾಗಂಗಳ್ ತೀವಿರ್ದ ವಿಚಿತ್ರಕರಂಡಂಗಳಿಂ ತಾಂ[2]ಬೂ[2]ಲಂಗಳಿಂ ಪಾದುಕಾಕ್ರಾಂತ ಸ್ವರ್ಣಚರ್ಮ ಪಾದುಕಾಮಂಜುಳನಿಸ್ವನಂಗಳಿಂ ಭಸಿತ ತಿಲಕಾಂಚಿತಾಳಿಕಂಗಳಿಂ ಏಕಮುಕ್ತಾಪ್ರೋಕ್ತ್ಯಹೇಮಸೂತ್ರವಿರಾಜಿತ ಕಂಧರಂಗಳಿಂ ಸ್ಥೂಲ ಮುಕ್ತಾಫಲೋಪೇತ ವಿಲಸತ್ಕರ್ಣಭೂಷಂಗಳಿಂ ಮತ್ತಂ ದಂತಕ್ಷತ ನಖಕ್ಷತವ್ರಣಂಗಳಂ ಮರಸುತ್ತಂ ಸಿಂಗರಂಬೆತ್ತು ಕಲಿಯುಗಬಸವಾಯೆಂದುಭಕ್ತರಂ ಕೊಂಡಾಡಿ ಧನಮಂ ಬೇಡಿ ಕಸ್ತೂರಿಮುಖ್ಯವಿವಿಧಕರಂಡಂಗಳಿಂದ ಮತ್ತಂ ರತ್ನಕಂಕಣಂಗಳಿಂದಂ ರುದ್ರಾಕ್ಷೆ ಸ್ಫಟಿಕಮಾಲಿಕೆಗಳಿಂ ನಾನಾವಿಚಿತ್ರವರ್ಣಾಂಬರಂಗಳಿಂ ಹರಿದ್ರಾವಿಲ ಸತ್ಕಾಯಧಮ್ಮಿಲ್ಲಂಗಳಿಂ ರಂಜಿಸುತ್ತೆ ಶಿವಭಕ್ತರೆಡೆಗೆಯ್ದಿ ದ್ರವ್ಯಮಂ ಬೇಡಿ ಮಡಗಿರ್ದ ನಿಕ್ಷೇಪಮಂ ತೆಗೆವಂತೆ ತೆಗೆದುಕೊಂಡು ಮತ್ತಂ ವಾರವನಿತೆಯರಂ ಕಟಾಕ್ಷದಿಂದೀಕ್ಷಿಸುತಂ ವೃದ್ಧನಂತೆನೆಲನನೆಡಹುತ್ತಂ ರೂಪಜೀವಿಗಳಂ ಕರೆವುತ್ತಂ ಅವರೊಳು ಕೈಹೊಯ್ದು ನಗುತ್ತಂ ತಾಂಬೂಲವಂಕೊಡುತ್ತಂ ಹ್ರೀವೇರಮಾಲ್ಯಾನುಲೇಪನ ವಿಭೂಷಣವಿಚಿತ್ರವಸ್ತ್ರಂಗಳಂ ಕೊಡುತ್ತಂ ಸಾಮಾನ್ಯನೃಪರಂತೆಯನ್ಯಮನುಜರಂ ಧಿಕ್ಕರಿಸುತ್ತಂ ಅನ್ಯಕಾಮುಕರ್ಗಂ ಮತ್ಸರಂಬಾಳುತ್ತಂ ಕಸ್ತೂರಿಮೃಗದಂತೆ ದೇಹ ವಾಸನೆಗಳಂ ಬೀರುತ್ತಂ ಮೆಲ್ಲಮೆಲ್ಲನೆ ಕೋಟಿಸಂಖ್ಯೆಯ ವಿಟಜಂಗಮರ್ಬೈದುತಿರ್ದುದಂತುಮಲ್ಲದೆಯುಂ ಮತ್ತಂ ಪಟ್ಟುತಂತು ಪಟ್ಟುವಿರಾಜಿತ ಪಾದುಕೆಗಳಿಂ ಜನರುಗಳ್ ನೋಂಕದಂತೆ ಬಿಟ್ಟೋರೆ[3](ಯಿಂ)[3] ಬರುತ್ತಂ ಆ ಭಕ್ತರುಗಳ್ಕಂಡ ಪದಾರ್ಥಂಗಳಂ

1. ತ್ವ (ಅಇ). 2. ಬೂಲಿಬ (ಅ). 3. ಯಂ (ಅಇ).

ಬಿಸುಡುತ್ತುಂ ಮತ್ತಂ ನೀರಾಜನ ರಂಗವಲ್ಲಿ ಪಿಷ್ಟಗುಗ್ಗುಳಭಸ್ಮಸಲಿಲಶೋಧನಾ [1](ಥಾಂಶುಕ)[1]ಗಳ್ವೆರಸಿರ್ದ ವಾಸಪಾತ್ರಂಗಳಿಂ ವಸ್ತ್ರಚ್ಛಾದಿತ ಭಾಂಡಧಾರಕ ವ್ಯಣ ವಾದಿಗಳಂ ವಿತಾನವಸನನಿಕರಂಗಳಂತರುತ್ತಂ ಮತ್ತಂ ಉಪಕರಣಂಗಳಂ ತುಂಬಿರ್ದ ಗೋಣಿಗಳಂ ಹೊತ್ತು ಬಹ ವೃಷಭಂಗಳಿಂದಂ ಮತ್ತಂ ಸತ್ಯಭಾಷೆಯ ಭಕ್ತಿಭಾಷೆಯ ವ್ರತವೇಷದಿಂ ಜಗತ್ತಂ ನೋಡದೆ ಪ್ರಾಣೇಶ್ವರನಂ ನೋಡುತ್ತುಂ ಇತರ ಚಿಂತೆಯುಂ ಬಿಟ್ಟು ಆತ್ಮೇಶ್ವರನಂ ಚಿಂತಿಸುತ್ತಂ ಅನ್ಯಸ್ಮರಣೆಯುಂ ವರ್ಜಿಸಿ ಪಂಚಾಕ್ಷರಿಯ ಸ್ಮರಿಸುತ್ತಂ ಅನ್ಯಪ್ರೀತಿಯುಂ ಬಿಟ್ಟು ಭಕ್ತಿಪ್ರಿಯರಾಗುತ್ತಂ ಅನ್ಯಯೋಚನೆಯುಂ ಬಿಟ್ಟು ಶಿವಭಕ್ತಿಯೋಚನೆಯಂ ಮಾಡುತ್ತಂ ಅನಾಚಾರವಂ ಬಿಟ್ಟು ಸದಾಚಾರ ವಿಡಿವುತ್ತಂ ಅನರ್ಪಿತವಂ ಬಿಟ್ಟು ಶಿವಾರ್ಪಿತವ ಮಾಡುತುಂ ಶಿವಭಕ್ತಿದಾಸಭಾವ ವಲ್ಲಿ ನಿಯತರಾದ ಶೀಲವಂತರನೆ ಕರೆವುತ್ತಿರ್ದುದುಂ ಮತ್ತಂ ಪರಮಶಾಂತ ಭಸಿತಮಂ ಅಂಗವಲ್ಲುದ್ಧೂಳನಂಗೈದು ಶಬ್ದನಿರೋಧಕೌಪೀನಂಗಳಂ ಬಿಗಿದುಂ ಪರಹಿತಾಲಾಪ ಪಂಚಾಕ್ಷರಂಗಳಂ ಜಪಿಸುತ್ತಂ ಅಂತರ್ಮುಖೇಂದ್ರಿಯಗ್ರಾಮ ಸಂಚಯಯೋಗದಂಡಂ ಗಳಂ ಪಿಡಿದುಂ ನಿತ್ಯಸ್ವಸಮಾಧಾನಯೋಗಪಟ್ಟಿಕೆಗಳಂಧರಿಸಿ ಲಸತ್ಪರಮಸಂತುಷ್ಟ ಪರಿವೇಷ್ಟನಂಗಳುಳ್ಳವರಾಗಿ ಸ್ವಸ[2](ಮ)[2] ಯೋ[3](ಗೋ)[3]ತ್ಸಾಹ ಕಂಥಾಕೂರ್ಪಾ ಸಂಗಳಂ ಧರಿಸಿ ನಿರಾಶಾಭಿಕ್ಷೆಯಿಂ ಅಕಾಮಾಮೃತವನರ್ಪಿಸಿ ಮತ್ತಂ ಯಮಾದಿ ವ್ರತಾರೂಢ ಲಸಚ್ಛಮದಮಾನ್ವಿತ ಅಚಂಚಲ ಸದಾನಂದಹಿತಾಚಾರ ವರ್ತನಂಗಳಿಂ ಅನರ್ಪಿತವಸ್ತುವಿರಕ್ತಿ ಪ್ರಾಪ್ತರೂಪರಾದ ಅನೇಕ ವಿರಕ್ತಜಂಗಮರ್ಬೈದುತಿರ್ದುದುಂ ಮತ್ತಂ ಹಲತೋರಣ ಮತ್ಸ್ಯಬ್ಜ ಕಲಶಚಕ್ರಚಿಹ್ನಿತಕರಚರಣಂಗಳುಂ ನೇತ್ರಪದ್ಮ ರುಚ ಚಾರುತರ ಭುಜಂಗಳುಂ ಪ್ರಿಯಾನ್ವಿ[4](ತೋ)ಪ(ಶ)[4]ಮುದುನ್ನತ ನಾಸಿಕಂಗಳುಂ ಸಸ್ಮಿತಾನನ ಪದ್ಮಂಗಳುಂ ವಿಶಾಲೋರಸ್ಥಲಂಗಳುಂ ಶ್ರೀಕಾರಶೋಭಿತಕರ್ಣಂಗಳುಂ ಸರಸಾಂಗ ಕಲೆಗಳುಂ ಆಜಾನುಬಾಹುಗಳುಂ ಪೀನನಿತಂಬಗಳುಂ ರಾಜಿಸುವ ರಾಜರುಗಳ ವೈರಾಗ್ಯದಿಂ ಸಂಸಾರಂಗಳಂ ಬಿಟ್ಟವರಾಗಿ ವಸನಾಸಿ ಶಿಖಾತ್ಯಕಾಮುಕ್ತಕೇಶರಿ ಶೋಧರುಗಳಾಗಿ (?) ಬಹುಲೋಕಾಂತಗೋಷ್ಠಿಯಂ ಬಿಟ್ಟವರಾಗಿ ಬಹುಜನೋ ಪಾಸ್ಯಪ್ರಪಂಚಂ ಬಿಟ್ಟವರಾಗಿ ಶತಖಂಡಾವೃತ ಕಂಥೆಯಂ ಧರಿಸಿ ಅಖಂಡಿತ ದಿಗಂಬರರುಗಳಾಗಿ ಭಿಕ್ಷುವೇಷಿಗಳಾಗಿ ನಿರಾಶಾಕುಲಿತಮಾನಸರಾಗಿ ನಿತ್ಯೈಕಗ್ರಾಮ ವಾಸಿಗಳಾಗಿ ಶಿವಯೋಗಿಗಳ ರೂಪಂ ತಾಳ್ದಿರ್ದಪಂ ಮಲಿನಮುಖರದಂತೆ ಬಲಾಹಕ ಪರಿಚ್ಛನ್ನ ಮೃಗಲಾಂಛನಬಿಂಬದಂತೆ ದಗ್ಧರಜ್ಜುಚಯದಂತೆ ಮತ್ತಂ ವಿಧಿನಿಷೇಧ ಕ್ರಿಯಾವಿವರ್ಜಿತರಾಗಿ ಉಭಯಕರ್ಮೌಘಪರಿತ್ಯಾಗರಾಗಿ ಹಠಯೋಗರಾಜಯೋಗ ಪಶುಯೋಗ (?) ಬಂಧಪರಿವರ್ಜಿತರಾಗಿ ನಿಂದಾಸ್ತುತಿ ನಗರಕಾನನ ಮಾನಾವಮಾನ

---

1. ರ್ತಂಸುಖ (ಅಇ). 2. ಮ (ಅಇ). 3. ಗ (ಅಇ). 4. ತಾಉಪಸ (ಅ) ; ತಾಪುಪಸ (ಇ).

ಶೀತೋಷ್ಣ ಮಿತ್ರಾ[1]ರಿ[1] ವಿಷಾಮೃತ ಮಾತೃಆಸ್ಯವನಿತೆ ರಾಗವಿರಾಗ ಪಂಚಭೂತಳ ಸುಖದುಃಖ ಹೇಮಲೋಷ್ಠ ಸಮಾನವಿಭಾವಿತರಾಗಿ ರಂಜಿಸುವ ರಾಜಯೋಗಿಗಳೆಯ್ದು ತಿರ್ದರುಂ ಮತ್ತಂ ಯಾತ್ರಾಯೋಗ್ಯಮಾಕ್ರಯ್ಯಮುಪಾನಾಮ್ಯಗಂಗಳಿಂ (?) ಅಂಗ ದಲ್ಲಿ ತಾಳ್ದ ಕೂರ್ಪಾಸಂಗಳಿಂ ಸಮಸ್ತಾಭರಣಂಗಳಿಂಪಂ ಕಂಠಭಾಗಂಗಳಲ್ಲಿ ತಾಳ್ದ ಮಂಗಲಸೂತ್ರಂಗಳಿಂ ರಮ್ಯವಾಗಿ ನಿರಿವಿಡಿದುಟ್ಟ ನಾನಾವಿಚಿತ್ರವರ್ಣವಸನಂಗಳದೃತಿ ದೃಷ್ಟಿಗೆ ಮನೋಹರಮಂ ಬೀರುತ್ತಿರೆ ಮತ್ತಂ ಪರಿಶ್ರಾಂತಶ್ವೇದಬಿಂದುಗಳಂ ನಖಾಗ್ರ ಗಳಿಂ ತೆಗೆದು ಬಿದಿರ್ಚುತಂ ಚಂಪನಕುಂಕುಮಕುಸುಮಾದಿಗಳೊಡೆವೆರೆದ ಮಂದ ಮರುತಂ ತೀಡೆ ಹಾರೈಸುತ್ತಂ ಮುಡಿದ ಕುಸುಮಾವೋದಕ್ಕೆರಗಿ ಪಕ್ಕಂಗಳಿಂ ಮುಡಿಯ ಹೊಡೆದು ಝೇಂಕರಿಪ ಭ್ರಮರಂಗಳಂ ರತ್ನಕಂಕಣಕರಾಬ್ಜಂಗಳಿಂ ತೆವರುತ್ತಂ ಸಾಂಪ್ರಚೂತವಟಛಾಯಾಸ್ಥಲಂಗ[2](ಳೋಳ್ ವಿಶ್ರಮಿ)[2]ಸುತ್ತಂ[3](ಶೋಷ ಣಮಾದ)[3] ಬಿಂಬಾಧರಂಗಳ್ಗಂ ತಾಂಬೂಲರಸಂಗಳಿಂ ಮರಳಿ ಹದಂಗೊಡುತ್ತಂ ಬಳಲ್ದಾನನಸರೋಜಂಗಳ್ಗಂ ಕರಪಲ್ಲವಂಗಳಂ ಮರೆಮಾಡಿಕೊಳುತ್ತಂ ಕರಾಂಗುಲಿ ಗಳುಂ ರಕ್ತಂಗಳಿಳಿದು ಜುಮ್ಮಿಡೆ ಸ್ವಕಟಿತಟವಿನ್ಯಸ್ತ ಹಸ್ತರಾಗುತ್ತಂ ಅನ್ಯೋನ್ಯ ಮೂರುಯುಗ ಸಂಘರ್ಷವ್ರಣಂಗಳಾಗಿ ನಡೆಯಲಾರದೆ ರಾಜಹಂಸೆಗಳಂತೆ ಮೆಲ್ಲ ಮೆಲ್ಲನೆ ಹೆಜ್ಜೆಯಿಡುತ್ತಂ ಶ್ರಮೋಪಶಾಂತಿಗೋಸ್ಕರಂ ಸಿದ್ಧಲಿಂಗಯ್ಯಾಯೆಂದು ಹೃದಯದಲ್ಲಿ ಸ್ಮರಿಸುತ್ತಂ ಮತ್ತಂ ತಮ್ಮ ತಮ್ಮ ಪುರುಷರ ಕೈಹಿಡಿದು ಅನೇಕ ಪುಣ್ಯಾಂಗನೆಯರು ಐದುತಿರ್ದುದಂ ಮತ್ತಂ ರುಜು[4]ಸಿಂ(ಹ)ಮ(ಧ್ಯ)[4]ರೇಖಾಗ್ರ ಸ್ಪಶಿರೋರುಹಂಗಳಿಂ ಆಗುಲ್ಫಾಲಂಬಶ್ವೇಲಂಗಳಿಂ ಶಂಖಮಣಿವ್ರಜಂಗಳಿಂ ರಾಜಿಪ ಕರ್ಣಪತ್ರಂಗಳಿಂ ನಾನಾಮಣಿವ್ರಜಹಾರಂಗಳಿಂ ಅರಕೂಟಕಂಠಸೂತ್ರಂಗಳಿಂ ಆಯಸ ಲಂಬಣಂಗಳಿಂ [5](ತ್ರಿಗು)[5]ಣನಿರ್ಮಿತಪಾದಾಂಗುಲೀಯಕಂಗಳಿಂ (?) ಕಾಂಸ್ಯಾಘಕಟ ಕಂಗಳಿಂ ಸ್ವಚ್ಛಸ್ಫಟಿಕೋಪಲ ನಾಸಿಕಮಣಿಗಳಿಂ ಸೂಕರೂರುಭಲ್ಲೂಕಕಪಿಗೋ ಮಾಯುಮೃಗಮೂಷಕಕ್ರೋಢಕುಲ ಬರ್ಹಿಚಟಕಕುಕ್ಕುಟಾದಿಗಳಂ ಪಿಡಿದು ಮೆಲ್ಲ ಮೆಲ್ಲನೆ ಪಿಂಗಡೆ ಬಪ್ಪ ಕಾಂತಾಜನರಿಂ ನಾನಾಜೀರ್ಣವಸ್ತ್ರರಚಿತಮಧ್ಯರಂಧ್ರಕಂಥಾ ವಿಸರಂಗಳಿಂ ವಿಕೀರ್ಣಹ್ರಸ್ವಕೇಶಂಗಳಿಂ ಪಿಂಗಲಾಕ್ಷಿಗಳಿಂ ಅಲಾಬ್ವಕೃತಕರ್ಪರಂಗ ಳಿಂ ಕರ್ಣನ್ಯಸ್ತ ಶೃಂಗಚಯಂಗಳಿಂ ಧೃತಮತ್ಸ್ಯಗ್ರಸ್ತಿ ಜಾಲತಂಗಳಿಂ ಕಕ್ಷಸ್ಥಿತ (ಚರ್ಮಭ ?) ಸ್ತ್ರೀಚಯಂಗಳಿಂ ಚಕ್ರಂಗಳಿಂ ವಿಕಟೋರಸ್ಥಲಂಗಳಿಂ ಸ್ಥೂಲಕುಕ್ಷಿಗಳಿಂ ಉಚ್ಛ್ವಾಸವಕ್ತ್ರಂಗಳಿಂ ಪಿಂಗಲ ವಿರಳಶ್ಮಶ್ರುಜಾಲಂಗಳಿಂ ಅತ್ಯಂತ ವಿಕೃತವಚಸ್ತೋತ್ರ ರಂಗಳಿಂ ಶರೀರಮೋಚಕಚ್ಛಾಯಂಗಳಿಂ ವಿಲಾಸಗಮನಂಗಳಿಂ ಅಯೋಂಗುಲೀಕಂಗ ಳಿಂ ಆಯಸಸೂಕ್ಷ್ಮವಲಯಂಗಳಿಂ ದೀರ್ಘಕೌಪೀನೋಡ್ಯಾಣಂಗಳಿಂ ವಸ್ತ್ರಖಂಡೊಲ್ಲ

1. ರಿಮಿತ್ರ (ಅಇ). 2. ಳಂಉತ್ಸವಿ (ಅಇ). 3. ಶೇಷಣಮೋಢ (ಅಇ).
4. ಸಿಂಮರೇ. (ಅಇ). 5. ತ್ರಘು (ಅಇ).

ಸದ್ಗುಚ್ಛಾದಂಡಂಗಳಿಂ ಬರ್ಹಿಪತ್ರಾತಪವಾರಣಂಗಳಿಂ ವಿರಾಜಿಪ ಕಾಪಾಲಿಕವ್ರತ ಧಾರಯೋಗಿಗಳೈದುತಿರ್ದರುಂ ೨೮೧

ಉ. ಮಾ. ವೃ.

ಅಂಗುಲಿವರ್ಜಿತಾಂಘ್ರಿಯಧಿಕಾಂಗುಲಿಯಂಘ್ರಿಗಳರ್ಧದಂಘ್ರಿಯಿಂ
ಹಿಂಗಡೆ ಗೋತ್ರದಂಘ್ರಿಕ[1]ಠಿ[1]ಣಂಘ್ರಿಯು ಸುಕ್ಕಿದ ಚರ್ಮದಂಘ್ರಿಯಿಂ
ಮಂಗಲದಂಘ್ರಿ ಶೀರ್ಣವೃಂದುವಂಘ್ರಿಮಹಾಘನ[2](ಸುಕ್ಕಿ)[2]ದಂಘ್ರಿಯಿಂ
ಸಾಂಗಮವಾಗಿ ರಾಜಿಸುವರೈದುತಲಿರ್ದುದುದರ್ಶನಾರ್ಥದಿಂ ೨೮೨

ವಕ್ರಿತಬಾಹುಚರ್ಮಕರಕರ್ಪದ ಹಸ್ತವಿಶೀರ್ಣಹಸ್ತದ-
ರ್ವಕ್ರಿತದೇಕಹಸ್ತ ರುಜಹಸ್ತ ಸುಚಾರುಭುಜಂಗಳುಳ್ಳವ-
[3](ರ್ವಕ್ರಿತಲೋಚನಂ ತ್ರುಟಿತಕರ್ಣಯುಗಂ ಪರಿದೋಷ್ಮವುಳ್ಳವ-)[3]
ರ್ವಕ್ರಿತಕಂಧರಂಗಳವರೈದುತಲಿರ್ದರು ದರ್ಶನಾರ್ಥದಿಂ ೨೮೩

ಬಿತ್ತಿದ ಭೂಮಿಯಂ ಸಕಲರತ್ನವಿಭೂಷಣದಿಂದ ಶೃಂಗರಂ
ಬೆತ್ತಿಹ ಕರ್ಣಿಕಾನಿಕರಮಂ ಕಿರುವತ್ಸಸಮೇತ ಧೇನುಕಾ
ವ್ರಾತಗಳಂ ಸುವರ್ಣಮುಮ ಸಣ್ಣದುಕೂಲಗಳಂ ವಿಚಾರದಿಂ
ಪ್ರೀತಿಯೊಳೀವ ಧಾರ್ಮಿಕಮನುಷ್ಯಸಮೂಹಗಳೆಯ್ದುತಿರ್ದುದುಂ ೨೮೪

ಕಾಲುಗಳಿಲ್ಲವಯ್ಯ ನಡೆಯಲ್ಕೆ ವಿನೇತ್ರಗಳಿಲ್ಲ ನೋಡಲುಂ
ಪಾಲಿಸಿರಯ್ಯ ಧಾರ್ಮಿಕರು ದಾನವನೀವುದು ಸಿದ್ಧಲಿಂಗ ನಿ-
ಮ್ಮೆಲ್ಲರ ಪ್ರೀತಿಯಿಂ ಪೊರೆವನೆಂಬುತ ಮಾರ್ಗದಿ ಪೋಪ ಪರ್ಷೆಯೊ-
ಳ್ನಿಲ್ಲದೆ ಹಾಡುತ್ತೈದುತಿಹ ಪಂಗುಳ[4](ರಾ)[4]ಕ್ಷಣವೇನನೆಂದಪೆಂ ೨೮೫

ಸ್ತೋತ್ರವ ಮಾಡುತಂ ಭರದಿ [5](ಸಿದ್ಧಗೆ)[5] ದೀರ್ಘದ[6](ದಂಡದಿಂ ನಿಜಂ)[6]
ಗಾತ್ರ[7](ಮದೊಂದೆಭಕ್ತಿ)[7]ಪ್ರಣಮಂಗಳ ಮಾಡುತಲೈದುತಿರ್ಪ[8](ರಾ)[8]
[9](ಭಕ್ತರದೆಲ್ಲರುಂ ಜಯಜ)[9]ಯಂಗಳು ಮೆಂಬುತ ಸಾರ್ವಕಂಬಿಗರ್
ಯಾತ್ರೆಯೊಳೈದುತಿರ್ದುದುನವೋಧೃತವೋಧೃತವೇನನೆಂ[10](ಜೆನಾಂ)[10] ೨೮೬

1. ಲಿ (ಇ). 2. ಶುಕ್ಕ (ಅಇ). 3. x (ಅಇ). 4. ಗಳಾ (ಅಇ).
5. ಸಾತಿಗೆ (ಅಇ). 6. ಡದೊಲ್ಧಾತ್ರಿಗೆ (ಅಇ). 7. ವೊಂದೆ (ಅಇ). 8. ತ್ರ (ಅಇ).
9. ರುಗಳ್ಗೆಯುಂಪಯಂಪ (ಅಇ). 10. ಬುತಂ (ಅಇ).

ಪುಷ್ಪದ ನೇಮದರ್ಗೆ ಕುಸುಮಂ ಕುಸುಮಂ ತೃಷಿತರ್ಗವಾ[1]ಜಲಂ[1]
[2](ಆ ಪಥದೊಳ್ ಶ್ರಮಂಬಡೆದರಿಂಗೆ ಹಿಮಾದಿಗಳೀಯುತಾಗಲುಂ)[2]
ತಾಪನಿವಾರಣಾರ್ಥವಹ ಶೀತಳಲಾಮಚತಾಲವೃಂದಮುಂ
ಪಾಪಹರಾಂಗಲಿಂಗಿಗಳಿಗಿಕ್ಕುತಲೈಮತಲಿರ್ದರರ್ತಿಯಿಂ ೨೮೭

ವ॥ ಮತ್ತಂ ಪರುಷಾಜನಂ ತಮ್ಮೊಳ್ತಾವುಂ ಮಾತನಾಡುತ್ತಲೈದುತಿರ್ದರ ದೆಂತೆಂದೊಡೆ ತಿಂಗಳುವರೆನಡೆ : ದೆನೆಂಬುವರಂ ಸುಮ್ಮನೆ ಬಾರೆಂಬುವರುಂ ಅನ್ಯಕ್ರಿಯಾ ದೂರವೆಂಬುವರುಂ ಕದಾಪುರಂಗಮಿ[3](ಷ್ಯಾಮ)[3]ಎಂಬುವರುಂ ದಶದಿವಸಕಲ್ಲದೆ ಹೋಗಲಾರೆವೆಂಬುವರುಂ ಗತೇಸ್ಮಾಬ್ಬೇಸ್ಮಾಭಿರುಷಿತುಮೆಂಬುವರುಂ (?) ಅ[4](ಭವ ತ್ಯೈ)[4]ವ ವಯಂಗಂತುಮೆಂಬುವರುಂ ಲಿಂಗಾವಸರಮಾಡವೇಳ್ಕೆಂಬುವರುಂ ಶೀಘ್ರದಿಂ ಮುಂದೆಗಮಿಸವೇಳ್ಕೆಂಬುವರುಂ ಶನೈಃಶನೈಃವಯಂ ಗಚ್ಛಾಮಃ ಎಂಬುವರುಂ ಪರುಷಾ ಜನಜನಸ್ಥಿತಜನಸಾ[5](ನಿಧ್ಯ)[5]ಮೆಂಬುವರುಂ ಪಲ್ವಲಹ್ರದಜಲಾಶಯಂಗಳುಂಟೆಯೆಂಬು ವರುಂ ಮಹಾದೇವಪೂಜೆಗೆಯ್ಯಲ್ವೇಳ್ಕೆಂಬುವರುಂ ಉಘೇಉಘೇಜಯಜಯೆಂಬುವರುಂ ಇನ್ನು ಉಘೇಎಂದೆನ್ನೆವೆಂಬುವರುಂ ಇಂತು ನಾನಾವಾಕ್ಯಂಗಳಿಂ ಸಂಭ್ರಮಂಬೆತ್ತ ಪರುಷಾಜನಂ ಮಧ್ಯಾಹ್ನ ಸಮಯದಲ್ಲಿ ಕ್ಷುಧಿತರಾದ ಪರುಷಾಜನಂ ಭೂರುಹಛಾಯಾ ಕುಂಜನಿವಹಂಗಳ ತಳದ ತಣ್ಣೆಳಲುಗಳಲ್ಲಿ ಹೇಮಧರಪ್ರದೇಶಂಗಳೊಳುಂ ಗಂಡ ಶೈಲಂಗಳ ಸಮೀಪಂಗಳೊಳುಂ ನಿರ್ಜರವಾಪೀಕೂಪಪದ್ಮಾಕರತಟಾಕನದೀತೀರಂಗಳ [6]ಹರ್ತಂಗಳ[6] ತೀರಂಗಳೊಳ್ಕುಳಿತುಂ ಪತ್ರಸಂಪುಟ ಪೂಗಪಟ ಚರ್ಮಭಸ್ತ್ರ (?) ತಾಮ್ರಕುಂಭ ಕಾಂಸ್ಯಕಲಶ ಕರಕಮಂಡಲಾದಿಗಳೊಳು ಜಲಗಳಂ ತುಂಬಿಕೊಂಡು ಮತ್ತಂ ಬಿಲ್ವರುದ್ರಜಟೆ ಅರಣ್ಯದವನ ಜಂಬೂ ಶಮೀ ಕುರವಕ ಕಪಿತ್ಥ ನೀರ್ಗುಂಡಿ ದಿಂಡ ತಂಡಸಿ ಅಪಾಮಾರ್ಗಪತ್ರಂಗಳಂ ಕರ್ಣಿಕಾರ ವಕುಳ ಕೇತಕೀ ಮಲ್ಲಿಕಾ ಯೂಥಿಕಾ ದ್ರೋಣಾರಗ್ವಧಾರ್ಕ ಪುನ್ನಾಗ ಮಾಲತೀ ಕಮಲ ನೀಲೋತ್ಪಲ ಕುರಂಟಕ ಕುರವಕ [7](ಧ)[7]ತ್ತೂ ಲೋಧ್ರಬೃಹತಿ ಪ್ರಸವಂಗಳಂ ಚೂತ ಖರ್ಜೂರ ಕರ್ಕಂಧೂ ಕರ್ಕೇಂದೂರ್ಜಂಭೂಫಲತಾಳಹಿಂತಾಳ ಬಿಲ್ವೋದುಂಬರ ನಾರಂಗ ದಾಡಿಮ ಕಪಿತ್ಥ ಕದಳಿ ನಿಂಬ ಜಂಭೀರ ಪ್ಲಕ್ಷ ಮಾತುಳಂಗವರ್ಸೋರ್ವಾರು (?) ಪನಸಾದಿ ಫಲಂಗಳಂ ಭ[8](ಕ್ಷ್ಯ)[8]ನ್ನಪಾನತಾಂಬೂಲಾದಿಗಳಂ ತಮ್ಮಮ್ಮ ಲಿಂಗಂಗಳ್ಗಂ ಕೊಟ್ಟು ಪ್ರಸಾದ ಸ್ವೀಕಾರಂಗೈದುಮಲ್ಲಿಂಮುಘೇಯೆಂದು ತೆರಳ್ದು ಹರುಷದಿಂಹಾಡುತ್ತಂ ಕುಣಿದಾಡು ತ್ತಂ ಸಿದ್ಧಸಿದ್ಧಾಯೆಂದು ಕರಪಲ್ಲವಂಗಳಿಂ ತಾಳಂಗಳನೊತ್ತುತ್ತಂ ಪಾಪಜಾಲಂಗಳಂ

1. ಜಲಸ್ಥಲಂ (ಅಇ). 2. ಲಂಪಥಶ್ರಮಂಗಳಿಂದೂಷಿತರಾದವರ್ಗೆ ಹಿಮ ಕಸ್ತೂರಿಗಂಧಗಳಿಂಬುತಾಗಲುಂ (ಅಇ). 3. ಶ್ಯಾಮ (ಅಇ). 4. ಭುತ್ತೈ (ಅಇ). 5. ನಿಂಧ್ಯ (ಅಇ). 6. x(ಇ). 7. ಥೂ (ಅಇ). 8. ಕ್ಷಾ (ಅಇ).

ಖಂಡಿಸುತ್ತ೦ ಯತಿಯವೈಭವಂಗಳಂ ಕೇಳುತ್ತ೦ ಕೆಲವು ವೃಕ್ಷಶಾಖಾಗ್ರಂಗಳಂ ಪಿಡಿದು ದೋಲಾಂದೋಲಮನಾಡುತ್ತ೦ ಬೀಳುತ್ತೇಳುತ್ತ೦ ಎಡಹುತ್ತ೦ ಕೆಲರ್ತರು ಛಾಯೆ ಗಳಲ್ಲಿ ಕುಳ್ಳಿರುತ್ತ೦ ಕೆಲರ್ಕುಂಜನಿವಹಂಗಳಲ್ಲಿ ಪೋಗುತ್ತ೦ ಗರ್ತಗರ್ತಂಗಳನಿಳಿವೆ ವೆಂದು ಮಡುಮಡುನೆ ಪೋಡುತ್ತ೦ ಘಟ್ಟಂಗಳಂ ಮೆಲ್ಲಮೆಲ್ಲನೆ ಹತ್ತುತ್ತ೦ ವೀಟಿಕೆ ವೀಟಿಕೆಯೆಂಬುತ್ತ೦ ಕ್ಷುಧಿತರ್ಗನ್ನವನ್ನವೆಂಬುತ್ತ೦ ಗಂಧ ಕಸ್ತೂರಿ ಪುನುಗು ಜವಾದಿ ಕರ್ಪೂರಂಗಳಂ ಕೊಡುತ್ತ೦ ಹಿಮಜಲವಂ ಬಳಲ್ದರ ಮೇಲೆ ತಳಿವುತ್ತ೦ ದಶ್ಯವಿದೆ ದಶ್ಯವಿದೆ ಬಳಲ್ದರ್ಗೆಂಬುತ್ತ೦ ಬಂದು ಸಂಧ್ಯಾಕಾಲದಲ್ಲಿ ಪರುಷಾಜನಂ ಬೀಡುಬಿಟ್ಟು ಜಪತಪನೇಮನಿತ್ಯಂಗಳಂ ಶಿವಾರ್ಚನಂಗಳಂ ಮಾಡಿ ರಾತ್ರೆಯುಂ ಕಳಿದು ಪ್ರಭಾತ ಕಾಲದಲ್ಲಿ ಮತ್ತ೦ ಬರುತ್ತ೦ ಇಂತು ಪಲವು ಪಯಣಂಗಳಂ ಕಳಿದು ಕೊಂಕಣ ನೇಪಾಳ ಗುರ್ಜರ ಹೊಯ್ಸಳ ತುರುಷ್ಕ ದ್ರಾವಿಡಾದಿಯಾದ ಸಮಸ್ತದೇಶದ ಪರುಷಾಜನಂ ಬಂದು ಇಂದ್ರಗೋಪದಪಟ್ಟೆ ಪಾರಿಯಪಟ್ಟೆ ಕಚರಿಯಪಟ್ಟೆ ಪರಂಗಿಯ ಪಟ್ಟೆ ದಶರಿಯಪಟ್ಟೆ ಪಚ್ಚೆಯಪಟ್ಟೆ ಕೆಂಪಿನಪಟ್ಟೆ ಮೋಗವಣ್ಣಿಗೆಯಪಟ್ಟೆ ಸೂಪಿನ ಪಟ್ಟೆ ಮುಂತಾದವರಿಂ ಚಪ್ಪರಂಗಳಂ ಗೂಡಾರಂಗಳಂ ಪೊಯಿದು ನೆಲದಗಲಕ್ಕೆ ಬೀಡು ಬಿಟ್ಟಿರ್ದ ಪರುಷೆಯೊಳುಂ ೨೮೮

ಕಂ. ಬಾಸಿಗ ಚವರಗಳಿಂದಂ
ಭಾಸುರ ಗಂಟೆಗಳಂದುಗೆ ಪೂಸರದಿಂದಂ
ಸೂಸಕ ಶೃಂಗರದಿಂದಂ
ಮಿಸಲ ರಥಗಳ ವೃಷಂಗಳೈದಿದುವಾಗಳ್ ೨೮೯

ಪಲ್ಲವ ಚತ್ರಗಳಿಂದಂ
ಉಲ್ಲಾಸದ ರತ್ನತೋರಣಾದಿಗಳಿಂದಂ
ನಿಲ್ಲದ ಚಕ್ರಗಳಿಂದಂ
ಸಲ್ಲೀಲೆಯೊಳೈದುತಿರ್ಕು ಬಂಡಿಗಳಾಗಂ ೨೯೦

ಪಾಲ್ಘಟಗಳ ಘೃತಘಟಗಳ
ಮೇಲೆನಿಸುವಯಿಕ್ಷುರಸವು ತೀವಿದ ಘಟಗಳ
ಸಾಲಿನ ಸಂಚಯದಿಂದಂ
ಶೂಲಿಯ ಭಜಿಪರ ರಥಂಗಳೈದಿದವಾಗಳ್ ೨೯೧

ಪನ್ನೀರ್ಗಳ ಘಟ ತೀವಿದ
ನನ್ನಿಯೊಳು ರಂಭಫಲಗಳ್ತೀವಿದ ರಥಗಳ್
ಸನ್ನುತ ನವನೀತಗಳಿಹ
ಮನ್ನಣೆಯು ರಥಂಗಳಿರ್ದವಾ ಪರುಷೆಯೊಳುಂ ೨೯೨

ವ॥ ಮತ್ತಂ ಮೇರುಪರ್ವತಮಂ ಪ್ರದಕ್ಷಿಣಂ ಬರ್ಪವ್ರತವನುಳ್ಳ ಸುರಕ[1]ನ್ನಿ[1]ಕೆಯುರುಂ ಸಿದ್ಧನಂ ನೋಡಲ್ಬೈದಿ ಖೇಚರದೊಳ್ ತಮ್ಮ ಪ್ರದಕ್ಷಿಣಾಕೃತ್ಯಮಂ ನಡೆಯಿಸುತ್ತಲಿತೀಶನಂ ನೋಡುತಿರ್ದಪರೆಂಬಂತೆ ಕಂಜದಳಾಕ್ಷಿಂಗಳಿಂ ಚಂದ್ರವದನದಿಂ ರತ್ನಾಭರಣಂಗಳಿಂ ತೋರದುರುಂಬಿನಿಂ ಸರಂಬಂಧ ಪೂಜಾಬಂಧ ಹಂಸಬಂಧ ಹರಿಣ ಬಂಧ ನಾನಾಬಂಧ ಮುಂತಾದ ಸೀರೆಗಳಂ ಕಟಿತಟದಲ್ಲಿ ಬಂಧಿಸಿದ ನಾರಿಯರಿಂ ಕಾಸೆ ಮೊಲೆಕಟ್ಟಿಂ ರಾರಾಜಿಸುವ ವನಿತೆಯ[2](ರಿಂ)[2] ವಿರಾಜಿಸುತ್ತಂ ನವರತ್ನಸ್ತಂಭಗಳಿಂದಂ ರಮ್ಯವಾದ ರಥರಾಟಳ ಸಂಚಯಂಗಳಿಂದಂ ಮತ್ತಂ ರಥೋತ್ಸ[3](ವ)[3]ಮಂ ನೋಡಲೆಂದು ನವರತ್ನಖಚಿತ ಪುಷ್ಪಕಾದಿಗಳಿಂ ಬಂದು ನೋಡುತಿರ್ಪ ರುದ್ರಪ್ರಮಥಾದಿಗಳ ವಿಮಾನಂಗಳ ಸಂದಣಿಯೊಯೆಂಬಂತೆ ಮಕುಟದ ಮಾಹೇಶ್ವರರ್ಕೂಳಿತು ಪರುಷೆಯೊಳ್ ಸಂಚರಿಪ ನವರತ್ನಕಾಂತಿನೇತ್ರಲರ್ಗಳಿಂ ರಮ್ಯವಾದನೇಕಪುಷ್ಪಕಂಗಳ ತಿಂಥಿಣಿಯಿಂದಂ ಮತ್ತಂ ವ್ಯಾಲಾಸುರ ಪಂಚಮೇಘಾಸುರ ನರಸಿಂಹದಕ್ಷಮುಖ್ಯರಂ ಸಂಹರಿಸಿದ ವೀರೇಶಂ ಪಲವುರೂಪಿಂದೆತಿಪನಂ ನೋಡಲ್ಬೈದಿದನೆಂಬಂತೆ ಕಾಸೆ ಕೆಮ್ಮಿಸೆ ಕೆಂಗಣ್ಣು ಜುಂಜುದಲೆ ಫಲಕ ಖಡ್ಗ ಧನು ಶರ ನೊಸಲಕಣ್ಣಿಂ ಸಿಂಗರಂಬೆತ್ತು ಮತ್ತಂ ಕಲ್ಯಾಣದ ಬಿಜ್ಜಳನಾನೆಯ ಶಿರಸ್ಸುಗಳಂ ಕುದುರೆಗಳ ಶಿರಸ್ಸಂ ಆನೆಗಳ ಶಿರಸ್ಸಂ ಪತ್ತಿಸಿದ ವೀರದೇವಯ್ಯನ ರೌದ್ರಮನನೊಳಕೊಂಡು ಕುಣಿದಾಡುತ್ತಂ ಚಾರಿವರಿವುತ್ತಂ ಬೊಬ್ಬೆಯಿಡುತ್ತುಮಿಪ್ಪ ವೀರಗಣಂಗಳೊತ್ತೊತ್ತೆಯುಂ ಮತ್ತಂ ಕನೋಜ ಕಾಶ್ಮೀರ ಕೊಂಕಣದೇಶದತ್ತಣಿಂ ಬಂದ ಪ್ರತ್ಯೇಕ ನಾಲ್ಕು ಭಟರಿಂ ಗುರ್ಜರದೇಶದತ್ತಣಿಂ ಬಂದ ಸಪ್ತಲಕ್ಷಭಟರಿಂ ಜಾಲಾಂಧ್ರದೇಶದತ್ತಣಿಂ ಬಂದ ಅಷ್ಟಲಕ್ಷಭಟರಿಂ ಬೊಬ್ಬೆಯಿಡುತ್ತಂಮತ್ತಂ ಬೊಟುದೇಶದತ್ತಣಿಂ ಬಂದ ಸಪ್ತಲಕ್ಷ ಭಟರಿಂ ಬಂಗಾಳದೇಶದತ್ತಣಿಂ ಬಂದ ಅಷ್ಟದಶಲಕ್ಷಭಟರಿಂ ಆಂಧ್ರದೇಶದತ್ತಣಿಂ ಬಂದ ನವಲಕ್ಷಭಟರಿಂ ಮತ್ತಂ ನಾನಾದೇಶದತ್ತಣಿಂ ಬಂದ ಸಮಸ್ತಭಟರಿಂದಿರ್ದುದನುಂ ೨೯೩

ಉ. ಮಾ. ವೃ.

ಸಂಚರಪುಷ್ಪಕಾಳಿ ತರಣೀನಿವಹಂ ರಥವದ್ರಿಮತ್ತ್ಯರಾ-
ಯಿಂಚರದಬ್ಧಿರಂ ಮೊರವು ನಾರಿಯರಕ್ಷಿಸಮೂಹಮೀಂಗಳಂ
ಉಂಚಕೆಯೆತ್ತಿ ತೋರ್ಪ ನೃಪಚಕ್ರಗಳೆಲ್ಲವು ಸೀರಬೊಬ್ಬುಳೀ
ಸಂಚಯುವಾಗಿ ರಾಜಿಸಿತು ಪರ್ಷೆ ಗಭೀರವುದಾರಸಿಂಧುವೊಲ್ ೨೯೪

1. ಸ್ನಿ (ಅ೩). 2. ರಂ (ಅ೩) 3. ಹ (ಅ೩).

ಕಿನ್ನರಿ ಭೇರಿ ಡೋಳು ಪರತಂಬಟ ನಿಸ್ಸಳ ಢಕ್ಕೆ ಘಂಟೆಯಾ-
ಉನ್ನತನಾದ ಕಂಬಿಗರ ಸೂಳ್ನುಡಿಯುಬ್ಬರ ಚಕ್ರಚೀತ್ಕೃತಂ
ಮನ್ನಣೆವೆತ್ತ ಮತ್ತಗಜಬೃಂಹಿತವಾಜಿ ಹೇಷಾಕೃತಂಗಳುಂ
ಸನ್ನುತದಿಂದ ನೂಂಕ[1](ಲಿ)[1]ಭಫೂತ್ಕೃತಪ[2](ರ್ಪೆ)[2]ಯೊಳು[3](ಣ್ಮಿ)[3]ತಾಗಳುಂ ೨೯೫

ಕಂ. ನವರತ್ನದ ಕುಚ್ಚುಗಳಿಂ
ನವವಿಧಚಿತ್ರಗಳ ಸೀರೆಗಳ ಮೇಲ್ಕಟ್ಟಿಂ
ನವಕುಸುಮದ ಜಲ್ಲರಿಗಳ್
ನವೀನಮದಾಗಿಹ ಮಂಟಪದಿ ಸಿದ್ಧೇಶಂ ೨೯೬

ಮೃದುಹಂಸತೂಳತಲ್ಪದಿ
ಪದರದಿ ಹರಹಿರ್ದಲರಿನ ಮೇಗಡೆ ಸಿದ್ಧಂ
ಮುದದಿಂ ಚರಸಮುದಯದೊಳ್
ಹುದುಗಿಯೆ ಕುಳಿತಿರ್ದನಖಿಳಸಂಭ್ರಮದಿಂದಂ ೨೯೭

ಯತಿಯುಂ ಕಂಡಾ ಕ್ಷಣದೊಳ್
ಅತಿಶಯಹರ್ಷಗಳ ತಾಳುತುಂ ಚಿತ್ತಗಳೊಳ್
ಪ್ರತಿರಹಿತನ ಕಂಡೆವೆ[4](ಂದು)[4]
ಹಿತದೊಳಗೈದಿದರು ಯತಿಯ [5](ಸಾನ್ನಿ)[5]ಧ್ಯಕ್ಕಂ ೨೯೮

ದವನದ ಪತ್ರೆಯ ಪಿಡಿದುಂ
ಭವಹರವಹ ಭಸಿತ ಘುಟಿಕೆಗಳ ಪಿ[6](ಡಿವುತ್ತುಂ)[6]
ನವವಿಧಪೂಗಳ ಪಿಡಿದುಂ
[7](ಸ)[7]ವಿನಯದಿಂದೈದಿತಾಗಳೆತಿದರ್ಶನಕಂ ೨೯೯

ಪರಿಪರಿಫಲಗಳ ಪಿಡಿದುಂ
ಉರುತರಕಾಂತಿಗಳ ರತ್ನವ್ರಾತವ ಪಿಡಿದುಂ
ವರಕಸ್ತೂರಿಯ ಪಿಡಿದುಂ
ಪುರುಷಾಜನವೈದಿತಾಗಳೆತಿದರ್ಶನಕಂ ೩೦೦

---

1. ಲ್ದಿ (ಅ೩). 2. ರುಷೆ (ಅ೨). 3. ಮ್ಮಿ (ಅ೩). 4. ಸುತಂ (ಅ೨).
5. ಶಾನಿಂ (ಅ೩). 6. ಡಿದುಂ (ಅ೩). 7. x (ಅ೩).

ವ॥ ಅಂಬುಧಿಯನೊತ್ತರಿಸುವಂತೊಬ್ಬರೊಬ್ಬರು ಹಸ್ತಂಗಳಂ ಪಿಡಿದು ಮುಂದಣ ಸಂದಣಿಯನೊತ್ತರಿಸುತ್ತಂ ಬಂದುಂ ಸಿದ್ಧಲಿಂಗೇಶಂಗೆ ವಂದಿಪರ್ಕೆಲರುಂ ಮತ್ತಮಾ ಸಂದಣಿಯ ನೂಂಕಿ ಪೋಗಲಾರದೆ ನಿಂದಿರ್ಪರ್ಕೆಲರುಂ ಒತ್ತಂಬರ ದೊತ್ತೊತ್ತೆಗಾರದೆ ಕಿಂಚಿತ್ತು ಹಿಮ್ಮೆಟ್ಟುತಿರ್ಪರ್ಕೆಲರುಂ ಮುಂದಿರ್ದರಂ ಬಲಾತ್ಕಾರ [1]ದಿಂ (ಒತ್ತಿ)[1] ಒಳಹೊಗುವರ್ಕೆಲರುಂ ಮುಂದಿರ್ದ ಜನರ ಹಿಂದಕ್ಕೆ ಬರಸೆಳೆದು ಮುಂದಕ್ಕೆ ಅಡಿಯಿಡುವರ್ಕೆಲರುಂ ಹಿಂದಳಮುಂದಳಜನದೊತ್ತೊತ್ತೆಯೊಳ್ ಸಿಲ್ಕಿ ಚರಣಂಗಳ್ ಭೂಮಿಯಂ ಸೋಂಕದಂತರದಲ್ಲಿ ಪೋಪರ್ಕೆಲರುಂ ಆ ಜನಾಂಘ್ರಿ ಭಾಗಂಗಳಲ್ಲಿ ನುಸುಳಿ ಪೋಪರ್ಕೆಲರುಂ ಪೊಡೆಯಲೆಂದೆತ್ತಿದ ದರ್ಭೆಯವರಂ ಕಂಡು ಪಲ್ಗಿರಿವರ್ಕೆಲರುಂ ಜನಸಂದಣಿಯೊಳ್ ಸಿಲ್ಕಿ ನೆಲಕ್ಕೆ ಬೀಳ್ವರ್ಕೆಲರುಂ ಜನಸಂದಣಿ ಯಿಂ ಮುಗ್ಗಿಬಿದ್ದವರಂ ಮೆಟ್ಟಿಯೆಟ್ಟುಗಾಲಿಕ್ಕಿ ನೋಡುತ್ತ ನಡೆವರ್ಕೆಲರುಂ ಪಿಡಿದ ಪೂಮಾಲೆಗಳಿಂ ಮುಂದಿರ್ದರಂ ಪೊಡೆದು ಎಡಬಲಕೊತ್ತಿ ಸಂದಿಗಳೊಳ್ ನುಸುಳಿ ನುಸುಳಿ ಪೋಪರ್ಕೆಲರುಂ ದರ್ಭೆಯವರಂ ದೊರ್ಬಿಪೊತ್ತಿ ನಡೆವರ್ಕೆಲರುಂ ಮುರಿಗೆ ಯವರ್ಗಂಜಿ ದೂರದಲ್ಲಿ ನಿಂದು ಕರಕಮಲಂಗಳಂ ಮುಗಿದಿರ್ಪರ್ಕೆಲರುಂ ಪೊಡೆದ ಮುರಿಗೆಗಳ್ ಕಯ್ಯಂ ಸುತ್ತೆಯಾಮುರಿಗೆಸಹಂ ಮುರಿಗೆಯವರನೆಳಕೊಂಡು ಪೋಪರ್ಕೆಲರುಂ ಕಸ್ತೂರಿಗಂಧವಿಚಿತ್ರವಸ್ತ್ರವೀಳೆಯಂಗಳಂ(?) ಬಾರಿಕೋಲಿನವರ್ಗಂ ಲಂಚವಿತ್ತುಮವರೊತ್ತಿನೊಳ್ನಿಂದು ಸಿದ್ಧಲಿಂಗನ ನೋಡುತಿರ್ಪರ್ ಕೆಲರುಂ ಕಂಚುಕಿ ಯವರಂ ಏಕಾಂತಕ್ಕೆ ಕರದು ರತ್ನಂಗಳಂ ಪೊಂಗಳಂ ಕೊಟ್ಟು ನಮ್ಮ ವನಿತೆಯರಂ ನಮಸ್ಕಾರವ ಮಾಡಿಸಿರಯ್ಯಾಯೆಂದು ದೈನ್ಯದಿಂ ಬೇಡಿಕೊಂಬ ರಾಜಪುತ್ರರ್ ಕೆಲರುಂ ಗಜತುರಗ ಪದಾತಿಬಲಸಮೇತಂ ಬಂದು ಯತಿಪಂಗಂ ವಂದಿಸಿ ಕಡೆಗಂ ಪೋಗಿ-ಪೌಜನೊಡ್ಡಿ ನೋಡುತಿರ್ಪ ಮಂಡಲೇಶ್ವರರ್ಕೆಲರುಂ ಸಮಸ್ತಬಲಸಮೇತಂ ಬಂದು ವಂದಿಸಿ ಕೈಮುಗಿದು ಪೋಪ ಚಕ್ರವರ್ತಿಗಳೆಲ್ಲರುಂ ಮನುಷ್ಯರ ಪೆಗಲೊಳ್ ಕುಳಿತುಂ ನೋಡುತಿರ್ಪಕೆಲರುಂ ವೃಕ್ಷಂಗಳನಡರಿ ನೋಡುತಿರ್ಪರ್ಕೆಲರುಂ ಮಂಟಪ ದ್ವಾರದ ಮುಂಗಡೆ ಜನಸಂದಣಿಯೊಳ್ ಸಿಲ್ಕಿ ನೂಂಕಿ ಪೊರಡಲಾರದೆ ಉಷ್ಣಜ್ವಾಲೆ ಯಿಂ ಬೆಮರ್ದುಬ್ಬಸಗೊಳುತಿರ್ಪರ್ಕೆಲರುಂ ಜನಸಂದಣಿಯೊಳ್ನಿಂದು ಯತಿಪನ ಪದವಂ ತಡಕುವರ್ಕೆಲರುಂ ಅತ್ಯಂತಭಕ್ತಿಯಿಂ ಸಿದ್ಧಯ್ಯಾ ಎಂಬುವರ್ಕೆಲರುಂ ತತ್ಪಾದಾಂಘ್ರಿ ಯೊಳಂ ಸ್ವಶೀರ್ಷಂಗಳಂ ತಾಟಿಪರ್ಕೆಲರುಂ ಆ ಯತಿಪನ ಪದವಂ ಪಿಡಿದೌಕುವರ್ಕೆಲ ರುಂ ಪದಾಂಕುರವಂಗುಷ್ಠಾಗ್ರವಂ ಪಿಡಿದು ನಿಂದಿಪರ್ಕೆಲರುಂ ಶರಣೆಂದು ತಿರುಗುವ ರ್ಕೆಲರುಂ ತತ್ಪದಕ್ಕಂ ವಿಭೂತಿಯುಂ ಒರೆಸುವರ್ಕೆಲರುಂ ಭಸಿತಘುಟಿಕೆಗಳುಂ ಯತಿಪನ ಹಸ್ತಕ್ಕೆ ಕೊಡುತಿರ್ದವರ್ಕೆಲರುಂ ಸಿದ್ಧೇಶನಂ ಕಂಡುವಂದಿಸಿದೆವು ನಾವುಂ ಬದುಂಕಿದೆ ವೆಂಬವರುಂ ಕೆಲರುಂ ನಮ್ಮ ಉಪವಾಸವ್ರತಂ ಇಂದೀಗಂ ಸಮಾಪ್ತಿಯೆಂಬುವರು

1. ದಿಂ (ಅಇ).

ಕೆಲರುಂ ಬಾಯಬೀಗಂಗಳಂ ತೆಗೆಯವೇಳ್ಕುಂಬುವರುಂ ಕೆಲರುಂ ಸಿದ್ಧಯ್ಯಾ ರಕ್ಷಿಸೆಂದು ತಮ್ಮ ಬೇಡಿಕೆಗಂ ಮರಳಿ ಪೋಪರ್ಕೆಲರುಂ ಈ ಶಿಶುಗಳ್ಗೆ ನಿಮ್ಮ ಪೆಸರಯ್ಯ ಎಂಬ ವರ್ಕೆಲರುಂ ಸುತರಂ ಕೊಡೆಂಬವರ್ಕೆಲರುಂ ಕಣ್ಗಳ ಕೊಡೆಂಬರ್ಕೆಲರುಂ ದೀಪ ಧೂಪಂಗಳಂ ಪಿಡಿದುನಿಂದಿರ್ಪರ್ಕೆಲರುಂ ದೀಪಧೂಪಂಗಳ ಮಸ್ತಕಾಗ್ರದೊಳ್ ಪೊತ್ತ ಅಗ್ನಿದೇವನಂತೆ ಕುಣಿದಾಡುವರ್ಕೆಲರುಂ ಮತ್ತಂ ಶೈವಭಕ್ತರ್ವೀರ(ರ?) ಸೋದಗ್ರ ವೇಷಿಗಳಾಗಿ ತಮ್ಮ ತಮ್ಮ ವನಿತಾಸಂದೋಹಸಮೇತವಾಮಾಂಘ್ರಿಯ ವೀರಮುದ್ರಿಕೆ ದನಿಗೊಡುತ್ತಿರೆ ಸಾಲಭಂಜಿಕೆಗಳಂತೆ ಮುಖಾಂಬುಜಗಳಿಗಿಕ್ಕಿದ ಭಯಂಕರಶ್ಶೃಂಖಲಂ ಗಳಿಂ ಧವಳೋದ್ಧೃತ್ಸರ್ಣಪತ್ರದೀರ್ಘಸೀಮಂತಶೋಭನಂಗಳಿಂ ವಿಚಿತ್ರಬದ್ಧಚೂಳಿಕಾ ಸಮಾಲೆಪೀತಚಂದನಂಗಳಿಂ ಪಪಸೇನಾಚಿಕಮುಖಂಗಳಿಂ (?) ಕುಟಿಲಶ್ಮಶ್ರುಜಾಲ ಕಂಗಳಿಂ ಪರಿಸ್ಫುರನ್ನೇತ್ರರುಚಲಿ[1]ತಲ[1]ಸದ್ದಂತಕಾಂತಿಗಳಿಂ ಸಿಂಗರಂಬೆತ್ತು ಶಿರೋಂಶ ಬಾಹುರಸನಾಕಂಠವಕ್ಷಸ್ಸರ್ಕರ್ಣಕಪೋಲಕರಶಾಖೋರು ಕುಕ್ಷಿಕಕ್ಷಪ[2]ಕ್ಷ[2] ಸ್ಥಲಂಗಳಲ್ಲಿ [3](ನಿಶಾಂತದೀಪನೀರಾಜನ ?)[3] ಸಂದೋಹಂಗಳನೆತ್ತುತುಂ [4](ದೀಪ)[4]ವೃಕ್ಷದಂತೆ ನೀರಾ ಜನ ಪರ್ವತದಂತೆ ವಿರಾಜಿಸುತಂ ಕುಣಿದಾಡುತಿರ್ಪರ್ಕೆಲರುಂ ವರಂಗಳ ಬೇಡುತಿರ್ಪ ರ್ಕೆಲರುಂ ಇಂತಪ್ಪ ಪುರುಷಾಜನಕ್ಕಂ ದರ್ಶನಮನಿತ್ತುಂ ಅವರವರಿಷ್ಟಾರ್ಥಂಗಳಂ ಕೊಟ್ಟುಂ ಮತ್ತಂ ಗಗನಮಂ ಸೋಂಕುತಿರ್ಪ ರತ್ನ ಕಳಸಂಗಳಿಂದಂ ವಿಚಿತ್ರ ವಿಚಿ[5]ತ್ರ[5]ವಸ್ತ್ರಪತಾಕಗಳಿಂ ನವರತ್ನಕುಚ್ಚುಗಳಿಂ ತಳಿಗೆದೋರಣ ರತ್ನದೋರಣ ಮಕರದೋರಣ ತಳಿರ್ದೋರಣಂಗಳಿಂ ಕಂಬಾಜಂಬ್ವಾದಿ ನಾನಾಫಲಂಗಳಿಂ ಸಿಂಗರಂ ಬೆತ್ತ ಉತ್ಸಾಹರಥದೊಳ್ ಸಮಸ್ತಮಾಹೇಶ್ವರರ್ಸಹಂ ಮೂರ್ತಿಗೊಂಡು ಸರ್ವಜನಂ ಉಘೇಯೆಂದು ಕೈಪರೆಗುಟ್ಟಿ ನಾನಾವಾದ್ಯಂಗಳ್ಮೊಳಗೆ ರಥನಡೆಯಲಾ ಪೂಜೆಯಂ ಕೈಕೊಂಡುಮಿರ್ಪಲ್ಲಿ · ೨೦೧

ಕಂ. ಯತಿಪಂ ಮೂರುಂ ಗ್ರಾಮದಿ
ಚತುರತೆಯಿಂದೊಂದು ರಾತ್ರಿಯೊಳ್ಕಾಣಿಸುವುದ
ಹಿತದಿಂದರುಪಲ್ ಹರಗು-
ನ್ನತದಿಂ ರವಿಪೋದನೆಂಬೊಲಸ್ತಮಿಸಿರ್ದಂ ೨೦೨

ಆ ಸಮಯದಿ ಸಿದ್ಧೇಶಂ
ಈಶಾರ್ಚನೆಗೈದ ಗೃಹನ ಪೊಕ್ಕಾಕ್ಷಣದೊಳ್
ಸಾಸಿರಚರಸಮ್ಮೇಳದಿ
ವಾಸವನತನರ್ಚನೆಯಿಂದಿರ್ದಂ ಮುದದಿಂ ೨೦೩

---

1. ಕ (ಅಇ). 2. x (ಇ). 3. ನಿಶಾಂತದೀಪನಾರಾಜ (ಅಇ). 4. ವಿಷ (ಅಇ).
5. ತ್ರತ (ಅಇ).

ತಾಪಿನ ಸೂಪಿನ ಪಟ್ಟೆಯ
ತೋಪಿಗರಂಗೆಕರಂಗಿ ಸರಬಂಧಗಳು
ವ್ಯಾಪಿತವಸನಾಶ್ರಯಗಳ
ದೀಪಿಸುತಂ ದೀಪವಿರ್ದವಾ ಪರುಷೆಯೊಳುಂ ೩೦೪

ವಸನ[1](ನಿಕೇತನ)[1]ಗಳೊಳಂ
ಬಸವನ ಚಪ್ಪರಗಳೊಳಧಿಕತಳಿರ್ಸಾಲೆಗಳೊ-
ಳ್ಪಶುಪತಿಭಕ್ತರು ತಮ್ಮಯ
ವಸುನೇತ್ರನ ಪೂಜೆಗೆಂದುಮುದ್ಯತರಾದರ್ ೩೦೫

ನವರತ್ನದ ಪಿಟ್ಟುಗಳಿಂ
ನವತರಮಾಗಿರ್ಪ ಗೋರಿಕಲ್ಪಿಟ್ಟುಗಳಿಂ
ನವರಾಜಾನ್ನದ ತಂಡುಲ
ನವಚೂರ್ಣದ ರಂಗವಲ್ಲಿಯಂ ರಚಿಸಿದರುಂ ೩೦೬

ದಧಿಘೃತಪಯ ಗೋರೋಚನ
ಒದವಿದ ಗೋಮೂತ್ರ ಗೋಮಯಂಗಳ ಕೂಡಿಯು
ಹದುಳದಿ ಷಡುಸಮ್ಮಾರ್ಜನೆ
ವಿಧಿಯಿಂ ಮಾಡಿದರು ಭಕ್ತರ್ತಮತಮಗೆಲ್ಲ ೩೦೭

ಕರವೀರಂ ಕ[2](ಲ್ಹಾ)[2]ರವ
ಮರುಗಂ ದವನಾದಿ ಪತ್ರೆ ಪೂ ಮುಂತಾದವ
ವರರಂಗವಲ್ಲಿಯುಗ್ರದಿ
ಪರಪಿದರಾ ಭಕ್ತರೆಲ್ಲ ತಮತಮಗಾಗಂ ೩೦೮

ಪೂತೋದಕ ಕಳಸಗಳಂ
ಆತುರದಿಂ[3]ದ[3]ಗ್ರದಲ್ಲಿ ಇರಿಸಿಯು ಮತ್ತಾ
ಪ್ರೀತಿಯೊಳುಪಕರಣಂಗಳ
ಭೂತೇಶನ ಪೂಜೆಗೆಂದು ಮಡಗಿದರಾಗಳ್ ೩೦೯

---

1. ದನೆತ್ಮನಿ (ಅಇ). 2. ಲ್ಹಾ (ಅಇ). 3. ದದರ (ಅಇ).

ಭಸಿತೋದ್ಧೂಳನಗೈದುಂ
ಹಸನಹ ರುದ್ರಾಕ್ಷೆಗಳನು ಶಿರವುರಕ[1](ರ್ಣದಿ)[1]
[2](ಯೆ)[2]ಸೆವವಯವದಿ ಧರಿಸಿ ಮು-
ತ್ತೆಸೆವ ಷಡಕ್ಷರವ ಜಪಿಸಿದರ್ಭಕ್ತರ್ಕಳ್ ೩೧೦

ವ॥ ಸ್ವರ್ಣಾದ್ಯಖಿಳಲೋಹವಟ್ಟಲೊಳುನ್ನತ ನವರತ್ನ ಚರಷಂಗಳೊಳುಂ
ಪೂಗಪರ್ಣಪಲಾಶಪದ್ಮಪತ್ರಾದ್ಯಖಿಳಸಂಪುಟಂಗಳೊಳುಂ ತುಂಬಿದ ದಧಿಪಯಾಜ್ಯ
ಗೋಮೂತ್ರಗೋಮಯುಸಹಪಂಚಗವ್ಯಮಂ ಪಯದಧಿಘೃತೇಕ್ಷುರಸಮಧುವೆಂಬ
ಪಂಚಾಮೃತಮಂ ದಧ್ಯಾಜ್ಯಪಯಕ್ಷೌದ್ರ ಶರ್ಕರೈಲಾಮರೀಚಂ ಶೃಂಗಿವೇರಲವಣ
ತಕ್ರಾದಿದಶಾಮೃತಂಗಳಂ ಕುಶಾಗ್ರತಿಲಕಸಿದ್ಧಾರ್ಥಯವವ್ರೀಹಿಪಯಯುಕ್ತವಾದರ್ಘ್ಯ
ಮಂ ಸಿದ್ಧಾರ್ಥಂಕುಸುಮಂ ದೂರ್ವಕೋಷ್ಠೈಲವು ಶಿರಮುಕ್ತಾಚಮ್ಯಮಂ ಮತ್ತಂ
ಪುಷ್ಪಯವಕಾರಕುಶಾಕ್ಷತೆತಿಲಸರ್ಷಪಗಂಧಾಕ್ಷತಾದ್ಯಷ್ಟಾರ್ಘ್ಯಮಂ ಗೋಧೂಮಾ
ಚೂರ್ಣೋಷ್ಣವಾರಿಯುಂ ಹರಿದ್ರಚೂರ್ಣೋದಕಮಂ ಗಂಧೋದಕಮಂ ರತ್ನೋದಕ
ಮಂ ಹೇಮೋದಕಮಂ ಮುದ್ಗಚೂರ್ಣೋದಕಮಂ ಮಂತ್ರೋದಕಮಂಎಳೆನೀರಮಂ
ಪನ್ನೀರುಮಂ ಕೆಲಕೆಲರ್ ತಮ್ಮತಮ್ಮ ಲಿಂಗಂಗಳ್ಗೆಮಜ್ಜನಕ್ಕೆರೆದುಂ ಚಂದನಾಗರು
ಕರ್ಪೂರಕುಂಕುಮಾದ್ಯನುಲೇಪನಮಂ ಚಂದನಾಗರು ಕರ್ಪೂರತಮಾಲದಲಕುಂಕುಮ
ಶಿರಕೋಷ್ಠ ಸಮ್ಮಿಶ್ರಾಷ್ಟಗಂಧಮಂ ಬಿಲ್ವಮೂಲಗಂಧಮಂ ದೇವದಾರುಗಂಧಮಂ
ಆರಗ್ವದಗಂಧಮಂ ಅರ್ಕಮೂಲಗಂಧಮಂ ಬೃಹತಿ[3]ಕುಸುಮಾಕ್ಷತೆ[3]ಯುಂ ವ್ರೀಹಿತಂಡು
ಲಾಕ್ಷತೆಯುಂ ಮೌಕ್ತಿಕಾಕ್ಷತೆ ಮುಂತಾದುವುಂ ನಾನಾವಿಚಿತ್ರತರವಸ್ತ್ರಂಗಳಂ ಕುಸುಮ
ದಿಂಡೆಗಳಿಂ ದಂಡೆಗಳಂ ಮಾಲೆಗಳಂ ಸ್ವರ್ಣಪುಷ್ಪಂಗಳಂ ಬಿಲ್ವಾದಿಪತ್ರೆಗಳಂ ಮತ್ತಂ
ಷಡ್ಭಾಗಕೋಷ್ಠದ್ವಿಗುಣಗುಡಲಾಕ್ಷಾತ್ರಯನಖಪಂಚಹರೀತ ಸಜ್ಜರ[4](ಸ)[4] ಜಟಾ
ಮಾಸಿ ಪ್ರತ್ಯೇಕಮೇಕೇಕಾಂಶ ಶೈಲಜತ್ರಿಗುಣಂ ತಮುಕು[5](ಕ)[5]ಗ್ಗಲುಮೊಂದೊಂದು
ಭಾಗಂಗಳಾಗಿ ಕೂಡಿದ[6]ದ[6]ಶಾಂಗ ಧೂಪಮಂ ಮತ್ತಂ ಕುಮುಂಜನ ಏಗಂಟೆ ಜಾಲ
ಹಾಲ್ಮಡಿ ಧೂಪರಾಜ ಮುಂತಾದ ಧೂಪಂಗಳಂ ತಮತಮಗೆಲ್ಲಂ ಸಮರ್ಪಿಸಿ ಮತ್ತಂ
ಸ್ವರ್ಣರಜತಾದ್ಯಾರತಿಗಳಂ ರತ್ನಾರತಿಗಳಂ ಅಪಾಮಾರ್ಗಕಾಷ್ಠಾರತಿಗಳಂ ಶಾಲಿಪಿಷ್ಟಾ
ರತಿಗಳಂ ಕರ್ಪೂರದಾರತಿಗಳಂ ಷಟ್ಸಸ್ತ್ರದಶನೀರಾಜನಂಗಳಂ ಸಮರ್ಪಿಸಿ ಕ್ಷೀರಾನ್ನ
ದಧ್ಯಾನ್ನಮಂ ಪರಮಾನ್ನಮಂ ಮುದ್ಗಾನ್ನಮಂ ಕೃಷ್ಣಾನ್ನಮಂ ಹರಿದ್ರಾನ್ನಮಂ
ಭಕ್ಷ್ಯಂಗಳಂ ಪುಂಡ್ರೇಕ್ಷುಕದಳಿಪನಸಜಂಬುಕಪಿತ್ಥಾದಿಫಲಂಗಳಂ ಹೇಮತಾಂಬೂಲಾದಿ
ಗಳಂ ಸಮರ್ಪಿಸಿಮತ್ತಂ ಛತ್ರಚಾಮರವ್ಯಜನಗೀತಾಲಾಪಶಂಖಘಂಟೆಮುಂತಾದುಪ

---

1. ರ್ಣಾ (ಅಇ). 2. ದ್ಯೆ (ಅಇ). 3. ಕುಸುಮುಕುಸುಮಾಕ್ಷತೆ (ಅಇ). 4. ಸಿ (ಅಇ).
5. ತ (ಅಇ). 6. ದಸಾ (ಅಇ).

ಚಾರಂಗಳಂ ಮಾಡಿಪ್ರದಕ್ಷಿಣನಮಸ್ಕಾರದೈನ್ಯಪುಷ್ಪಾಂಜಲಿಸೆಜ್ಜೆಯರಮನೆಗೆ ಬಿಜೆ ಮಾಡಿಸುಹವೆಂಬಿನಂ ಮಾಡಿ ಜಂಗಮಾರಾಧನೆಯುಂ ಮಾಡಿ ಪ್ರಸಾದಮಂ ಸ್ವೀಕರಿಸಿ ಇರ್ಪರ್ ಕೆಲರುಂ ಉಪವಾಸಂಗಳ ಮಾಳ್ಪ ಶೈವರ್ಕೆಲರುಂ ಹಾಡುವರ್ಕೆಲರುಂ ಪುರಾಣ ವನೋದುವರ್ಕೆಲರುಂ ಭೃಂಗಿಗಳನಾಂಟ್ಯವ ನೋಡುವರ್ಕೆಲರುಂ ಕುಣಿವರ್ಕೆಲರುಂ ಕಥೆವೇಳುವರ್ಕೆಲರುಂ ಶಿವಧ್ಯಾನವ ಮಾಳ್ಪವರ್ಕೆಲರುಂ ಸಿದ್ಧಲಿಂಗನಂ ಕೊಂಡಾಡುವ ರ್ಕೆಲರುಂ ಸ್ಮರಿಪರ್ಕೆಲರುಂ ಇಂತು ನಾನಾತೆರವ ಪೂಜೆಗಳಿಂ ಪರುಷಾಜನವಿರುತ್ತಿರಲುಂ ೩೧೧

ಕಂ. ಆ ನಿಸಿಯೊಳ್ ಕಣಿಕಲ್ಲೊಳು
ಮಾನಸಸಂಜಾತವೈರಿಭಕ್ತರು ನೆರೆದುಂ
ಜಾನಿಸಿ ಯತಿಯಂ ಕುರಿತುಂ
ಸೂನದೊಳಂ ಪರ್ವಮಾಡುತಿರ್ದಾ ಕ್ಷಣದೊಳ್ ೩೧೨

ಮತ್ತಂ ದೇವರಾಯನಾ
ಪತ್ತನದಲ್ಲಿಪ್ಪೊರ್ವ ತಿಗುಳನಾ ರಾತ್ರಿಯೊಳುಂ
ಚಿತ್ತದಿ ಚಿಂತಿಸುತೆಂದಂ
ಬಿತ್ತಿದ ಕಬ್ಬಿಂಗೆ ನೀರು ಹತ್ತದ ತೆರನಂ ೩೧೩

ಕಬ್ಬೊಣಗುತ್ತಿರೆ ತಿಗುಳಗೆ
ಹಬ್ಬಿದುದೆದೆಯೊಳಗೆ ದುಃಖವಾ ರಾತ್ರ್ಯೊಳುಂ
ಒಬ್ಬನೆಯಂಗಣದೊಳಗಂ
ಉಬ್ಬಿದ ಚಿಂತೆಯೊಳು ಮಲಗಿ ಸುಪ್ತುತ್ತಿರ್ಪಂದಂ ೩೧೪

ನೀರ ಹೋಕ್ಕೀಜಿ ತೂಬಂ
ಸಾರಿಯೆ ಕಂಬವನು ನೆಗಹೆ ಬಾರದೆಯಿರಲುಂ
ಆರಯ್ದು ತೆಗೆಯಲೆಂಡುಂ
ಭೋರನೆ ಧನವಿತ್ತನಂಬಿಕಗಾರ್ಕ್ಷಣದೊಳ್ ೩೧೫

ಅವಮೂರ್ದಿನ ಪರಿಯಂತಂ
ಹವಣರಿಮುಂ ಮುಳುಗಿ ಮುಳುಗಿಯಲ್ಲಿಯ ಮಣ್ಣಂ
ಜವದಿಂ ತೆಗೆಯಲ್ಕಾರದೆ
ಇವರ್ಯೆದಿದರಾಗದಿದುವೆ ಸಮಗೆಂದೆಸುತಂ ೩೧೬

ಯತಿಸಿದ್ಧಲಿಂಗದೇವನೆ
ಹಿತವಾಗಿಯೆಯೆನ್ನ ಕರ್ಬುದೋಂಟಕೆ ನೀರಂ
ಸತತಂ ಏರುವ ತೆರನಂ
ಪ್ರತಿರಹಿತನೆ ತೋರುಯೆಂಬು ನೆನೆವುತ್ತಿರ್ದಂ ೩೧೭

ವ || ಆ ಅರ್ಧಮ ರಾತ್ರಿಯೊಳ್ ಸಿದ್ಧಲಿಂಗೇಶ್ವರಂ ಪಲವುರೂಪಂದಾಳಿ ತನ್ನ ನೆನೆವಕಣಿಯಕಲ್ಲಭಕ್ತರೊತ್ತಿನೊಳಂ ದೇವರಾಯನಪತ್ತನದ ತಿಗುಳನೊತ್ತಿನೊಳಂ ರೂಹುದೋರೆಯಾ ಕಣಿಯಕಲ್ಲ ಭಕ್ತರ ಪರ್ವದ ಸಮಯದೊಳ್ ಪ್ರಸನ್ನದೋರಿ ಲಿಂಗಾಕಾರವಾಗಿರ್ದಂ ಮತ್ತಂ ದೇವರಾಯಪತ್ತನದ ತಿಗುಳನಂ ಎಬ್ಬಿಸಿ ತಟಾಕ ದೊತ್ತಿಗಂ ಕರೆದುಕೊಂಡೊಯ್ದು ತೂಬಂ ಕಿತ್ತು ನೀರುಮಂ ಕೊಟ್ಟಂ ತುಮಕೂರು ತೆಂಕಡೆಸೆಯ ಬಸವನ ಮಂಟಪದಲ್ಲಿಪ್ಪ ಮಹೇಶ್ವರಮಧ್ಯದಲ್ಲಿ ಕುಳಿತುಂ ಬೆಳಗಪ್ಪನ್ನೆ ಗಂ ಶಿವಾರ್ಚನೆಗೈವುತಿರ್ದಂ ಇಂತೀ ಸಿದ್ಧಲಿಂಗೇಶ್ವರಂ ಒಂದು ರಾತ್ರೆಯೊಳ್ [1](ಮೂ)[1]ರುಗ್ರಾಮದೊಳ್ ಪ್ರಸನ್ನದೋರಿದುದಂ ಸಕಲಮಾಹೇಶ್ವರರ್ಕೇಳ್ದುಂ ಕಂಡುಂ ಆಶ್ಚರ್ಯಂಬಟ್ಟುಂ ಲಂಕೆಯಲ್ಲಿ ರೇವಣೇಶ್ವರಂ ಮೂರುಕೋಟಿ ರೂಹುದೋರಿರ್ದುದಂ [2]ದ್ವಾರಾವತಿಯ ಶ್ರೀಕೃಷ್ಣನ ಷೋಡಶಸಹಸ್ರಗೋಪಿಯರಮನೆಮನೆಯಂಗಳದೊಳು ಪರಮೇಶಂ ಷೋಡಶಸಹಸ್ರರೂಹುದೋರಿ ಭಿಕ್ಷುಕವೇಷದಿಂದಿರ್ದುದಂ ಬಸವೇಶ್ವರಂ ಕಲ್ಯಾಣದಲ್ಲಿಯೂ ಕೈಲಾಸದಲ್ಲಿಯೂ ರೂಹುದೋರಿರ್ದುದಂ[2] ಹಂಪೆಯ ಹರೀಶ್ವರಂ ಹಳೆಬೀಡಿನಲ್ಲಿಯೂ ವಿರೂಪಾಕ್ಷನಲ್ಲಿಯೂ ರೂಹುದೋರಿರ್ದುದಂ ಪೂರ್ವಪ್ರಸಂಗ ದೊಳ್ಕೇಳ್ದೆವುಂ ಇಂದೀ ಸಿದ್ಧಲಿಂಗೇಶ್ವರನೊಂದುರಾತ್ರೆಯೊಳ್ಮೂರುಗ್ರಾಮದಲ್ಲಿ ರೂಹುದೋರಿ ಅವರಿಷ್ಟಮಂ ಸಲಿಸಿದುದಂ ಪ್ರತ್ಯಕ್ಷಕಂಡೆವೆಂದು ಪ್ರಭಾತಕಾಲದಲ್ಲಿ ಕೊಂಡಾಡುತ್ತಿರೆಯಿರೆ ೩೧೮

ಮ. ವಿ. ವೃ.
ಪರಮೇಶಂ ಗಿರಿಶಂ ಸುಧಾಕರಧರಂ ಕಾಲಾಂತಕಂ ಶಂಕರಂ
ಉರುಗೇಂದ್ರಾಭರಣಂ ವಿನಾಯಕಪಿತಂ ಗಂಗಾಧರಂ ಕಾಮಸಂ-
ಹರ ಸೌಖ್ಯಾಕರರಕ್ಷಿಕೆಮ್ಮವನು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮಜಟಾಧರಂ ಪುರಹರಂ ಭರ್ಗಂ ಶಿವಾವಲ್ಲಭಂ ೩೧೯

ಗದ್ಯ || ಇದು ಸಕಲಸುರಗಣಮಣಿಮುಕುಟರಂಜಿತ ದ್ಯುಮಣಿದ್ಯುತಿಪುಂಜಮಂ ಜುಲರಂಜಿತ ಸಂಪಚ್ಚರಣನೆನಿಪ ಭೂತೇಶ್ವರಶ್ರೀಪಾದಪಯೋಜಮಕರಂದರೋಲಂಬ ಮಾನ ಚೆನ್ನವೀರೇಶ್ವರಾಭಿಧೇಯ ವರ ಜಂಗಮದೇವ ವಿರಚಿತಮಪ್ಪ ಷಟ್ಸ್ಥಲ ವಲ್ಲಭ ಮಹಾಪ್ರಬಂಧದೊಳ್ ಸಿದ್ಧಲಿಂಗೇಶ್ವರನಾನಾಮಾಹಾತ್ಮ್ಯ ರಥೋತ್ಸಾಹ ಕಥನಂ ಪಂಚಮಾಶ್ವಾಸಂ ಸಮಾಪ್ತಂ.

---

1. ನೂ (ಅಇ). 2. x (ಇ).

## ಷಷ್ಠಾಶ್ವಾಸಂ

# ಸಿದ್ಧಲಿಂಗೇಶ್ವರ ಮಾಹಾತ್ಮ್ಯ ಕಥನಂ

ಪ್ರ ವೃ.

*ದಿಷ್ಣೇಶೋಷ್ಣಪ್ರದೀಷ್ಣಾತ್ರಕ್ಷಹರಿವಲಯರೋಚಿಷ್ಣಕೃಷ್ಣಾಧ್ವಕೃಷ್ಣಂ
ಕೃಷ್ಣೋರ್ಧೋರ್ಧೋಷ್ಣರುಗ್ಣಂಮದನಮದದಹಂಧೃಷ್ಣುಜಿಷ್ಣುತೃತಿಷ್ಣುಂ
ಭೂಷ್ಣುಂಶ್ಲೋಕ್ಷಾತ್ಸವೃಕ್ಣಂಜಯುಜವನಸಹಿಷ್ಣುಂಸ್ವಭೂದಿಷ್ಣ್ವಜಿಷ್ಣು
ಕೆರ್ೋಷ್ಣಿಷಾಂಘ್ರಿಧ್ವನೆನ್ನಂ ಸಲಹಲಿ ಸುತಹರ್ಷಾಬ್ಧಿವರ್ಧಿಷ್ಣುಜಿಷ್ಣುಂ ೧

ಉ. ಮಾ. ವೃ

ದೇವಯರಾಯಪತ್ತನದ ಭಕ್ತರು ವಂದಿಸಿ ಸಿದ್ಧಲಿಂಗಗಂ
ಪಾವನಭಸ್ಮವಿತ್ತು ಬಿಜಮಾಳ್ಪುದು ದೇವನೆ ನಮ್ಮಯೂರ್ಗೆಯೆಂ-
ದೀ ವಿಧದಿಂದೆ ಬಿನ್ನಹವ ಮಾಡಲು ಭಕ್ತರ ಪ್ರೀತಿಗೋಸುಗಂ
ಭಾವಜವೈರಿಮೂರ್ತಿ ಚರಲಿಂಗಸಮೂಹದಿ ಬಂದನಾಗಳುಂ ೨

ಅಂಬರಮಧ್ಯದಲ್ಲಿ ವೃಷಕೇತನಯೂಥಪರಸ್ಪರಂಗಳಿಂ
ಲಂಬಿಸಿ ಗ್ರಂಥಿಸಂತತಿ ವಿರಾಜಿಸೆ ಚಿತ್ರಪಟಾಳಿಯುಂಬರಾ
ಡಂಬರವನ್ಯದನ್ಯಪರಿಗೂಹನರೇಕ[1](ಸು)[1]ಛತ್ರಸಂಚಯಂ
ಇಂಬುಗಳಿಂ ತೊಡರ್ಚಿಯು[2](ರು)[2]ಪುಷ್ಪಕಕೋಟಿಗಳೊಂದರೊಂದರೊಳ್ ೩

ಅನ್ಯತರಾನ್ಯಗೀತತತಿಯಿಂದಿತರಾನ್ಯಕಥಾವಿಲಾಸದಿಂ
ದನ್ಯತರಾನ್ಯತಾಳಜತಿಯಿಂ ಕಹಳಾಸ್ವನವಾದ್ಯದಾಘದಿಂ
ಅನ್ಯತರಾನ್ಯಮರ್ತ್ಯಗಣಸಂ[3](ಘದೊಳ)[3]ನ್ಯವಚೋವ್ರಜಂಗಳಿಂ
ದ್ಯನ್ಯತರಾನ್ಯ[4]ಮಾಂ(ಡ)ಳಿ(ಕ)[4]ಸಂಘಟ ರಾಜಿಸೆ ಬಂದನರ್ತಿಯಿಂ ೪

---

*'ಇ' ಪ್ರತಿಯಲ್ಲಿ ಈ ಪದ್ಯ ಹೀಗಿದೆ. 'ಅ' ಪ್ರತಿಯಲ್ಲೂ ಸ್ವಲ್ಪ ಹೆಚ್ಚುಕಡಿಮೆ ಹೀಗೇ ಇದೆ–
"ದಿಷ್ಣೇಶೋಷ್ಣಾಪ್ರದೀಷ್ಣಾಕ್ಷಹರಿವಲಯ ರೋಚಿಷ್ಣು ಕೃಷ್ಣಾದ್ವ ಕೃಷ್ಣಾದ್ವ ಕೃಷ್ಣಂ ಕೃಷ್ಣೋರ್ದೋರ್ದೋಷ್ಣರುಗ್ಣಂ ಮದನಮದನದಹಂಧೃಷ್ಣುಜಿಷ್ಣುತೃತಿಷ್ಣು ಭೂಷ್ಣುಂ ಶ್ಲೋಕ್ಷಾತ್ಮವೃಕ್ಣಂ ಜಯುಜವನಸಹಿಷ್ಣುಂ ಸ್ವಭೂದಿಷ್ಣ್ವ ಜಿಷ್ಣು ಕೆರ್ೋಷ್ಣಿಷಾಂಘ್ರಿಧ್ವನೆನ್ನಂ ಸಲಹಲಿ ಸುತಹರುಷಾರ್ಬ್ಧಿವರ್ಧಿಷ್ಣುಜಿಷ್ಣುಂ"

1. ಕ (ಅಇ). 2. ರ (ಅಇ). 3. ಗರ್ಷ (ಅಇ). 4. ಮಾಂದಳಿರ (ಅಇ).

ಪುಷ್ಪದ ಮಾ[1](ಲ್ಯದಿಂದೆ)[1] ಫಲ ಪಲ್ಲವ ಕರ್ಕರ ಗಂಧ ಕಸ್ತು‍ರೀ
ಲೇಪಿತ ಕಾಣ್ಕೆ ಚೆಂಡು ಘನಕರ್ಪುರಹಾರ ವಿಭೂತಿಪಾತ್ರಿಕಾ-
ಧೂಪದ ಘಂಟಿಕಾವಿತತಿಯಂ ಪಿಡಿದೊಪ್ಪುವ ಪಾವುಲೋಚನಾ-
ಲಾಪಸಮೂಹ ಸಂಭ್ರಮಿಸೆ ಬಂದನು ಸಂಯಮಿಯಾಢ್ಯವರ್ತಿಯಿಂ ೫

ಬಂದವರಿಚ್ಛೆಯಂ ಸಲಿಸುತಂ ಇರುತಿರ್ದುವು ಸಿದ್ಧಲಿಂಗ ತಾ-
ನಿಂದುಧರಾನ್ನದಾನಿ ಘನಮಲ್ಲಯಲಿಂಗನ ಮಂಟಪಾಂತದೊಳ್
ಪೊಂದಿ ಕುಳಿತ್ತು ಜಂಗಮಸಮೂಹಸಮೇತನುಭಾವಗೋಷ್ಠಿಯಾ
ಸಂದಣಿಯಿಂದಲಿರ್ಪವಸರಾಂತದಿ ಬಾಗಿಲೊಳಿರ್ದರಾಗಳುಂ ೬

ಕಂ. ಅನುಭಾವದ ವೇಳೆಯೊಳುಂ
ಜನಸಂದಣಿಯಪ್ಪುದೆಂಬ ಯತಿಯಾಜ್ಞೆಯನುಂ
ಮನದೊಳ್ ಧರಿಸಿಯು ಮಿಗೆ ತಾಂ
ಘನತರದಿಂ ದ್ವಾರಪಾಲರಿರ್ದರ್ ಮುದದಿಂ ೭

ಜ್ಞಾನವೆ ಬಾರ ಜ್ಞಾನವೆ
ಹೋ ನಿಷ್ಕಲೇ ಬಾ ಸತ್ಕಲೆ ಹ್ಯೋ ಸಸುದ ಬಾ
ನೂನದಹಂಕೃತಿ ಹೋಗಾ
ಮಾನಿತ ನಿರಹಂಕಾರವೆ ಬಾರೆನುತಿರ್ದರ್ಂ ೮

ಉ. ಮಾ. ವೃ.
ಜೀವನ ಬಾಗಿಲೊಳ್ ಭ್ರಮೆಯ ನಿಲ್ಲಿಸಿಯಾತ್ಮನ ಬಾಗಿಲೊಳ್ಮರೆಯಿಂ
ಆವಗ ನಿಲ್ಲಿಸಿತ್ತ ಪರಮಾತ್ಮನ ಬಾಗಿಲೊಳಂ ಸುಚಿತ್ತಮಂ
ಓವಿ ತಡಂಪುಮಿಂದ್ರಿಯಸಮೂಹಗಳೆಲ್ಲವು ಮೂಲಮಂತ್ರಗ-
ಳ್ತೀವಿದ ಸಮ್ಮುಖಂಗಳ ಬಿಡುತ್ತಲು ಪೋಗೆನುತಿರ್ದರಾಗಳುಂ ೯

ಒಂದನೆ ಬಾಗಿಲಲ್ಲಿ ಘನಭಕ್ತನನುಂ ದ್ವಯಬಾಗಿಲಲ್ಲಿಯೇ
ವೊಂದಿ ಮಹೇಶ್ವರ ತೃತಿಯದಲ್ಲಿ [2](ಪ್ರ)[2]ಸಾದಿ ಚತುರ್ಥವಾಗಿಲೊಳ್
ಸೌಂದರ ಪ್ರಾಣಲಿಂಗಿ ವರಪಂಚಕದೊಳ್ ಶರಣೈಕ್ಯನಾರರೊಳ್
ಬಂದರೆ ಬಿಟ್ಟರಂ ಬಿಡುತ ನಿಲ್ಲಿಪರಂ ನಿ[3](ಲಿ)[3]ಸುತ್ತ[4](ಲಿ)[4]ರ್ದರುಂ ೧೦

1. ಲ್ಯಾದಿಪ (ಅಇ). 2. ಪ್ರಾ (ಅಇ). 3. ಲ್ಲಿ (ಅಇ). 4. ರಿ (ಅಇ).

ಕಂ. ಇಂತಾರು ಬಾಗಿಲೊಳಗ-
ಪ್ಪಂತಾ ಕುರುಪುಗಳ ನೋಡಿ ಬಿಡುವರ ಬಿಟ್ಟುಂ
ಮತ್ತಾ ತಡೆವರ ತಡೆವುತ
ಸಂತೋಷದೊಳಿರ್ದರಾಗ ದ್ವಾಸ್ಥಾಚರಗಳ್ ೧೧

ಕಾಲವರ ಕರದಿ ತಡೆದುಂ
ಮೇಲವರಂ ಕೋಲಿನಿಂದ ತಡೆದೊಳ್ತಿಯರಂ
ತಾಲುವ ಹೊಡೆದಜ್ಞಾನದ
ಜಾಲವ ಕಾಶಾದಂಡ[1]ದಿ[1] ಹೊಡೆವುತ್ತಿರ್ದರ್ ೧೨

ಉ. ಮಾ. ವೃ.
ಭಾವದ ವಿಭ್ರಮಾನ್ವಿತರು ಬಾರದಿರಜ್ಞರು ಬೇಗ ಪೋಗಿ ಸಂ
ಭಾವಿತ ಸತ್ಕ್ರಿಯಾನ್ವಿತರು ಬನ್ನಿ ಮಲತ್ರಯಬದ್ಧಚಿತ್ತದು-
ರ್ಭಾವಿತರತ್ತಲಿ[2](ರ್ರಿಸುತ)[2] ಕಾಮುಕರೋಡಿರೊ ಬೇಗ ಲಿಂಗಸಿ-
ಷ್ಠಾವರಣಾನ್ವಿ[3](ತಾ)[3]ಂಗಿಗಳು ಚಿತ್ತವಿಸೆಂಬುತಲಿರ್ದರಾಗಳುಂ ೧೩

ಮ. ವಿ. ವೃ.
ಜನತಾಸಂಗತಿ ಬೇಗ ಪೋಗಿ ನಿಮಗೀ ಗೋಲಂಗಳೆಲ್ಲಂ ಮಹಾ-
ಘನವಿಶ್ವಾಸಿಗಳೆಲ್ಲ ನಿಲ್ಲಿ ಶಿವತತ್ತ್ವಾ[4](ರ್ಥಾನ್ವಿತ)[4]ರ್ ಬನ್ನಿ ಜೀ-
ವನಬು[5](ದ್ಧ್ಯಾ)[5]ನ್ವಿತರಿಲ್ಲಿ ನಿಲ್ಲದಿರಿಯೇಕಾಂತ್ಯೈಕ್ಯರುಂ ಬನ್ನಿ ಕಾ-
ವನ ಲೋಕಾಂತಿಗರೋಡಿಯೆಂಬುತಲು ತಾಂ ನಿಂದಿರ್ದರಾ ದ್ವಾಸ್ಥಕರ್ ೧೪

ಉ. ಮಾ. ವೃ.
ಚೆಂಬಳಿದಾಮಗಂಟಿವಗರಂಟಿರವಂತಿ ವಸಂತಮುಂಜು[6](ಡೀ)[6]
ನೆಂಬಿಳಿಮುಂ ಗಜಾವಳಿ ಸರಾವಳಿ ಪೊಪ್ಪುಳಿ ರಾಯಶೇಖರಂ
ಕುಂಬಳಗಂಟಿಗಿಂಟೆನವನಾರಿಯಕುಂಜರಚಿನ್ನದಾರಿಯುಂ
ಜೊಂಜೆಯ ಮಂಜಡಿಂ ಕಮಲಮಂಜಡಿಯಾದಿಯನುಟ್ಟ ನಾರಿಯರ್ ೧೫

ಕಾವುರಿಗೇಳಕ್ಕೈಬರಹ ಮುತ್ತಿನ ಚಪ್ಪರ ಪುಷ್ಪಮಂಜಡಂ
ದೇವುಕಬಣ್ಣ ನೀಲ ಗಿಳಿರಾಮ ಸುರಾವಳಿರಲ್ಲಿ ಪಾವುಟಂ
ಚಾವುಕದಾಳಿ ರಂಗರಥಮಂಜಡಿ ಕೇಸರಿ ಮೇಘವಣ್ಣಿಯುಂ
ಕಾವುಳ ಕಂಬಿವಾಳ ಕಡಿತಾಸುರಸೀರೆಯನುಟ್ಟ ಕಾಂತೆಯರ್ ೧೬

---

1. ದಿಂದ (ಅಇ). 2. ರಿ (ಅಇ). 3. ತರ (ಅಇ) 4. ರ್ಥಸಿತ್ವ (ಅಇ).
5. ದ್ಯಾ (ಅಇ). 6. ಡಿ (ಅಇ).

ಮುತ್ತಿನ ಜೊಟ್ಟು ಹಾರ ವರಮುದ್ರಿಕೆ ಮಂಗಲಸೂತ್ರ ರತ್ನದಾ
ಕಾಂತಿಯ ಕಾಂಚಿದಾಮ ಮಣಿಗಂಕಣ ನೂಪುರ [1](ಕೇಯು)[1]ರಂಗಳಿಂ
ಭಿತ್ತಿಯ ಚಿತ್ರದಾಘ[2](ಕ)[2]ಸು ಬಂದೊಲು ಸೌಂದರವಾದ ನಾರಿಯರ್
ವೊತ್ತ ನಿವೇದ್ಯಮಂ ಯತಿಗೆ ತಂದರು ಭಕ್ತಿಯೊಳೇನನೆಂದಪೆಂ ೧೭

ಕಂ. ಪರಮಾನ್ನವ್ಯಂಜನಗಳ್
ಉರುಪಿಷ್ಟಾನ್ನಂ ಪೀಯೂಷ ಪಿಷ್ಟದ ಅನ್ನಂ
ವರಪೈಠರ ಪ್ರಾಣಿತ ಮಾ
ಧುರ ಪಿಚ್ಚಿಲ ಚಿಕ್ಕಣಗಳ ಶೀಘ್ರ[3](ದಿ)[3] ತಂದರ್ ೧೮

ವ॥ ಮುದ್ಗವಿದಳಮಂ ಮುಗುಳುವಂದದಿ ಪಚನಂ ಮಾಡಿ ಸಣ್ಣಿತ್ತಾಗ[4](ರೆ)[4]ದು ಮತ್ತಂ ಜಳತಿಗೆ ಅಕ್ಕಿಯ ಹಿಟ್ಟಂ ತಿಳಿದುಪ್ಪದಲ್ಲಿ ಕಲಸಿ ಆ ಹಿಟ್ಟಿನ ನಾಲ್ಕುಭಾಗ ಅ[5](ರೆದು)[5] ಹೆಸರನಿಕ್ಕಿ ಹಾಲಂ ತಳಿದು ಮರ್ದನಂ ಮಾಡಿ ಒಂದು ಕಾಣಿಯಗಲದಲ್ಲಿ ಪಿಷ್ಟವಂ ಮಾಡಿ ಕಾದ ತುಪ್ಪದೊಳು ಹಾಕಿ ಮೇಲೆ ತುಪ್ಪವನ್ನೆರೆದು ಅದು ಉಬ್ಬಿದ ಹದನರಿದು ತೆಗೆದು ಬಿಸಿಯಾರದ ಮುನ್ನ ಸಕ್ಕರೆಯಂ ತಳಿದು ಬಡಿಸುವ ಬುಡುಬುಡುಪೇನಂಗಳಂ ಅಮೃತಖಂಡಿಪೇನಂಗಳಂ ಚಂದ್ರಪೇನಂಗಳಂ ನಕ್ಷತ್ರಪೇನಂಗಳಂ ಮತ್ತಂ ನೆನೆದ ಸಜ್ಜಿಗೆಯರ್ಧ[6](ಪ)[6]ಟ್ಟು ಮೊಸರಿಂದದರರ್ಧ ನವನೀತವನಿಕ್ಕಿ ಮರ್ದಿಸಿ ಗಣಿಕಾಪ್ರಮಾಣಸೇವಗೆಯಂ ಹೊಸೆದು ಕಾದ ತುಪ್ಪದೊಳು ಹಾಯಿಕಿ ಇಬ್ಬೆರಳುದ್ದದಿಂ ಮುರಿದು ಲಡ್ಡುಗೆಯ ಹದನಾಗಿ ಕಾದ ಶರ್ಕರಾಪಾನಕಮಂ ಎರೆದ ಲಡ್ಡುಗೆಗಳಂ ಕಡಲೆ ಲಡ್ಡುಗೆಗಳಂ ಕುಸುಪ ಲಡ್ಡುಗೆಗಳಂ ಕುಂಬಳಬೀಜ ತಿರುಳ ಲಡ್ಡುಗೆಗಳಂ ಷ್ಕುಡಲೆ (?) ಲಡ್ಡುಗೆಗಳಂ ಮಣಿಲಡ್ಡುಗೆಗಳಂ ಸರವಳಿ ಲಡ್ಡುಗೆಗಳಂ ಮತ್ತಂ ಕಡಲೆಬೇಳೆ ಬೆಲ್ಲ ತುಪ್ಪದಿಂದರೆದ ಹೂರಣದ ಹೂರಿಗೆಗಳಂ ಸೀತಮಂ (?) ನಾರಿಕೇಳಫಲಕುರುಜಮಂ ಆಯಿಲಕರ್ಪೂರಮಿಶ್ರಿತವಾದ ನಾರಿಕೇಳ ಹೂರಿಗೆಗಳಂ ದ್ರಾಕ್ಷಾಹೂರಿಗೆಗಳಂ ಎಣ್ಣೆಬೂರಿಗೆಗಳಂ ಕದಂಬೆಣ್ಣೆ (?) ಬೂರಿಗೆಗಳಂ ಪಂಚಫಲಾಮೃತಣ್ಣೆಬೂರಿಗೆಗಳಂ ಮತ್ತಂ ಶೀತಘೃತದಖಂಡಮಂಡಗೆಗಳಂ ಸಕ್ಕರೆ ಮಂಡಗೆಗಳಂ ಮತ್ತಂ ನೆನೆದ ಸೊಜ್ಜಿಗೆಯಿಂ ಲವಣವನಿಕ್ಕಿ ಕುಟ್ಟಿ ಗೋಳಕಂ ಮಾಡಿ ಒಡ್ಡಿ ಪಾವಡೆಯುಲಿಕ್ಕಿ ಕುಟ್ಟಿದ ಹಿಟ್ಟಿನೊಳ್ ಗೋಳಕವನಿಕ್ಕಿ ಹಸ್ತಪ್ರಸರಂಮಾಡಿ ಕಾದ ಹಂಚಿನ ಮೇಲಿರಿಸಿದ ಬಿಳಿಯಮಂಡಗೆಗಳಂ ಮೀರಿ ಬೆಂದ ಉಷ್ಣವರ್ತನ ಮಂಡಗೆಗಳಂ ಗಾಳಿ ಬಿಸಿಲಿಗಿಕ್ಕಿದ ವಾಯುಪುಟಮಂಡಗೆಗಳಂ ಮತ್ತಂ ಒಕ್ಕುಳ

1. ಕೆಯ್ಯು (ಅಇ). 2. ಕು (ಅಇ). 3. ಗಳ (ಅಇ). 4. ರ (ಅಇ).
5. ರದ (ಅಇ). 6. ಕ (ಅಇ).

ಗೋದಿಯೊಳಕೊಂಡು ಬಳ್ಳಸೊಜ್ಜಿಗೆಯುಮಂ ತೆಗೆದುಂ ಉದಕವನ್ನೆರೆದುಂ ಸೋದಿಸಿ ಹಿಂಡಿ ಒದ್ದೆಯ ಪಾವಡದಲ್ಲಿರಿಸಿ ನೆನೆ[1](ದೊ)[1]ಡಂ ಕುಟ್ಟಿ ಆ ಕಣಕದರ್ಧನವನೀತಂ ಅರ್ಧಹೆರೆದುಪ್ಪವಂ ಹಾಕಿ ಕುಟ್ಟಿ ಸೇವಗೆಯುಂ ಹೊಸೆದುಂ ಬಿಜ್ಜೋಳೆಯಂತೆ ತಟ್ಟಿ ತಳಿಸಿದ ಬೆಳತಿಗೆಯಕ್ಕಿಯ ಹಿಟ್ಟಂ ಪೇಣಿಯ ಕೋಲಲ್ಲಿ ಹೊಸೆದುಂ ಆ ನವನೀತದಿಂ ಮರ್ದಿತತಂಡುಲಪಿಟ್ಟಂ ತೊಡೆದುಂ ಬಿಜ್ಜೋಳೆಯುಂ ಸುತ್ತುವಂತೆ ಸುತ್ತಿ ಒದ್ದೆಯ ಪಾವಡೆಯಲಿಕ್ಕಿ ಮೇಲೆಣ್ಣೆಯುಂಬಿಟ್ಟಂ ಪರಿವಾಣದೊಳಾ ಅಕ್ಕಿಯ ಹಿಟ್ಟಂ ತಳಿದುಂ ಆ ಉಂಡೆಯುಂ [2](ಕೊಯ್ದು)[2] ಆ ಮುಖ ಮೇಲಾಗಿ ಕೋಲಲ್ಲಿ ಹಪ್ಪಳವನೆತ್ತುವ ಹಾಂಗೆ ಮುಖಮುಖದಲ್ಲಿ ತಿರಿಹಿತಿರಿಹಿ ಒತ್ತಿ ಕಾದ ತುಪ್ಪದೊಳಂ ಹಾಯಿಕಿ ಎರಡು ಗಪ್ಪೆಯುಂ ಎರಡುಕಯ್ಯಿಂ ಹಿಡಿದುಂ ಅದಂ[3](ಇರಿ)[3]ದಿರಿದು ಕೊಡಲಾಗಿಯದುಂ ಕೆದರ್ದಡೆ ಎಲಿಸಟ್ಟುಗದಿಂ ತಿರಿಹಿ ತಿರಿಹಿ ಅಟ್ಟು ಸಕ್ಕರೆತುಪ್ಪವಂ ತಳಿದು ಬಡಿಸುವ ಬಿಚ್ಚುಪೇಣಿಗಳಂ ಆ ಪೇಣಿಯ ಹಿಟ್ಟಂ ಬೆಟ್ಟನ ತೋರ ಸೇವಗೆಯುಂ ಹೊಸೆದುಂ ಮೂವೆರಳಗಲದಷ್ಟು ಪೇಣಿಯ ಕೋಲಲ್ಲಿ ಸುತ್ತಿ ಬೊಟ್ಟನಗಲದೊಳ್ ಸೀಳ ಬೆಣ್ಣೆಯಿಂ ಕೂಡಿದ ಹಿಟ್ಟಂ ತೊಡೆದುಂ ತುಪ್ಪದಿಂದಟ್ಟುಚಿತಪೇಣಿಗಳಂ ಮತ್ತಾ ಸೇವಗೆಗಳಂ ಮೂವೆರಳಗಲದೊಳೊತ್ತಿ ಸರ್ವೋದ್ಧೃತ(?) ಪಿಟ್ಟಂ ತೊಡೆದುಂ ಎಳೆನೀರತೋರದೊಳ್ ಸುತ್ತಿ ಹರಿವಾಣದೊಳ್ ಮಡಗಿ ಕೊಪ್ಪರಿಗೆಯೊಳ್ ಪರಿವಾಣಸಹಂ ಬಿಟ್ಟು ಅದರಗಲ ಚಿಬ್ಬುಲಲ್ಲಿರಿಸಿ ಸಕ್ಕರೆಯುಂ ತಳೆದ ಗಜಪೇಣಿಗಳಂ ಮತ್ತಂ ನೆನೆದ ಸೊಜ್ಜಿಗೆಯುಂ ಕುಟ್ಟಿ ಅದರಷ್ಟು ಬೆಣ್ಣೆಯುಂ ಮರ್ದಿಸಿ ಗೋಳಕಂಮಾಡಿ ಪೇಣಿಕೋಲಿಂ ಮೊತ್ತಿ ತುಪ್ಪದೊಳಟ್ಟ ಕ್ಷೀರಾಬ್ಧಿಫೇನಂಗಳಂ ಮತ್ತಂ ನೆನೆದಸೊಜ್ಜಿಗೆಯುಂ ಉಪ್ಪು ದುಪ್ಪಮೊಸರಕೆನೆಹಾಲ್ಕೆನೆ ಬೆಣ್ಣೆಯಿಂ ಕುಟ್ಟಿ ಪೇಣಿಹದದಿಂ ತೆಗೆದು ಕಣಕದಿಂ ಒಟ್ಟಲಂ ಮಾಡಿಯಾ ಮದ್ದೆಯುಂ ಒಳಗಿಟ್ಟಂ ಮೇಲುಂಮುಚ್ಚಿ ಫೆಂಡಪ್ರಸರವಂ ಮಾಡಿರಿಸಿ ಬೆರೆದುದಂ ತೆಗೆದುಂ ಕತ್ತಿಯಿಂ ಕೆತ್ತಿ ಆರೋಗಣೆಗಿಕ್ಕುವ ಅಮೃತಪಿಂಡ ಮುಂತಾದ ಭಕ್ಷ್ಯಂಗಳಂ ನಾರಿಯರ್ ತಂದುಂ ಬಾಗಿಲೊಳ್ ನಿಂದುಂ ಸಂದಣಿಸಿ ಬಿನ್ನಪಂಗೆಯ್ವು ತಿರ್ದರದಂತೆಂದೊಡೆ — ಹುರಿದ ಹೆಸರಬೇಳೆಯುಂ ಪಾಕವಂಮಾಡಿ ಹುರಿದಸೊಜ್ಜಿಗೆಯುಂ ಬೇಯಿಸಿ ಹೆಸರ ಹಾಗೆ ಕತ್ತರಿಸಿದ ಜೋಡುಮಂ [4]ಸಿತಮಂ[4] ಮರೀಚ್ಯೇಲ ಕರ್ಪೂರಚೂರ್ಣದಿಂ ಕಲಸಿ ಪೂಗಪ್ರಮಾಣವಟಿಗೆಗಳಂಮಾಡಿ ಮಂದವಾಗಿ ಕಲಸಿದ ತಂಡುಲಪಿಟ್ಟಿನೊಳಂ ಕಾಯಿಗಳನದ್ದಿ ಕಾದ ತುಪ್ಪ[5](ದೊಳ್)[5] ಹಾಯಿಕಿ ತೆಗೆದ ಪುರಿಪಿಳಂಗಾದ್ಯಗಳಂ ರತಿಸಂಗೆದೆಮಾಡವೇಳ್ಕುಂ ಬಾಗಿಲಂ ತೆಗೆಯಯ್ಯಾ ಎಂದು ಬಿನ್ನಪಿಪ ವಾಮಲೋಚನೆಯರುಂ ಲಸುನಂಗಳಂ ಹಿಂದೆ ಮುಂದೆ ಕತ್ತರಿಸಿ ದಿಂಡಂ ಹೋಗಾಡಿ ಆ ಬೇಳೆಯುಂ ಸಾಲಿಯ ವಸ್ತ್ರದಿಂ ಕಟ್ಟಿ ಅದನಾಳಕದಿಂ ಯಾವನಾಳೋ

1. ದ (ಅಇ). 2. ಕಾಯಿದುಂ (ಅಇ). 3. ಯಿ (ಅಇ). 4. x (ಇ).
5. ದಿಂ (ಅಇ).

ಪನಪನಡುವಾಗ ಅರ್ಧಪಾಕದಿಂ ಹಾಕಿತೆಗೆದುಂ ಒಂದು ಸೆರೆ ಹಾಲಿನಿಂ [1](ಕುದಿಸಿ ?)[1] ನಾಲ್ಕುವೇಳೆ ತೊಳೆದುಂ ಕಾಸಿದ ಬಟ್ಟವಾಲಂ ಆರಿಸಿ ಉಪ್ಪುಸಕ್ಕರೆಪೆರಸಿಯೂ ಲಶುನ ಜೀಕೆಗಳಂ ಹಾಯಿಕಿದ ಉಕ್ಕಿಯ ಪಾಯಸಂಗಳಂ ಮತ್ತಂ ಪಾದಲಕುಸುಮಂಗಳಂ ಹೊಸಸುಣ್ಣದ ನೀರೊಳಗಿರಿಸಿ ಆ ನೀರ್ ಕುದಿದೊಡಂ ಮಾತುಳಂಗ ಕುಸುರಿಗಳಂ ಹಾಯಿಕಿ ಎರಸ್ಸೂರುಕುದಿ ಬಹನ್ನೆಬರಂ ಕುದಿಸಿ ಬಸಿದು ಹುಳಿಹೋಪುದಂ ಅರಿದುಂ ಉಪ್ಪುಸಕ್ಕರೆಪೆರೆಸಿ ಬಟ್ಟವಾಲೊಲು ಹಾಯಿಕಿದ ಮಾತುಳಂಗಕೇಸರಪಾಯಿಸಂಗಳಿಂ ಈಯೋಪಾದಿಯಲ್ಲಿ ಮಾಡಿದ ಹೇರಿಳೆ ಕಿತ್ತಳೆ ಲಿಂಬೆ ಮೊದಲಾದವುಗಳ ಪಾಯಸಂಗಳಂ ಸಜ್ಜಿಪರಡಿತಂಡುಲಾದಿ ಪಾಯಸಂಗಳಂ ಮುದ್ಗೋದನ ಮೊದಲಾದ ಓಗರಂಗಳನುಂ ಸೊಗಸಾರದ ಮುನ್ನ ಅಯ್ಯಂಗೆಡೆಮಾಡವೇಳ್ಕೆಂಬ ಕಮಲಾಕ್ಷಿಯರುಂ ಮತ್ತಂ ಚಿಂಚಫಲ[2](ತೊ)[2]ಗಟಂ ತೆಗೆದು ಸೀಳಿ ಸುಣ್ಣದ ನೀರಿಂದೊಂದು ರಾತ್ರೆ ಕುದಿಯಿಸಿ ಹುಳಿಹೋಪುದಂ ಅರಿದುಂ ನಾಲ್ಕೈದು ಬಾರಿ ತೊಳೆದುಂ ಚತುರ್ಥಾವಶೇಷವಾಗಿ ಕಾಸಿದ ಹಾಲೊಳು ಉಪ್ಪುಸಕ್ಕರೆಯುಂಹಾಕಿ ಹುಣಸೆಕಾಯರಸಮಂ ಹಿಂಡಿ ಬೆಂಡೆಯ ಬೇರಿಂ ತಿಳಿಹಿಸಿಕೊಂಡು ಪಾದರಿ ಪೂವಂ ಹಾಕಿದ ಪಾಟಲಿರಂಜಿತ ಪಾನಂಗಳಂ ಮತ್ತಂ ಕಪಿತ್ಥಫಲತಿರುಳಂ ತೆಗೆದು ಯಾದ್ರೂಪಕುಂಚಿಕಾಶಿತಮಯ ತಕ್ರಮಿಶ್ರಿತಮಂ ಮಾಡಿ [3]ಬೆಂಡೆ[3]ಬೇರಿಂ ತಿಳಿಹಿ ಕರ್ಪೂರಕಸ್ತೂರಿ ಪರಿಮಳಪುಷ್ಪಂಗಳಿಂ ವಾಸನೆಯುಂ ಕಟ್ಟಿದ ಕಪಿತ್ಥಪಾನಂಗಳಂ ನಾನಾತೆರದ ಸೂಪಂಗಳಿಂ ಪಳಿದ್ಯಂಗಳಂ ಮತ್ತಂ ಅಂಗುರೋಳಿಗೆಗಳಂ ಕೆಳಗೊಂದ ಮೇಲೊಂದನಿಕ್ಕಿ ಏಕವಹ ಹಾಂಗೆ ಮುಚ್ಚಿ ಕೆಂಡದ ಮೇಲೆ ಸಿಂಡಿಯುಂ ಒತ್ತುವಂತೆ ಪ್ರಸರಂ ಮಾಡಿ ತೆಗೆದಾರಿಸಿ ಕತ್ತಿಯಿಂ ಕೆತ್ತಿ ಬಡಿಸುವ ಅಮೃತಪಿಂಡುಗರೋಳಿಗೆಗಳಂ ನೆನೆದ ಸೊಜ್ಜುಗೆಗುಪ್ಪನಿಕ್ಕಿ ಕುಟ್ಟಿ ಹೋಳಿಗೆಯುಂ ಮಾಡಿ ಕಪ್ಪರದ ಮೇಲೆ ಪಾಕಮಂ ಮಾಡಿ ಮತ್ತದಂ ತೆಗೆದು ನುಗ್ಗುಮಾಡಿ ಆ ಕಣಿಕದೆರಡುಭಾಗ ದ್ರಾಕ್ಷೆಯಹಣ್ಣು ಕರ್ಜೂರದ ಹಣ್ಣು ಹಾಲುಕೆನೆ ಬೆಣ್ಣೆ ಸಕ್ಕರೆಯಿಂ ಮಿಡಿದುಂ ಕಣಿಕದ ಹಿಟ್ಟಿನ ಬಟ್ಟಲೊಳಾ ಪಿಂಡವನಿಕ್ಕಿ ಮೇಲೊಂದು ಬಟ್ಟಲಿಂ ಮುಚ್ಚಿ ಕೆಂಡದ ಮೇಲೊತ್ತುವ ಹಾಗೆ ಪಾಕಮಂ[4]ಮಾಡಿ[4] ತೆಗೆದುಂ ಕೆತ್ತಿ ಪಸುಬಿಸಿಯಾದ ತುಪ್ಪದಲ್ಲಿ ಹಾಯಿಕಿ ಸಕ್ಕರೆಯಿಂ ಬಡಿಸುವ ಚೆಂಚಾಮೃತೋಳಿಗೆಗಳ ಸೊಗಸು ಕೆಡದ ಮುನ್ನಯ್ಯಂಗೆ ನೀಡವೇಳ್ಕು ಬಾಗಿಲಲ್ಲಿ ತಡೆಯದಿರೆಂಬ ಬಿಂಬಾಧರೆಯರುಂ ಮತ್ತಂ ಚತುರ್ಥಾವಶೇಷವಾಗಿ ಕಾಸಿದ ತರುಹೆಮ್ಮೆಯ ಕ್ಷೀರ ತೆಂಗಿನಕಾಯ ಹಾಲುಂ ಹಾಲ್ಕೆನೆಯುಂ ಮಾವಿನಪಣ್ಗಳ ರಸದೊಳ್ ಮುರಿದ ಮಂಡಗೆಗಳಂಬೆರಸಿ ಸದ್ಯೋಜಾತ ಘೃತವನೆರೆದು ಕಲಸಿ ಪಿಂಡಗಳಂ ಮಾಡಿ ಕಣಕದ ಬಟ್ಟಲೊಳಿಕ್ಕಿ ಮೇಲಂ ಮುಚ್ಚಿ [5](ಗೇದಗೆ ?)[5] ಹೂವಂ ಕತ್ತರಿಸಿಕ್ಕಿದ ರೊಟ್ಟಿಯುಂ ತಟ್ಟಿ ಕೆಂಡದ ಮೇಲಿಕ್ಕಿ ತೆಗೆದುಂ ಕೆತ್ತಿ ತುಪ್ಪದೊಳಗಾವರಿಸಿ ಸಕ್ಕರೆವೆರಸಿ ಬಡಿಸುವ ಭೋಜನಾಧಿಕ ರೊಟ್ಟಿಗಳುಂ

---

1. ಕುಡಿಸಿ (ಅ ಇ). 2. ತ್ತೊ (ಅ ಬ). 3. x (ಇ). 4. x (ಇ). 5. (ಕೇದಗೆ ?).

ಚತುರ್ಥಾವಶೇಷವಾದ ಹಾಲಿಂ ನೆನೆದ ಸೊಜ್ಜಿಗೆಯುಮುಪ್ಪಿಂ ಕಲಸಿ ಕಡುಬನುಕ್ಕರಿಸು ವಂತುಕ್ಕರಿಸಿ ಅದಂ ತೆಗೆದುಂ ಜೆಣ್ಣೆಯು ವೊಸರಕೆಸೆಯ ಭಾವನೆ[1](ಯ)[1]ಂ ಕೊಟ್ಟು ಕೆಳಗುಂ ಮೇಲುಂ ಕಣಿಕದಬಟ್ಟಲಿಂ ಮುಚ್ಚಿ ಕೆಂಡಂಗಳೊಳೊತ್ತುವಂತಿರಿಸಿ ತೆಗೆದುಂ ತುಪ್ಪಸಕ್ಕರೆಯಿಂ ಬಡಿಸುವ ಅಮೃತೋಪಮಾನ ರೊಟ್ಟಿಗಳುಂ ಮತ್ತಂ ಅರ್ಧಾವಶೇಷ ಮಾಗಿ ಕಾಸಿದ ಹಾಲಂ ಅದರ ಸರಿ ತೆಂಗಿನಕಾಯ ತನಿವಾಲು ಚಾತುರ್ಜಾತಕಮಂ ತಳಿದುಂ ಕಣಿಕದಲ್ಲಿ ಮುರಿಮುಂಡಗೆಗಳಂ ನಿುದಿದುಂ ಒಂದು ಮುದ್ದೆಯುಂ ಮಾಡಿ ಕರ್ಪೂರದ ಕಯ್ಯಿಂ ನೀವಿ ಉದಕಬಳಸಿತವಾಗದ ಬೆಸಣಿಗೆಯೊಳಿರಿಸಿ ಅಂಗರೋಳಿಗೆ ಯಿಂದದರ ಬಾಯಂ ಮುಚ್ಚಿ ಮೇಲೆ ಸಿರುಮಣ್ಣಿಂಗೊಂಡು ಆ ಮಣ್ಣು ಕೆಂಪಹ ಹಾಗೆ ಪುಟವಿಕ್ಕಿ ಅದರ ಮಣ್ಣನುಂ ರೊಟ್ಟಿಯನುಂ ಕಡೆತೆಗೆದುಂ ಒಳಗಿರ್ದ ರೊಟ್ಟಿ ಯಂ ನಸುಬಿಸಿಯಾಗಿ ಬಡಿಸುವ ಅಖಂಡ[2](ಪ್ಪ)[2]ತಪ್ರೋರಾಸಾರದ ರೊಟ್ಟಿಗಳಂ ಮತ್ತಂ ನೆನೆದ ಸೊಜ್ಜಿಗೆಯುಮುಪ್ಪನಿಕ್ಕಿ ಅಂಗರೋಳಿಗೆಯ ಹದದಿಂ ಕುಟ್ಟಿ ಎರಡು ಭಾಗವಂ ಮಾಡಿ ಅಂಗರೋಳಿಗೆಯುಂ ತಟ್ಟಿ ಸಕ್ಕರೆಯ ಪಾಕದೊಳಂ ಹಾಯಿಕಿ ಯೇಲಕ್ಕಿ ಮೆಣಸಿನ ಚೂರ್ಣಮಂ ತಳಿದ ಸಿತಾಂಗರೋಳಿಗೆಗಳಂ ಮತ್ತೊಂದು ಭಾಗವಂ ಕಾಸಿದ ಬಟ್ಟವಾಲಿಂ ಹಾಯಿಕಿ ಸಕ್ಕರೆಯುಂ ತಳಿದ ಕ್ಷೀರಾಂಗರೋಳಿಗೆಗಳಂ ಮತ್ತಂ ಸೊಜ್ಜಿ ಗೆಗುಪ್ಪನಿಕ್ಕಿ ಕುಟ್ಟಿಪಸರಿತುಂಡೆ ಮಾಡಿ ತಟ್ಟಿ ಕೆಂಡದ ಮೇಲೆ [3](ಆಸೆಯ)[3] ಮರಂ ಗಳಂ ಮಡಗಿ ಅವರಗ್ರದಿಂ [4](ಹೊಸ ಸೀ)[4]ಬುಗಳಂ ಮಡಗಿ ಅವರ ಮೇಲೆ ಹೋಳಿಗೆಗಳಂ ಮಡಗಿ ತಿರಿಹಿ ತಿರಿಹಿ ಕಾಸಿದ ಅಂಗಾರಸಿತರೊಟ್ಟಿಗಳಂ ಮತ್ತಂ ಹೂರಣದೊಡೆ ಹೂರಣದಿಡ್ಡಲಿಗೆ ಹೂರಣದ ದೋಸೆಗಳ್ ಮೊದಲಾದ ನಾನಾತೆರದ ಭಕ್ಷ್ಯಾನ್ನ ಪಾನಾದಿಗಳಂ ಹದಂಗೆಡದ ಮುನ್ನ ಸಿದ್ಧೇಶಂಗರ್ಪಿಸಬೇಕು ಬಾಗಿಲೊಳ್ ಬಿಡಿರಯ್ಯ ಎಂದು ದೈನ್ಯದಿಂ ಬೇಡಿಕೊಂಬ ಶಿವಭಕ್ತವನಿತೆಯರ ವಿಶ್ವಾಸಕ್ಕಂ ಬಾಗಿಲಚರಲಿಂಗಗಳ್ ಮೆಚ್ಚಿ ಯತಿಪನ ಅನುಭಾವಂ ಮುಗಿದು ಶಿವಾರ್ಚನಂಗೆಯ್ದು ಮಧ್ಯಾಹ್ನದ ಸಮಯ ದೊಳ್ ಬಿಡಲವರೆಲ್ಲರುಂ ಬಂದು ವಂದನಂಗೆಯ್ದು ತಂದ ಭಕ್ಷ್ಯಾನ್ನಪಾನಾದಿಗಳಂ ಎಡೆಮಾಡಿ ಇಷ್ಟಾರ್ಥಂಗಳಂ ಪರುಸನದಿಂಪತಿಶಯ[5](ಮಾ)[5]ಗೊದಗುತಿಹನ್ನಪಾನಾದಿ ಗಳಂ ಚತುರತೆಯಿಂ ತಂತಂ[6](ದಹಿತಾ)ಹಿತ[6]ಮುಂ ನೋಡಿ ನೋಡಿ ನೀಡುತ್ತಿರ್ದರ್ ೨೯

ಇಂತು ನೀಡುತ್ತಿರೆ ಭಾಂಡಂಗಳೊಳ್ ಪೆಚ್ಚುತ್ತಿರೆ ಆಯಿನೂರು ಜಂಗಮ ದೇ[7]ವ(ರ್)[7] ಶಿವಪ್ರಸಾದದಿಂ ತೃಪ್ತರಾಗಿ ಕರಪ್ರಕ್ಷಾಲನಂ ಮಾಡಿ ಕರ್ಪೂರವೀಟಿಕೆಗಳಂ ತಂತಮ್ಮ ಲಿಂಗಂಗಳ್ಗಂ ಸಮರ್ಪಿಪ ವೇಳೆಯಲ್ಲಿ ಪಟ್ಟಣದ ಬಸವೇಶ್ವರದೇವರಾ ಭಾಂಡಂ

---

1. ಯುಂ (ಅಇ). 2. ಪ್ಪ (ಅಇ). 3. ಹಸುರು (ಅಇ). 4. ಎಸಿಸಿ (ಅಇ). 5. ಮ (ಅಇ). 6. ದಾಹಿತ (ಇ). 7. ವ (ಅಇ).

ಗಳಂ ನೋಡುತ್ತಿರೆ ಮುನ್ನಿನಂತೆ ಭಾಂಡಂಗಳ್ ತೀವಿ ಭಕ್ಷ್ಯಾನ್ನಪಾನಾದಿಗಳಿಗೆ ಆಶ್ಚರ್ಯಂಬಟ್ಟು ನಿಖಿಳಮಾಹೇಶ್ವರರ್ಗೆ ತೋರಲಾ ಹಪನಸರಿಮುಂ ವಿಸ್ಮಿತರಾಗಿ ರೇವಣೇಶಂ ಪಂಚಕುಟುತಂಡುಲೋದನದಿಂ ಕಲ್ಯಾಣದ ಮಾಹೇಶ್ವರರೆಲ್ಲರ್ಗಂ ತೃಪ್ತಿ ಪಡಿಸಿದನೆಂಬುದಂ ಮತ್ತಂ ಮೋಳಿಗೆಯ್ಯಂ ಅಡಕ ತಂಡುಲೋದನದಿಂ ತ್ರಿಕೋಟಿ ಜಂಗಮಕ್ಕಂ ತೃಪ್ತಿಪಡಿಸಿದನೆಂಬುದಂ ಆಯ್ದಕ್ಕಿಯ ಮಾರಣ್ಣಂ ಒಂದು ಪಡಿಯಕ್ಕಿ ಯೋಗರದಿಂ ಕಲ್ಯಾಣದಲಿರ್ಪ ಮಾಹೇಶ್ವರರ್ಗೆಲ್ಲರ್ಗಂ ತೃಪ್ತಿಪಡಿಸಿದನೆಂಬುದಂ ಪೂರ್ವಕಥೆಗಳೊಳ್ ಪೇಳ್ವುದಂ ಕೇಳ್ದಿವುಂ ಇಂದೀ ಸಿದ್ಧಲಿಂಗೇಶ್ವರ ಕರಸ್ಪರ್ಶನದಿಂ ಪ್ರಸ್ತತಂಡುಲೋದನದಿಂದೈನೂರ್ ಚರಲಿಂಗಂಗಳಿಗಂ ತೃಪ್ತಿಯಾಗಿ ಮತ್ತಂ ಅಳಂದಿಗೆ ತುಂಬಿ ನೈವೇದ್ಯವಿದೆಯೆಂದುಂ ಕೊಂಡಾಡುತ್ತಿರೆ ಆ ಸಮಯದೊಳ್ ನೂರುಕೊಮಾರ ಜಂಗಮರೆಯ್ದಿ ಯತಿಸಂಗಂ ತುಳಿಲ್ಗೆಯ್ದು ಬಳಲ್ದೆವೆಂದೆನಲುಂ ಮತ್ತಾ ನೈವೇದ್ಯ ಮನ್ನಿಡಿಸೆಯುವರ್ ತೃಪ್ತಿತರಾಗಿ ಕರಾಬ್ಜಂಗಳಂ ಪ್ರಕ್ಷಾಲಸಂಗೆಯ್ಯೆ ಮತ್ತೆಂದಿನಂತ [1](ಳ)[1]ಂದಿಗೆ ತುಂಬಿ ನೈವೇದ್ಯಂ ಇರುತ್ತಿರೆ ಅದಂ ಕಂಡೆಲ್ಲರಾಶ್ಚರ್ಯಂಬಟ್ಟು ಗೂಳೂರೊಳೊಮ್ಮೆ ಹೆಚ್ಚಿದುದು ಅಂದಂದಿಗಂ ಶ್ರೇಷ್ಠವೆಂದು ಕೊಂಡಾಡುತ್ತಿರೆ ಮತ್ತೊಂದು ದಿನದಲ್ಲಿ ೨೦

ಚಂ. ಮಾ. ವೃ.

ಶರಣಸುಮಾರ್ಗ ಷಟ್ಸ್ಥಲವಿಚಾರಸುದಾರ ಹಿರಣ್ಯದೇವನೆಂ
ಬುರುವಿರತಂ ಯತೀಶನಭಿಧಾನದ ಮುದ್ರೆಯನಿಕ್ಕಿ ಪೇಳಿದಂ
[2](ಕ)[2]ರದೊಳು ಲೇಖಪುಸ್ತಕದಿ ಲಿಕ್ಕಿಸುತಿರ್ಪುದ ಕಾ[3](ಣು)[3]ತೋರ್ವನುಂ
ಬರೆವುದಿದೇನು ದೇವರೆನಲಾ ಕ್ಷಣಭಕ್ತನೊಳೆಂದನೆಂತೆನಲ್ ೨೧

ನಿಖಿಲಸುಶಾಸ್ತ್ರದಾಗಮಪುರಾಣರಹಸ್ಯದ ಸಾರವರ್ಥದಿಂ
ಸುಖತರಮಾಗಿ ಪೇಳ್ದೆತಿಂಯ ಮುದ್ರೆಯ ಪಂಚ[4](ಶತಂ ಪದಂಗಳಂ)[4]
ಲಿಖಿಸುತಲಿಪ್ಪೆನೀಗ ಬಳಿಕೋದಿಸವೇಳ್ಕಿದ ಸಿದ್ಧನೊತ್ತಿನೊಳ್
ಸುಖವಿದು ಭಕ್ತಿಮಾರ್ಗಿಗಳಿಗೆಂದ ಹಿರಣ್ಯಕ ಕೇಳ್ದ ಭಕ್ತನೊಳ್ ೨೨

ಉ. ಮಾ. ವೃ.

ಅಂತದ ಕೇಳ್ದು ಭಕ್ತಿಯುತರಾಗಿಯೆ ವಿಂಶತಿಪೊಂಗಳನ್ನುಮಂ
ಭೂತಿಸಮೇತವಾಗಿರಿಸಿ ನಿಮ್ಮಯ ಪುಸ್ತಕವೋದುವೇಳೆಯೊಳ್
ಶಾಂತಿಯದಾಗಿ ಪರ್ವಗಳ ಮಾಡಿಪುದೆಂಬುತಮಂ[5](ಸಲಿಲ್ಕೆಯುಂ)[5]
ತಾತನ ಭಕ್ತಿಗೋಸುಗ ವಿಚಾರವಿದಾನ್ವಿತನಾಗಲೊಪ್ಪಿದಂ ೨೩

1. ಣ (ಅಇ). 2. ತ (ಅಇ). 3. ಣೆ (ಅಇ). 4. ಶತಕಂಗಳುಮಂ (ಅಇ).
5. ಸಲ್ಕೆಯುಂ (ಅಇ).

ಪುಸ್ತಕವನ್ನು ಲೇಖಿಸಿಯು ತಂದೆತಿಗೊಂದಿಸಿಯೋದುತಿರ್ದುಮಾ
ವಸ್ತುವನುಂ ಗುರುಸ್ಥಲ[1](ದ)[1] ಸಂಗಪನೆಂಬನ ಕ[2](ಯ್ಗೆ)[2] ಕೊಟ್ಟುವುಂ
ವಿಸ್ತರದಿಂದ ಪರ್ವಗಳ ಮಾಡೆನಲಾತನು ತನ್ನ ಸಂಗಡಂ
ಸ್ವಸ್ತಿಕ[3]ದಿಂ(ದ)[3] ಪುಟ್ಟಿದ ಕುಮಾರಕ ಮಲ್ಲಪನಿಪ್ಪ ಗೇಹದೊಳ್ ೨೪

ಗೋದಿಯು ತಂಡುಲಾದಿ ಬಹುಸಾಧನದ್ರವ್ಯದಿ ಭಕ್ಷ್ಯಮನ್ನಪಾ-
ನಾದಿಗಳಂ ಸುಚಿತ್ರದೊಳು ಪಾಕವ ಮಾಡಿಸಿ ಸಿದ್ಧಲಿಂಗಗಾ-
ನಂದದಿ ಬಿನ್ನಪಂಗೆಯಿದು ಜಂಗಮಪುಂಜಸಮೇತವಾ ಕ್ಷಣಂ
ಆದರದಿಂದಲಾತ ಕರೆಯಲ್ ಜ್ವಲನಾಕ್ಷಶಿವಾನ್ವಿತಾಂಗನುಂ ೨೫

ಕಂ. ಪಲ್ಲಕ್ಕಿಯನೇರಾ ಕ್ಷಣ
ಉಲ್ಲಾಸದಿ ನೃಪ[4](ಲಕ್ಷ್ಮ್ಯವ)[4]ವೈತಾ[5](ಳೀ)[5]ಕರ್
ನಿಲ್ಲದೆ ಕೊಂಡಾಡುತ್ತಿರ-
ಲೆಲ್ಲಾ ತೂರ್ಯತ್ರಯಂ[6](ತಾಂ)[6]ಮೊಳಗಿದುವಾ[7](ಗ)[7] ೨೬

ಘನಚ[8]ಯ[8]ರವವಾಚಾರದಿ
ವಿನಯದಿ ತತವಿತತಕ್ವಣಗಳನಾ ಗುರುವಿಂ
ಗನುವಿಂಗಾನ[9](ಧ್ಧ)[9]ವ್ರಜ
ಸ್ವನಿತ[10]ವ[10] ಶುಷಿರಾದಿನಾದ[11](ದಿಂ)[11]ಚರದೊಳಗಂ ೨೭

ಗೀತಾದಿಯ ಪ್ರಸಾದದಿ
ಪುತ್ತೀ ನಾದವನೆಲ್ಲ ಮಹಾಲಿಂಗದೊಳುಂ
ಪ್ರೀತಿಯೊಳರ್ಪಿಸುತಾಗಂ
[12](ಶಾಂತಿಯಲೆತಿಯಾ)[12] ಪ್ರಸಾದಲಿಂಗದ ನೆಸ[13](ಹಿಂ)[13] ೨೮

ಷಡ್ವಿಧದಿಂ ತಾಳಾದಿಯ
ಷಡ್ವಿಧದ ತತಾದಿ[14](ಯಾದ ನಾದಾದಿಗಳಂ)[14]
ಷಡ್ವಿಧದಿಂಗಿತದಾದಿಯ
ಷಡ್ವಿಧದಿಂದರ್ಪಿಸುತ್ತಲೈದಿದನಾಗಳ್ ೨೯

1. ದಿ (ಅಇ). 2. ಯ್ಯ (ಅಇ). 3. ದಿಂ (ಅಇ). 4. ವೆತ್ತ (ಅಇ). 5. ಳಿ (ಅಇ).
6. ಗಳ್ತಾಂ (ಅಇ). 7. ಗಳ್ (ಅಇ). 8. x (ಇ). 9. ದ (ಅಇ).
10. ಪಶಿವನೊಳ್ (ಅಇ). 11. ದ (ಅಇ). 12. ಶಾಂತಾಂತ್ಯೆತಿಪಂ (ಅಇ).
13. ಹಿಸೊಳುಂ (ಅಇ). 14. ದಿಯ ನಾನಾದ್ವಾದಿಯ (ಅಇ).

ಉ. ಮಾ. ವೃ.

ಮೋದದಿ ಪಾದಪೂಜೆಗಳ ಮಾಡಿಸಿ[1]ಕೊ(ಳ್ಳುತೆ)[1] ಸಿದ್ಧದೇಶಿಕಂ
ಗದ್ದುಗೆಯಲ್ಲಿ ಮೂರ್ತಿಗೊಳೆ ಕುಳ್ಳಿತುದಾಗಳೆ ಜಂಗಮಾಳಿಯುಂ
ಸಂದಣಿಸುತ್ತ ಭಕ್ತಜನ ಮುಂಪುನೆ ಹಿಮ್ಮನೆ ಹಿತ್ತಿಲಂಗಳಂ
ಸಂದಿಯು ಗೊಂದಿ ಮುಖ್ಯವಹ ಠಾವುಗಳಲ್ಲಿ ಕು[2](ಳಿತ್ತುಯಿರ್ದುದುಂ)[2] ೩೦

ಗಂಧಸುಧೂಪದೀಪಕುಸುಮಾಳಿಗಳಿಂ ಶಿವಲಿಂಗಪೂಜೆಯುಂ
ಬಂದವರೆಲ್ಲ ಮಾಡೆ ಪರಿವಾಣಗಳಲ್ಲೆಡೆಮಾಡಿ ಭಕ್ತಮುಂ-
ತಾದವನಿಕ್ಕಿ ವಂದಿಸಲು ತಂ[3](ತಮ)[3] ಲಿಂಗಗಳಿಂಗೆ ಕೊಟ್ಟು ತಾ-
ನಂದಿಸುತಿರ್ದ ರೂಪುರುಚಿತೃಪ್ತಿಯನಾ ಕ್ಷಣವೇನನೆಂದಪೆಂ ೩೧

ಕಂ. ಹಪ್ಪಳಗಳ ಮುರಿವ ಧ್ವನಿ
ಚಪ್ಪರಿಪ ಧ್ವ[4]ನಿ(ಯು)[4] ಷಂಡ[5](ಕಂಗಳ ಧ್ವನಿಗಳ್)[5]
ಒಪ್ಪದಿ ಸುರಿವ ಧ್ವನಿಗಳ್
ಉಪ್ಪರದಿಂ ಪೊಣ್ಮಿದ[6](ತ್ತುವಾ)[6] ವೇಳೆಯೊಳುಂ ೩೨

* ನೀರಂ ತಾರೆಂದೆಂಬಾ
ಕಾರಾಮ್ಲವ ನೀಡೆಂಬಾ ತಾಳಿಲ ಬೇಗಂ
ತಾರೈ ಸೂಪಂ ಬೇಗಂ
ಸಾರ್ನೀನೆಂತೆಂಬ ರವಗಳುಣ್ಮಿದುವಾಗಲ್ ೩೩

ಆ ಪಂತಿಗೆ ಬೋನಂಗಳ
ನೀ ಪಂತಿಗೆ ಭಕ್ಷ್ಯಪಾಯಸಂಗಳ[7](ನೆಲ್ಲಂ)[7]
[8](ಊ)[8]ಪಂತಿಗೆ ಸೂಪಂಗಳ
ಪೂಪಂ ತಾರೆಂಬ ಧ್ವನಿಗಳುಣ್ಮಿದುವಾಗಳ್ ೩೪

---

1. ಕೊಂಡುವು (ಅಇ). 2. ಕುಳ್ಳಿತಿರ್ದುದುಂ (ಅಇ). 3. ದುಮ (ಅಇ).
4. ನಿಗಳ್ (ಅಇ). 5. ಕಷಂಡಕನೀವ ಧ್ವನಿ (ಅಇ). 6. ವಾ (ಅಇ). 7. ನುಂ (ಅಇ).
8. ಮುಂ (ಅಇ).

* ಈ ಪದ್ಯ (ಅಇ)ಗಳಲ್ಲಿ ಹೀಗಿದೆ :
ಸೀನೀರಂತಾರೆಂಬಾ। ತಾದಾಮ್ಲವ ನೀಡೆಂಬಾ ತಾಳಿಲಬೇಗಂ।
ನೀಡೆಂಬೀ ದೂಪಂಬೇ। ಡ್ವಾಗಾ ನೀನೆಂಬರವಗಳೂಣ್ಮಿದವಾಗಳ್.

ವ|| ಪಟ್ಟಣದ ದೇವಂಗಂ ಕಟ್ಟುಬೋನವಿದೆಯೆಂಬ ಶೀಲವಂತೈಯ್ಯಂಗಂ ಹಾಲುಂಡೆಯಿವೆಯೆಂಬ ರಾಜವೀಟಿಸಂಗಯ್ಯಂಗಂ ಆಜ್ಯವಿದೆಯೆಂಬ ಹಿರಣ್ಯದೇವರ್ಗಂ ಪುರಿವಿಳಂಗಾಯೆಂಬ ಸಿದ್ಧಮಲ್ಲಯ್ಯಂಗಂ ದಧ್ಯೋದನವಿದೆಯೆಂಬ ನಂಜುಂಡದೇವಂಗಂ ಗ್ಯ(?)ಂಜನಪಾಯಸವೆಂಬ ಬೋಳಬಸವೇಶಂಗಂ ನಾಳಿ[1](ಕೇರ)[1]ರಸಪಾಯಸವೆಂಬ ಬೋಳಮಲ್ಲೇಶಂಗಂ ಬಾಳೆಯಪಣ್ಣಿವೆಯೆಂಬ ಪಟ್ಟಣದೇವಂಗಂ ಗಟ್ಟಿವೊಸರಿದೆಯೆಂಬ ಮರುಳಸಿದ್ಧೇಶಂಗಂ ಪರಡಿಯ ಪಾಯಸವೆಂಬ ಘನಲಿಂಗದೇವರ್ಗಂ ಪನಸತೊಳೆಯಿವೆಯೆಂಬ ಸಪ್ಪೆಯದೇವರ್ಗಂ ಉಪ್ಪುಗಾಯಿವೆಯೆಂಬ ಸ್ವಯಸ್ಥಲದ ದೇವರ್ಗಂ ಪಯತಾಳಿಲಿವೆಯೆಂಬ ಹೊಸಮಠದ ಮಲ್ಲಯ್ಯಂಗಂ ಪರುಪಿದೆಯೆಂಬ ಉಪ್ಪರಹಳ್ಳಿ ಸಂಗಯ್ಯಂಗಂ ಕಪಿತ್ಥವಿದೆಯೆಂಬ ಪ್ರಾರ್ಥನೆಗಳಂ ಪ್ರಾರ್ಥಿಸಿ ನೀಡುತ್ತಿರೆಯಿರೆ ೩೫

ಕಂ. ಇಂತಿಹ ಸಮಯದೊಳಾಗಂ
ಅಂತರಿಸದೆ ಮಿಂಚು ಮೊಳಗು ಶೀಕರದಿಂದಂ
ಮುಂತುವರಿದೆಯ್ದೆ ವೃಷ್ಟಿಯು
ಮಂತದರಬ್ಬರಕ್ಕೆಲ್ಲ ಭೀತಿತರಾದರ್ ೩೬

ಇದೆ ಬಂದುದಿದೆಕೊ ಮಳೆಯುಂ
ಸದನಂಗಳು ಸಾಲ[2](ದಾದವಂ)[2]ಗಣದೊಳಗಂ
ಮುದದಿಂ ಸಲಿಸು[3](ತ್ರಿರ್ದೀ)[3]
ಪದ[4](ಕಾ)[4]ವುದು ತೆರ[5](ನದೆಂದು)[5] ಕೇಳಿಪರೆತಿಯಂ ೩೭

ಒಂದೊಂದು ಹನಿಗಳಾಗಲೆ
ಸಂದಣಿಸುತ ಬೀಳುತಿವೆಕೊ ನೆನೆಯುತ್ತಿವೆಯಿ-
ನ್ನೊಂದು ಘಟಿಕೆ ನಿಲ್ಲದೊಡೀ-
ಸಂದೋಹಂ ನೆನೆದು ನೆನೆದು ಬಳಲುವರೆಂದಂ ೩೮

ಲಿಂಗಪ್ರಸಾದಂಗಳನುಂ
ಹಿಂಗಿಯೆ ತಾವೊಂದು ಕಡೆಗೆಯೋಡಲ್ಬಾರದು
ವಂಗವಿಸಿಯುಣಲ್ಬಾರದು
ಸಂಗಟ ಬಂದಿದೆಕೊಯಿದರ ತೆರನೇನೆಂದರ್ ೩೯

---

1. ಕೆ (ಅಇ). 2. ದಂ (ಅಇ). 3. ತಿರ್ದ (ಅಇ). 4. ಕಿನ್ನಾ (ಅಇ).
5. ನೆಂದು (ಅಇ).

ಶಿವಭಕ್ತರು ಪ್ರಸಾದವ
ಸವಿವನ್ನಕ್ಕೆದಿರ್ದು ಮತ್ತೆ ಬಪ್ಪುದು ಮಳೆ ನೀಂ
ಸವಿನಯದಿ ಸಲಿಸಿಮೆನುತಂ
ಜವದಿಂದೆತಿ ನೋಡೆ ವೃಷ್ಟಿ ನಿಂದಿತ್ತಾಗಂ ೪೦

ಆಗಸದಿ ಮೇಘ ಪರಿದು-
ತ್ತಾಗಲೆ ಬಿಸಿಲ್ಗೊಳಪುದೋರೆ ಮನದೊಳಗೆಲ್ಲಂ
ಬೇಗದಿ ಅದ್ಭುತಯುತಮುಂ
ಆಗಿಯೆ ಉಣುತಿರ್ದರಖಿಳ ಸದ್ಭಕ್ತರ್ಕಳ್ ೪೧

ಲಿಂಗಪ್ರಸಾದವನರ್ಪಿಸಿ
ಮಂಗಲತಾಂಬೂಲಗಳನು ಅರ್ಪಿಸಿಯೆಲ್ಲರ್
ಸಂಗಡಲೆದ್ದೈದಿದರು-
ತ್ತುಂಗೆತಿಪಂ ನೋಡಿ ಕರೆದ ಮಳೆಯುಂ ಇಳೆಗಂ ೪೨

ಇನ್ನುಂ ನೀ ಬಪ್ಪುದೀಗ
ಮನ್ನಣೆಯಾಯಿತ್ತು ಭಕ್ತಜನರುತ್ಸವಕೆಂ
ದುನ್ನಿಸಿ ಗಗನಾಂಗಣ ನೋ-
ಳ್ಪನ್ನೆಗ ಮಳೆ ಸುರಿಮುದಾಗ ಬಹಳೋನ್ನತಿಯಿಂ ೪೩

ವ॥ ಅದಂ ಕಂಡು ಸಮಸ್ತ ಜನರಾಶ್ಚರ‍್ಯಂಬಟ್ಟು ದೇವರಕೊಂಡೆಯಲ್ಲುಪ್ಪರಿ ಗಗಣ್ಣಪ್ಪನೆಂಬ ಶಿವಶರಣನಂ ವೈಷ್ಣವರ್ ನೋಡಿ ಹಾಸ್ಯದಿಂ ಈ ಬೇಸಿಗೆಯಲ್ಲಿ ಕೆರೆಯಂ ತುಂಬಿಸೆನೆ ಎರಡು ದಿನ ಮಳೆಗರೆಸಿ ತುಂಬಿಸಿದುದಂ ಮತ್ತಂ ಕೊಂಡೆವೀಡೆ ಯಲ್ಲಿ ಹೊನ್ನಕಾಯಕದಬ್ಬೆಯಣ್ಣ ನೊತ್ತಿಗಂ ಪರವಾದಿಗಳ್ಗೆಂದುಂ ನೀಂ ಶಿವಶರಣ ನಾದಡೀ ಬರದಲ್ಲಿ ಮಳೆಯಂ ತರಿಸೆನಲಾ ಕ್ಷಣಂ ಮಳೆ ಸುರಿಸಿದುದಂ ಪೂರ್ವಕಥೆ ಗಳೊಳ್ ಕೇಳ್ವೆವುಂ ಇಂದೀ ಸಿದ್ಧಲಿಂಗೇಶಂ ಭಕ್ತಜನ ಸಲಿಸುವನ್ನೆಗಂ ಬಂದ ಮಳೆಯಂ ನಿಲಿಸಿಯವರ್ ಸಲಿಸಿದ ಬಳಿಕ್ಕಂ ಮಳೆಯ ತರಿಸಿದುದಂ ಪ್ರತ್ಯಕ್ಷ ಕಂಡೆವೆಂದು ಕೊಂಡಾಡುತ್ತಿರೆ ಮತ್ತೊಂದು ದಿನದಲ್ಲಿ ೪೪

ಕಂ. ದರುಶನಕೆಂದುಂ ಬಂದಾ-
ಪರುಷಾಜನದೊಳಗೊರ್ವಂ ಜಾತ್ಯಂಧಕನುಂ
ಹರುಷದಿ ಯತಿಗಂ ನತನಾ-
ಗಿರುತಿರ್ದಂ ಕಣ್ಣ ಪಡೆವೆನೆಂಬಾತುರದಿಂ ೪೫

ಏಳೆಂದೆತಿಪಂ ನುಡಿಯು-
ಲ್ಕೇಳನೆ ನನಗಕ್ಷಿಗಳನುಯಿತ್ತಡೆಯೆನ್ನಲ್
ಕೇಳು ನಿನಗೀಯಲೆಮಗಂ
ಹೇಳಾ ಕಣ್ಣುಗಳ ಕೊಡುವೊಡೆಲ್ಲಿರ್ದಪವೈ ೪೬

ಇಲ್ಲದೊಡೀಗೊಂದಂ ಕೊಡು-
ವೆಲ್ಲನೆ ಮತ್ತೊಂದ ಕೊಡುವೆಯೆಂದಾ ಮುಗ್ಧನ
ಸೊಲ್ಲಿಗೆ ಮೆಚ್ಚುತ್ತಾಗಂ
ನಿಲ್ಲದೆ ಕಣ್ಣೊಂದನಿತ್ತ ಯತಿಕುಲರಾಜಂ ೪೭

ಆ ಕಣ್ಣಿನ ಡಾಳವನುಂ
ಆ ಕಣ್ಣಿನ ಕರಿಯ ಬಿಳಿಯ ಹಾಲೆಗಳೆರಡುಂ
ಆ ಕಣ್ಣಿನಂದವಂತ
ಮ್ಮಾಕಣ್ಣಿಂ ಕಂಡ ಜನರು ವಿಸ್ಮಿತರಾದರ್ ೪೮

ವ॥ ಭಕ್ತಜನರಾಶ್ಚರಿಯದೊಳೊಂದಿದ ಮಾನಸರಾಗಿ ರೇವಣೇಶಂ ಗಾಣದ ಕಲ್ಲಯ್ಯಂಗಂ ಅವನ ವನಿತೆಗಂ ಆತನ ಗಾಣದೆತ್ತಿಂಗಂ ಒಂದೊಂದು ನಯನವಿತ್ತುದಂ ಸಂಬ್ರಣ್ಣಂಗಂ ಕಾಂಚಿಯಕಾಮಾಕ್ಷಿಯುಂ ತ್ಯಾಗನಾಥಂ ಒಂದೊಂದಕ್ಷಿಗಳನಿತ್ತುದಂ ಮತ್ತಂ ಚಕ್ರಪಾಣಿರಂಗನಾಥಂಗಂ ಶ್ರೀಶೈಲಮಲ್ಲಿಕಾರ್ಜುನನುಂ ಹೇಮಾರೆಡ್ಡಿಯ ಸೊಸೆಯುಂ ಒಂದೊಂದಕ್ಷಿಗಳಂ ಕೊಟ್ಟುದಂ ಮತ್ತೊರ್ವ ಜಂಗಮದೇವರ್ಗಂ ಬಸವೇಶ್ವರಂ ಒಂದು ನೊಸಲನೇತ್ರವಿತ್ತುದಂ ಮುಕ್ಕಂಟಿಕಾಚೋಳಂಗಂ ಕರಿಕಾಲಚೋಳನೊಂದು ನಯನಮಂ ಕೊಟ್ಟುದಂ ಶಂಕರದಾಸಿಮಯ್ಯಂಗಂ ಶಿವಂ ಒಂದು ಚಕ್ಷುವಿತ್ತುದಂ ಪೂರ್ವಪ್ರಸಂಗದೊಳ್ ಕೇಳ್ದೆವುಂ ಇಂದೀ ಸಿದ್ಧೇಶನೊಂದು ಕಣ್ಣಂ ಜಾತ್ಯಂಧಕಂಗಂ ಕೊಟ್ಟುದಂ ಪ್ರತ್ಯಕ್ಷ ಕಂಡೆವೆಂದು ಕೊಂಡಾಡುತ್ತಿರಲ್ಮತ್ತೊಂದು ದಿನದಲ್ಲಿ ೪೯

ಉ. ಮಾ. ವೃ.

ಮಂಗಳವಾಡದ[1]ಲ್ಲೆಲೆ[1]ಯ ಪರ್ವಯ ನೆಂಬುವನಿರ್ದು ಸಿದ್ಧನು-
ತ್ತುಂಗಸುಸದ್ಗುಣಾಳಿಗಳ ಕೇಳಿಯು ನೋಳ್ಪಡೆ ಕಾಂ[2](ಕ್ಷೆ)[2] ಪುಟ್ಟಿಯುಂ
ಲಿಂಗಮನೆಂಬ ಪತ್ನಿ ಪರುಷತ್ರಯ ಬಾಲಕನೊರ್ವ ತಾನುವುಂ
ಸಂಗಡ ಕೂಡಿಕೊಂಡೆತಿಯ ನೋಳ್ಪಡೆ ಮೂವರು ಬಂದರಾಗಳುಂ ೫೦

---

1. ಲ್ಲೈಲೆ (ಇ). 2. ಸಿ (ಅಇ).

ಬಂದವರೊಂದಿಸೊಂದೆಡೆಯ ಭಕ್ತರ ಗೇಹಗೊಳಿರ್ದು ಸಿದ್ಧಗಂ
ಬಂದುರುಭಕ್ತಿಯಿಂದ ಘನಪರ್ವವ ಮಾಡಿಬಳಿಕ್ಕಿರ[1](ಲ್ಕಿ ಕ)[1]
ಳ್ದೊಂದಿನ ಪುತ್ರುಗಂ ಜ್ವರದ ತಾಪಮದುಣ್ಮಿಯು ಸಪ್ತಘಸ್ರಕಂ
ಸಂವಡೆ ವಸ್ತ್ರದಿಂದ ಮರೆಮಾಡಿಯು ತಂದರು ತಂದೆತಾಯಿಗಳ್ ೫೧

ಕಂ. ಅನುಭವ ಮಂಟಪದೊಳಗಂ
ಅನುಭವವಂ ಮುಗಿದು ಸಿದ್ಧ ಮಧ್ಯಾಹ್ನದೊಳುಂ
ಅನು[2](ವಿಂ)[2] ಶಿವಪೂಜೆಯನುಂ
ವಿನಯದೊಳಂ ಮಾಡುತಿರ್ದ ಚರಚಯಸಹಿತಂ ೫೨

ಶಿವಪೂಜೆಯ ವೇಳೆಯೊಳುಂ
ಭವಿಗಳು ತಾ ಸುಳಿಯದಂತೆ ಬಾಗಿಲೊಳಾಗಂ
ಹವಣಿಂ ಕಾಯ್ದಿರುತಿರ್ಪಾ
ಅವಸರದೊಳ್ ಭಸ್ಮಾಂಗಿ ಮೃತ ಶಿಶುವ ಕಂಡಂ ೫೩

ಶಾ. ವಿ. ವೃ.
ಇಲ್ಲೇಕ್ಕೈ ಬಹೆ ನಿಲ್ಲು ನಿಲ್ಲೆಲವೊ ನಿರ್ಜೀವಾನ್ವಿತಂ ಬಾಲನಂ
ಮೆಲ್ಲಂಗೇತಕೆ ನೀಂ ತರುತ್ತಿಹೆ ಯತೀಂದ್ರಂ ಜಂಗಮೌಘಂ ಸಮೇ-
ಚ್ಚಿಲ್ಲೀಲಾಭರಿತಾಂಗನಾಗಿ ಶಿವಪೂಜಾಸಕ್ತನಾಗುತ್ತಲುಂ
ಸಲ್ಲಾ[3](ಪ)[3]ಂಗಳೊಳಿರ್ಪ ಕಾಲದೊಳುಮೆಂಬುತ್ತಾತನಂ ನೂಂಕಿದಂ ೫೪

ದಮ್ಮಯ್ಯಂ ಶಿಶು ಸಾಯಲಿಲ್ಲ ಬಿಡು ಸಿದ್ಧೇಶಂಗೆ ನಾ ವಂದಿಪೆಂ
[4](ಎ)[4]ಮ್ಮಯ್ಯೆಂಬುತ ದೈನ್ಯಮಂ ನುಡಿಯುಲಾಚಾರ್ಯಾಜ್ಞೆಯಿಂದಲ್ಲದಾ
ನಿಮ್ಮಂ ಬಾಗಿಲ ದಾಂ[5](ಟಲೀ)[5]ಸೆನೆಸಲಾ ಭಸ್ಮಾಂಗಿಯಾ ಚಿತ್ತಕಂ
ಸುಮ್ಮಾನಂ ಜನಿಪಂತೆ ಬೇಡಿಕೊಳಲೆಂದಂ ತಾಪಸೇಂದ್ರಂಗದಂ ೫೫

ಕಂ. ಲಿಂಗದ ಚಿತ್ಪರವಶದಾ
ಸಂಗದೊಳಿರ್ದೆತಿಪನಿರವ ಕಾಣುತಲವನಂ
ಸಂಗಿಸದವಸರ ಬಿನ್ನಹ
ಕಂಗಮದಲ್ಲೀಗಲೆಂದು ನಿಂದಾ ಕ್ಷಣದೊಳ್ ೫೬

1. ಲ್ಮ (ಅಇ). 2. ವೀ (ಅಇ). 3. ಸ (ಅಇ). 4. ಯೋ (ಅ) ; ಯೇ (ಇ).
5. ಟಲೇ (ಅಇ).

ಒತ್ತಿಲಿರ್ದಖಿಳ ಭಕ್ತರ
ವೊತ್ತವು ನೋಡುತ್ತ ನಿಮಗೆ ಬಿನ್ನಹವೇನೆಂ-
ದೊತ್ತಿ ಕೇಳಲ್ಕೆ ನುಡಿದಂ
ಸತ್ತಿಹ ಶಿಶುವಂ ತರುತಿರೆ ತಡೆದುವನವರೊಳ್ ೫೭

ಸತ್ತುದನೇತಕೆ ತಂದಪೆ
ಸತ್ತಲೆಯಿರಲೆಂದು ಕೆಲರು ನುಡಿವುತ್ತಿರ್ದುದು
ಇತ್ತತರಲೇತಕವನಂ
ಒತ್ತರಿಸಿದೆಯೆಂದು ಕೆಲಬರಾಡುತ್ತಿರ್ದರ್ ೫೮

ಚರಲಿಂಗವು ಭಕ್ತರುಗ
ಳ್ಪರಸ್ಪರದಿಂ ನುಡಿವುತ್ತಿರಲಾಗಂ ಯತಿಪಂ
ಪರವಶ ತಿಳಿದೆಚ್ಚತ್ತುಂ
ಹರುಷದಿ ಎಡಬಲನ ನೋಡುತಿರ್ದಾ ಕ್ಷಣದೊಳ್ ೫೯

ಯತಿಪಂಗಾ ಭಸ್ಮಾಂಗಿಯು
ನತನಾಗಿಯೆ ಯೆಂದನೊರ್ವ ಭಕ್ತಂ ತನ್ನಯ
ಮೃತಶಿಶುವಂ ತರಲಿಲ್ಲಿಗೆ
ಚತುರಿಕೆಯಿಂದರಿದು ತಡೆದೆ ಹದನೇನೆಂದಂ ೬೦

[1]ಬಿಡು (ಬಿಡು)[1] ಬಾಗಿಲೊಳವನಂ
ಮೃಡಮಾಹೇಶ್ವರರಿಗಾತನೊಂದಿಸಿ ಪೋಗಲಿ
ತಡೆಯದಿರೆಂದೆನಲಾಗಂ
ಒಡೆಯನ ನಿರೂಪಂಗೇಳಿ ಬಿಟ್ಟನುಮವರಂ ೬೧

ಮೃತಶಿಶುವ ಕಂಡುಮವರುಂ
ಯತಿಪಪದೊತ್ತಿಸೊಳು ಮಡಗೆ ಭಸಿತವನಿಡಲಾ
ಪ್ರತಿಜೀವ ಬಂದು ಶರೀರ
ಕತಿಹಿತವಾಗೆದ್ದು ಕೂಸು ಚೀರುತ್ತಿರ್ದುದು ೬೨

1. ಬಿಡು (ಅ ಇ).

ನಲವಿಂ ಸತಿಯೆತ್ತಿ ತನ್ನಯ
ಮೊಲೆಯಂ ಕೊಡಲುಂಡು ದಣಿನು ಶಿಶುವಾ ಕ್ಷಣದೊಳ್
ಚಲದಿಂ ಪಣ್ಣಿಗೆ ಹೋರಲ್
ಫಳವಂ ಕೊಡಲದನು ಪಿಡಿದು ಕುಣಿವುತ್ತಿರ್ದುದು ೬೩

ಅರಳೆಲೆಯಲುಗಾಡುತ್ತಿರೆ
ಉರುತರ ಮಾಂಗಾಯ್ಗಳ್ಗಂಡಂಗಳ ಚುಂಬಿಸೆ
ಚರಣ್ಂಗಳೊಳಂದುಗೆ ದನಿ
ಮೊರೆವುತ್ತಿರೆ ಕುಣಿವುತಿರ್ದನಾ ಬಾಲಕನುಂ ೬೪

ವ॥ ಅದಂ ಕಂಡು ಸರ್ವ ಮಾಹೇಶ್ವರರಾಶ್ಚರ್ಯಯುತಮಾದ ಮನವವರಾಗಿ ಮೊರನವೇಮಯ್ಯಂ ರಾಚಮಲ್ಲಯ್ಯನ ಶಿಶುವಿಂಗಸುವಿತ್ತುದಂ ಮತ್ತಂ ಸಂದಿ ಕೋಲ ಬಲ್ಲಯ್ಯನ ಸುತ ಘೋಳಸಂ (?) ಗಸುವಿತ್ತುದಂ ಕದಿರೆ ರೆಮ್ಮಯ್ಯಂ ಸತ್ತೇಳು ದಿನದ ಶಿಶುವಿಂಗಸುವಿತ್ತುದಂ ವೆಕ್ಕಲೂರ ನುಲಿಯ ಕಾಯಕದ ಕಲ್ಲಪ್ಪಯ್ಯಂ ಸರ್ಪದಷ್ಟದಿಂ ನಿಧನವಾದ ಶಿಶುವಿಂಗಸುವಿತ್ತುದಂ ಮಾಣೂರ ಏಕೋಜಾಹುವೆಂಬ ಶಿವಕವೀಶಂ ಸುರಿತಾಳನ ಮರಣದ ಶಿಶುವಿಂಗಸುವಿತ್ತುದಂ ನಂಬಿಯಣ್ಣ ತನ್ನ ಹೆಸರಿನ ಶಿಶುವಿಂಗಸುವಿತ್ತುದಂ ತಿರುಜ್ಞಾನಸಂಬಂಧಿಗಳುಂ ಹದಿನೇಳು ವರ್ಷಂ ಅಂತವಾಗಿರ್ದ ಹಸುಳೆಗಸುವಿತ್ತುದಂ ಪೂರ್ವಕಥೆಗಳೊಳ್ ಕೇಳ್ವೆವೀಗಂ ಸಿದ್ಧಲಿಂಗೇಶ್ವರಂ ವರ್ಷತ್ರಯದ ಶಿಶುವಿಂಗಸುವಿತ್ತುದಂ ಪ್ರತ್ಯಕ್ಷಕಂಡೆವೆಂದು ಕೊಂಡಾಡುತ್ತಿರೆಯಿರೆ ಮತ್ತೊಂದು ದಿನದಲ್ಲಿ ೬೫

ಉ. ಮಾ. ವೃ.

ಉನ್ನತ ರಾಯದುರ್ಗದೊಳು ಮಲ್ಲಪನೆಂಬವನಿರ್ದುವೊಂದಿಸಂ
ಮನ್ನಣೆವೆತ್ತ ಸಿದ್ಧನ ಮಹಾತ್ಮೆಯ ಬಲ್ಲವರಿಂಪ ಕೇಳಿಯುಂ
ತನ್ನಯ ನಾರಿಗೆಂದ ಶಿವಗಂಗೆಯ ದೇಶದೊಳೊರ್ವ ಜಂಗಮಂ
ತನ್ನನು ಬೇಡಿದರ್ಗೆ ವರವೀವುತಲಿರ್ಪನಂತೆಯೆಂದುವುಂ ೬೬

ಬೇಗದಿ ನಾವು ಪೋಗಿ ಬಹವೇಳೆನಲೆಂದಳು ತನ್ನ ದೈವ ತಾ
'ನೀ'ಗಳೆ ಸಂಹರಂಗಳನು ಮಾಡುವದೆಮ್ಮನುಯೆಂಬುತಾಗಳುಂ
ಹೋಗದಿರೆಂದು ತಾಂ ನುಡಿಯೆ ಹೋದರೆ ಹೋಗಲಿ ದೇಹವೀಕ್ಷಣಂ
ಯೋಗಿಯ ನೋಡಿದಲ್ಲದೆಯು ಮಾಣೆ[2]ನು (ಯೆನ್ನುತ)[2] ತನ್ನ ಪತ್ನಿಯೊಳ್ ೬೭

1. ಗೀ (ಇ). 2. ನು (ಅಇ).

ಕಂ. ಮಾಳಾಚಿಯು ಭರ್ತೃವಿಗಂ
ಭಾಳಾಕ್ಷನ ಭಕುತನೇಂ ಸರಿಯಹನೆ ಪೇಳಾ
ಹಾಳಾಗುವಂತೆ ಮಲ್ಲನ
ಭೀಳಾಂಗನ ತರಿದಗಾರು ಸರಿಯಹರೆಂದಳ್ ೭೮

ಮನೆದೈವವಾದುದಕ್ಕಂ
ನೆನೆವುದುವಲ್ಲದೆ ನಮಗೆ ಜಗಕಿದು ದೈವವೇ
ಜಿನುಗದಿರೆಂದದ್ದಲಿಸಿಯು
ಮುನಿಪತಿಯಂ ನೋಳ್ಪಾಸೆಯೊಳವನೈದಿದನುಂ ೭೯

ಅವಳತ್ತ ತನ್ನ ಗೊರವ
ಗವಿರತದಿಂ ಪೂಜೆಯೋಜೆಗಳ ಮಾಡುತಿರಲ್
ಇವನಿತ್ತ ಯತಿಗೆ ವಂದಿಸಿ
ಸವಿನಯದಿಂ ತನ್ನ ವಧುವಿನಿರವಂ ಪೇಳ್ದಂ ೮೦

ಕರೆದಡೆಯುವಳ್ಬಾರದುದಂ
ಧರೆಗೆಲ್ಲಂ ಮೈಲಾರ ತಾನೆ ಪರಿವೃಢನೆಂದುದ
ತ್ವರಿತದಿ ತಾ ಬಂದುದನುಂ
ಹರುಷದೊಳಂ ಪೇಳ್ದಡಾಗಲೆತಿವರನೆಂದಂ ೮೧

ತಾನೇ ಬಂದಪಳವಳುಂ
ನೀನಾ ಮೈಲಾರನ ಗೊಡುವೆಯು ಬಿಡು ಮನದೊಳ್
ನೀನಾ ಊರಿಗೆ ಪೋಗೆಂ
ವಾ ನಾರಿಯ ಬಳಿಗೆ ಕಳುಪಿದಂ ಸಂತಸದೊಳ್ ೮೨

ಬಂದವ ನಾರಿಯೊಳೆಂದಂ
ಸಂದೇಹಿಸಬೇಡ ವನಿತೆ ಶಿವತಾನೆತಿಪಂ
ಬಂದು ನೀನೋಡದಾದ್ಯೆ
ಎಂದಿಂಗಂ ಕಾಣ್ಬೆ ನೀನುಯೆಂದವನಿರ್ದಂ ೮೩

ಎಮ್ಮೆ ಮರುದಿನಕೆ ಸತ್ತುದು
ಮಮ್ಮಾನವದಾಯ್ತು ವನಿತೆಗಾಕ್ಷಣವೆಂದಂ
ಹೆಮ್ಮೆಯನಾಡಿಯೆ ಯತಿಯೊಳ್
ಎಮ್ಮೆಯು ಸೊಮ್ಮಂ ಹಾಳುಗೈವರೆಯೆಂದಂ ೮೪

ಈ ಯೆನ್ನೈಯೆದ್ದ ಡೀಗವೆ
ಆ ಯತಿಪನೆ ದೈವವೆನಗೆಯೆಂದನಲಾ ಕ್ಷಣ
ಪ್ರೀಯದಿ ಭಸಿತವ ಪಿಡಿದವ
ನೊಯ್ಯನೆ ಮಹಿಷಿಯೊಳು ತಳೆಯಲೆದ್ದುದು ಬೇಗಂ ೭೫

ಅದನರಿದು ಹರ್ಷದೊಳವ
ಳುದುಭುತವಂ ತಾಳಿ ತನ್ನ ಮೈಲಾರುವನುಂ
ಹದುಳದಿ ಬಿಟ್ಟಾ ನಾರಿಯು
ಯೊದಗಿಸಿಯಾ ಮಹಿಷಿಘೃತವ ತಂದಳು ಯತಿಗಂ ೭೬

ಶರಣೆಂದೆತಿಗಾ ವನಿತೆಯು
ವರಮಹಿಷಿಗೆ ಪ್ರಾಣ ಬಂದುದಂ ತನ್ನಿರವಂ
ಹರುಷದಿ ಪೇಳುತಲಾಗಂ
ಇರಿಸಿದಳಾ ಘೃತವ ಸತಿಯು ಭಕ್ತಿಯೋಳಾಗಂ ೭೭

ವ॥ ಅದಂ ಕೇಳ್ದು ಸಕಲಭಕ್ತರಾಶ್ಚರ್ಯಂಬಟ್ಟು ಗಿರಗಾವಿಯ ವೀರಾಭಕ್ತಂ ಮೃತಮಹಿಷಿಗಸುವಿತ್ತುದಂ ಕೇಳ್ದೆವುಂ ಇಂದೀ ಸಿದ್ಧಲಿಂಗಂ ರಾಯದುರ್ಗವಲ್ಲಿಯ ಮಲ್ಲಪನೆಮ್ಮ ಹುಟ್ಟಿದ ಮೂವತ್ತೆರಡುವರುಷದಿಂ ಮೇಲೆ ಮೃತನಾಗೆ ದೇವರಾಯ ಪಟ್ಟಣದಲೆತಿಪಂ ಇರ್ದು ಪ್ರಾಣವಿತ್ತುದಂ ಕಂಡೆವೆಂದು ಕೊಂಡಾಡುತ್ತಿರೆಯಿರೆ ಮತ್ತೊಂದು ದಿನದಲ್ಲಿ ೭೮

ಹರಿಣವೃತ್ತ. (ಹರಿಣೀಪ್ಲುತ)

ವರಬುರುಡುಕುಂಟೆಂಬೂರೊಳೊರ್ವಂ ಸುಗಬ್ಬಿನಾಯಕಂ
ಪುರಹರಭಕ್ತಂ ಸಿದ್ಧಲಿಂಗಂ ಸುಪರ್ವವ ಮಾಡಲೆಂ
ಮರುಸುತನು ತಮ್ಮಾ ಅಶ್ವಾಂತಾದಿವಾಹನಮುಖ್ಯಮಂ
ಉರುಸಮಿತಿಯಂ ಸಂಗಾತಂ ಕೂಡಿಕೊಂಡುರೆ ಬಂದವಂ ೭೯

ವ॥ ಇಂತು ಬಂದು ನಾಯಕಂ ಗುರುವಿಂಗೆ ನತನಾಗಲಿರ್ದುತ್ಸಾಹವಂ ಮಾಡುತ್ತಿರೆಯಿರೆ.

ಕುವರನಯಿದಾರ್ಘಸ್ರಂ ಇರ್ದಲ್ಲಿ ಪೋಪೆನು ಯೆಂಬುತಂ
ಹವಣಿಸುತಲಿರ್ಪ ಕಾಲಕ್ಕಶ್ವ[1](ತಾ ಮೃತವಾಗಲಾ)[1]
ಅವನಿಪಸುತಂ ಸಿದ್ಧೇಶಂಗಾ ಕ್ಷಣಂ ನತನಾಗಿಯುಂ
ನವಿನವಹ ರಾಜಾಶ್ವಂ ಸಿರ್ಜೀವಿಸಿರ್ದು[2](ದುಯೆಂ)[2]ದುವುಂ ೮೦

1. ಂಮೃತವಾಗಲವನಿಸುತಂ ಲ (ಅಇ). 2. ರ್ದುದೆಂ (ಅಇ).

ಕಂ. ಘೋಟಕಕೀಗಳೆ ಪ್ರಾಣವ
ನಾಟಿಸಬೇಕೆಂದು ಕುವರನೆರಗಿರ್ದಾಗಳ್
(ಘಾಟದಿ?)ಪದಪ್ರಕ್ಷಾಲ್ಯಕೃ-
ಪೀಟವ [3](ಚಿಮುಕಿಸಲು)[3] ವಾಜಿಗಸುವೊದಗಿದುದಂ ೯೦

ತುರಗಂ ಶರಿರವ ಬಿದುರ್ದುದು
ಧರೆಯೊಳ್ ಖುರಗಳಸು ಊರಿ ನಿಂದಾಕ್ಷಣದೊಳ್
ಖುರ ಮಾಡಿ ದನಿಗೆಯ್ವುತ್ತಿರೆ
ಪರುಷಾಜನನಿವಹ ಕಂಡುಚೋದ್ಯಂಬಟ್ಟರ್ ೯೧

ವ|| ಅದಂ ಕಂಡು ಅಖಿಳ ಮಾಹೇಶ್ವರರಾಶ್ಚರ್ಯಯುತರಾಗಿ ಮಾಣೂರ ಏಕೋದೇವಬಾಹು ಎಂಬ ಶಿವಕವೀಶಂ ವೀಣಮಲ್ಲುಕನ ಸತ್ತ ಹಯಕ್ಕಂ ಪಾದ ಜಲಮಂ ತಳಿದು [4]ಎಬ್ಬಿಸಿದುದಂ ಕೂಗಿನಕೋಟೆಯ ವರದಾನಿಯಮ್ಮಂ ಗರ್ಭಶೂಲೆ ಯಿಂ ಮೃತವಾದ ತುರಂಗಮಂ ಪಾದೋದಕಮಂ ತಳಿದೆಬ್ಬಿಸಿದುದಂ ನವಬ್ರಹ್ಮಭೂರಿ ಮಾಯುಗಳಂ ಹಯಂಗಳಂ ಮಾಡಿತ್ತುದಂ ಗೊಡಲಮಲ್ಲಯ್ಯಂ ದಾರುಘೋಟಕಕ್ಕಸು ವಿತ್ತು ಮಾರಿದುದಂ ದಕ್ಷಿಣಾಪುರದ ಬೇಳೆಯಯ್ಯಂ ಮರದಕುದುರೆಗಸುವಿತ್ತುದಂ ಬಸವೇಶಂ ಬಿಜ್ಜಳನ ವಾರಕದ ತಾರ್ಕ್ಷ್ಯಮಂ ವಿಟಜಂಗಮಕ್ಕಿತ್ತು ನೃಪಂಗಂಲಾಯ ದೊಳ್[4] ತೋರಿದುದಂ ಪೂರ್ವಕಥೆಗಳೊಳ್ ಕೇಳ್ವೆವುಂ ಈ ಸಿದ್ಧಲಿಂಗೇಶ್ವರಂ ಬುರುಡ ಕುಂಟೆಯೆಂಬ ನಗರಮಂ ಆಳ್ವ ಗಬ್ಬಿನಾಯಕನ ಸುತನ ರಾಜಾಶ್ವಕ್ಕಸುವಿತ್ತುದಂ ಪ್ರತ್ಯಕ್ಷಂ ಕಂಡೆವೆಂದು ಕೊಂಡಾಡುತ್ತಿರೆಯಿರೆ ಮತ್ತೊಂದು ದಿನದಲ್ಲಿ ೯೨

ಕಂ. ಭಿಕ್ಷಾವತಿರಾಯಂ ತಾಂ
ಮೋಕ್ಷಾಗುರುವಿಂಗೆ ಸ್ವರ್ಣದಿಂ ಚಿತ್ರಿಸಿ ದಾ
ಸಾಕ್ಷಾ[5](ದ್ವೈ)[5]ವರ್ಗಂಥೆಯ
ಲಕ್ಷಾನವರತ್ನಕಿರಿಟಮಂ ಸಂಭ್ರಮದೊಳ್ ೯೩

ತಂದೆತಿರಾಜಂಗಾಗಂ
ವಂದಿಸಿ ತತ್ಕಂಥೆಕಿರಿಟಮಂ ಮುಂದಿಟ್ಟಾ-
ನಂದದಿಯವಧರಿಪುದು ನೀ-
ವೆಂದೆನುತಂ ಭಕ್ತಿಯಿಂದ ಭಸಿತವನೀಯಲ್ ೯೪

---

1. ಸಿಕಿಸಲು (ಅಇ). 2. x (ಇ). 3. ದ್ಯೆ (ಅಇ).

ಆತನ ಭಕ್ತಿನಿಮಿತ್ತಂ
ಖ್ಯಾತಿಯುತಂ ಧರಿಸಿ ಪುರಾಣಗೋಷ್ಠಿಯೊಳೆತಿಪಂ
ಪ್ರೀತಿಯೊಳಿರುತಿರ್ಪಾಗಂ
ಆತುರದಿಂ ಬಂದನೊರ್ವ ಪಲ್ಲವ ಚರನುಂ ೯೫

ಗುರುಲಿಂಗದೇವರೆಂಬೀ
ಯುರುನಾಮವ ತಾಳಿಹ ವಿಟಜಂಗಮದೇವಂ
ಹರುಷದಿ ಯತಿಪಂ ಧರಿಸಿಹ
ವರ ಜೆಪರ್ಗಂಥೆಯನು ಕಾಣುತೆಂದಂ ಜವದೊಳ್ ೯೬

ಹೀರಾದಿ ರತ್ನಸಮುದಯ
ಸೇರಿರ್ದಾ ಮಕುಟಕ್ಕೀ ಸ್ವರ್ಣದ ಕಂಥೆಗೆ
ಹಾರೈಸಿದೆನೆಂದುಂ ವಿಟ-
ಚಾರಂ ಕೇಳಲ್ಕೆ ಕೊಟ್ಟನಾ ಕ್ಷಣದೊಳಗಂ ೯೭

ಬಸವೇಶ ಮಡದಿಯುಟ್ಟುದ
ಬಸವಂತಂ ವೊನೆಯಧರನು ಕಾಮಿತ ರತ್ನದ
ವಸುನೇತ್ರನ ಚರಗಿತ್ತ
ರ್ಪಸರಿಸದಿಂದವರ ಕೀರ್ತಿಯೆನುತವ ಪೋದಂ ೯೮

ವ|| ಅದಂ ಸಮಸ್ತಮಾಹೇಶ್ವರರ್ಕಂಡು ಅದ್ಭುತಮಾನಸರಾಗಿ ನಿಡುಮಾರಯ್ಯಂ ಮಡದಿಯುಟ್ಟುದನೊರ್ವ ಚರಂಗಿತ್ತುದಂ ಆಯ್ದಕ್ಕಿಮಾರಯ್ಯಂ ಮಡದಿಯುಟ್ಟುದಂ ತಾನುಟ್ಟುದಂ ವಿಟಜಂಗಮಕಿತ್ತುದಂ ನೈಯಾರೆಂಬಾತಂ ನೆಯ್ದುದೇವಾಂಗಮಂ ಜಂಗಮಂ ಬೇಡಲಿತ್ತುದಂ ಜೇಡರದಾಸಿಮಯ್ಯಂ ವಸ್ತ್ರವನ್ನಿತ್ತುದಂ ಶಿವಭಕ್ತರ್ಗಂ ವಸ್ತ್ರಾಭರಣಮನಿತ್ತುದಂ ಹರಂ ಮೆಚ್ಚಿ ಬೇಡೆನಲ್ಕುರಿಚರ್ಮಾಸ್ಥಿಗಳಂ ತೆಗೆಸಿ ಕಾಳಿಮರಸಿ ಭೂಷಣಾಂಬರಗಳನಿತ್ತುದಂ ಕಂಥೆಯ ಕಲ್ಲಿನಾಥಂ ಹರಂಗೆ ತನ್ನ ಕಂಥೆಯಂ ಇತ್ತುದಂ ಸಿಂಧುದೇಶದರಸು ಪಟ್ಟದಂಗನೆಯನಿತ್ತುದಂ ಮಾನಕಂಜಾರಮ್ಮಗಳು ಮುಡಿಯಿತ್ತುದಂ ನೆಡುಗುಣಪೆರುಮಾಳೆ ತಾನಾಳ್ದ ದೇಶಮಂ ಭಕ್ತರ್ಗಿತ್ತುದಂ ನಿಡುಗುಡಿಯ ಪೆರ್ಮಾಡಿ ಧನಕನಕವಸ್ತುವಾಹನವನಿತೆಯನೊರ್ವ ಜಂಗಮಕ್ಕಿತ್ತುದಂ ಜೋದರ ಮಾಯಣ್ಣಂ ರಾಜನಾನೆಯನಿತ್ತುದಂ ಆಣತಿಯ ಚಂದ್ರಯ್ಯಂ ಅಷ್ಟಸಿರಿಯಂ ಕೇಳ್ದ ಜಂಗಮಕ್ಕಂ ಎಂಟು ಸುರಮಣಿಗಳಂ ಕೊಟ್ಟುದಂ ಕರಿಯೆಡೆಯ ಮುಮ್ಮಡಿ ಒತ್ತೆಸೀರೆಯಂ ಕೊಟ್ಟುದಂ ಪೆರುಮಗೆಯೆಡೆಯೆ ಮಾಯಿ ತನ್ನ ವ್ಯೈಚರ್ಮವಂ ಕೊಟ್ಟುದಂ ಹೊನ್ನಬ್ರಹ್ಮಯ್ಯಂ ರತ್ನಪದಕಮಂ ವಿಟಜಂಗಮಕ್ಕೆ

ಕೊಟ್ಟುಪಂ ಸಾಸಲ ಭೈರವೇಶ್ವರಂ ಅಂಗಿಯಂ ಕೊಟ್ಟುದಂ ಇಹಪ್ಪುಗೆಯಾಂಡಿ ಪಟ್ಟದ ರಾಣಿಯನಿತ್ತುದಂ ಪೂರ್ವಪ್ರಸಂಗದೊಳ್ ಕೇಳ್ದೆವುಂ ಇಂದೀಗ ಸಿದ್ಧ ಲಿಂಗೇಶ್ವರಂ ಗುರುಲಿಂಗದೇವರೆಂಬ ವಿಟಜಂಗಮಕ್ಕೆ ಸ್ವರ್ಣಚಿತ್ರಿತ ಕಂಥೆಯಂ ನವರತ್ನಕಿರೀಟಮಂ ಬೇಡಿದಾ ಕ್ಷಣಂ ಕೊಟ್ಟುದಂ ಪ್ರತ್ಯಕ್ಷಂ ಕಂಡೆವೆಂದು ಕೊಂಡಾಡುತ್ತಿರೆಯಿರೆ ಮತ್ತೊಂದು ದಿನದಲ್ಲಿ ೯೯

ಉ. ಮಾ. ವೃ.

ದ್ರಾವಿಡದೇಶದಿಂದೆ ದಶಪಂಚಕ[1](ಮಾದ)[1] ಚರಂಗಳೈದಿಯುಂ
ದೇವರ ಪೂಜೆಮಾಡುವೊಡೆ ಕೇತಸಮುದ್ರವ ಪೊಕ್ಕು ಜಂಗಮಾ-
ದೇವರಿಹಾಲಯಂತದಿ ಬಿಡಾರಗಳಂ ಸೆರೆ ಮಾಡಿಕೊಂಡುವುಂ
ಭಾವಜವೈರಿಪೂಜೆಗಳ ಮಾಡಿ ಯತೀಶನ ನೋಳ್ಪೆನೆಂಬುತುಂ ೧೦೦

ಪ್ರೀತಿಯೊಳನ್ನದಾನಿಘನಮಲ್ಲಯನಿರ್ಪ ಬಿಡಾರಕಾಗಿಯುಂ
ಓತು ಬರುತ್ತಿಹಾ ಪಥದೊಳೊಂದುರಗಂ ಚರಲಿಂಗನೊರ್ವನಂ
ಖಾತಿಯೊಳೌಡಿತಾ ಕ್ಷಣದಿ ಕೊಂದರು ಸತ್ತುದು ಮತ್ತೆ ಚಾರನುಂ
ಭೀತಿತನಾಗಲುಗ್ರವಿಷವೇರಿತು ಜೃಂಭಣವೆಯ್ದುತಿರ್ದುದುಂ ೧೦೧

ಅಂತದ ಕಾಣುತಂ ಚರಸಮೂಹಗಳೆಲ್ಲರು ಬೇಗಲಾತನಂ
ಮುಂತಣ [2]ಹೆಜ್ಜೆ[2]ಯಿಕ್ಕಿ ನಡೆಯಂ ಮುಯಿ ಜೊಂಪಿಸಿತೀತಗೆಂಬುತಂ
ತಂತರಿಗೊಂಡು ಪೊತ್ತು ನಡೆತಂದವು ಸಿದ್ಧನ ಪಾದಕಂಜದಾ
ಅಂತ್ಯದೊಳಿಕ್ಕಿಯಾ ಹದನ ಪೇಳಿಯು ವಂದಿಸಿ[3]ತಾ(ಗ)[3] ಜಂಗಮರ್ ೧೦೨

ಕಂ. ನಿಮ್ಮಯ ದರ್ಶನಕೀಗಂ
ನಮ್ಮೆಲ್ಲರ ಕೂಡಿಯೀತ ಬರುತಿರೆ ಸರ್ಪಂ
ಇಮ್ಮಯಲಿ ಪೊರಳಿ ಕಚ್ಚಿತು
ಜುಮ್ಮನೆ ವಿಷವೇರಿತೀತಗೆಂದಾಡಿದರುಂ ೧೦೩

ಲಾಲಾಜಲ ಸುರಿವುತ್ತಂ
ಮೇಲಾಗಿಹ ಸಿರವು ಬಾಗಿ ಹಸುರಾರಿದನಂ
ಭಾಳಾಕ್ಷೆತಿಪಂ ಕಂಡುಂ
ಲೀಲಾಭಸಿತವನಾತನ ಪಣೆಯೊಳಗಿಟ್ಟಂ ೧೦೪

1. ತಿಥಿ (ಅಇ). 2. ಪೂಜೆ (ಇ). 3. ತಾ (ಅಇ).

ಸರ್ಪಾಭರಣನ ಶರಣಗೆ
ಸರ್ಪನ ವಿಷವೇನ ಮಾಡಬಲ್ಲುದು ಹೇಳಾ
ಸರ್ಪನ ವಿಷಕಂಜದಿರಾ
ಸರ್ಪನ [1](ನೀವೇ)[1]ಕೆ ಕೊಂದಿರೆಂದಂ ಸಿದ್ಧಂ ೧೦೪

ಉರಗನ ವಿಷವಿಳಿದುದಾಗಂ
ಚರಲಿಂಗದ ಶರಿರ ಕಾಂತಿ ತೋರಿದುದಾಗಂ
ಮರಣ ಪರಿಹರಿಸಿತಾಗಂ
ಹರುಷದೊಳಿರುತಿರ್ದನೆತಿಯ ಸಾನಿಧ್ಯದೊಳುಂ ೧೦೬

ವ ॥ ಅದಂ ಕಂಡು ನಿಖಿಳಭಕ್ತರಾಶ್ಚರ್ಯಮನೊಂದಿದರಾಗಿ ಬಸವೇಶ್ವರಂ ಚಿತ್ರದಜಂಗಮಕ್ಕಸುವಿತ್ತುದಂ ಮುಸುಟೆಯ ಚೌಡಯ್ಯಂ ಜಿನಕೃತಕದಿಂ ಮಾಡಿದ ಜಂಗಮಕ್ಕಸುವಿತ್ತುದಂ ನನ್ನಯ್ಯಂ ಗುರುವಿಂಗಸುವಿತ್ತುದಂ ಬಸವೇಶಂ ಸದ್ಯನೃಪನ ರಾಣಿಯ ಸಮಯಾಚಾರದ ಜಂಗಮಕ್ಕಸುವಿತ್ತುದಂ ಮಡಿವಾಳಯ್ಯಂ ಆನೆಗೆ ಮುನ್ನ ಸತ್ತ ಮಾನವಂಗಸುವಿತ್ತುದಂ ಪ್ರಭಾತಯ್ಯಂ ಸೂನುವಳಿಯೆ ಸತ್ತಮಾನಿನಿಗಸು ವಿತ್ತುದಂ ವಿರಗರಾಯಣ್ಣಂ [2](ಬೆಲೆ)[2]ವೆಣ್ಣಿರುವ ಗೃ[3](ಹಮನ)[3]ನಲಂ ನುಂಗೆ ಕಾಮಾಗ್ನಿಯೊಳು ಬೇವುತ್ತಿರ್ದ ಜಂಗಮುವಂ ನೋಡಿ ಮನಂ ಮರುಗಿ ಅವರಂಗನೆಗಸು ವಿತ್ತುದಂ ಪೂರ್ವಪ್ರಸಂಗದೊಳ್ ಕೇಳಿ ಬಲ್ಲೆವೀ ಸಿದ್ಧೇಶ್ವರಂ ಸರ್ಪದಷ್ಟ ಜಂಗಮಕ್ಕಸು ವಿತ್ತುದಂ ಪ್ರತ್ಯಕ್ಷಂ ಕಂಡೆವೆಂದು ಕೊಂಡಾಡುತ್ತಿರೆಯಿರೆ ಮತ್ತೊಂದು ದಿನದಲ್ಲಿ
೧೦೭

ಉ. ಮಾ. ವೃ.

ಅಂಧಕನೊರ್ವ ಜಂಗಮವು ಕುಂತಳ ದೇಶದೊಳಿರ್ದು ಸಿದ್ಧನಿಂ
ದಾದ ಸುಕೀರ್ತಿವಾರ್ತೆಗಳ ಕೇಳ್ದು ವಿಳಾಸದಿ ತನ್ನ ಕಣ್ಗಳಂ
ಹೊಂದುಗೆಯಿಂದಲೀಸಿಕೊಳವೇಳ್ಕುಮದೆಂಬುತ ಬಂದು ಪ್ರೀತಿಯಿಂ
ವಂದಿಸಿ ಪರ್ವದುತ್ಸಹವ ಮಾಡಿಯೆ ಬೇಡಿದನಾಗ ಕಣ್ಗಳಂ ೧೦೮

ಈಶ್ವರ ತಾನೆ ನೇತ್ರಗಳ ಕೊಟ್ಟಪನೆಂದೆನಲಾಗಲಕ್ಷಿಗಳ್
ಭಾಸುರಮಾದ ಕಾಂತಿಗಳ ಬೀರುತ ಸಿಂಗರವೆತ್ತು ಬಂದಿರ-
ಲ್ವಾಸವವಂದ್ಯರೂಪಿನ ಯತೀಂದ್ರನು ಕಣ್ಗಳ ಕೊಟ್ಟುದಕ್ಕೆಯುಂ
ಮಾಸದ ಕೀರ್ತಿಯಂ ಪಡೆದನೆಂಬುತಲೆಲ್ಲರು ಕೀರ್ತಿಗೈದರುಂ ೧೦೯

---

1. ನದೇ (ಅಇ). 2 ಬಲ (ಅಇ). 3. ಹಾ (ಅಇ).

ಕಂ. * ಮೂರ್ ಸೀರೆಯಕಾಯಕದೊ-
ಳ್ಪಾರಾಗದೆ ನಡೆದ ಶೀಲವಂತಂ ಕೇಳ್ವಡೆ
ಗಾರಾಗದೆ ಕೊಟ್ಟನಂದುಂ
ನೀರಂ ಜಂಗಮಕಿಂದಿತ್ತನೆಂದರ್ ಕೆಲರುಂ ೧೧೦

ವ|| ಅದಂ ಕಂಡು ಸಮಸ್ತಭಕ್ತರಾಶ್ಚರ್ಯದೊಳೊಂದಿ ಶಿವಂ ಕಾಳಿದಾಸಂಗಂ ಮೂಗುಳಕಣ್ಗಳಂ ಕೊಟ್ಟುದಂ ಶಿವ ಕಂಗಳನಾಗಿದೇವಂಗೆ ಮೂಗಂಡುಗ ಕಣ್ಗಳಂ ಇತ್ತುದಂ ಹರಂ ಸಂಹಿತೆಯ ಕಾಳಿದಾಸಂಗಂ ಮೂಗಂಡುಗ ನವಣೆಯಲಿಕ್ಕದ ನೇತ್ರಂಗಳಂ ಇತ್ತುದಂ ಬಸವೇಶ್ವರಂ ಚೆನ್ನಬಸವೇಶ್ವರಂಗಂ ಲೋಚನಂಗಳಂ ಇತ್ತುದಂ ಕಂಗಳದೇವಯ್ಯಂ ಮಾರ್ಜಾಲಕ್ಕಂ ಚಕ್ಷುಗಳನಿತ್ತುದಂ ಮತ್ತಂ ಪರಮೇಶ್ವರಂ ಇರುತಾಂಡಾರಿ ಶಿವನಾಗಯ್ಯ ಕಂಗಳದೇವ ಕಣ್ಣಪ್ಪ ವೆಲ್ಲಕೊಂಡ ಮಹಾದೇವ ಪಂಡಿತಾರಾಧ್ಯ ಕಂಗಳ ವಿರೂಪಾಕ್ಷ ಮಧುವರಸ ಮೊದಲಾದ ಶಿವಶರಣರ್ಗಕ್ಷಿಗಳಂ ಇತ್ತುದಂ ಪೂರ್ವಪುರಾತನರ ಕಥೆಗಳೊಳ್ ಕೇಳ್ದಿವುಂ ಇಂತೀ ಸಿದ್ಧಲಿಂಗೇಶ್ವರಂ ಜಂಗಮಕ್ಕಂ ಕಣ್ಗಳನಿತ್ತುದಂ ಪ್ರತ್ಯಕ್ಷ ಕಂಡೆವೆಂದು ಕೊಂಡಾಡುತ್ತಿರೆಯಿರೆ ಮತ್ತೊಂದು ದಿನದಲ್ಲಿ ೧೧೧

ಕಂ. ಹಲುಕೂರೊಳಗಿರುತಿರ್ಪಾ
ಮಲಹರ ಸದ್ಭಕ್ತರೆಲ್ಲ ಯತಿದರ್ಶನಕಂ
ಗೆಲವಿಂ ಹೋಹೆವೆಂಬಾಗಂ
ಹಲುಬಿದನಾ ಹಲ್ಲಚಿಕ್ಕನೆಂಬುವನಾಗಂ ೧೧೨

ಮನುಜನ ಬಳಿಗೇತಕೆ ನೀಂ
ವಿನಯದಿಯುವದ್ದೈವವೆಂದು ಪೋಪಿರಿಯೆನಲುಂ
ಕನಲುತ ಭಕುತರು ಜೈನನೆ
ನಿನಗಿದು ಕೇಡೆಲವೊ ಬಿನುಗಯೆಂದಾಡಿದರುಂ ೧೧೩

ದೈವ ತಾನೀತನಾದಡೆ
ಈ ವೇಳೆಯೊಳೆನಗೆ ಕೇಡು ತಟ್ಟದಡರಿಪೆಂ
ನೀವೇಕೆ ಶಪಿಪಿರೆಂದಾ
ಶ್ರಾವಕಭಜಕಂ ಜರೆವುತಿರ್ಪಾ ಕ್ಷಣದೊಳಂ ೧೧೪

* ಈ ಪದ್ಯದ ಅರ್ಥ ಸರಿಯಾಗಿ ಆಗುತ್ತಿಲ್ಲ. ಇದನ್ನು ಸರಿಪಡಿಸಲಾಗದ್ದರಿಂದ ಮೂಲದಲ್ಲಿ ಇದ್ದ ಹಾಗೆಯೆ ಇಟ್ಟದೆ.

ಅವನ ಗೇಹವನನಲಂ
ಪ್ರೀತಿಯೊಳಂ ದಹಿಸುತ್ತಿರಲೆಲ್ಲರು ಕಂಡುಂ
ಭೂತಳಕಿದು ಚೋದ್ಯವೆಂದು
ಈತಂಗೀ ಯತಿಯ ಜರೆದ ಫಲವಾಯ್ತೆಂದರ್ ೧೧೫

ಛಿಳಿ ಛಿಳಿ ಭುಗಿಲ್ಭುಗಿಲ್ಲೆಂ
ದುಟಕಟದಗಿಲ್ದಗಿಲ್ದಗಲ್ಬರಂಗರ್ರಟಚಿ-
ಟ್ಟಿಟಬರ್ಬುರ್ಚುರ್ರುಂ ಗಿಚುರ್ಂ
ಗಿಟಚುಯಿಚುರ್ರೆಂಬ ರವವುಣ್ಮಿದುವಾಗಳ್ ೧೧೬

ಎಡಬಲದಿ ಸಂದುಗೂಡಿದ
ಮೃಡಭಕ್ತರ ಮನೆಗಳುಳಿದು ನಿಂದಕನಿರುವಾ
ನಡುವಣ ಗೃಹವೇ ದಹಿಸಲ್
ಪೊಡವಿಗಿದಾಶ್ಚರಿಯವೆಂದು ಪೊಗಳುತಲಾಗಂ ೧೧೭

ಯತಿಪನೆಡೆಗೆಯ್ದಿಯವರುಂ
ನತರಾಗಿಯೆ ತಮ್ಮ ಗ್ರಾಮದಲ್ಲುದ್ಭವಿಸಿ-
ದತಿಶಯವ ಹೇಳಲಾ ಕ್ಷಣ
ವತಿಹಿತದಿಂ ಕೇಳ್ದು ಭಕ್ತರಾಶ್ಚರಿಯೆಂದುಂ ೧೧೮

ವ|| ಇದಂ ಕೇಳ್ದು ನಿಖಿಲಮಾಹೇಶ್ವರರದ್ಭುತಯುತರಾಗಿ ರಾಜಮಹೇಂದ್ರದಲ್ಲಿ ಭಂಡಾರಿ ಸೋವಣ್ಣನೆಂಬಾತಂ ನಿಂದಿಸಿದ ವಿಪ್ರರ ಮನೆಗಳೆಲ್ಲಂ ಬೆಂದು ನಡುನಡುವಿರ್ದ ಶಿವಭಕ್ತರ ಮನೆಗಳುಳಿದುದಂ ಕೋರಮಂಗಲನಾಡ ಕೆಸ್ತೂರೊಳಂ ಮಾಯಿಯಂ ನಿಂದಿಸಿದ ವೈಷ್ಣವರ ಗೃಹಗಳೆಲ್ಲಂ ಪಚನಮಾಗಿ ನಡುನಡುವಿರ್ದ ಶಿವಭಕ್ತರ ಮನೆಗಳ್ಬೇಯದಿರ್ದುಂ ಮತ್ತಂ ಗೊಬ್ಬೂರಲಿರ್ದ ಬಬ್ಬಿಬಾಚಯ್ಯಂಗಳಂ ನಿಂದಿಸಿದ ವಿಪ್ರರ ನಿಕೇತನಂಗಳೆಲ್ಲಂ ಹುತವಹಂಗಾಹುತಿಯಾಗಿ ನಡುನಡುವಿರ್ದ ಲಿಂಗವಂತರಾಲಯಂಗಳ್ದಹಿಸದಿರ್ದುದಂ ಪೂರ್ವಕಥೆಗಳೊಳ್ ಕೇಳ್ದೆವುಂ ಇಂದೀ ಸಿದ್ಧಲಿಂಗೇಶನಂ ನಿಂದಿಸಿದ ಜೈನನ ಗೃಹ ದಹನಮಾಗಿ ಒಂದು ಹರಿಮನೆಯೊಳೆಡಬಲದಲಿರ್ದ ಶಿವಭಕ್ತರ ಮನೆಗಳ್ ಬೇಯದಿರ್ದುದಂ ಪ್ರತ್ಯಕ್ಷಂ ಕಂಡೆವೆಂದು ಕೊಂಡಾಡುತ್ತಿರೆಯಿರೆ ಮತ್ತೊಂದು ದಿನದಲ್ಲಿ ೧೧೯

ಚಂ. ಮಾ. ವೃ.

ಅನುಭವಮಂಟಪಾಂತದೊಳಗೊಂದಿನ ಬೇಸಿಗೆಯುಷ್ಣತಾಪಕಂ
ಮುನಿಪತಿಸಿದ್ಧಲಿಂಗ ಘನಕೂ[1](ಪ)[1]ದಿ [2](ಸೇದಿವ)[2] [3](ಶೀ)[3]ತಳಾಂಬುವಿಂ
ಘನತರಮಜ್ಜನಾವಸರದಲ್ಲಿರೆ ಭಕ್ತರು [4](ಸೇದಿಸೇದಿ)[4] ಯುಂ
ವಿನಯದಿ ತಂದು ನೀಡುತಿರೆ ನಿರ್ಜಲವಾದುದು ಭೂಮಿಯಾ ಕ್ಷಣಂ ೧೨೦

ಉದಕಮದಿಲ್ಲ ಬಾವಿಯೊಳಗಿರ್ದ ಕ್ರುಪೀಟವ ಸೇದಿ ತಂದೆವೀ
ಗೊದಗಿರು[5]ತಿ(ರ್ಕೆಯಾಗ)[5]ವರಜಂಬಲವೆಂಬುತ ಭಕ್ತನಾರಿಯ-
ರ್ಮುದವಳಿದಿರ್ಪ ಕಾಲದೊಳು ಸಿದ್ಧಗೆ ಮಜ್ಜನಕಾಗ ಗಂಗೆಯಂ
ಹದುಳದಿ ಮಲ್ಲಿಯಂ ಕಳುಹೆ ಬಂದಳು ಭಕ್ತಿಯೊಳೇನನೆಂದಪೆಂ ೧೨೧

ಭಕುತಜನಂಗಳೆಲ್ಲರದ ಕಾಣುತಲದ್ಭುತಚಿತ್ತರಾಗು[6](ತುಂ)[6]
ಸಕಲಶಕಂಠವಂಬಿಗಿದ ಪಾಶದಿ ಸೇದಿಯು ಮತ್ತೆ ಸಿದ್ಧಗಂ
ಪ್ರಕಟಿತವಾಗಿ ಸಾವಿರಘಟಾಳಿಗಳಿಂದಲು ತೀವಿ ನೀಡಲಾಂ
ಮುಕುತಿಗಧೀಶನಾದೆತಿಪಗಾದುದು ಮಜ್ಜನಮಧ್ಯವಹ್ನದೊಳ್ ೧೨೨

ಕಂ. ಮಜ್ಜನಮುಗಿದಾ ಕ್ಷಣದೊಳ್
ಸಜ್ಜನಮುನಿ ಸಿದ್ಧಲಿಂಗ ಶಿವಪೂಜಾವ್ರತ
ದುಜ್ಜುಗದಿಂದಿರಲಾ ಚಾ-
ರಾಬ್ಜರು ಜಲ ಬಂದುದಕ್ಕೆಯಚ್ಚರಿಗೊಂಡುಂ ೧೨೩

ವರಮನ್ನದಾನಿಮಲ್ಲಯ
ಉರುಭಕ್ತಿಯೊಳೆತಿಯ ಕಂಠಸ್ಥಾನಕ್ಕೀಗಂ
ಹರುಷದಿ ಗಂಗೆಯ ಕಳುಹಿದ
ನರರೇ ಈ ಶರಣನಿರವಿದಚ್ಚರಿಯೆಂದರ್ ೧೨೪

ವ || ಬಳಗೆರೆಯ ನಾಗರಸಂ ಬಗರಗೆಯ ಕಾಯಕದವನಂ ಬೋಧಿಸಿ ಲಿಂಗವಂತನಂ ಮಾಡಲಾತನಂ ಊರ ಜನರೆಲ್ಲಂ ತಾವು ಬಳಸುವ ಬಾಲಕೂಪದ ನೀರಂ ಬಳಸಲೀಸದೆ ಹೊರಡಿಸೆಯಾ ನೀರ್ಚೌಳಾಗಿ ಕದಡೆ ಮರಳಿಯಾತನಂ ಕರೆತಂದಡಂ ಆವಂ ಪಾದೋದಕವಂ ತಳೆದುಂ ಸೀನೀರಂ ಮಾಡಿದನೆಂಬರದರಂತಲ್ಲವಿದುಂ ಸಿದ್ಧಲಿಂಗೇಶ್ವರನ ಮಜ್ಜನಕ್ಕಂ ಅನ್ನದಾನಿಮಲ್ಲೇಶ್ವರಂ ಭಕ್ತಿಯಿಂ ಬರಟದೊಳ್ನೀರಂ

1. ಟ (ಅ೩). 2. ಸಿದದ (ಅ೩). 3. ಸ್ತಿ (ಅ೩). 4. ಸಿದಿ ಸಿದಿ (ಅ೩).
5. ತಿರ್ಕು (ಅ೩). 6. ತೇ (ಅ೩).

ಒದಗಿಸುವುದು ಮಹಾಶ್ಚರ್ಯವೆಂದು ಸಕಲಭಕ್ತರ್ ಕೀರ್ತಿಸುತ್ತಿರೆಯಿರೆ ಮತ್ತೊಂದು ದಿನದಲ್ಲಿ ೧೨೫

ಕಂ ಕೇತಸಮುದ್ರತಟಾಕದ
ನೂತನದ ಸಾಲೆಯುಲ್ಲಿಯು ಬೆಳೆದಿಹ ಪಯಿರಂ
ಪ್ರೀತಿಯೊಳಂದೊಂದು ಬಸವ
ಬೂತುತಿರಲ್ಕಂಡನದರ ಕಾಪಿನ ಶೂದ್ರಂ ೧೨೬

(?) ಶಂಕುನಿವಾರಣ ಕಣೆ ಕಂ
ಶಿಕ್ಯಾದಿಯು ಶಂಖಾಕೃತಯೂಥಂಗಳನುಂ
ಲೆಕ್ಕಿಸದಿದು ತಿನುತಿದೆಯೆಂ
ಮುಕ್ಕುವ ಕೋಪದೊಳಾಗಂ ವೃಷಭನ ಹೊಡೆಯಲ್ (?) ೧೨೭

ಕೊ್ರೀಧದೊಳದುಮಿದಿರಾಗಲ್
ಹಾದೀತೆಂದಂಜಿ ವೃಷಪಲಾಯಿತನಾಗ-
ಲ್ಸಾದರದಿ ವೃದ್ಧೋಕ್ಷಂ ಬಳಿ
ಕಾ ದಿವದೊಳ್ ವ್ರೈೃಹಿಯ ಪೊಕ್ಕಿರುತಿರ್ದುದು ೧೨೮

ವರವ[1]ರ್ಣೆ[1] ಮರಳಿ ಕಂಡುಂ
ಹಿರಿದಹ ಕವಣೆಯೊಳಿಡಲದು ಜಾಘನ್ಯ[2](ನುಮಂ)[2]
ಪರಿದೈದಿ ಹಾಯೆ ಬರಲುಂ
ಭರದಿಂದವನೋಡುತ್ತಿರಲು ಪಿಂದಟ್ಟಿದುದುಂ ೧೨೯

(?) ಕುಮುದಂನಡ್ವಲಂ ಶಾಡ್ವ-
ಲಮರುದನ್ವಂ ಸೈಕತ ಶಾರ್ಕರ[3]ನಾಗಟ್[3]
ಸಮುವೇ[4]ತಂ ಸ್ವಾನ್ಪಂಕಿಲ
ವಿಮಲ ಕಚಂಗಳೊ[5]ಳೋಡಿ[5]ತದನಂ (?) ೧೩೦

(?) ಯುವೆ ಬಾಜ್ಗಿರ್ಕತ್ರೈಲಿನಕ್ರೋ-
ದವಿಣಂ ಮೌದ್ಗಿನ ಮೌವಿನ ಮಾಷಿಣಗಳ
ನವ ಪೊಕ್ಕಡೆ ಬಿಡದೆ ತಗುಳ್ದು
ಜವದಿಂ ತಿರುಗಿದುದು ಪುಷ್ಪಪಾಖ್ಯಾಕ್ಯಾಗಂ (?) ೧೩೧

1. ರ್ಣ (ಇ). 2. ನುಂ (ಅಇ). 3. x (ಇ). 4. ವೆ (ಇ). 5. ಳೀ (ಇ).

ಪಾದಜನದ ಕಂಡೆತಿಪನ
ಪಾದದ ಮೇಲಾಣೆ ವೃಷಭಮೆಯ್ದುದಿರೆನಲಾ
ನಾದವ ಕೇಳ್ದುದು ಗರ್ದೆಯಾ-
ನಾದರದಿಂ ಬಿಟ್ಟು ಬಟ್ಟ ಬಯಲಿಗೆ ಬಂದುದು ೧೩೨

ಆ[1](ಣೆಗೆಯುಳು)[1]ಕಿಯನಡ್ವಂ
ಮಾಣದೆ ಜಲಧಾರಾಗ್ರದೊಳ್ಮಲಗಿರುತ್ತಿರೆ
ಕಾಣುತಲಾ ದ್ವಿಜಪೋತಂ
ಜಾಣಿನ ಬಗೆಯಾಯಿತೆಂದು ಹರ್ಷದೊಳಿರ್ದಂ ೧೩೩

ಆರಿಜದಳದಿವಶಾಕ್ವರ
ಕ್ಕೆರೆಯೇರಿಯ ಮೇಲೆ ಮಲಗಿ ಮೋಹಂ ಕೊಳ್ಳದೆ
ಅರತ್ತುತಣ್ಣೀರ್ಗೆ ಬಾಯಂ
ತೆರೆದಿರುತಿರ್ದುದಾಣೆಯ ಬಲುಹಿನ್ನೆಂತೋ ೧೩೪

ಇಂತು ಬಳಲ್ದಿಹ ಬಸವನ
ಅಂತುವನರಿದೆತೀಶನ ಕ್ರಮಮನಂ ಕರೆಯಿಸಿ
ಭ್ರಾಂತನೆ ಆಣೆಯ ಬಿಡುನೀ
ನಿಂತಿಡುವರೆಯೆಂದವನಿಂ ಬಿಡಿಸಿದನಾಗಳ್ ೧೩೫

ಬಸವಗೆಯಾಣೆಯ ಬಿಡಲುಂ
ಬಸವಳಿಯದೆಯೆದ್ದು ಯತಿಪನೊತ್ತಿಗೆ ಬಂದುಂ
ಸಸಿನದೊಳೀಕ್ಷಿಸಿ ಬಳಿಕಂ
ಪಶುಗಳ ಸಮುದಯುವ ಕೂಡಿ ಮೇವುತ್ತಿರ್ದುದು ೧೩೬

ವ॥ ಸರ್ವಮಾಹೇಶ್ವರರಾಶ್ಚರ್ಯಯುತರಾಗಿ ಮುಸುಟೆಯ ಚೌಡಯ್ಯಂ ಪಶು ಪಂಗಸುವಿತ್ತುದಂ ವೆಲ್ನಾಡೊಳೊಂದೂರಲ್ಲಿ ಬಸವನಂ ಕೊಂದ ದ್ರೋಹಿಗಳಂ ಶಿವ ಭಕ್ತರ್ಕೊಲ್ಲಲುಂ ಶಿವಭಕ್ತರ್ ಪ್ರಾಣಿಗಳಂ ಕೊಲ್ಲಲಹುದೇಯೆಂದು ರೇಚಿದೇವಯ್ಯಂ ಆ ವೃಷಭನಂ ಘಾತಿಸಿದರ್ಗಂ ಅಭುಕ್ಷುಗಂ ಅಸುವಿತ್ತುದಂ ಮತ್ತಂ ಕೆಸಗೊಂಡದ ಮಲ್ಲಪ್ಪಯ್ಯಂ ತನ್ನ ಲಿಂಗಮುದ್ರೆಯ ಸೌರಭೆಯು ಮೃತವಾಗೆ ಅದಕ್ಕಂ ಅಸುವಿತ್ತುದಂ

1. ಣೆರಿಯೇಳು (ಅಇ).

ಬಸವದಂಡೇಶಂ ಏರಂಡದ ಕೊನರಂ ಮೇದು ಸತ್ತ ವೃಷಭಂಗಸುವಿತ್ತುದಂ ಪೂರ್ವ ಪ್ರಸಂಗದಿಂ ಕೇಳ್ದಿವಂ ಇಂದೀ ಸಿದ್ಧಲಿಂಗೇಶಂ ಗೋಪತಿಗಂ ಚೈತನ್ಯವಿತ್ತುದಂ ಪ್ರತ್ಯಕ್ಷಂ ಕಂಡೆವೆಂದು ಕೊಂಡಾಡುತ್ತಂ ಮತ್ತಂ ಮೃಗಧೂರ್ತಸರ್ಪವೃಶ್ಚಿಕಾಗ್ನಿವೃಷ್ಟಿ ಮುಂತಾದುವೆಲ್ಲಂ ಯತಿಪನಾಣೆಯ ವಿೂರಲಂಜುತಿರ್ದಪವಿದಾಶ್ಚರ್ಯವೆಂದು ಕೊಂಡಾಡುತ್ತಿರೆ ಮತ್ತಂ ಯತಿಪನ ನಿಂದಿಸಿದ ವಿಪ್ರನಂ ವಜ್ರತುಂಬಿಗಳ್ಬಾಧೆಮಾಡಿದುದಂ ಕೇಳ್ದು ಮತ್ತಂ ಕುರುಂಬರುಂ ಒಡ್ಡರುಂ ಬೇರೆಬೇರೆ ಯತಿಪನಂ ಕುರಿತು ಮಾಡಿ ನೀಡಿದೆಡೆಗಳ್ಬಯಲಾದುದಂ ಕೇಳ್ದುಂ ಮತ್ತಂ ಕಲ್ಲಕೋಟೆಯ ಬೇಡರ್ಗಂ ಕೊಟ್ಟ ಭಸ್ಮ ಬಯಲಾದುದಂ ಕೇಳ್ದುಂ ಮತ್ತಂ ಯತಿಯಂ ಕುರಿತ ತಂಡುಲ ಘೃತಾದಿಗಳಂ ಬಳಸಿದರ್ಗಂ ವಿಘ್ನಂಗಳಾಗೆ ಮತ್ತಂ ಕೃಪೆಯಂ ಪಡೆದುದಂ ಮತ್ತಂ ಬಯಸಿ ಬಯಸಿ ಬೇಡಿದರ್ಗಂ ಇಷ್ಟಾರ್ಥಂಗಳಂ ಈಯುತಂ ಕೇಳ್ದುಂ ಕಂಡುಂ ಕೊಂಡಾಡುತ್ತಿರೆಯಿರೆ ಮತ್ತಮಾ ಸಂತೋಷದಲ್ಲಿ ೧೩೭

ಕಂ. ಪೀತವನಾಚಾರಕ್ಕಂ
ಶ್ವೇತವನಾ ಗುರುಗೆ ಕೃಷ್ಣಮಂ ಶಿವಲಿಂಗಕೆ
ಮಾತೇಂ ತಾಮ್ರವ ಚರಕೆ ಕ-
ಪೋತವ ಪ್ರಸಾದವನಲಿದರ್ಪಿಸುತಿರ್ದಂ ೧೩೮

ಷಟ್ಪ್ರೆರದಿಂ ಪೀತಾದಿಯ
ಷಟ್ಪ್ರೆರದಿಂ ಶ್ವೇತಕೃಷ್ಣರೂಪಾದಿಗಳಂ
ಷಟ್ಪ್ರೆರದಿಂದರುಣಾದಿಯ
ಷಟ್ಪ್ರೆರದಿ ಕಪೋತಾದಿಯನರ್ಪಿಸುತಿರ್ದಂ ೧೩೯

ವರಕಠಿಣವನಾಚಾರದೊ-
ಳುರುಮೃದುಲವ ಗುರುಗೆಯುಷ್ಣಪರುಷವ ಶಿವನೊ-
ಳ್ಪರಶೀತಳಮಂ ಚರದೊ-
ಳ್ಪರಿಮಿಶ್ರವನುಂ ಪ್ರಸಾದಕರ್ಪಿಸುತಿರ್ದಂ ೧೪೦

ಚತುರ್ವಿಧದಿಂ ಕಠಿಣಾದಿಯ
ಚತುರ್ವಿಧದಿಂ ಮೃದುಲಮುಷ್ಣಶೀತಾದಿಗಳಂ
ಚತುರ್ವಿಧದಿ ಮಿಶ್ರಪರುಷವ
ಚತುರ್ವಿಧದರ್ಪಿತಸುಖದೊಳೆತಿಪತಿಯಿರ್ದಂ ೧೪೧

ಮಿಗೆ ಮೂಲವನಾಚಾರದಿ
ಹಗಿನಂ ಗುರುಲಿಂಗದೊಳ್ ಚಿಗುರಂ ಶಿವನೊಳ್
ಸೊಗಸುವಲರ್ಗಳ ಚರದೊಳ್
ಮಗಮಗಿಸುವ ಗಂಧಮಂ ಪ್ರಸಾದ[1](ಕೆಯಿತ್ತಂ)[1] ೧೪೨

ಋತುವಿಧದಿ ಮೂಲಾದಿಯ
ಋತುವಿಧದಿಂ ಹಗಿನು ಚಿಗುರು ಪುಷ್ಪಾದಿಗಳಂ
ಋತುವಿಧದಿಂ ಫಳಗಂಧಮ
ಋತುವಿಧದಿಂದರ್ಪಿಪ ಸುಖದೊಳೆತಿಪತಿಯಿರ್ದಂ ೧೪೩

ವ॥ ಷಟ್ಚಕ್ರಗಳೊಳಂ ಷಡಾಕ್ಷರಂಗಳಂ ಧರಿಸಿಯುಂ

ಶ್ಲೋಕ.

ಶಿರೋಮಧ್ಯೇ ಮಹಾಪದ್ಮಂ ಸಿತಂ ವಿಕಸಿತಂ ಪರಂ
ಅಧೋಮುಖಂ ತು ನಿರ್ಮಾಲ್ಯಂ ವಿಸ್ತೀರ್ಣಂ ತು ಮನೋಹರಂ
ಕೋಟಿವಿದ್ಯುದ್ರವೀಂದ್ರಗ್ನಿಪ್ರಕಾಶಾಢ್ಯಂ ಸರೋಜ್ವಲಂ
ನಾಮ್ನಾಯತೇ ತಥಾಪ್ಯೇತ ನಕುಲ್ಯಂ ಚ ನಯಾತಿವ್ಯೆ
[2](ಮ)[2]ಹತ್ಕರ್ಣಿಕೇಯೋಪೇತಂ ಮಹಾನಂದಪ್ರದಾಯಕಂ
ಕರ್ಣಿಕಾಂತಂ ಗುರೋರ್ಮೂರ್ತಿಂ ಓಂಕಾರಶ್ಶಿವರೂಪಿಣೀ
ನಿರಾಲಂಬಾದಿವ್ಯರೂಪಾ ನಿಶ್ಶ್ರೇಯಾಪದಕಾರಿಣೀ
ಅನಂತವಿದ್ಯುತಃಪ್ರಖ್ಯಾ ದುರ್ನಿರೀಕ್ಷಾಪರಾತ್ಮಿಕಾ
ಶಿವೇಶ್ವರಪರಮಾತ್ಮಾದಿ ನಾಮಯಾಯೇಪ್ಯಗೋಚರಾ
ಧ್ಯಾಯೇನ್ಮುಮುಕ್ಷುಭಿರ್ನಿತ್ಯಂ ಅನೌಪಮ್ಯಾಮಹೇಶ್ವರೀ
ಅಂತರ್ಧ್ಯಾನಮಿದಂ ಪ್ರೋಕ್ತಂ ಸದ್ಯೋಮುಕ್ತಿಪ್ರದಂ ಭವೇತ್

—ಎಂದುದಾಗಿ ಇಂತಪ್ಪ ಧ್ಯಾನಮಂ ಅಶಿವಾಗಮವರ್ತಿಗಳ್ಗಂ ಪೇಳದೆಯುಂ ಶಿವಾಗಮಿಗಳ್ಗಂ ಪೇಳುತ್ತಂ ರಹಸ್ಯದಿಂ ಧ್ಯಾನಿಸುತ್ತಂ ಇರ್ಪುದೇ ಮಂತ್ರಮಂಡನ ಮೆಂದುಂ ಇದಂ ಧರಿಸಿ ಧ್ಯಾನಿಸುತಿರ್ಪ ಮಂತ್ರಾಭರಣಧ್ಯಾನಿಗಳಿಂದಲುಂ ಮತ್ತಂ ಘ್ರಾಣದೊಳೆಡೆಯಾಡುವ ಮರುತನೊಳೋಂಕಾರಮಂ ಪೂರೈಸಿ ನಕಾರಮಂ ರಚಿಸಿ ಮರಳಿ ಪೂರೈಸಿವಲ್ಲಿ ಆ ನಕಾರಂ ಭ್ರೂಮಧ್ಯಪ್ರಣವಮಂ ಕೂಡಿ ಅಲ್ಲಿಂದಂ ಹೃದಯ ಕ್ಕಿಳಿದುಂ ಮತ್ತಾ ಹೃದಯದಲ್ಲಿ ಪ್ರಣವದೊಳ್ಬೆರೆದುಂ ನಾಭಿಸ್ಥಾನದ ತ್ರಿಕೋಣರಕ್ತ ವರ್ಣದಗ್ನಿಮಂಡಲಮಧ್ಯದ ಪ್ರಣವದೊಳೊಡವೆರೆದುಂ ಮರಳಿ ಹೃತ್ಪದ್ಮಮಧ್ಯದ

1. ದಿ (ಅಇ). 2. ನು (ಅಇ).

ಪ್ರಣವಮಂ ತೊಡರ್ಚಿಕೊಂಡೋಂಕಾರರೂಪಿಂದ್ಯೆ[1](ದಿ)ದಲ್ಲಿ[1] ಶಬ್ದಾದಿಪಂಚಗುಣಂ ಗಳೊಳಗಣ ಗಂಧಗುಣಸಂಬಂಧವಾದ ಪೃಥ್ವಿಯ ಗುಣಂಗಳೆಲ್ಲಾ ಮಂತ್ರಮಯ ವೆಂದರಿದುಂ ಮರಳಿ ಓಂಕಾರಮಂ ಪೂರೈಸಿ ರಚಿಸುವಲ್ಲಿ ಗಂಧಗುಣದ ನಕಾರಮಂ ಬಿಟ್ಟುಂ ಮಕಾರವಂ ವೇಧಿಸೆಯದುಂ ಮುನ್ನಿನ ನಕಾರದಂತೆ ಭ್ರೂಮಧ್ಯಹೃದಯ ನಾಭಿಸ್ಥಾನದ ಪ್ರಣವಂಗಳೊಳೊಡವೆರೆದುಂ ಪ್ರಣಮರೂಪಾಗಿ ಹೊರಡುವಲ್ಲಿ ರಸವೆಂಬ ಅಪ್ಪುವಿನ ಗುಣಂಗಳೆಲ್ಲಂ ಮಂತ್ರರೂಪೆಂದರಿದುಂ ಮತ್ತಮಾ ಓಂಕಾರಮಂ ಪೂರೈಸಿ ರೇಚಿಸುವಲ್ಲಿ ಶಿಕಾರಮಂ ಕೂಡಿಸಲ್ ಮುನ್ನಿನವರಂತದು ಪ್ರಣಮಂಗಳೊಳ್ ಬೆರೆದಲ್ಲಿ ರೂಪೆಂಬಗ್ನಿಯಗುಣಂಗಳೆಲ್ಲಂ ಮಂತ್ರರೂಪೆಂದರಿದುಂ ಬಳಿಕಲಾ ಪ್ರಣಮಂಗಳೊಳ್ ಬೆರೆದಲ್ಲಿ ಪರುಷನವೆಂಬ ವಾಯುಗುಣಂಗಳೆಲ್ಲಂ ಮಂತ್ರರೂಪೆಂದರಿದುಂ ಮತ್ತಾ ಪ್ರಣಮಂ ಪೂರೈಸಿ ರೇಚಿಸಿಪೆಡೆಯೊಳುಂ ಯಕಾರಮಂ ಕೂಡಿಸಲ್ಪಬಳಿಕ್ಕಲದುಂ ಮುನ್ನಿನಂತವರೊಲ್ಪ್ರಣಮಂಗಳೊಳ್ ವೇಧಿಸಿಯೋಂಕಾರರೂಪಾಗಿ ಹೊರಹೊಮ್ಮು ವಲ್ಲಿ ಶಬ್ದವೆಂಬ ಆಕಾಶಗುಣಂಗಳೆಲ್ಲಂ ಮಂತ್ರಮಯವೆಂದರಿದುಂ ಇಂತಪ್ಪ ಪಂಚಾ ಕ್ಷರಂಗಳೇ ಪಂಚಲಿಂಗಂ ಪಂಚಲಿಂಗಂಗಳೆಂಬ ಪಂಚಾಕ್ಷರಂಗಳೆಂದರಿದುಂ ಇಂತು ಪಂಚಾಕ್ಷರಂಗಳಿಂದಂ ಪ್ರಾಣಾಯಾಮಂಗಳಂ ಮಾಳ್ಪವರಿಂದಲುಂ-

ಶ್ಲೋ॥ ಮಧ್ಯರಾ[2](ತ್ರೌ)[2] ನಿವಾತೇ ತು ಜಪೇ[3](ದ್ವಿಧ್ಯು)[3]ಕ್ತ ಮಾದರಾತ್
ನಾದಸಿದ್ಧಿಮವಾಪ್ನೋತಿ ಇಹೈವಾನೇನಸುಂದರೀ

—ಎಂದುದಾಗಿ ಅರ್ಧರಾ[4](ತ್ರಿಯಲ್ಲಿ)[4] ಮರುತ[5](ನು)[5]ಲುಹುಡಗಿದಲ್ಲಿ ಹತ್ತುಸಾವಿರ ಷಡಕ್ಷರದಿಂ ನಾದಸಿದ್ಧಿಯೆಂದರಿದುಂ ಲಕ್ಷಜಪದಿಂ ಜ್ಞಾನಸಿದ್ಧಿಯೆಂದರಿದುಂ ಪಂಚ ಲಕ್ಷಜಪದಿಂ ಜಿತೋ[6](ಚ್ಛ್ವಾ)[6]ಸಸಿದ್ಧಿಯೆಂದರಿದುಂ ಪಂಚಲಕ್ಷಸ್ಮರಣೆಯಿಂ ಪಂಚ ವಾಯುಜಯವೆಂದರಿದುಂ ಮತ್ತಂ ಪಂಚಲಕ್ಷಜಪದಿಂ ಪಂಚೇಂದ್ರಿಯಂಗಳುತ್ಪಾತಂ ನಿಲುವುವೆಂದರಿದುಂ ಮರಳಿಪಂಚಲಕ್ಷಜಪದಿಂ ಪಂಚಭೂತಂಗಳ ಗುಣಂಗಳ ಜಯ ವೆಂದರಿದುಂ ಮತ್ತಂ ಮಧ್ಯರಾತ್ರಿನಿವಾತದಲ್ಲಿ ಹತ್ತುಸಹಸ್ರಜಪದಿಂ ಪರಬ್ರಹ್ಮಸಿದ್ಧಿ ಯೆಂಬುದಂ ಪಂಚಾಕ್ಷರಿಕಲ್ಪದಲ್ಲಿಯುಂಟಾದುದರಿಂ ಸಿದ್ಧಿಯೆಂದರಿದುಂ ಅರ್ಧರಾತ್ರಿ ನಿವಾತದಲ್ಲಿ ಒಂದುಲಕ್ಷಸ್ಮರಣೆಯಿಂ ಶಿವಜ್ಯೋತಿಬಿಂದುರೂಪಾದ ಸಮನ್ವಿತವಾಗಿ "ಅಂಧಕಾರವಿನಾಶಸ್ಯ ದ್ವಿಪಶ್ಚೈವಪ್ರಕಾಶನಾತ್" ಎಂದುದಾಗಿ ದೀಪಪ್ರಭೆಯೋ ಪಾದಿಯಲ್ಲಿ ಹೃದಯಾಂತರ್ಬಹಿರ್ವ್ಯಾಪ್ತಿಯಾಗಿ ಒಂದೆ ತೆರದಿಂ ಪ್ರಕಾಶಿಸುತ್ತಿಹ ಮಂತ್ರವೇಲಿಂಗ ಲಿಂಗವೇ ಮಂತ್ರವಾದ ಯೋಗಲಿಂಗನಿಷ್ಠರಿಂದಲುಂ ಅಂಗದೊಳ್ ಲಿಂಗಹಿಂಗದಿರಬೇಕೆಂಬ ಆಜ್ಞಾದೀಕ್ಷೆಯುಂ ಇಂತಪ್ಪ ಉಪಮೆಯಿರಬೇಕೆಂಬ ಉಪಮಾ

---

1. ದಲ್ಲಿ (ಅ಼ಇ). 2. ತ್ರೇ (ಅ಼ಇ). 3. ದಯು (ಅ಼ಇ). 4. ತ್ರೇ (ಅ಼ಇ).
5. ನ (ಅ಼ಇ). 6. ಸ್ವಾ (ಅ಼ಇ).

ದೀಕ್ಷೆಯಂ ಸ್ವಸ್ತಿಕಾರೋಹಣವೆಂಬ ಗದ್ದಿಗೆದೀಕ್ಷೆಯಂ ಕಳಶಾಭಿಷೇಕವೆಂಬ ಅಭಿಷೇಕ ದೀಕ್ಷೆಯಂ ಚಿದ್ಭೈಳಗನೊಳಕೊಂಡ ಭಸ್ಮಮಂ ಪಣೆಯೊಳ್ಧರಿಸುವ ಪಟ್ಟಾಭಿಷೇಕ ದೀಕ್ಷೆಯಂ ಚೈತನ್ಯಕಳೆಯಂ ತೆಗೆದುಂ ಅಂಗದ ಮೇಲಿರಿಪ ಆಯತದೀಕ್ಷೆಯಿಂ ತದಾ ಯತವಂ ಅಂಗದಲ್ಲಿ ತಾಳ್ದಿಪ್ಪ ಸ್ವಾಯತದೀಕ್ಷೆಯಂ ಇಂತಪ್ಪ ಏಳುತೆರನಂ ಕಾಯಕ್ಕಂ ಅನುಗೊಳಿಸಿ ಮತ್ತಂ ಲಿಂಗವಂ ಹಿಂಗದೆಲ್ಲರ್ ತಮ್ಮವರೆಂಬ ಸಮಯದೀಕ್ಷೆಯಂ ಶಿವಸಮಯವಲ್ಲದವರ್ಗಂ ಅನ್ಯಸಮಯ[1](ದ)[1]ರ್ಗಂ ಮಾಡಲಿಲ್ಲವೆಂಬ ನಿಸ್ಸಂಸಾರ ದೀಕ್ಷೆಯಂ ಮುಕ್ತಿಪದಕ್ಕಿದೇ ಪರವೆಂಬ ನಿರ್ವಾಣದೀಕ್ಷೆಯಂ ಇದಂ ಸದಾ ಗ್ರಹಿಸಿ ಕೊಂಡಿರಬೇಕೆಂಬ ಅನುಗ್ರಹದೀಕ್ಷೆಯಂ ನಿರ್ಮಳದರಿವೆಂಬ ಶುದ್ಧವಿದ್ಯಾದೀಕ್ಷೆಯಂ ಶಿವತತ್ತ್ವಚಿಂತನೆಯೆಂದೆಂಬ ಮೋಕ್ಷದೀಕ್ಷೆಯಂ ಅವಿರಳಜ್ಞಾನವೆಂಬ ಆಧ್ಯಾತ್ಮದೀಕ್ಷೆ ಯಂ ಇಂತಪ್ಪ ಏಳುದೀಕ್ಷೆಗಳಂ ಪ್ರಾಣಂಗುಪದೇಶಿಸಿ ಮತ್ತಂ ಇಷ್ಟಲಿಂಗದ ನೆನಹೆಂಬ ಏಕಚಿತ್ತದೀಕ್ಷೆಯಂ ಇಷ್ಟವಂ ನಿಷ್ಠೆಯಿಂದರ್ಚಿಸಬೇಕೆಂಬ ದೃಢವ್ರತದೀಕ್ಷೆಯಂ ಪಂಚೇಂದ್ರಿಯ ಗುಣಂಗಳ್ ಪೊರ್ದದೆಯುಂ ಪಂಚಲಿಂಗದೊಳ್ ಕೂಡಿರಬೇಕೆಂಬ ಪಂಚೇಂದ್ರಿಯಾರ್ಪಿತದೀಕ್ಷೆಯಂ ಚಿತ್ಕಳೆಯೊಳಾತ್ಮಾನಾತ್ಮನೊಳ್ ಚಿತ್ಕಳೆ ಕೂಡಿರ ಬೇಕೆಂಬ ಅಹಿಂಸಾದೀಕ್ಷೆಯಂ ಆತ್ಮನೊಳಿರ್ಪ ಪರಮಾತ್ಮ ತಾಂ ಕರಸ್ಥಳದೊಳಿಹುದೆಂಬ ಲಿಂಗನಿಜದೀಕ್ಷೆಯಂ ಲಿಂಗದೊಳ್ಮನವಡಂಗಿರಬೇಕೆಂಬ ಮನೋಲಯದೀಕ್ಷೆಯಂ ಇದೇ ನಿತ್ಯಮುಕ್ತಿಯೆಂಬ ಪ್ರತ್ಯಕ್ಷಮೋಕ್ಷದೀಕ್ಷೆಯಂ ಇಂತಪ್ಪ ದೀಕ್ಷೆಗಳೊಳೇಳಂ ಮನಸಿಂಗುಪದೇಶಿಸಿ ಇಂತೇಕವಿಂಶತಿದೀಕ್ಷೆಗಳಂ ಬೋಧಿಸಿ ದೀಕ್ಷಿಪ ರೇವಣಾಸಿದ್ಧೇಶ್ವರಂ ಮರುಳಸಿದ್ಧೇಶ್ವರಂ ಏಕೋರಾಮೇಶ್ವರಂ ಪಂಡಿತಾರಾಧ್ಯ ಚೆನ್ನಮಲ್ಲೇಶ್ವರಂ ಎಂಬ ಚ[2]ತು(ಃಪೀಠಿ)[2]ಕಾನ್ವಯಿಗಳಾದ ಆರಾಧ್ಯರುಗಳಿಂ ಆತ್ಮರೂಪುವಿದ್ಯೆ ಪತಿಯೆಂದಡದಂ ನಿರಂಜನಪ್ರಣಮವೆಂದರಿದುಂ ಪಶ್ಯಂತಿವರ್ಣವೆನಲು ಕಲಾಪ್ರಣಮವೆಂದರಿದುಂ ಮಧ್ಯಪದಮೋಂ ರವವೆಂದಡಂ ಆದಿಪ್ರಣಮವೆಂದರಿದುಂ ಅಕಾರಉಕಾರಮಕಾರತ್ರಯಂ ಗಳೆ ಬಸವಾಕ್ಷರತ್ರಯವಾಗಿ ಕುಂಡ[3](ಲ್ಯಾಕಾ)[3]ರದಿಂ ಇರ್ಪ ಪರಶಿವನೇ ಪ್ರಣವ ವೆಂದರಿದುಂ ಆ ಪ್ರಣ[4]ಮದ[4] ಸಚ್ಚಿದಾನಂದತ್ವಮುಂ ಗುರುಲಿಂಗಜಂಗಮವೆಂವಡಂ ಗುರುತತ್ತ್ವವೆಂದಡಂ ಮಹಾಲಿಂಗವೆಂದಡಂ ಒಂದೆಯೆಂದರಿದುಂ ಮತ್ತಂ ಬಕಾರವೆಸತ್ತುಂ ಸಕಾರವೆಚಿತ್ತುಂ ವಕಾರವಾನಂದವಾಗಿರ್ದುಂ ಬಕಾರವೆ ಗುರುವಾಗಿ ಸಕಾರವೆ ಲಿಂಗವಾಗಿ ವಕಾರವೆ ಚರವಾಗಿ ನಾದಬಿಂದುಕಲಾಕ್ಷರ ತ್ರಯಂಗಳ್ ಕೂಡಿರ್ದ ಸಾಕಲ್ಯಪ್ರಣಮವೇ ಷಡಕ್ಷರವೆಂದರಿದುಂ ಮತ್ತಮಾ ಬಸವಾಕ್ಷರತ್ರಯಂ ಅಕಾರಉಕಾರಮಕಾರತ್ರಯಂ ಆ ಷಡಕ್ಷರದೊಳ್ ವೇಧಿಸಿರ್ದ ದ್ವಾದಶಪ್ರಣಮಂಗಳಂ ಬಸವರೂಪೆಂದರಿದುಂ ಮತ್ತಂ ಪಂಚಪ್ರಸಾದವಂ ತನ್ನೊಳ ಡಂಗಿಸಿಕೊಂಡಿರ್ದ ಆದಿಪ್ರಣವವೆಂಬ ಗುರುತತ್ತ್ವ ತಾನೆ ಬ್ರಹ್ಮರಂಧ್ರಸಹಸ್ರದಳ

1. ಂ ಸೂಂಪು (ಅಇ). 2. ತು ಪಿಟ್ಟ (ಅಇ). 3. ಲಾಕ (ಅಇ). 4. ಮ (ಅಇ).

ಮಧ್ಯದೊಳ್ಕೋಟಿಸೂರ್ಯಪ್ರಕಾಶದಿಂ ನಾದಬ್ರಹ್ಮವಾಗಿರ್ಪ ಸದ್ರೂಪು ತಾನೆ ಕರಸ್ಥಳ ದಿಷ್ಟಲಿಂಗದ ವೃತ್ತದೊಳ್ ಗುರುರೂಪಾಗಿರ್ಕುಂ ಶಿಖಾಚಕ್ರದ ಕಾಲಾಗ್ನಿರೂಪಿನ ಚಿದ್ರೂಪಚಿತ್ಕಲೆಯೆ ಇಷ್ಟಲಿಂಗದ ಗೋಲಕದೊಳಿರ್ಕುಂ ಪಶ್ಚಿಮಚಕ್ರದ ಶೂನ್ಯ ನಿರಂಜನವೆಂಬ ಆನಂದರೂಪಾದ ಜಂಗಮಂ ಇಷ್ಟಲಿಂಗದ ಗೋಮುಖದೊಳಿರ್ಕುಂ ಇಂತಪ್ಪ ಸಚ್ಚಿದಾನಂದವೆ ಇಷ್ಟಲಿಂಗಂ ಇಂತಪ್ಪ ಇಷ್ಟಲಿಂಗದೊಳಿರ್ಪ ಆದಿಪ್ರಣಮಂ ಕಲಾಪ್ರಣಮಂ ನಿರಂಜನಪ್ರಣಮಂಗಳ್ಮೂರುಂ ದ್ವಾದಶಪ್ರಣಮಂಗಳ್ಕೂಡಿದ ಹದಿ ನೈದುಪ್ರಣಮಂಗಳೆ ಬಸವೇಶ್ವರನೆಂದರಿದುಂ ಮತ್ತಮಾ ಆದಿಪ್ರಣಮದಿಂದಲಾದ ಷಡಕ್ಷರಂಗಳಾರುಂ ಆ ಪ್ರಣಮಂಗಳೊಂದಂದಕ್ಕುಂ ಆರಾರುಂ ಆದ ಮೂವತ್ತಾರು ಪ್ರಣಮಂಗಳ್ಬಸವೇಶ್ವರನ ರೂಪೆಂದರಿದುಂ ಓಂಕಾರವೇ ಲಿಂಗಪೀಠಿಕೆಯಾಗಿ ಅಕಾರವೇ ಲಿಂಗಕಂಠವಾಗಿ ಉಕಾರವೇ ಗೋಮುಖವಾಗಿ ಮಕಾರವೇ ವೃತ್ತಮಾಗಿ ಬಿಂದು ತೇಜವೆ ನಾದಮಾಗಿ ತೇಜವೇ ನಾಳಮಾಗಿ ಅಂಖಂಡಲಿಂಗವೇ ನಾದಮಾಗಿ ಮತ್ತಂ ಪೀಠವೇ ನಮಃವರ್ಣಮಾಗಿ ಶಿಕಾರವೆ ಕಂಠವಾಗಿ ಗೋಮುಖಮೇ ವಕಾರ ಮಾಗಿ ವೃತ್ತವೇ ಯಕಾರವಾಗಿ ಓಂಕಾರವೇ ಗೋಳಕವಾಗಿ ಇಷ್ಟಲಿಂಗದೊಳೇಕೀ ಕರಿಸಿದ ಷಡ್ವಿಧಲಿಂಗಂಗಳಂ ಅರಿದುಂ ಮತ್ತಮಾ ಇಷ್ಟಲಿಂಗದ ಪೀಠದೊಳ್ಭಕ್ತಂ ಮಾಹೇಶ್ವರಂ ಮಧ್ಯದೊಳ್ ಪ್ರಸಾದಿಯುಂ ಗೋಮುಖದೊಳ್ಪ್ರಾಣಲಿಂಗಿಯುಂ ವೃತ್ತದೊಳು ಶರಣಂ ಗೋಳಕದೊಳೈಕ್ಯನುಂ ತಿಳಿದುಂ ಪಂಚಪ್ರಸಾದಾದಿಪ್ರಣಮಂ ನಿರಂಜನಪ್ರಣಮಂಗಳ ಸ್ವರೂಪುಳ್ಳ ಅನಾದಿಭಕ್ತನೆ ಲಿಂಗಜಂಗಮತ್ರಿವಿಧಮುಂ ಏಕತೆಯೆಂಬ ಅರಿವುಳ್ಳ ವೀರಮಾಹೇಶ್ವರರಿಂದಲುಂ ಸಿದ್ಧೇಶ್ವರಂ ಇರುತ್ತಂ ಇರೆಯಿರೆ ೧೪೪

ಮ. ವಿ. ವೃ.

ಪರಮೇಶಂ ಗಿರಿಶಂ ಸುಧಾಕರಧರಂ ಕಲಾಂತಕಂ ಶಂಕರಂ
ಉರಗೇಂದ್ರಾಭರಣಂ ವಿನಾಯಕಪಿತಂ ಗಂಗಾಧರಂ ಕಾಮಸಂ-
ಹರ ಸೌಖ್ಯಾಕರ ರಕ್ಷಿಕೆಮ್ಮವನು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮ ಜಟಾಧರಂ ಪುರಹರಂ ಭರ್ಗಂ ಶಿವಾವಲ್ಲಭಂ ೧೪೫

ಗದ್ಯ: ಇದು ಸಕಲಸುರಗಣಮಣಿಮುಕುಟಮಯರಚಿತದ್ಯುಮಣಿಪ್ರಭಾಧಿಕ್ಯ ಮಾಣಿಕ್ಯದ್ಯುತಿಪುಂಜಮಂಜುಲರಂಜಿತಸಂಪಚ್ಚರಣನೆನಿಪ ಭೂತೇಶ್ವರಂ ಶ್ರೀಪಾದಪ ಯೋಜಮಕರಂದರೋಲಂಬಮಾನ ಚೆನ್ನವೀರೇಶ್ವರಾಭಿಧೇಯ ಜಂಗಮದೇವಂ ವಿರ ಚಿತಮಪ್ಪ ಷಟ್‌ಸ್ಥಲವಲ್ಲಭಮಹಾಪ್ರಬಂಧದೊಳ್ ಸಿದ್ಧಲಿಂಗೇಶ್ವರ ಮಾಹಾತ್ಮ್ಯ ಕಥನಂ ಷಷ್ಠಾಶ್ವಾಶಂ ಸಂಪೂರ್ಣಂ–

# ಸಪ್ತಮಾಶ್ವಾಸಂ

## ಸ್ವಶಿಷ್ಯಬೋಧ ಕಥನಂ

ಸ್ರ. ವೃ.

ಶ್ರೀಗೌರೀಭಾವಭಾವಾಕ್ಷಣಶಿವಶಿವಮುಷ್ಟ್ಯಾಪದಂ ಧಾರಧಾರಂ
ಯೋಗಾಂ[1]ಗಂ(ಗಂ)[1] ಸುಗಾಂಗೇಯಪಿತ ವಿಧಿವಿಧೀಂದ್ರಂ ಲಲಾ[2]ಮಂ[2]
ಗಂಗಾಧಾರಂ ಉದಾರಂ ಹರಿಹರಿಯಭಿಹಾರಪ್ರಮಾಣಂ [3]ಪ್ರ(ಮಾ)[3]ಣಂ
ಲಿಂಗಾಂಗಂ ಪ್ರೀತ ರಕ್ಷಿಕ್ಕನವರತ ವಿಭೂತೇಶನಾನಂದದಿಂದಂ ೧

ಉ. ಮಾ. ವೃ.

ಬಾಲಕ ಕೂಹಳಾಬ್ಜ ಸಹಕಾರಪ್ರವಾ[4]ಳ(ದ)[4] ಗೊಂಚಲಿಂ[5](ದಲುಂ)[5]
ನೀಲಹರಿನ್ಮಣೀಂಗುಲಿಕ ಸಿಂಧ.ರಸೌಂವರಿಯಾದಿ ಗುಚ್ಛನಿಂ
ನೀಲವಿಚಿತ್ರಪಟ್ಟಸನಮುಖ್ಯವಿತಾನ ವಿತಾನದಿಂದಲುಂ
ಶಾಲವಿಚಿತ್ರದಿಂದೆಸೆವ ಮಂಟಪದಲ್ಲಿಯ ಸಿಂಹಪೀಠದೊಳ್ ೨

ಭಾಸುರಹಂಸತೂಳಘನತಲ್ಪದರಗ್ರದೊಳಂ ಪ್ರವೃದ್ಧಜಾ-
ತಿಸ್ಸುಮನಸ್ಸಮೂಹಗಳ ಮೇಲ್ಗಡೆ ಶಾಂತಯುತಾಂತನಾಗಿ ಪ-
ದ್ಮಾಸನದಿಂದಿರುತ್ತ ಶಿವಭಕ್ತರ ಮೊತ್ತಕಸೂನ ತೇಜಮಂ
ಸೂಸುತ ಸಿ[6]ದ್ಧ(ಲಿಂಗ)[6]ಗುರು [7]ಶ್ರೀಗುರು[7] ಮದ್ಗುರು ಲಿಂಗನೊಪ್ಪಿದಂ ೩

ಭೂರಿಮಹತ್ವ[8](ಮಂ ಗುರುಚರಂಗಳ)[8]ಲಿಂಗಮಹತ್ವಯೂಥಮಾ
ಚಾರಮಹತ್ವ ಭಕ್ತನ ಮಹತ್ವ ಮಹೇಶಮಹತ್ವಶೇಷಿಯಾ
ಚಾರಮಹತ್ವ ಲಿಂಗಿಯ ಮಹತ್ವ[9](ವು ಶಾರಣನೈಕ್ಯಮಾತ್ಮೆಯಾ)[9]
ಪಾರಮಹತ್ವರೀತಿಗಳ ತೋರುತಲಿರ್ದನೆತೀಶ ಭಕ್ತರೊಳ್ ೪

ಆಚರಮಾತ್ಮೆ ಗೌರವಮಹಾತ್ಮೆ ಶಿವಾಂಕಮಹಾತ್ಮೆ ಜಂಗಮಾ
ದ್ಯಂಚಿತದಾ ಪ್ರಸಾದದ ಮಹಾತ್ಮೆ ಮಹಾಘನಲಿಂಗಮಾತ್ಮೆಯಾ
ಸಂಚಯಮಂ ಮಹಾಶರಣಸಂತತಿಗಂ ನೆರೆ ತೋರುತಾಗ ನಿ-
ರ್ವಂಚನೆಯಿಂದ ಸಿದ್ಧಗುರುವಿರ್ದನು ಮುಕ್ತಿಯ ಭಕ್ತಿಯಂಗದೊಳ್ ೫

---

1. ಗಂ (ಅಇ). 2. ಮಂಗಂ (ಅಇ). 3. ಪ್ರ (ಅಇ). 4. ದ (ಇ). 5. ಲಿಂ (ಅಇ).
6. ದ್ಧ (ಅಇ). 7. x (ಇ). 8. ಮ (ಅಇ). 9. ಶರಣ ಮಹತ್ವ ನೈಕ್ಯನಾ (ಅಇ).

*ಮನಸಾನುಭವಿಗೆ ಮಾನಸಾನುಭವವಂ ಜ್ಞಾನಾನುಭಾವಮಂ ಜ್ಞಾ
ನಾನುಭವರ್ಗೆಯುಂ ಘನನಾನುಭವಂಗಳಂ ಮಿಗೆ ಧನಾನ್ಭಾವಂಗೆ ತದ್ಭಾವಮಂ
ಜನದಾನ್ಭಾವಿಗೆಯುಂ ಜನನ್ಭಾವಿಗೆ ಜನಾನ್ಭಾವಮುಂದೇಹಾನುಭಾವಿಗೆ ಯಿಂ-
ಪಿನ ದೇಹಾನುಭಾವಂಗಳಂ ಉಸುರುತಿರ್ದಂ ಸಿದ್ಧ ಶಿಷ್ಯಾಳಿಯೊಳ್ ೬

ಇಂತಿಹ ಸಿದ್ಧದೇಶಿಕನ ಪಾದಪಯೋಜಯುಗಕ್ಕೆಯಾ ಕ್ಷಣಂ
ಸಂತಸವಾಂತು ಶಿಷ್ಯ ನತನಾಗಿ ಕರಂ ಮುಗಿದೆಂದ ದೇವನೀಂ
ಪ್ರೀತಿಯೊಳೀಶಭಕ್ತಿಗಳ ಮರ್ವ್ಮವನುಂ ಬಳಿಕೆಷ್ಟುಲಕ್ಷಣ
[10](ಕ್ಕಾ)[10]ಂತಿಹವೆಂಬುದನ್ನರುಪಿ ರಕ್ಷಿಪುದೆಂದನು ಭಕ್ತಿಭಾವದೊಳ್ ೭

ವತ್ಸನೆ ಕರ್ಣಿಸೈ ಹರನ ಭಕ್ತಿಯದುಂ ಬಹಿರಂತರೆಂದೆರ[11](ಳ್)[11]
ಉತ್ಸಹಮಾಗಿ ತೋರ್ಪ ಬಹಿಪೂಜೆಯೆ ಶೈವಮದಂತರಂಗದೊಳ್
ಚಿತ್ಸುಖಲೀಲೆಯಿಂ ಭಜಿಪ ಭಕ್ತಿಯೆ ಮತ್ತದು ವೀರಶೈವ ತಾಂ
ತಚ್ಛಿವ ಶೈವ ಮೂದೆರ ಬಳಿಕ್ಕದು ಮೂದೆರನೆಂದನೆಂತೆನಲ್ ೮

ಮ. ವಿ. ವೃ.

ವರಸಾಮಾನ್ಯದ ಶೈವಮಿಶ್ರದುರುಶೈವಂ ಶುದ್ಧಶೈವಂಗಳಾ
ದರದಿಂ ಮೂದೆರನಕ್ಕು ಶೈವವದು ತಾ ಮತ್ತೊಂದು ವೀರಾಭಿದಂ
ವರಸಾಮಾನ್ಯವಿಶೇಷ ವೀರವಿದು ಮತ್ತೊಂದಂ ನಿರಾಭಾರವೆಂ
ದೊರೆದಂ ಮೂದೆರವೀರಶೈವವನು ತಾಂ ಸಿದ್ಧೇಶನಾನಂದದಿಂ ೯

ವ॥ ಶಿವನ ದೆಸೆಯಿಂ ಜನಿಸಿದ ಸಮಸ್ತ ಪ್ರಾಣಿಗಳೊಳ್ ಮುಖ್ಯವಾದ ಮನುಷ್ಯರುಗಳೊಳುಂ ಶಿವಂ ತೀರ್ಥಕೊಂಡದೊಳು ಮುಳುಂಗಿದ ವರಾಹಂಗಂ ಶುನಿಗಂ ಮೋಕ್ಷವಿತ್ತುದಂ ಪಾಪಿಷ್ಠನಾದ ಶಬರಂ ಮೃತಮಪ್ಪ ಸಮಯದೊಳುಂ ಬೂದಿಯೊಳಿರ್ದ ಶ್ವಾನಂ ಲಲಾಟವಂ ಮೆಟ್ಟೆ ಭಸ್ಮಾಂಕಿತವಾದಂಗಂ ಕೈವಲ್ಯವಿತ್ತುದಂ ಇಕ್ಷ್ವಾಕುವಂಶ ಮಿತ್ರಸಹನೆಂಬರಸಿನ ಮಾತಿನಿಂ ಮಸಣದ ಬೂದಿಯ ನೇಮುಂಬಡೆದ ಶಬರಂಗಂ ವೀರೇಶಂ ಪ್ರಸನ್ನವಾದುದಂ ರುದ್ರಾಕ್ಷೆಯಂ ಧರಿಸಿದ ಕುಕ್ಕುರಂಗಂ ನಿರ್ವಾಣವಾದುದಂ ಆಹರಪ್ರಹರಯೆಂದ ಶಬರಂಗಂ ಹರಗಣಹರಗಣವೆಂದ ಶೂದ್ರಂಗಂ ಅಪವರ್ಗಮಾದುದಂ ಸ್ನಾನಮಾಡಿದ ನೀರಂ ಪಕ್ಕಂಗಳಿಂ ಲಿಂಗಶಿಖಾಗ್ರಕ್ಕಂ

---

* ಈ ಪದ್ಯ ಛಂದೋದೋಷ ಅರ್ಥದೋಷಗಳಿಂದ ಕೂಡಿದೆ. ಸಂಸ್ಕರಿಸಲು ಸಾಧ್ಯವಾಗಲಿಲ್ಲ. 1. ಕಾ (ಅ೩). 2. ಡ್ (ಅ೩).

ಬಿದಿರ್ಚಿದ [1](ತಾರ್ಕ್ಷ್ಯಂ)[1]ಗಂ ಲಿಂಗಮಸ್ತಕದೊಳ್ಕ್ರತ್ತಿಯ ನೀರ ಸುರಿದಂ ಶಾಂಡಿಲ್ಯ ಪರ್ಣಂಗಳಂ ಪರಿದುಂ ಬಿಸುಟ್ಟಪುಳಿಂದಂಗಂ ಮುಕ್ತಿಯಿತ್ತುದಂ ಅಶ್ವಮಾರಕದ ಶಾಖೆಯಂ ಮುರಿದು ಬಿಸುಟ ಶಬರಂಗಂ ಒಂಪಲರಂ ಹರಂಗೆಂದ ಶ್ವೇತಂಗಂ ಮೋಕ್ಷವಾದುದಂ ಲಿಂಗದ ಮುಂದಳ ದೀಪದ ತುಪ್ಪವಂ ತಿನ್ನಬಂದಿಲಿಗಂ ದೇವರ ಬಂಗಾರವಂ ತೆಗೆಯಲೆಂದು ದೀಪವಂ ಪುಟಮಾಡಿದ ಶಬರಂಗಂ ಕಕುಚ್ಛಿಲದ ಗಂಗಾ ಧರನ ಮುಂದಳ ದೀಪವಂ ಪುಟಮಾಡಿದ ಕೂಲಿಕಾರನಂ ಹರನೊಲಿದುದಂ ದೇವಾಲಯ ದೊಳೊರ್ವ ಪರವನಿತೆಯು ಸಂಗಮಾಡುತಿರ್ದು ಬೆರಲ ಸುಣ್ಣವಂ ಗೋಡೆಗುಡ್ಡಿದಂಗಂ ದೇವರಾಭರಣಮಂ ಕಳಬಂದು ಶಿವನಂ ನೋಡಿದಂಗಂ ಬಲಿಪೀಠದೋಗರಕ್ಕೆಂದೆರಗಿದ ಗುರುತ್ಮಂಗಂ ದೇವಾಲಯದಗ್ರದೊಳ್ಬೆಳೆವ ತೃಣಮುಂ ನೀಡಕೆಂದು ಕೊಂಡೊಯ್ವ ಮೇಘಚಾರಿಣಿ ಪಕ್ಷಿಗಳಿಗಂ ದಾಸಳವ ಕುಸುಮವಂ ಮುಡಿದ ಜಂಗಮದ ವಸ್ತುಕ ಸರಿಸದಿಂ ಬಂದ ಹದ್ದಿಗಂ ಮುಕ್ತಿಯಾದುದಂ ದೇವಾಲಯಮಂ ಪೊಕ್ಕ ಮರಿಹಂದಿಯು ನೆಸೆಯಲೆಂದು ಬಳಸಿದ ಪುಳಿಂದ ಶೀಕರಂಗಂ ಮೋಕ್ಷವಾದುದಂ ಕ್ರೀಡೆಯಿಂ ಪೂಜಿಸಿದ ಬಾಲಕರಿಂಗಂ ಬಯಸಿದುದಂ ಈವನೆಂಬುದಂ ಈವನೆಂಬುದಂ ಹರಿದಲರ ಪೂಜೆಗಿಂದ್ರ ಪದವೀವನೆಂಬುದಂ ಕೇಳ್ದು ಮೋಕ್ಷಾಪೇಕ್ಷಿತರಾದ ಮಾನವರುಂ ೧೦

ಉ. ಮಾ. ವೃ.

ದಾನವದಾನವಾರಿಗಳು ಮಾನವತಾಪಸಮುಖ್ಯರೆಲ್ಲರುಂ
ಮುನ್ನ ಪ್ರತಿಷ್ಠೆ ಮಾಡಿದ ಮಹೇಶ್ವರಮೂರ್ತಿಯ ನಾದೊಡಂ ಬಳಿ
ಕುನ್ನತದ ಸ್ವಯಂಭುವನು ಮಾಡದೆಯುಂ ಭಜಿಪಾತ[2](ನೀಗ)[2] ಸಾ-
ಮಾನ್ಯದ ಶೈವನಿನ್ನಿವನ ಭಕ್ತಿಯ ಯುಕ್ತಿಯ ಕೇಳ್ವುದೆಂದನುಂ ೧೧

ಪೂಜೆಗೆ ವೇಳೆಯಿಲ್ಲದಿರೆ ಲಿಂಗವ ನೋಡಿ ಪ್ರದಕ್ಷಣಂಗಳಂ
ಮಾಜದೆ ಮಾಡಿ ವಂದಿಸಿ ಸುಪೀಠದ ಪೂಜೆಗಳಿಲ್ಲದಿರ್ದೊಡಂ
ರಾಜಪ ಭಸ್ಮಮಂ ಧರಿಸಿ ಪೂತಶರೀರನುಮಾಗಿ ಲಿಂಗದೊಳ್
ಸಾಜದ ಪ್ರೀತಿ ನಟ್ಟಿಹನೆ ತಾನೆ ಸಮಾನ್ಯದ ಶೈವನೆಂದನುಂ ೧೨

ಶಂಕರ ಕೀರ್ತನಂಗಳೊಳು ಶಂಭುವ ಕೀರ್ತಿಪಳಾಪಜಾಲದೊಳ್
ಶಂಕರಭಕ್ತಯೂಥದೊಳು ಶೂಲಿಯ ಪೂಜಿಪ ಸಾಧನಂಗಳೊಳ್
ಶಂಕರನೆಂಬ ಭಾವವ್ರತವಿರ್ದವ ತಾನೆ ಸಮಾನ್ಯ ಶೈವನೆಂ
ದುಂಕಿಸಿ ಪೇಳ್ದ ಸಿದ್ಧಗುರು ಶಿಷ್ಯನ ಚಿತ್ತವಿಲಾಸವುಣ್ಮುವೊಲ್ ೧೩

1. ಧ್ವಾಂಕ್ಷ್ಯಂ (ಅಇ). 2. ನೀ (ಅಇ).

ಸ್ಥಾಪಿತವಾದ ಲಿಂಗಗಳು ಸಂದಿಸದಿರ್ದಡೆ ಕಲ್ಮರಂ ಪೞ-
ಲ್ಗುಪ್ಪೆಗಳಾದಿಯಾದವರೊಳೊಂದುವ ಊಹಿಸಿಕೊಂಡು ಪೂಜೆಯಂ
ಆಪನಿತಂ ನಿಧಾನದೊಳು ಮಾಡಿಯು ಜಂಗಮಲಿಂಗಯೂಥಕಂ
ಕೂಪವನಾಗಿ ತಂಡುಲ ಘೃತಾದಿಯ ಪ್ರೀತಿಯೊಳಿತ್ತು ನಿತ್ಯವುಂ ೧೪

ವ|| ಈ ಪರಿಯಿಂದ ಮಾಡುವವಂ ತಾನೆ ಸಾಮಾನ್ಯಶೈವನೆಂದುಸುರ್ದಂ ಮತ್ತಂ –

ಉ. ಮಾ. ವೃ.

ಗೊಲ್ಲಳ ಚೆಂಡನಾಥ ಸಯನಾರು ಧನಂಜಯ ಬಳ್ಳಮಲ್ಲಯಂ
ಬಲ್ಲಿದ ಸೋಯಿದೇವ ತಿಱುನಾಳ್ವವ ಕಣ್ಣಪದೇವ ಸಾಂ[1](ಖ್ಯರುಂ
ಸಲ್ಲಲಿ)[1]ತಾಂಗ ದೀಪಕಲಿಯಾರರಿವಾಳತಿಭಕ್ತಮುಖ್ಯನಾ
ದೆಲ್ಲ ಸಮಾನ್ಯಶೈವದೊಳಗೆಂದನು ಸಿದ್ಧನುವಾತ್ಮಜಾತನೊಳ್ ೧೫

ಕಂ. ಕೇಳಿನ್ನು ಮಿಶ್ರಶೈವವ
ಭಾಳಾಕ್ಷನ ಬಳಸಿ ವಿಷ್ಣುಯುಮೆಷಣ್ಮುಖಸಂ
ಮೇಳೈಸಿದ ಗಣಪದವಿಗ
ಳೋಳಾವರಣಪಂಚಪೂಜೆ ಮಿಶ್ರಮೆನಿಕುಂ ೧೬

ಆವರಣದ ದೇವರ್ಗಂ
ಭಾವಜಹರನಧಿಪಂ ಅವೆಲ್ಲಂದೊಳ್ಳೈಸುವ
ರೀ ವಿಧದಿವೆಂಬಾ ಭಾವದಿ
ಭಾವಿಸಿ ಪೂಸಿಸುವ ನೇಮ ಮಿಶ್ರದ ಶೈವಂ ೧೭

ಹರಿಸುರಬ್ರಹ್ಮಮು[2]ಖ್ಯ(ರ್)[2]
ಸುರರಹೃದಂತಸ್ಥನಾಗಿಯಲ್ಲಿಯ ಪೂಜೆಯ
ಹರ ಭೋಗಿಪನೆಂದೆಂಬಾ
ಪರಿಯಿಂದರ್ಚಿಸಲುಬೇಕು ಮಾಶೈವಂಗಂ ೧೮

ಈಭಾವಂಗಳಿಲ್ಲದಿತ-
ರಾಭಾವದಿ ಭಜಿಸುವ ನರರ್ಪರಾನ್ಮುಖರಾ
ದಾಭಾಸರಾಗಿ ಪೋಪ-
ರ್ಶೋಭಾವಹ ಮಿಶ್ರಶೈವಪರಿ ತಾನೆಂದಂ ೧೯

1. ಕ್ಯಾರ್ಸಲ್ಲಲ್ಲಿ (ಅಇ). 2. ಖ್ಯ (ಅಇ).

ಆರವೆ ಪೂದೋಂಟಂ ಕಾ-
ಸಾರಂಗಳ್ ತಟಾಕಮುಖ್ಯವ ಸಾಗಿಸುವುದು
ಭೂರಿಯಾಗನ್ನ ಉದಕವ
ಸಾರಿದ ಕ್ಷುಧಿತರ್ಗೀವುದವರಿವರೆನ್ನದೆ ೨೦

ಎಲ್ಲಾ ದರ್ಶನಕಂ ಚರ
ರೊಲ್ಲಭರೆಂದವರ ಭಜಿಸಿ ಕೃಪೆಯಂ ಪಡೆವುದ
ದಲ್ಲದಡೆ ಮಿಶ್ರಶೈವಗೆ
ಹೊಲ್ಲಹವೆಂದರಿವುದಿದರ ತೆರಹಂ ಮರಹಂ ೨೧

ಕೇಳಿನ್ನು ಶುದ್ಧಶೈವವ
ಭಾಳಾಕ್ಷಭಕ್ತನುದ್ದೇಶಿಸಲ್ಕದು ಶುದ್ಧಂ
ಕಾಳಗ್ರೀವಸ[1](ಮೇತಂ)[1]
ಮೇಳೈಸಲ್ ಶುದ್ಧಶೈವವದು ತಾನೆನಿಕುಂ ೨೨

ಶಿವನಿಂದಲಾದ ಶೈವದ
ವಿವಿಧಕ್ರಿಯೆಯಿಂದ ಹರನ ಭಜಿಪಡೆ ಮತ್ತಾ-
ಭವನಿಂ ದೀಕ್ಷಿತರಾದರ್
ಹವಣಿಂದಿರುತಿರ್ಪ ಮುನಿಗಳೇ ಶಿವದ್ವಿಜರುಂ ೨೩

ಗೌತಮನತ್ರಿಭರದ್ವಜ
ನಿಂತಿಹ ಕಶ್ಯಪನು ಕೌಶಿಕಾದಿಗಳೆಲ್ಲರು
ಭೂತೇಶನಿಂದ ದೀಕ್ಷೆಯ
ಪ್ರೀತಿಯೊಳುಂ ಪಡೆದರಿವರು ತಾಂ ಶಿವದ್ವಿಜರುಂ ೨೪

ಈ ಗೌತಮಾದಿ ಋಷಿಗಳ
ಸಂಗಮದಾಗಿರ್ದ ಜಾತಿಯೊಳ್ಪುಟ್ಟಿಪರ್ಾ-
ಮಾಂಗಲ್ಯವಿಪ್ರರುಗಳುಂ
ಲಾಗಿಂ ಶಿವದ್ವಿಜರೆಂಬ ನಾಮವ ತಾಳ್ಗುಂ ೨೫

ವ॥ ಈ ಶಿವದ್ವಿಜರ್ ಪುನರ್ದೀಕ್ಷಾರ್ಹರಲ್ಲಂ ಇವರ್ಗಂ ಪುನರ್ದೀಕ್ಷೆಯಂ ಮಾಡಿವಡಂ ನಿಷ್ಫಲಂ ಇವರ್ಗಳಲ್ಲದೆ ಮತ್ತಂ ಶುದ್ಧಶೈವದೀಕ್ಷಿತರಪ್ಪುವರಂ ಮರವೆ

1. ಹಸ್ಯೈವಂ (ಅ೩).

ಯಿಂ ತಚ್ಛಿವವಕ್ತ್ರಾದಿ ಭಿನ್ನರಾದಡೆ ಪುನರ್ದೀಕ್ಷಾದಿ ಪ್ರಯತ್ನದಿಂ ಶುದ್ಧರಹರುಂ ತನ್ನ ಶ್ರೀ ಗುರುವಿನಿಂದೆ ಕೊಡಲ್ಪಟ್ಟ ಲಿಂಗದಲ್ಲಿಯುಂ ತಂಡಿಲೋಧೃತವಾದಚಕ್ರದಲ್ಲಿಯುಂ ಆ ಲಿಂಗದಲ್ಲಿಯುಂ ತನ್ನ ಹೃದಯದಲ್ಲಿಯುಂ ಮಾಡುವ ಶಿವಾರ್ಚನಂ ಆತ್ಮಾರ್ಚನನೆಂಬುದಂ ಪೂರ್ವಾರ್ಥಪೂಜನವಾಯಿತ್ತಾದಡಂ ಇದರಿಂದ ಮುಂದೆ ಕೇಳ್ವುದುಂ ೨೬

ಉ. ಮಾ. ವೃ.

ಗ್ರಾಮ ಸಮುದ್ರತೀರ ನದಿ ಪರ್ವತದಗ್ರ ಗೃಹಾಳಿಯೊಳ್ ಮಹಾ
ಪ್ರಾಮುದ ನಿರ್ಜರಾದಿಕುಲಪ್ರೀತಿಗಳಿಂದ ಪ್ರತಿಷ್ಠಿತಂಗಳ
ಪ್ರಾಮಳಲಿಂಗಯೂಥಗಳ ಪೂಜೆಪರಾರ್ಥವು ಎಂಬರಂತಮುಂ
ಪ್ರೇಮವನೀವುತಿರ್ಕುಬಹುದೇವರಿಗೆಂದನು ಸಿದ್ಧಶಿಷ್ಯನೊಳ್ ೨೭

ಶಂಕರನೊತ್ತಿನಾವರಣಪೂಜೆಗಳಲ್ಲದೆ ಮಿಕ್ಕ ಠಾವಿನೊಳ್
ಪಂಕಯುತಾತ್ಮರಾಗಿಹ ಬಹಿರ್ನರರಿಂದ ಪ್ರತಿಷ್ಠಿತಂಗಳಿಂ
ಲೋಕದಿ ಮಾಡೆ ರಾಜಿಸುವ ಬ್ರಹ್ಮ ಜನಾರ್ದನನಿಂದ್ರನರ್ಕರಾ
ತ್ರೀಕರಸಪ್ತಮಾತೃಮೊದಲಾದುವ ಪೂಜಿಸಲಾಗದೆಂದನುಂ ೨೮

ಶಂಕರವಿಪ್ರನಾದವನುವಾತ್ಮನಿಗಾಗಿ ಪರಾರ್ಥಕಾಗಿಯುಂ
ಕಕ್ಕುಲಿಯಿಂದ ಲೋಭದಲಿ ಪೂಜಿಸಲಾತನ ರಾಜನಾ ಕ್ಷಣಂ
ನೂಂಕಿಪದಲ್ಲದಿರ್ದಡವನಿರ್ಪೆಡೆ ಡಾಮರದಿಂದೆ ದಾಳಿಯಿಂ
ಚಿಕ್ಕನೆ ಕೆಟ್ಟುಪೋಪುದೆಲೆ ಪುತ್ರನೆಯೆಂದನು ಸಿದ್ಧನಾತನೊಳ್ ೨೯

ಕಂ. ಶಂಕರನಗುಡಿಯೊಳಿರ್ದವ
ಕಿಂಕರರಿವರ್ಶಿವನಿಗೆಂಬ ಭಾವದಿ ಪೂಜಿಪು-
ದಂಕವನರಿಯದೆ ಬೇರೊಂ-
ದಿಂಕೆಯೊಳೆಜಿಸಲ್ ಶಿವಂಗೆಯುಮ ವಿಪರೀತಂ ೩೦

ಊ[1](ರ್ಧ್ವ)[1]ಪುಂಡ್ರಂಗಳ್ತ್ರಿಶೂ-
ಲಾರ್ಧದಚಂದ್ರಿಕೆ ಚರುಸ್ರದಿಪಾಶ್ವತವ
ಸಾರ್ದದಲಾಕೃತಿತಿಲಕವ
ನಾರ್ಧರಿಸಿಹರವರ [2](ಸೋಂ)[2]ಕಲಾಗಮ ಶೈವಂ ೩೧

---

1. ರ್ಧ (ಅಇ). 2. ಶೋ (ಅಇ).

ಅಂಕುಶ ಚಕ್ರಂ ಶಂಖಿಂ
ದಂಕಿತರಾಗಿರ್ದ ದ್ವಿಜರ ಪರಮೇಶ್ವರನಂ
ಸೋಂಕಿಸದೆ ಪೂಜೆಗೆಯ್ವಾ
ಬಿಂಕವನುಳ್ಳವನೆ ಶುದ್ಧಶೈವಂ ದೈವಂ ೩೨

ದೀಕ್ಷಿತರಲ್ಲದ ವಿಪ್ರರು
ಮುಕ್ಷಿತ್ರಯನಂ ಭಜಿಸಲೆಂದು ಗುಡಿಯಂ ಪೋಗ
ಲಾಕ್ಷಣದೊಳ್ ಲಿಂಗಂ ಹ-
ರ್ಯಾಕ್ಷನ ಕಂಡ ಮದೇಭದೊಲೋಡುವನಾಗಂ ೩೩

ಚತುರ್ವೇದಿಯಾದಡಾಗ[1](ಲಿ)[1]
ಕ್ಷಿತಿಯೊಳದೀಕ್ಷಿತನಾಗಿ ಮಹೇಶನ ಭಜಿಸಲ್
ಮತಿಬ್ರಹ್ಮದೈತ್ಯ[2]ನಾ(ಗಲಿ)[2]
ಅತುಳಟವಿಯೊಳಿರ್ಪನೆಂಬುದದು ತಾನಲ್ತೇ ೩೪

ಶಿವದೀಕ್ಷಿತನಲ್ಲದವಂ
ಭವನಂ ಭಜಿಸುತ್ತಿರಲಾ ನಾಡುಂ ಕೆಡುಗಾ-
ಅವನಿಪರಾಜ್ಯವ ಬಿಟ್ಟುಂ
ಜವದಿಂದೋಡುವನುಪದ್ರದಿಂದಾ ಕ್ಷಣದೊಳ್ ೩೫

ಅದುಕಾರಣವಾ ವಿಪ್ರನ
ಪದಪಿಂದಾದೇಶವಾಳ್ವನೃಪಶೀಘ್ರದೊಳಂ
ಪದುಳದಿ ಪೊರಡಿಸುವುದವನ
ನದಲ್ಲದೊಡಾರಾಜ್ಯಕೆಡುಗುಂಯೆಂದನೆತೀಶ ೩೬

ಶುದ್ಧಶೈವ ತಾನಲ್ಲದ
ಬದ್ಧದ್ವಿಜರಂ ಮುಟ್ಟಲೀಸದೆ ಮನುಮುನಿ
ಪೊರ್ದಿ ಸ್ಥಾಪಿಸಿದ ಲಿಂಗ
ಪಿರ್ದಲಿಯೇ ಪೂಜೆಗೆಯ್ಯೆಪರಾರ್ಥಮದೆನಿಕುಂ ೩೭

ವ॥ ರತ್ನಪೀಠದೊಳು ಲಿಂಗಮಂ ದಕ್ಷಿಣಮುಖಮಾಗಿರಿಸಿ ಷೋಡಶೋಪಚಾರದಿಂ ಪೂಜಿಸುವುದು ಶುದ್ಧಶೈವನಂಗಾತ್ಮಾರ್ಥಪೂಜೆಯೆನಿಪುದುಂ ಮತ್ತಂ ಶುದ್ಧಶೈವ ವ್ರತ[3]ಲೋಪವಾದಡಂ[3] ಶುದ್ಧನಹನುಂ

1. ಲ್ (ಅಇ). 2. ನಾ (ಅಇ). 3. x (ಇ).

ಸಾಕ್ಷಿ: ವ್ರತಸ್ಯಾಚ ಕ್ರಿಯಾಲೋಪೇ ನಿಯಮ್ಯಸ್ಯವಿಲೋಪನೇ
ಗಾಯತ್ರ್ಯಷ್ಟಶತೇನೈವ ವಿಶುದ್ಧಿಂ ತಮಗಚ್ಛತಿ

ಮತ್ತಂ ಶುದ್ಧಶೈವನ ಲಿಂಗಲೋಪನವಾದೊಡಂ ಒಂದು ಲಕ್ಷ ಅಘೋರಜಪಮಂ ಮಾಡಿ ಹಿಂದಣಾಚಾರ್ಯನಿ (?) ಪೂಜಿಸುವುದು

ಸಾಕ್ಷಿ: ನಿಷ್ಠೇ ಲಿಂಗೇ [1]ಪರಿಭ್ರಷ್ಟೇ ನಷ್ಟೇ ದಗ್ಧೇ ಹೃದೇಪಿವಾ[1]
ನೀತೇವಾ ಮೂಷಕ ಕಾಕಕೌಲೇಯು ವಾನರೈಃ
ಜಪ್ತ್ವಾಲಕ್ಷಮಘೋರಸ್ಯ ವಿಧಿನಾ ಲಿಂಗಕಾಂತರಂ
ಪ್ರತಿಷ್ಠಾಪ್ಯನಯೋಚ್ಯುಧಿಂ ಪಿಂಡಿಕಾಯಂತದೈವಚಾ (?)

ಎಂಬುದರಿಂ ಮರಳಿ ಲಿಂಗವ ಧರಿಸುವುದುಂ – ರವಿ ತನ್ನ ಲಿಂಗ ಸಡಿಲೆ ಶಿರಸ್ಸಂ ಕೊಯ್ದಿಟ್ಟಂ ಇದೀಗ ಶುದ್ಧಶೈವರನೈಷ್ಠಿಕಂ ಮತ್ತಂ ಇಂದ್ರನೀಲಲಿಂಗಮಂ ಕೃಷ್ಣಂ ಶೈಲಮಯಲಿಂಗಮಂ ಬ್ರಹ್ಮಂ ಮಣಿಮಯಲಿಂಗಮಂ ಶಕ್ರಂ ಅನ್ನಮಯಲಿಂಗಮಂ ಅಗ್ನಿ ಸ್ಫಾಟಿಕಲಿಂಗಮಂ ವರುಣಂ ಆರಕೂಟಲಿಂಗಮಂ ಮರುತಂ ಹೇಮಮಯಲಿಂಗಮಂ ಧನದಂ ತಾಮ್ರಲಿಂಗಮಂ ದಿನಪಂ ಮೌಕ್ತಿಕಲಿಂಗಮಂ ಸೋಮಂ ರೌಪ್ಯಲಿಂಗಮಂ ವಿಶ್ವದೇವತೆಗಳುಂ ಕಾಂಸ್ಯಲಿಂಗಮಂ ವಸುದೇವತೆಗಳುಂ ಪಾರ್ಥಿವಲಿಂಗಮಂ ಅಶ್ವಿನೀದೇವತೆಗಳುಂ ಸೀಸಮಯಲಿಂಗಮಂ ಪಿಶಾಚಂಗಳುಂ ತ್ರೈಲೋಹಮಯಲಿಂಗಮಂ ಗುಹ್ಯಕರುಂ ಪ್ರವಾಳಲಿಂಗಮಂ ಪನ್ನಗರುಂ ಕುಸುಮಮಯಲಿಂಗಮಂ ಮದನನುಂ ವಜ್ರಲಿಂಗಮಂ ಬೌದ್ಧಂ ಭಾವಲಿಂಗಮಂ ಜಿನೇಂದ್ರುಂ ಪೂಜಿಸಿ ತಮ್ಮ ತಮ್ಮ ಪದಂಗಳಂ ಪಡೆದರೆಂದು ನಿಶ್ಚಯಿಸಿ ಶಿವನುದ್ದೇಶಿಸಿ ಮಾಡುವ ಪೂಜೆ ಶುದ್ಧಶೈವವದುಂ ೩೮

ಮ. ವಿ. ವೃ.

ತಿರುನೀಲ್ಕಂಠನಮಿತ್ತ ಡಾಂಡಿಕರಿಕಾಮೇಣಾದಿನಾರ್ಪಿಳ್ಳೆನಾ-
ತ್ತಿರುಮೂಲ್ದೇವನಿಹಪ್ಪಗಾಂಡಿಕಲಿಕಂಪಮಾರ್ನಕಂಜರ್ಕರುಂ
ಬರುಚಿ[2](ತೊರ್ಣಿಣ್ಣರು)[2]ವಾಯಿಲಾರ್ಪರವೆತಿರ್ನಿ[3](ಲ್ಕಂಠಯಾಳ್ಪಾಣರಾ-
ತ್ತಿರು)[3]ವಾಕಾದ್ಯರು ಶುದ್ಧಶೈವದೊಳಗೆಂದಂ ಸಿದ್ಧನಾನಂದದಿಂ ೩೯

1. x (ಇ). 2. ರುತೊಣಿಣೆ (ಅಇ). 3. ಲ ಕಂಠ ಪಾಣರ್ತ (ಅಇ).

ಕರಿಕಾಲ್ಚೋಳ[1](ರಿವಾಳತಾಂಡಿ)[1] ಗಣನಾಥರ್ ಕಾರಿಕಾಲಮ್ಮೆಯ-
ಕ್ಕರವೂರ್ಚೋಳ್ಕಳ ಚೆಂಗಚೋಳ್ಪುರುಷ ಮುಕ್ಕಣ್ಚೋಳಮುತ್ತುಂಗಚೋ-
ಳ್ತಿರುಪಂದಾಮರುಚೋಳ್ತಿರುಪ್ಪುಲಿಯ ವೇಳ್ಕೂತ್ತಾಂಡಿ ರಾಜೇಂದ್ರಚೋ-
ಳ್ತಿರುಚೊಂಡಾದ್ಯರು ಶುದ್ಧಶೈವದೊಳಗೆಂದಂಸಿದ್ಧನಾಶಿಷ್ಯನೊಳ್ ೪೦

ಗುರುಹಸ್ತಾಬ್ಜದೊಳಿಷ್ಟಲಿಂಗವನು ದೀಕ್ಷಾಸಂಗದಿಂದೀಸಿಕೊಂ-
ಡುರಕಂ ಕಂಠಕರಾಬ್ಜ ಕಕ್ಷೆ ಮೊದಲಾದ ಸ್ಥಾನಂಗಳೊಳ್ ತಾಳ್ದಶಂ
ಕರನಂ ಪ್ರಾಣದಿಪ್ರಾಣ[2](ಭಾವದೊಳು)[2]ಮಾಭೂತೇಶನೊಳ್ಕೂಡಿಯುಂ
ಎರವಿಲ್ಲಾಲಸದಿಲ್ಲದರ್ಚಿಪನೆ ತಾಂ ಸಾಮಾನ್ಯವೀರಾನ್ವಿತಂ ೪೧

ಪರಪಂಚಾಕ್ಷರಿಮಂತ್ರಜಾಪ್ಯಭಸಿತಂ ರುದ್ರಾಕ್ಷ[3](ಧಾರ್ಯ)[3]ತ್ವದಿಂ
ಗುರುಲಿಂಗಂಚರಭಕ್ತಿಯುಕ್ತಿಗಳ ಮಾಡುತ್ತಂ ತ್ರಿಕಾಂಲಗಳೊಳ್
ಹರನಂ ಪೂಜಿಸುತಿರ್ಪ [4](ಭಕ್ತಸವನೇ)[4] ಸಾಮಾನ್ಯಸಂವೀರನೆಂ-
ದುರುಸಿದ್ಧಂ ಪರಿಣಾಮದಿಂದ ನುಡಿದಂ ಹಸ್ತಾಬ್ಜಸಂಜಾತನೊಳ್ ೪೨

ಶಿವಪೂಜಾವ್ರತಯುಕ್ತಭಕ್ತ[5](ದಿನಮುಂ)[5] ಸತ್ಯಾದ್ಯುಪಾಯಂಗಳಿಂ
ಜವದಿಂದರ್ಚಿಸುತೀಶಲಾಂ[6](ಛನ)[6]ರ ಶರ್ವಾಣೀಶನೆಂದೀಕ್ಷಿಸು-
ತ್ತವರಂ ಪೂಜಿಸಿ ಹೇಮವಸನಮಂ ಇತ್ತಲ್ಲಿ ತನ್ನಿಷ್ಟಮಂ
ಹವಣಿಂದರ್ಚಿಪ ಚಿತ್ತಮುಳ್ಳವನೆ ತಾಂ ಸಾಮಾನ್ಯನೆಂದಾಡಿದಂ ೪೩

ಕಂ. ತಾನುಂಬ ಕಾಲದೊಳಗಂ
ಮೀನಧ್ವಜಾರಿಶರಣರೊಳೊರ್ವರನಾದಡು
ಶೂನ್ಯಂ ಆಗದೊಲುಂ ತಾಂ
ಚೆನ್ನಾಗಿಯೆ ತೃಪ್ತಿಬಡಿಪುದವರಂ ಸತತಂ ೪೪

ಹರಭಕ್ತರಿಗಿಕ್ಕದುಣ್ಣ-
ಲ್ಹರಗಂ ಅಪರಾಧಗಳನು ಮಾಡಿದ ಸಮನೆಂ
ದೊರೆದಂ ದೇಶಿಕ ತನ್ನಯ
ಕರಜಾತನ ಕೂಡೆ ಸಾಮಾನ್ಯನವ್ರತಮಂ ೪೫

1. ರುವಾಳತಾಂಡಾಂ (ಅಇ). 2. ಸಸುಮಾಬೂ (ಅಇ). 3. ಧಾರಣ (ಅಇ).
4. ಸದ್ಭಕ್ತನೇಂ (ಅಇ). 5 ಧನದಂ (ಅಇ). 6. ಚ (ಅಇ).

ಚರವುಂಡ ಬಳಿಕಲಾದರು
ಚರರಾಜ್ಞೆಯೊಳವರ ಪಂತಿಯೊಳಾಪಡು ತನ್ನ
ವರಪುತ್ರ ಮಿತ್ರರ್ಸಹಂ
ಚರಶೇಷವ ಲಿಂಗಕೆ[1](ತ್ತು ಉಂ)[1]ಬುದೆ ನಿಯಮಂ ೪೬

ಲಿಂಗಾರ್ಪಿತವಲ್ಲದುದಂ
ಹಿಂಗುವುದುಂ ತಾಂ ಹಿಂಗದೆ ಮರೆದಡೆಯುಂ
ನುಂಗಿದನಾದಡೆ ತನ್ನಯ
ಅಂಗುಳಪರಿಯಂತ ರಸನೆಯಂ ಛೇದಿಸುವುದುಂ ೪೭

ಅಂಗಳೊಳಿರ್ದಾ ಲಿಂಗಂ
ಹಿಂಗದೆಯಿರಬೇಕುದಣುವು ಮಾತ್ರಂ ಹಿಂಗ-
ಲ್ಕುಂಗೊರಲ ಕೊಯ್ದು ಶಿರವಂ
ಮುಂಗಡೆಗಿಡಬೇಕುಮಲ್ಲದಿರ್ದಡೆ ಭಂಗಂ ೪೮

ಇದು ಸಾಮಾನ್ಯದ ವೀರನ
ಮುದವಿದು ಮತ್ತಿನ್ನು ವಿಶೇಷದ ವೀರನ ಶೈ-
ವದ ತೆರನಂ ಪೇಳುವೆ ಕೇ-
ಳ್ವುದೆನುತೆತಿಪಂ ನುಡಿದನಾ ವತ್ಸನೊಳಾಗಂ ೪೯

ವ॥ ಪಿಂಡ ಪಿಂಡಜ್ಞಾನಮಂ ಅರಿದುಂ ಸಂಸಾರವಂ ಹೇಯಂ ಮಾಡಿ ಗುರುಕರುಣವಂ ಪಡೆದ ಶಿಷ್ಯಂ ಹಸ್ತಮಸ್ತಕ ಸಂಯೋಗದಿಂ ಕಾರಣದೇಹಕ್ಕಂ ವೇಧಾ ದೀಕ್ಷೆಯಿಂದೀವ ಭಾವಲಿಂಗಮಂ ಕಾರಣತನುವಿನ ಭಾವಹಸ್ತದೀಂದೀಸಿಕೊಂಡುಂ ಮತ್ತಂ ಕರ್ಣದಲ್ಲಿ ಮಂತ್ರಮಂ ಪೇಳ್ವುದರಿಂದಂ ಸೂಕ್ಷ್ಮತನುವಿಂಗಂ ಮಾಳ್ಪ ಮಂತ್ರ ದೀಕ್ಷೆಯಿಂದೀವ ಪ್ರಾಣಲಿಂಗವಂ ಮನದಹಸ್ತದಿಂದಾಂತುಕೊಂಡುಂ ಮತ್ತಾ ಕುಂಡ ಮಂಟಪಂಗಳೊಳುಂ ಕೂಡಿದ ಕ್ರಿಯಾದೀಕ್ಷೆಯಿಂದೀವ ಕ್ರಿಯಾಲಿಂಗಮಂ ಸ್ಥೂಲತನು ವಿನ ಹಸ್ತದೊಳಿರಿಸಿಕೊಂಡಾ ಲಿಂಗಮಂ ಕಾಂಚನಕ್ಕೆ ಕೈಯಾನದಿರ್ದಡಂ ಕರಸ್ಥಲದಲ್ಲಿ ಧರಿಸಿದುದಹುದಾ ಲಿಂಗಮಂ ಭೋಗಾಭೋಗಂಗಳಂ ಕಾಂಕ್ಷಿಪ ಜ್ಞಾನೇಂದ್ರಿಯಂಗಳ ದುರ್ಗುಣವಿಲ್ಲದಿರ್ದಡಂ ಕಕ್ಷಸ್ಥಾನದೊಳ್ ಧರಿಸಿದುದಹುದಾ ಲಿಂಗಮಂ ಅಂಗನೆಯರ ಸಂಗಸುಖಮಂ ಬಯಸದೆ ಅಂಗಸೋಂಕಿದ ಸುಖವಂ ಲಿಂಗದೊಳು ವೇಧಿಸಬಲ್ಲಡೆ ಉರಸಜ್ಜೆಯೊಳುಧರಿಸಿದುದಾ ಲಿಂಗಮಂ ಮನಸೂತಕವನ್ನೃತಕುತರ್ಕಮದಮತ್ಸರ

1. ತ್ತುದನ್ (ಅಇ).

ಜಿಹ್ವಾಲಂಪಟತ್ವವಿಲ್ಲದಿರ್ದಡಂ ಮುಖಸಜ್ಜೆಯೊಳ್ ಧರಿಸಿದುದಹುದಾ ಲಿಂಗಮಂ ನವನಾಳದೊಳಗೆ ಬೀಸುವ ಪ್ರಾಣನ ಗುಣಮಂ ಪರಿಹರಿಸಬಲ್ಲಡಂ ಅಮಳೋಕ್ಯದೊಳ್ ಧರಿಸಿದುದಹುದಾ ಲಿಂಗಮಂ ಲೋಕದ ಮಾನವರ್ಗೆರಗದ ಗುಣಮುಳ್ಳಡಂ ಮಸ್ತಕಾಗ್ರದೊಳ್ ಧರಿಸಿದುದಹುದಾ ಲಿಂಗಮಂ ಇಂತೀ ಕ್ರಮವನರಿದು ಧರಿಸಿರ್ದುದೇ ಕ್ರಿಯಾಲಿಂಗಧಾರಣಂ ಮತ್ತಾ ಪ್ರಾಣಲಿಂಗಧಾರಣವೆಂತಾದಡಂ ಮರುತಪೃಥ್ವಿ ಮಿಶ್ರದ ಪ್ರ[1]ಣ(ವ)[1]ನಿಗಂ ವಕಾರ ನಕಾರಂ ನ್ಯಾಸಂ ಮಾಡಿದ ಕ್ರಿಯಾಶಕ್ತಿಯಿಂ ಜಲಧರಣಿಯ ವೇದಿಕೆಯ ಗಂಧದೊಳ್ ಸಂಬಂಧಿಸಿ ಮಕಾರಂ ನಕಾರಂ ನ್ಯಾಸಂ ಮಾಡಲಿಂಬಾವ ಗಂಧಪ್ರಸಾದವಂ ಉಂಬುದಕ್ಕಂ ವಾಯುಸಖನ ಭೂಮಿಶ್ರದ ನಾಶಿಕಕಂ [2]ಶಿಕಾರ ನಕಾರಂ[2] ನ್ಯಾಸಂ ಮಾಡಲಾದಾಚಾರಕ್ಕಂ ಮುಖವಾದುದಂ ಅರಿದು ಧರಣಿಯಿಂ ಸದಾ ಪಾಯ್ವುಗೆ ನಕಾರವನುದ್ಧರಿಸಿದಾಚಾರಲಿಂಗವಂ ವಿಯಜ್ಜಲವೆರಕೆಯ ಚಿತ್ತೇಂದ್ರಿಯಕ್ಕಂ ಯಕಾರ ಮಕಾರವಂ ಪ್ರಭೆಗೊಳಿಸಿದ ಸುಚಿತ್ತಹಸ್ತದೊಳ್ಧರಿಸುವುದುಂ ಮತ್ತಂ ಸ್ವಸನಕಬಂಧಕೂಟದ ಅಪಾನದೊಳ್ ವಕಾರ ಮಕಾರವಂ ನ್ಯಾಸಂ ಮಾಡಲಾದ ಜ್ಞಾನಶಕ್ತಿಯಿಂ ಪಾನೀಯಾಂಶ ರಸಕ್ಕಂ ಮಕಾರಂ ನ್ಯಾಸವಂ ಮಾಡಲಾದಾನಂದರೂಪಾದ ರಸಪ್ರಸಾದವನುಂಬುದಕ್ಕಂ ಅಗ್ನಿಜಲವೆರಕೆಯ ಜಿಹ್ವೆಯೊಳುರೆ ಶಿಕಾರಮಕಾರವಂ ನ್ಯಾಸಂಗೆಯಲ್ ಗುರುಲಿಂಗದ ಮುಖವಾದುದನರಿದುಂ ಪೃಥ್ವಿಅಪ್ಪುವಿನ ಮೇಳದ [3]ಗುಹ್ಯ[3]ದಲ್ಲಿ ನಕಾರಮಕಾರವಂ ನ್ಯಾಸಂಮಾಡಲಾದ ಕ್ರಿಯಾಗುರುಲಿಂಗವಂ ಗಗನಾಗ್ನಿವೆರಕೆಯ ಬುದ್ಧಿಯೊಳುಂ ಯಕಾರ ಶಿಕಾರವಂ ಕೂಡಿದ ಸುಬುದ್ಧಿಹಸ್ತದೊಳ್ಧರಿಸುವುದುಂ ಮರುತಾನಲಮಿಶ್ರದುದಾನದೊಳ್ವಕಾರಶಿಕಾರವಂ ನ್ಯಾಸವಂ ಮಾಡಲಾದ ಇಚ್ಛಾಶಕ್ತಿಯಿಂ ಜಲಾನಲಮಿಶ್ರದ ರೂಪಿನಲ್ಲಿ ಮಕಾರಶಿಕಾರವಂ ನ್ಯಾಸಂ ಮಾಡಲಾದ ರೂಪುಪ್ರಸಾದವನುಂಬುದಕ್ಕಂ ಶಿಖಿಯಾಂಶದ ನೇತ್ರದಲ್ಲಿ ಶಿಕಾರಂ ನ್ಯಾಸಂ ಮಾಡಲ್ ಶಿವಲಿಂಗಾಸ್ಯವಾದುದಂ ಅರಿತುಂ [4](ಬಹು)[4] ದಹನಬೆರಕೆಯ ಪಾದದಲ್ಲಿ ನಕಾರಶಿಕಾರವಂ ನ್ಯಾಸಂ ಮಾಡಲಾದ ಕ್ರಿಯಾಶಿವಲಿಂಗವಂ ನಭಧರೆಗೂಡಿದ ಅಹಂಕಾರಕ್ಕಂ ಯಕಾರವಕಾರವಂ ಇರಿಸಲಾದುದಂ ನಿರಹಂಕಾರಹಸ್ತದೊಳ್ಧರಿಸುವುದುಂ ಮರುತನೆನಿಪಾ ವ್ಯಾನದೊಳ್ ವಕಾರಂ ಸೇರಿಸಲಾದ ಆದಿಶಕ್ತಿಯಿಂ ಜಲಮರುತಮಿಶ್ರದ ಪರುಷನಕ್ಕಂ ಮಕಾರವಕಾರ ನ್ಯಾಸಂಗೆಯ್ಯಲಾದ ಪರುಷನ ಪ್ರಸಾದವನುಂಬುದಕ್ಕಂ ಅಗ್ನಿಪವನ ಮಿಶ್ರತ್ವಕ್ಕಿನಲ್ಲಿ ಶಿಕಾರ ವಕಾರವಂ ನ್ಯಾಸಂಮಾಡಲ್ಜರಲಿಂಗಮುಖಮಾದುದನರಿತುಂ ಧರಾನಿಲವೆರಕೆಯ ಪಾಣಿಯೊಳ್ [5]ಮ[5]ಕಾರವಕಾರಮಂ ಸೇರಿಸಲಾದ ಕ್ರಿಯಾಚರಲಿಂಗವಂ ಗಗನಾನಿಲಕೂಡಿದ ಮನದೊಳುಂ ಯಕಾರವಕಾರನ್ಯಾಸಂಗೆಯ್ಯಲಾದ ಸುಮನಹಸ್ತದೊಳ್ಧರಿಸುವುದುಂ ಮತ್ತಂ ಮರುತಾಂಬರವೆರಕೆಯ ಸಮಾನದೊಳುಂ ವಕಾರಯಕಾರವನನುಬಂಧಿಸಿದುದಾದ

1. ಜ (ಅಇ). 2. x (ಇ). 3 ಗೃಹ (ಇ). 4. ಭವ (ಇ). 5. x (ಇ).

ಪರಶಕ್ತಿ[1](ಯಿಂ)[1] ಸಲಿಲಾಂಬರಸಂಗದ ಶಬ್ದಕ್ಕಂ ಮಕಾರಯಕಾರವನನುಗೊಳಿಸಲಾದ ಶಬ್ದಪ್ರಸಾದವನುಂಬುದಕ್ಕಂ ಅನಲಾಕಾಶಸಮ್ಮೇಳದಿಶ್ರೋತ್ರಕಂ ಶಿಕಾರಯಕಾರಂಗಳಂ ನ್ಯಾಸಂಮಾಡಲ್ಪ್ರಸಾದಲಿಂಗಮುಖವಾದುದಂ ಅರಿದುಂ ಭೂ[2](ಮ್ಯಾಗ)[2]ಸಸಂಗದ ವಾಕ್ಕಿಂಗಂ ನಕಾರಯಕಾರವನಿರಿಸಲಾದ ಕ್ರಿಯಾಪ್ರಸಾದಲಿಂಗಮುಂ ಅಂಬರದೆಡೆಯಜ್ಞಾನದಲ್ಲಿ ಯಕಾರವನಿಂಬಿಡಲಾದ ಸುಜ್ಞಾನಹಸ್ತದೊಳ್ಧರಿಸುವುದುಂ ಇಂತು ಮಂತ್ರಮಯವಾಗಿ ಧರಿಸಿರ್ದುದೇ ಪ್ರಾಣಲಿಂಗಧಾರಣಂ ಮತ್ತಂ ಭಾವಲಿಂಗಧಾರಣವೆಂತೆಂದೊಡಂ ಆಧಾರದಲ್ಲಿಯಾಯಿತ್ತಾದಡಂ ಹೃದಯದಲ್ಲಿಯಾಯಿತ್ತಾದಡಂ ಭ್ರೂಮಧ್ಯದಲ್ಲಿಯಾಯಿತ್ತಾದಡಂ ಭಾವಲಿಂಗಮಂ ಧರಿಸುವುದುಂ ಆಧಾರದಲ್ಲಿ ಕನಕಪ್ರಭೆಯನುಳ್ಳದೆಂದು ಭಾವಿಸುವುದುಂ ಹೃದಯಲ್ಲಿಯಾದಡಂ ಹವಳಕಾಂತಿಯನುಳ್ಳುದಾಗಿ ಭಾವಿಸುವುದುಂ ಭೂಮಧ್ಯದಲ್ಲಿಯಾಯಿತ್ತಾದಡಂ ಸ್ಫಟಿಕದ ಕಾಂತಿಯನುಳ್ಳುದಾಗಿ ಭಾವಿಸುವುದುಂ ಈ ತೆರದಿಂ ಭಾವಿಸಿದುದೇ ಭಾವಲಿಂಗಧಾರಣಂ.

ಸಾಕ್ಷಿ ನಿರುಪಾಧಿಕಮಾಖ್ಯಾತಂ ಲಿಂಗಸ್ಯಾಂತರಧಾರಣಂ
ವಿಶಿಷ್ಟಕೋಟಿಗುಣಿತಂ ಬಾಹ್ಯಲಿಂಗಸ್ಯ ಧಾರಣಾತ್

ಎಂಬುದರಿಂದಂ ಅಂತರಂಗಧಾರಣವಿಶೇಷಂ ಇಂತು ತ್ರಿವಿಧಲಿಂಗಮಂ ತ್ರಿವಿಧತನುವಿನೊಳ್ ತಾಳ್ದಾತನೆ ವಿಶೇಷದ ವೀರಶೈವಂ ಆತಂ ಗುರುಲಿಂಗಜಂಗಮಪಾದೋದಕಪ್ರಾಸಾದಭೂತಿರುದ್ರಾಕ್ಷೆಪಂಚಾಕ್ಷರಿಯೆಂಬ ಅಷ್ಟಾಂಗಯುಕ್ತನಾಗಿರ್ಪಂ ೫೦

ಉ. ಮಾ. ವೃ.
ಕುಳ್ಳಿತಿಹಲ್ಲಿ ನಿದ್ರೆಯೆಡೆಯಲ್ಲಿಯು ಸಂಚರಿಪಲ್ಲಿಯೂಟಮಂ
ಮಾಳ್ಪೆಡೆಯಲ್ಲಿ ಮೂತ್ರಮಲಮಂ ಬಿಡುವಲ್ಲಿಯು ಮೋಹದಲ್ಲಿಯುಂ
ವೇಳೆಗಳಲ್ಲಿ ಕಾಮಿನಿಯ ಕೂಟದ ಕೂರ್ಮೆಗಳಲ್ಲಿ ಲಿಂಗಮಂ
ಬೀಳದೊಲಾವಗಂ ಧರಿಸಿದಾತ ವಿಶೇಷದ ವೀರನೆಂದನುಂ ೫೧

ತನ್ನನು ಲಿಂಗ ಪಿಂಗಿ ಕಡೆ[3](ಯ)[3]ಪ್ಪುದ ಕಂಡಡೆಯಾಕ್ಷಣಂ ತದಾ-
ಭಿನ್ನದೊಳೆತ್ತಿಕೊಂಡು ಧರಿಸಿರ್ಪುದು[4](ಮಂತ)[4]ದ ಕಾಣದಿರ್ದೊಡಂ
ಮುನ್ನವೆ ಪೋದುದಂ ಅರಿದು ನೀರೊಳು ನೇಣೊಳು ಶಸ್ತ್ರಮುಖ್ಯದೊಳ್
ಬನ್ನಬಡುತ್ತ ಸತ್ತಡೆಯು ಪಾತಕವಪ್ಪುದು ತಪ್ಪದಾತಗಂ ೫೨

1. ಯಿ (ಇ). 2. ಮಾಗ್ಯ (ಅಇ). 3. ಯಲಿ (ಅಇ). 4. ಮಂಥ (ಅ); ಪಂಥ (ಅಇ).

ಶ್ರೀಗುರುಹಸ್ತದಿಂ ಮರಳಿ ಲಿಂಗವ ಕೊಂಡಡೆ ಶಾರಣಾಂಗನಾ-
ಲಿಂಗಪತಿತ್ವಹಾನಿ ವಿಧವಾಂಗನೆಯೊಲ್ ಪುನರ್ದೋಷವಪ್ಪುದುಂ
ಹಿಂಗಿಪುದನ್ನರಿತ್ತೈಡೆಯೊಳಲ್ಲಿಯೆ ತೂಷ್ಣಿತನಾಗಿ ಕುಳ್ಳಿತುಂ
ಹೆಂಗಿಗನಾಗದಿರ್ಪುದುದಕಾನ್ನಕೆ ಚೇತನಬೀಗುವನ್ನೆಗಂ ೫೩

ವೀರವಿಚಾರದಿಂದೆ ಹನು[1](ಮಂತನು ಕೇಳಲು ತಂದುಕೊಟ್ಟುದುಂ)[1]
ಪ್ರೇರಣೆಯಿಂದೆ ಬಂದಡೆಯು ಧಾರಕನಪ್ಪುದು ಕೇಶಿರಾಜಗಂ
ಸೇರಿಸಲ್ಕೈದಲೆಂದಿನೊಲು ಪೂಜಕನಾಗಿಹುದ್ವೈದದಿ[2](ರ್ದೋಡಂ)[2]
ಮಾರಣವಾದಡಾ ಹರನ ಕೂಡಿಹ ಪೂರ್ವದೊಲೆಂದನಾತನೊಳ್ ೫೪

ಇಷ್ಟದಲಿಂಗವಂ ಧರಿಸೆ ಜೀವವು ಲಿಂಗವೆಯಪ್ಪುದೆಂತೆನಲ್
ಶ್ರೇಷ್ಠಮದಪ್ಪ ಕುಂಭದೊಳು ನೀರುವ ತುಂಬಿಸಿ ಕುಂಭಬಾಹ್ಯದೊ-
ಳ್ಳಾಷ್ಟದೊಳಗ್ನಿಯೊಟ್ಟೆ ಜಲಮುಷ್ಣಮದಪ್ಪೊಲುಮಂಗಸಂಗದು-
ತ್ಕೃಷ್ಟದ ಲಿಂಗದಿಂದಸುವು ಲಿಂಗವೆಯಾಗುವುದೆಂದನಾತನೊಳ್ ೫೫

ಭೂತವು ಹೊದ್ದಿದಾತ ಘನಭೂತವೆಯಾದೊಲು ದಂ[3](ದ)[3]ಶೂಕ[4](ನಾ
ದಾ[4]ತವುಸೋಂಕಿದಾತನ ವಪುಂ ವಿಷವಾದೊಲು ಜಾತಿಯೂಥಿಕಂ
ಕೇತಕಿಪೂಗಳಂಟಿದ ತಿಲಂಗಳ ತೈಲ[5](ವು)[5] ಗಂಧವಾದೊಲುಂ
ಪ್ರೀತಿಯೊಳಿಷ್ಟಸೋಂಕಿದನ ದೇಹದ ಜೀವವೆಲಿಂಗವಪ್ಪುದುಂ ೫೬

ಕಂ. ಅಂತರ್ಜ್ಞಾನ ಬಹಿಃಕ್ರಿಯೆ
ಮುಂತುಂಗೊಂಡಿರಲು ಪ್ರಾಣಲಿಂಗವೆಯಹುದುಂ
ಇಂತೀ ವುಭಯದೊಳೆಂದುಂ
ಹಿಂತಾದಡೆಯಂಧಪಂಗುವೊಲ್ ರಾಜಿಸುವರ್ ೫೭

ಪಶುವಿನ ಹಾಲಿಂ ಮಾಡಿದ
ಪೊಸಮೃತಮಂ ಪಶುವಿಗೆರೆಯೆ ತೋರಮದಪ್ಪೊ-
ಲ್ಪಸರಿಪ ಕ್ರೀಸಮುದಯದಿಂ
ಹಸನಹುದುಂ ಪ್ರಾಣಲಿಂಗ ಪುಟಮಿಸುನಿಯವೊಲ್ ೫೮

---

1. ಮಾನ್ನುವು ಕೇಳೆ ತಂದುಕೊಟ್ಟುವುಂ (ಅ೩). 2. ದುರ್ಗಂತಾಂ (ಅ೩).
3. ತ (ಅ೩). 4. ನಿದ್ದಾ (ಅ೩). 5. ದ (ಅ೩).

ಭಕ್ತಿ ಶ್ರದ್ಧೆ ತಿತಿಕ್ಷೆಯು
ದಾಂತಿ ದಯಾ ಭರತಿ ಶಮೆ ರುದ್ರಾಕ್ಷಂ ಭಸಿ-
ತಿಂತೀ ನವಜ್ಞಾನಾಂಗದಿ
ಯುಕ್ತಿತನಾಗಿರಬೇಕು ಕ್ರೀ ಗೆಯ್ವಂ[1](ದುಂ)[1] ೫೯

ಈ ನವವಿಧದೊಳ್ ಭಸಿತವ
ನೂನದಿ ಧರಿಪುದೆ ಮಿಗಲದರರಿವಂ ಪೇಳ್ವೆಂ
ಭಾನು[2](ವಿನುದಕ್ಕಂ ಮುಂ)[2]
ಮಾನಸದೊಳು [3](ಹರನ ನೆನೆವುತೆ)[3]ದ್ದಾ ಕ್ಷಣದೊಳ್ ೬೦

ಕರಚರಣವ ತೊಳಕೊಂಡುಂ
ಪುರಹರನಂ ಸ್ನಾನಂಗೆ[4](ಯ್ಸಿದು)[4]ದಕದಿಂದಂ
ಹರುಷದಿ ಮುಖಮಜ್ಜನದಾ-
ಷರಿಯಂ ನೆಗಳುವುದು ದಂತಕಾಷ್ಠ ಸಮೇತಂ ೬೧

ಲಿಂಗೋದಕವಲ್ಲದೆ ಬರಿ
ಗಂಗೆಯೊಳಂ ಮುಖವತೊಳೆದನಾದರೆ ಮತ್ತಾ-
ಸಿಂಗದೆ ಪೊಲೆಯರ ಘಟದೊ-
ಳ್ತೊಂಗಿದ ನೀರಿಂ ಗಂಡೂಷಿಸಿದಂತಕ್ಕುಂ ೬೨

ಹರಗರ್ಪಿಸದಿಹ ಕಾಷ್ಠದೊ-
ಳುರುದಂತ ಪ್ರಜವನುಜ್ಜೆ ಶುನಿಯಸ್ತ್ರಿಯೊಳುಂ
ಸರಿಸದೊಳುದ್ಭಿದ ದೋಷಂ
ಇರದಕ್ಕದರಿಂದೆ ಶಿವನಿಗರ್ಪಿಸಿದುದನಂ ೬೩

ಹರುಷದೊಳಾಸ್ಯವನುಂ ತೊಳ-
ದುರುಭಸಿತವ ಧರಿಪುದು ಶಿವಭಕ್ತಗೆ ಹಿತವದು
ದುರಿತವ[5](ನೆಬ್ಬೆಟ್ಟುವು)[5]ದುಂ
ಶರಣಪದದೊಳಗಿರಿಸುವುದನವರತವನಂ ೬೪

---

1. ದಂ (ಅಇ). 2. ದಯುಕ್ಕಂ ಮುನ್ನಂ (ಅಇ) 3. ರುದಂತಪ್ರಜವನು (ಅಇ).
4. ದೋ (ಅಇ). 5. ನೆಬೊಟ್ಟೊ (ಅ) ; ನೇಬೆಟ್ಟೊ (ಇ).

ಆವ[1](ನದೊರ್ವನದಾ)[1]ಗಲಿ
ಪಾವನಭಸಿತವನು[2](ಧರಿಸಿಯುದನು ಧ್ಯಾನಂಗೆಯಲ್
ಆವ)[2]ನಿಯೊಳಾತಂ ಮಾಡಿದ
ಸಾವಿರದುರುಕೋಟಿ ದ್ರೋಹವೋಡುವುವಾಗಂ ೬೫

ದಾನದೊಳೆಜ್ಞದೊಳ್ ಜಪದೊಳ್
ಸ್ನಾನದೊಳ್ ಶ್ರುತಿಪಾಠದೊಳ್ ಪಿತೃಕಾರ್ಯದೊಳುಂ
ನೂನ[3](ದು)[3]ಪಾಸವ್ರತದೊ-
ಳ್ಮಾ[4](ನುಂ)[4] ಧರಿಪುದು ಧರಿಸದಿರ್ದ[5](ಡದು)[5]ಭಂಗಂ ೬೬

ಸುರೆಯಂ ಕುಡಿದವ ಕದ್ದವ
ಗುರುತಲ್ಪಗ ಬ್ರಹ್ಮಹತ್ಯಗೈದವ ಭಸಿತವ
ಧರಿಸಿಯೆ ಹರನಂ ಧ್ಯಾನಿಸು
ತುರುಭಸ್ಮಶಯ್ಯೆಯೊಳ್ಮಲಗೆ ಮೋಕ್ಷಿತರಹರುಂ ೬೭

ವ॥ ಕಾರಣವೆಂಬ ಮುನೀಶಂಗಂ ಎರಡು ವೇಳೆ ಪ್ರಾಣವಿತ್ತುದೀ ಭಸ್ಮಂ ಅಗಸ್ತ್ಯಂಮೊದಲಾದ ಋಷಿಗಳಂ ಇಂದ್ರಮೊದಲಾದ ಸುರರ್ಗಂ ಕ್ರಿಯಾಯುವಿತ್ತುದೀ ಭಸ್ಮಂ ದಧೀಚಿಮುನೀಶನ ವಿಭೂತಿಯಕೊಂಡದೊಳ್ ಸತ್ತ ಶುನಿಗಂ ಗಣೇಶ್ವರತ್ವ ವಿತ್ತುದೀ ಭಸ್ಮಂ ಸಾಸಲಭೈರವೇಶ್ವರಂಗಂ ಅಂಗುಲಿಗಳನಿತ್ತುದೀ ಭಸ್ಮಂ ತ್ರಿಸಹಸ್ರ ವಿಪ್ರರಂ ಕೊಂದವನಿತೆಗಂ ರುದ್ರಲೋಕವಿತ್ತುದೀ ಭಸ್ಮಂ.

ಸಾಕ್ಷಿ. ಪ್ರಾತಃಕಾಲೇ ಚ ಮಧ್ಯಾಹ್ನೇ ಸಾಯಾಹ್ನೇ ಚ ತ್ರಿಪುಂಡ್ರಕಂ
ಕಥಂಚಿತ್ ಭಸ್ಮನಂ ಕುರ್ಯಾತ್ಸರುದ್ರೋ ನಾತ್ರಸಂಶಯಃ

ಎಂಬುದರಿಂ ತ್ರಿಕಾಲದಲ್ಲಿ ಧರಿಸಿದವರಂ ರುದ್ರರಂ ಮಾಳ್ಪುದೀ ಭಸ್ಮಂ.

ಸಾಕ್ಷಿ. ದುಶ್ಶೀಲಶೀಲಯುಕ್ತೋ ವಾ ಯೋವಾ ಕೋವಾಪ್ಯಲಕ್ಷಣಂ
ಭೂತಿಶಾಸನಸಂಯುಕ್ತಾ ಪೂಜ್ಯೋ ವಾ ರಾಜಪುತ್ರವತ್

ಎಂದುದಾಗಿ ದುಶ್ಶೀಲಸುಶೀಲನಾದೊಡಂ ಭೂತಿಧಾರಣವಿರ್ದಾತನಂ ರಾಜಪುತ್ರನಂತೆ ಪೂಜ್ಯನಮಾಡುವುದೀಭಸ್ಮಂ ಚಂದನಯುಕ್ತದಿಂ ಧರಿಸೆ ಜ್ಞಾನಿಯಂ ಮಾಡುವುದೀ ಭಸ್ಮಂ ಚೂರ್ಣಮಿಶ್ರಣದಿಂ ಧರಿಸೆ ವೈಶ್ಯವನೀವುದೀ ಭಸ್ಮಂ ರಕ್ತಚಂದನದೊಳ್ ಧರಿಸೆ ಜಯುವನೀವುದೀ ಭಸ್ಮಂ ಸರ್ವಶುದ್ಧಿಯ ಮಾಡುವುದೀ ಭಸ್ಮಂ.

---

1. ನಾರೊರ್ವನಾ (ಅಇ). 2. ಧರಿಸಿದನದಾನಂಗೆಯ್ಯಲ್ಲಾದ (ಅಇ). 3. ದೋ (ಅಇ). 4. ನೆ (ಅಇ). 5. ಡೇ (ಅಇ).

ಸಾಕ್ಷಿ: ದುಸ್ಸ್ವಪ್ನದುರ್ಜನಸ್ಪರ್ಶೇ ವ್ಯಾಕುಲೇಷು ಚ ಸರ್ವಶಃ
ಭಸ್ಮಸ್ನಾನಾದ್ವಿಶುದ್ಧಸ್ಯ ರಕ್ಷಣಾರ್ಥಮಿಹೋಚ್ಯತೇ

ಇಂತೆಂದುದಾಗಿ ಸ್ನಾನಂಗೆಯ್ವುದಂ ಮತ್ತಂ ಕ್ರಿಮಿಕೇಶಪಿಪೀಲಿಕಗಳಿರ್ದ ದ್ರವ್ಯವಂ ಶುದ್ಧಿಯಂ ಮಾಡುವುದೀ ಭಸ್ಮಂ.

ಸಾಕ್ಷಿ: ಭೋಜನೇಚೋದಕೇಚೈವ ಪಾಣ್ಯಂಗಾದಿ ನಖಾನಿ ಚ
ಮತ್ಕುಣಾಮಕ್ಷಿಕಾಚೈವ ಕ್ರಿಮಿಕೇಶಾಪಿಪೀಲಿಕಾಃ
ದಧಿಕ್ಷೀರಘೃತೇಚೈವ ದ್ರವ್ಯೇತೇ ಚ ವಿಶೇಷತಃ
ಭಸ್ಮಮುಖ್ಯತ್ಕುಣಾತ್ ಶುದ್ಧಿಂ ಸರ್ವದಾ ಮುನಿಪುಂಗವಃ

ಎಂಬುದರಿಂ ಭೋಜನೋದಕ ದಧಿಕ್ಷೀರಘೃತಾದಿಗಳಲ್ಲಿ ಕ್ರಿಮಿಕೀಟನೊಣತಿಗುಣಿ ಮೊದಲಾದವುಂ ಬಿದ್ದರೆ ತೆಗೆದುಂ ವಿಭೂತಿಯತಳಿದೊಡೆ ಶುದ್ಧವಹುದುಂ ಮತ್ತಂ ಎಲ್ಲಿರ್ದುದಾದಡಂ ಧರಿಸಿದಾತನಂ ಮೋಕ್ಷವನ್ಯೆದಿಸುವುದುಂ.

ಸಾಕ್ಷಿ: ವಿಣ್ಮೂತ್ರಸಂಕುಲೇವಾಪಿ ಮಾಂಸಶೋಣಿತಸಂಕುಲೇ
ಶ್ಮಶಾನೇ ಚ ಮೃತಿಂಪ್ರಾಪ್ಯ ಮ್ಲೇಚ್ಛದಗ್ಧೋಪಿ ವಾನರಃ
ತ್ರಿಪುಂಡ್ರಂ ಧಾರಯೇತ್ ಪೂತೇ ಶಿವಲೋಕೇ ಮಹೀಯತೇ

ಎಂಬುದರಿಂ ಮಾಂಸಶೋಣಿತಾದಿಗಳಲ್ಲಿರ್ದುದನಾದಡೆಯುಂ ಧರಿಸಲ್ಕೆಯ್ವಲ್ಯವೀವುದೀ ಭಸ್ಮಂ ಮತ್ತಂ ಬ್ರಾಹ್ಮಣಕ್ಷತ್ರಿಯವೈಶ್ಯಶೂದ್ರರ್ ಧರಿಸುವೊಡಂ ಅಗ್ನಿಹೋತ್ರದಲ್ಲಿಯ ಭಸ್ಮಂ ಗೃಹಸ್ಥರ್ಗಂ ಕಲ್ಪೋಕ್ತಪ್ರಕಾರದಿಂದಾದ ಭಸ್ಮಂ ವಿವಾಹಕಾಲದಡಿಗೆಯ ಭಸ್ಮಂ ಬ್ರಹ್ಮಚಾರಿಗಳಿಗಂ ಆ ಉಪಾಸನದಲ್ಲಿಯದಾಯಿತ್ತಾದಡಂ ಸಮಿದೆಗಳ ದೆಸೆಯಿಂದಾದ ಭಸ್ಮಂ ಶೂದ್ರರ್ಗಂ [1](ವೇದಶಾ)[1]ಸ್ತ್ರಜ್ಞರ ಗೃಹದಡಿಗೆಯ ದೆಸೆಯ ಭಸ್ಮಂ ಮಿಕ್ಕಾದವರುಗಳ್ಗಂ ಕಾಡುಗಿಚ್ಚಿಂದಾದಭಸ್ಮಂ ಸಂನ್ಯಾಸಿಗಳಿಗಂ ಎಲ್ಲಾ ತಾವಿನಲ್ಲಿರ್ದ ಭಸ್ಮಂ ಯೋಗೀಶ್ವರರಿಗಂ ಶ್ಮಶಾನದಲ್ಲಿರ್ದ ಭಸ್ಮವುಂ ಯೋಗಿಗಳ್ಗಂ ಸಮಸ್ತರಿಗಂ ದೇವಾಲಯದಲ್ಲಿರ್ದ ಭಸ್ಮಂ ಮತ್ತಾ ಗೃಹಸ್ಥಂಗಂ ಕಲ್ಪೋಕ್ತಭಸಿತಕ್ರಮಂ ಕಲ್ಪ ಅನುಕಲ್ಪ ಉಪಕಲ್ಪ ಅಕಲ್ಪವೆಂದು ನಾಲ್ತೆರಂ ಕಲ್ಪಕಂ ಕ್ರಮಂ ಹರನ ಸದ್ಯೋಜಾತಮುಖದಿಂ ಪೃಥ್ವಿ ಪೃಥ್ವಿಯಿಂ ನಿವೃತ್ತಿಕಲೆ[2](ನಿವೃತ್ತಿ)[2]ಕಲೆಯಿಂ ಕಪಿಲವರ್ಣದ ನಂ[3](ದೆ)[3] [4](ಅ)[4] ನಂ[5](ದೆಯ)[5] ಗೋಮಯಂ ಆ ಗೋಮಯದಿಂದೈಶ್ವರ್ಯಕಾರಣ

---

1. ವೋಪದಸಾ (ಅ೩). 2. x (ಅ೩). 3. ದಿ (ಅ೩). 4. x (ಅ೩).
5. ದಿಯುಂ (ಅ೩).

ಭೂತಿಯೆನಿಸಿಕ್ಕುಂ ನಿತ್ಯಕಾರ್ಯಂಗಳಲ್ಲಿಯೂ ವಿಭೂತಿಯಂ ಧರಿಸುವುದುಂ ವಾಮದೇವ ಮುಖದಿಂದುದಕಂ ಅದರಿಂ ಪ್ರತಿಷ್ಠೆ ಕಲೆ ಆಕಲೆಯಿಂ ಕೃಷ್ಣವರ್ಣದ ಭದ್ರೆ ಭದ್ರೆಯಿಂ ಗೋಮಯವದರಿಂ ತೇಜಸ್ಸಂ ಮಾಡುವ ಕಾರಣಂ ಭಸಿತವೆನಿಸಿತ್ತುಂ ನೈಮಿತ್ತ ಕಾರ್ಯಂಗಳಲ್ಲಿ ಈ ಭಸಿತಮಂ ಧರಿಸುವುದುಂ ಅಘೋರಮುಖದದೆಸೆಯಿಂದಗ್ನಿ ಅಗ್ನಿಯಿಂ ವಿದ್ಯೆಯೆಂಬ ಕಲೆ ಆ ಕಲೆಯಿಂ ರಕ್ತವರ್ಣದಸುರಭಿಯುದರಗೋಮಯವದರಿಂ ಸರ್ವ ಪಾತಕವಂಕೆಡಿಸಲೋಸ್ಕರಂ ಜನಿಸಿದುದರಿಂ ಭಸ್ಮವಾಯಿತ್ತು ಪ್ರಾಯಶ್ಚಿತ್ತಂಗಳಲ್ಲಿ ಈಭಸ್ಮವಂ ಧರಿಸುವುದುಂ ತತ್ಪುರುಷಮುಖದಿಂ ವಾಯುವದರಿಂ ಶಾಂತಿಕಲೆ ಶಾಂತಿ ಕಲೆಯಿಂ ಶ್ವೇತವರ್ಣದ ಸುಶೀಲೆ ಸುಶೀಲೆಯಿಂ ಗೋಮಯವದರಿಂ ಆಪತ್ತುಗಳ ನಿಳಿಯನೂಂಕುವುದಕ್ಕಾಗಿ ಪುಟ್ಟಿದುದರಿಂ ಕ್ಷಾರವೆನಿಸಿತ್ತು ಮೋಕ್ಷಕಾರ್ಯಂಗಳಲ್ಲಿಯೂ ಕ್ಷಾರವಂ ಧರಿಸುವುದುಂ ಈಶಾನಮುಖದತ್ತಣಿಂದಾಕಾಶ ಆಕಾಶದಿಂ ಶಾಂತ್ಯತೀತಕಲೆ ಆಕಲೆಯಿಂ ಚಿತ್ರವರ್ಣದ ಸುಮನೆಯೆಂಬ ಧೇನು ಆಧೇನುವಿಂ ಗೋಮಯವದರಿಂ ಭೂತಾಪಸ್ಮಾರಾದಿಭಯಂಗಳ ಬಿಡಿಸಲೋಸ್ಕರಂ ಪುಟ್ಟಿದುದರಿಂ ರಕ್ಷೆಯೆನಿಸಿತ್ತುಂ ಮಂತ್ರಕಾರ್ಯಂಗಳಲ್ಲಿ ಈ ರಕ್ಷೆಯಂ ಧರಿಸುವುದುಂ ಮತ್ತಂ ಈ ಪಂಚಧೇನುಗಳ ವಂಶದೊಳ್ಪುಟ್ಟಿದ ಪಶುಗಳೊಳುಂ ಉರುಗುಶರೀರದಾಕಳಂ ಹುಚ್ಚುಗೊಂಡುದಂ ಬಹಳ ಮೇಹ ಕೊಂಬುದಂ ಮೂತೆಯಾದುದಂ ಚಾಡ್ಯಂಗೊಂಡುದಂ ಶಿವಚಿಹ್ನೆಗಳಲ್ಲ ದಿರ್ದುದಂ ಕರುಸತ್ತು ಮತ್ತೊಂದು ಕರುಗೊಳಿಸಿದುದಂ ಒತ್ತೆಯನಿರಿಸಿದುದಂ ಬಡವಾದುದಂ ಕರುಸತ್ತುದಂ ಗೊಡ್ಡಾದುದಂ ಅಂಗಹೀನವಾದುದಂ ಬಳಲಿದುದಂ ಹಾಲಿಲ್ಲದುದಂ ಮುಪ್ಪಾದಿಂದ್ರಿಯವಾದುದಂ ಹುಲ್ಲಮೇಯದುದಂ ರೋಗ ಗೊಂಡಿರ್ದುದಂ ಇವು ಮುಂತಾದುದಂ ಬಿಟ್ಟುಂ ಒಳ್ಳಿತ್ತಹಧೇನುವಿನಲ್ಲಿಕ್ಕಿದ ಗೋಮಯದೊಳಂ ಒಳ್ಳಿತಲ್ಲದುದಂ ಭೂಮಿ ಸೋಂಕಿದುದಂ ಅಳ್ಳಕನಾದುದಂ ದುರ್ಗಂಧವಾದುದುಂ ಹಳದಾದುದಂ ಮಾಂಸವೆರಸಿ ಬಂದುದಂ ಬಿಟ್ಟು ಪ್ರಶಸ್ತ ಗೋಮಯವಂ ಭೂಮಿ ಸೋಂಕದಂತೆ ಕಂಜದಳದೊಳಂ ಓಂ ನಂ ಹ್ರಾಂ ಸದ್ಯೋಜಾತಾಯನಮಃ ಎಂಬುತಾಂತುಕೊಂಡುಂ ತಳಮೇಲಣಗೋಮಯಮಂ ಬಿಸುಟುಂ ನಡುವಣಸೆಗಣಮಂ ಓಂ ಮಾಂ ಹ್ರೀಂ ವಾಮದೇವಾನಮಃ ಎಂಬುತಂ ಪಿಂಡಂಗಳಂ ಮಾಡಿ ಓಂ ಶಿಂ ಹ್ರುಂ ಅಘೋರಾಯನಮಃ ಎಂದು ಒಣಗಿಸಿ ಕೊಂಡದೊಳ್ಮಡಗಿ ಹತ್ತಿಯ ಹರಳಿಂದಲಾದಗ್ನಿಯಂ ಹತ್ತಿಸಿ ಆ ಉರಿವಗ್ನಿಮಧ್ಯದಲ್ಲಿ ಕಲಾವಶಕದೊಡನೆ ಕೂಡಿದ ರುದ್ರನ ಧ್ಯಾನಿಸುವುದುಂ.

ಸಾಕ್ಷಿ: ಅಗ್ನಿಜ್ವಾಲಾವೃತಂ ರುದ್ರಂ ವಹ್ನಿಮಂಡಲಮಧ್ಯಗಂ
ಧ್ಯಾಯೇತ್ಕಲಾದಶಯುಕ್ತಂ ಶಕ್ತಿಸ್ವಸ್ತಿಕಧಾರಣಂ

ಎಂದುದಾಗಿ ಧ್ಯಾನಿಸಿದ ಬಳಿಕ್ಕಂ ಓಂ ವಾಂ ಹ್ರೈಂ ತತ್ಪುರುಷಾಯನಮಃ ಎಂಬುತಂ ದಗ್ಧಮಂ ಮಾಡುವುದುಂ ಓಂ ಹ್ರಾಂ ಈಶಾನಾಯನಮಃ ಎಂಬುತ ತೆಗೆದುಕೊಂಬು

ವುದುಂ ಇದೀಗ ಕಲ್ಪವೆನಿಸಿತ್ತುಂ ಮತ್ತಂ ಮನದಲ್ಲಿಯ ಶುಷ್ಕ ಚೂರ್ಣವಂ ಪಡಿಸಿಮು ದನುಕಲ್ಪವೆನಿಸಿತ್ತುಂ ಮತ್ತಂ ಉದ್ಯಾನವನದಲ್ಲಿಯ ಕರೀಷಂಗಳಂ ಚೂರ್ಣಂ ಮಾಡಿ ವಸ್ತ್ರದಲ್ಲಿ ಶೋಧಿಸಿ ಗೋಮೂತ್ರದಲ್ಲಿ ಮುದ್ದೆಯಂ ಮಾಡಿ ಒಣಗಿಸಿ ಸುಟ್ಟುದು ಸಕಲ್ಪವೆನಿಸಿತ್ತುಂ ಅನ್ಯರು ಮಾಡಿದಂತಾದುದಕಲ್ಪವೆನಿಸಿತ್ತುಂ ಇಂತೀ ಚತುರ್ವಿಧ ಕಲ್ಪಂಗಳೊಳಗೊಂದನಾದಡುಂ ತೆಗೆದುಕೊಂಡುಂ ಸುವರ್ಣರಜತ ತಾಮ್ರಶೈಲ ಮೃಣ್ಮಯ ಪಾತ್ರೆಗಳೊಳಾಯಿತ್ತಾದಡಂ ಚೂತ ಬಿಲ್ವಾಶೋಕ ದಾರು ಮುಂತಾದವ ರಿಂದಾದನೇಕ ಚಿತ್ರಪತ್ರಪಾತ್ರೆಗಳೊಳ್ಸುವರ್ಣವಂ ಬೈಚಿಡುವಂತಿಟ್ಟುಕೊಂಡುಂ ಚಂದ ನಾಗರು ಕರ್ಪೂರ ಕೇತಕಿ ಪಾದರಿ ಬಕುಳ ಕುಸುಮಾದಿಗಳಿಂ ಪರಿಮಳವಂ ಕಟ್ಟಿರಿಸಿ ಕೊಂಡಾ ವಿಭೂತಿಯಿಂದಾವಗಂ ಸ್ನಾನವನಾಚರಿಸುವುದುಂ ೬೮

ಕಂ. ಮೃದುಮಧುರಗದ್ಯುಗೆಯೊ-
ಳ್ಮೃದದಿಂ ಕುಳ್ಳಿರ್ದು ಗುರುಪದವ ಧ್ಯಾನಿಸುತ್ತದ
ಮೃದುಹಸ್ತದಿ ಪಿಡಿದುಂ
ಹುದುಗೊಳಿಸುವುದೆಡೆದ ಹಸ್ತದೊಳಗಾ ಕ್ಷಣದೊಳ್ ೬೯

ದಕ್ಷಿಣಕರವಂ ಮುಚ್ಚಿಷ-
ಡಾಕ್ಷರವಂ ಏಳುವೇಳೆಯುಚ್ಚರಿಸಿಯು ತಾಂ
ತ್ರ್ಯಕ್ಷನ ಭಸಿತವಿದೆಂದುಂ
ಲಕ್ಷಿಸಿ ಮತ್ತದನು ಬಲದ ಕರದಿಂ ಪಿಡಿದುಂ ೭೦

ಆಚಾರಲಿಂಗಾಯನಮೆಂ
ದ್ದಾಚಮಗೋಚರನ ನೆನೆದು ಪದವೆರಡರೊಳಂ
ಸೇಚನಗೊಂಡುಂ ನಾಭಿಯೊಳ್
ಪ್ರಾಚುರಗುರುಲಿಂಗಾಯನಮೆಂದುಂ ತಿಳಿದುಂ ೭೧

ಶಿವಲಿಂಗಾಯನಮೆಂದುಂ
ಜವದಿಂ ಹೃದಯದಿ ಬದಿರ್ಚಿ ಮುಖಮಂಡಲದೊಳ-
ಗವಿರಳಚರಲಿಂಗಾಯನ-
ಮವಿಧಿಸಿ ಸೇಕಂಗೆಯ್ದುದಾ ಕ್ಷಣವಂ ಕ್ಷಣದೊಳ್ ೭೨

ಪ್ರಸಾದಲಿಂಗಯ ನಮೆಂದು
ಶೀರ್ಷದೊಳ್ತಳಿದು ಮಹಾಲಿಂಗಾಯನಮೆಂ
ದೀಶಾನನ ನೆನೆದು ಶಿಖಿಯೊ-
ಳಾಸೇಚನಮಾಡಿ ಬಳಿಕಲಲ್ಲಿಯ ಶಿಖಿಯೊಳ್ ೭೩

ಮಹಾಲಿಂಗಾಯನಮೆಂದಾ-
ಮಹಶಿಖಿಯಲ್ಲಿ ಪ್ರಸಾದಲಿಂಗಾಯನಮೆಂ
ದಿಹ ಮೂರ್ಧ್ನಿಯೊಳುಂ ಭಸಿತವ
ವಿಹರಿಸಿ ಚರಲಿಂಗಾಯನಮೆಂದಾಸ್ಯದೊಳುಂ ೭೪

ಶಿವಲಿಂಗಾಯನಮೆಂದುದ
ವಿವರಿಸಿ ಹೃದಯದಿ ಗುರುಲಿಂಗಾಯನಮೆಂದುಂ
ಅವಿತತನಾಭಿಯೊಳಾಚಾ-
ರವ ನೆನೆದು ಪದದ್ವಯದೊಳ್ ಮೊದಲೊಳ್ ತಿಳಿದುಂ ೭೫

ಹೃದಯ ಮುಖ ಮಸ್ತಕ ಶಿಖಿಯೊ-
ಳ್ಪದನಾಭಿಗಳಲ್ಲಿ ಮರಳಿ ಮಂತ್ರಸಮೇತಂ
ಒದವಿದ ಕ್ರಮದಿಂ ಧೂಳಿಸಿ
ಮುದದಿಂ ಭಸ್ಮದೊಳು ಸ್ನಾನಗೆಯ್ವುದು ಬಳಿಕಂ ೭೬

ಜಲದಲ್ಲಿ ಮಾಳ್ಪ ಸ್ನಾನಕೆ
ಗೆಲವಹುದೀ ಭಸ್ಮಸ್ನಾನವೆಂಬುದರಿಂದಂ
ನಲವಿಂ ಭಸ್ಮಸ್ನಾನವ
ಸುಲಭನೆ ಕೇಳದನಜಪ್ರಧರಿಸುವ ತೆರನಂ ೭೭

ಉ. ಮಾ. ವೃ.

ವಾಮದ ಹಸ್ತದಲ್ಲಿ ಸಿತಭಸ್ಮವನಿಟ್ಟದ ಮುಚ್ಚಿಕೊಂಡುವುಂ
ಪ್ರೇಮದಿ ಮೂಲಮಂತ್ರವನು ರುದ್ರರ ಸಂಖ್ಯೆಯೊಳಾಭಿಮಂತ್ರಿ[1](ಸು-
ತ್ರಾ)[1]ಮಳಮೇಘಪುಷ್ಪದೊಳು ಮರ್ದಿಸಿ ಮಧ್ಯಪವಿತ್ರವಂಗುಟ-
ಪ್ರಾಮಣಿಕಾಂಗುಲಂಗಳೊಳು ಲೋಮವಿಲೋಮದೆ ಪುಂಡ್ರಗೆಯ್ವುದುಂ ೭೮

ಅಂಗುಲಿಷಟ್ಕದಾಯತದ ಮಾನವನಾವಡುಮಲ್ಲದಿರ್ದೊಡುಂ
ವೆಗ್ಗಳಮಾನನಾದಡೆಯುಂ ನೇತ್ರಯುಗಂಗಳ ಮಾನದಲ್ಲಿಯು-
ತ್ತುಂಗತ್ರಿಪುಂಡ್ರವಂ ಪಣೆಯೊಳಾದರದಿಂ ಶಿವಮಂತ್ರಯುಕ್ತದಿಂ
ಹಿಂಗದೆ ಧಾರಣಂಗಳನು ಮಾಡಿದ ಮರ್ತ್ಯನೆ ರುದ್ರನೆಂದನುಂ ೭೯

1. ಸೂರಾ (ಅಇ).

ಮಸ್ತಕ ಭಾಳ ಕಂಧರ ಭುಜದ್ವಯ ಬಾಹುಯುಗಂ ಪ್ರಕೋಷ್ಠಯು-
ಗ್ಮಸ್ತುತಪೃಷ್ಠ ನಾಭಿ ಹೃದಿಮುಖ್ಯದ ಠಾವುಗಳಲ್ಲಿ ಪುಂಡ್ರಮಂ
ವಿಸ್ತರದಿಂದೆ ಧಾರಣವ ಮಾಡಿದಡಾತನೆ ರುದ್ರನೆಂ[1](ದು ತಾಂ)[1]
ಆಸ್ತಿಕಬುದ್ಧಿಯಿಂದೆ ಗುರು ಪೇಳಿದ ಭೂತಿಯ ಧಾರಿಪಂಗಮಂ ೮೦

ಭೂತಿಯುನಲ್ಪಮಾತ್ರವನು ಪೊಕ್ಕಡನೇಕದ ಕೋಟಿನಾರಕಂ
ಭೂತಿಯನೊಕ್ಕ ಮಾರುತಿಯ ಸುಂಗಿದನೊರ್ವ ಮುನೀಶನಾಕ್ಷಣಂ
ಭೂತಿಯ ಚೆಲ್ಲಿದಾಕ್ಷಣ ವಶಿಷ್ಠನ ಪುತ್ರರು ಸತ್ತರಾ ಕ್ಷಣಂ
ಭೂತಿಯ ಪ್ರೀತಿಯುಳ್ಳವನೆಯಾಯುಷವುಳ್ಳವನೆಂಪನಾತನೊಳ್ ೮೧

ಭೂತಿಯುತಾಂಗನಾದವನು ಶಂಕರನಕ್ಷಿಮಣಿವ್ರಜಂಗಳಂ
ಪ್ರೀತಿತನಾಗಿ ತಾಳ್ವುದುಮವಂ ಧರಿಸಲ್ಕುರುತಲ್ಪಮದ್ಯಪಾ-
ಯೊತ್ತಿತಭ್ರೂಣಹತ್ಯೆ ಪಿತೃಮಾತೃವಿಘಾತಕಮುಖ್ಯದೋಷಗಳ್
ಕಾತರದಿಂದಲೋಡುವುವು ಶಂಭುವಿನಕ್ಷಿಯ ರೌದ್ರವೆಂತುಟೋ ೮೨

ಪೂರ್ವದೊಳೀಶತ್ರೈಪುರವ ಸಂಹರಕಾಲದಿ ಮೂರು ಕಂಗಳಿಂ
ಒರ್ವನೆ ನೋಡಲಾ ಕ್ಷಣ ತ್ರಿನೇತ್ರವೊಸರ್ದು ಕೃಪೀಟಬಿಂದುಗಳ್
ಉರ್ವಿಗೆ ಬಿದ್ದುಮುರ್ವಿಜಗಳಾಗಿಯುವೆಲ್ಲವು ಹೂತು ಕಾತುವುಂ
ಕೊರ್ವಿ ಫಲಂಗಳಾಗಿ ಮಣಿಯಾದವು ಶಂಕರನಕ್ಷಿನಾಮದಿಂ ೮೩

ಈಶನ ಸೂರ್ಯನೇತ್ರದೊಳು ಕಾಪಿಲವರ್ಣದಿ ಪನ್ನೆರಳ್ತೆರಂ
ಈಶನ ಚಂದ್ರಲೋಚನದಿ ಧಾವಳವರ್ಣದಿ ಷೋಡಶೋದ್ಭವಂ
ಈಶನ ವಹ್ನಿನೇತ್ರದೊಳು ಕಪ್ಪಿನ ಬಣ್ಣದ ಹತ್ತು ಭೇದವಿಂ
ತೀಶನೊಳಷ್ಟ ತ್ರಿಂಶತವಿಭೇದಗಳಾದವು ರುದ್ರನಕ್ಷಿಗಳ್ ೮೪

ಕಂ. ಪೆಸರ್ಗೊಂಡಡೆ ದಶಶತಗೋ
ವಿಸರದ ದಾನದ ಫಲ ದರ್ಶನ ಪರುಶನದಿಂ
ದೆಸೆವಿಮ್ಮಡಿ ಮೂವಡಿ ತಾಂ
ಪಸರಿಸುತಿಹುದೆಂದು ಸಿದ್ಧನುಸುರಿದನಾಗಂ ೮೫

1. ದಾಸ್ತಿಕ (ಅ೩).

ವಾನರ ಕುಕ್ಕುಟಗಳ ಸ-
ನ್ಮಾನದೆ ಧರಿಸಲ್ಕೆ ಮೋಕ್ಷಪದವಾಯ್ತಿದರಿಂ
[1](ಮಾನವ ಧರಿಸೆ ಕೇವಲ)[1]ವ-
ನೂನಪದವಪ್ಪುದೆಂಬುದದು ತಾಂ ಪುಸಿಯೇ ೮೬

ಅಚ್ಛಿದ್ರಕನಕಪ್ರಖ್ಯದ
ನಿಚ್ಚಟದಾತನ್ಯದ್ಮುತದೊಳುತ್ತಮವಾದಾ
ಸ್ವಚ್ಛ ರುದ್ರಾಕ್ಷೆಗಳ ನಿ-
ರ್ಮಚ್ಚರದಿಂದಂಗದಲ್ಲಿ ಧರಿಸುವುದೆಂದಂ ೮೭

ವ॥ ಪದಿನಾಲ್ಕುಮುಖದ ರುದ್ರಾಕ್ಷೆಗಳೊಳುಂ ಏಕಾಸ್ಯದೇಕ ರುದ್ರಾಕ್ಷೆಯಂ ಶಿಖಿಯೊಳುಂ ದ್ವಾತ್ರಿಂಶತ್‌ದ್ವಾದಶವಕ್ತ್ರಂಗಳುಳ್ಳ ಮೂರು ರುದ್ರಾಕ್ಷೆಗಳಂ ಶಿರಸ್ಸಿನೊಳುಂ ಏಕಾದಶಾನನಗಳುಳ್ಳ ಷಟ್ತ್ರಿಶತ್‌ರುದ್ರಾಕ್ಷಿಗಳಂ ಮೂರ್ಧ್ನಿಯೊಳುಂ ಪಂಚಾದಶ ಸಪ್ತಚತುರ್ವಕ್ತ್ರಂಗಳನುಳ್ಳ ಆ ರುದ್ರಾಕ್ಷೆಗಳಂ ಕರ್ಣದ್ವಯದೊಳಂ ಷಡಷ್ಟವದನಂಗಳನುಳ್ಳ ದ್ವಾತ್ರಿಂಶದ್‌ರುದ್ರಾಕ್ಷೆಗಳಂ ಕಂಧರದೊಳಂ ಚತುರ್ವಕ್ತ್ರಂಗಳನುಳ್ಳ ಐವತ್ತು ರುದ್ರಾಕ್ಷಂಗಳಂ ವಕ್ಷಸ್ಥಲದೊಳಂ ತ್ರಯೋದಶಾಸ್ಯಗಳನುಳ್ಳ ಷೋಡಶರುದ್ರಾಕ್ಷೆಗಳಂ ಬಾಹುಯುಗ್ಮಂಗಳೊಳಂ ನವಾನನಗಳುಳ್ಳ ದ್ವಾದಶರುದ್ರಾಕ್ಷಂಗಳಂ ಮಣಿಬಂಧದ್ವಯಂಗಳೊಳುಂ ಚತುರ್ದಶವಕ್ತ್ರಂಗಳನುಳ್ಳ ಶತಾಷ್ಟರುದ್ರಾಕ್ಷಂಗಳಂ ಯಜ್ಞೋಪವೀತಮಾಗಿ ಧರಿಸುವುದುಂ ಮತ್ತಂ ರಕ್ತವರ್ಣಸಮ್ಮಿಶ್ರ ಕೀಟಕಪ್ರವಿವರ್ಜಿತ ರುದ್ರಾಕ್ಷಗಳನುಂ ಪೃಷ್ಟಪೃಷ್ಟ ವಕ್ತ್ರ ವಕ್ತ್ರ ಸಂಯುಕ್ತಮಾಗಿ ಗೋಪುಚ್ಛವಲಯಾಂಕಿತವಾಗಿ ರಾಜಿಸುವ ಜಪಸರಮುಖ್ಯವಾದೆಲ್ಲವಂ ಧರಿಸುವುದುಂ ಮತ್ತಂ ಬ್ರಾಹ್ಮಣ ಗೃಹಸ್ಥ ವಾನಪ್ರಸ್ಥ ಯತಿಮೊದಲಾದ ಕ್ರಮದಿಂ ಧರಿಸಿ ಹೆಜ್ಜೆಯಿಡಲ್ ಹೆಜ್ಜೆಹೆಜ್ಜೆಗೆ ಅಶ್ವಮೇಧಶತಯಾಗದಫಲವಂ ಪಡೆವರುಂ ನಡೆವುತ್ತಂ ಇರುತ್ತಂ ಭಕ್ಷಿಸುತ್ತಂ ನಿದ್ರೆಗೆಯ್ವುತುಂ ಕಣ್ಣಂ ಬಿಡುತ್ತುಂ ಕಣ್ಮುಚ್ಚುತ್ತುಂ ಆವಾಗಂ ರುದ್ರಾಕ್ಷೆಯ ಧರಿಸಿರ್ದಡಂ ರುದ್ರನಾಗಿ ರುದ್ರಸಾಯುಜ್ಯನೆಯ್ದುತಿಹನುಂ ಮಾಂಸವತಿನುತಿರ್ದಡಂ ಸುರೆಯ ಸೇವಿಸುತಿರ್ದಡಂ ಅನ್ಯಜಾತಿಸಂಗವ ಮಾಡುತಿರ್ದಡಂ ಒಂದು ರುದ್ರಾಕ್ಷೆ ಶಿರದೊಳಿರೆ ಪಾಪಂಗಳ್‌ಮುಟ್ಟಲಮ್ಮವು.

ಸಾಕ್ಷಿ: ಖಾದನ್ಮಾಂಸಂ ಪಿಬೇನ್ಮದ್ಯಂ ಸಂಗಚ್ಛನ್ ಅನ್ಯಜಾತಿಭಿಃ
ಸದ್ಯೋಭವತಿ ಪೂತಾತ್ಮಾ ರುದ್ರಾಕ್ಷಿಶ್ಶಿರಸಿ ಸ್ಥಿತೇ

ಎಂದುದಾಗಿ ಒಂದನಾದಡುಂ ಧರಿಸುವುದುಂ ೮೮

1. ಮಾನವರ್ಧ್ವರಿಸೆ ಕೈವಾಲ್ಯ (ಅಇ).

ಈ ರುದ್ರಾಕ್ಷೆಯ ನೀರಿಂ
ಚಾರಿಸಿಯದ ನಿಧನಕಾಲದೊಳಗಂ ಕುಡಿದಂ
ಮಾರಾರಿಯನೆನೆಯಲ್ಕವ
ಸಾರುವ ಸಾಯುಜ್ಯಪದವನತಿಸಂಭ್ರಮದಿಂ ೮೯

ಪಶುಗಳ ಕಾಯ್ದಾದಡೆಯುಂ
ಪಸರಿಪ ರುದ್ರಾಕ್ಷೆಗಳನುಮಾರ್ಜಿಸಿ ಧರಿಸುವುದಂ
ತೊಸವಲ್ಲದಿರಲು ಮೃಣ್ಮಯ
ವೇಷದ ಶಿವಾಕ್ಷಿಗಳ ತಾಳ್ದುದದು ಸೌಖ್ಯಕರಂ ೯೦

ಭಸಿತರುದ್ರಾಕ್ಷೆಧಾರಣ
ವೆಸೆದಾ ಕ್ಷಣಮೂಲಮಂತ್ರಪಂ ಜಪಿಸುವುದುಂ
ಪಶುಪತಿರೂಪಿನ ಮಂತ್ರದ
ಹೆಸರಂ ನೆನೆವಾಗ ದುರಿತವೋಡುತ್ತಿರ್ಕುಂ ೯೧

ವ॥ ವಿದಿಲಾಪುರದರಸು ದಾಸಾರ್ಹರಾಜನ ದೋಷಕಾಕಂಗಳಂ ಕರ್ಣದೊಳ್ ಹಾರಿಸಿತೀ ಮಂತ್ರಂ ಸಾನಂದನಿಂದೆಮನಗರಮಂ ಪಾಳ್ಗ್ಗೆಯ್ದುದೀ ಮಂತ್ರಂ ರುದ್ರ ಪಶುಪತಿಯ ಮನದಾಪತ್ತಿಂಗಾದುದೀ ಮಂತ್ರಂ ನಮಃಶಿವಾಯಮುರುಘರ ಶರೀರವ ನೊಳಕೊಂಡುದೀ ಮಂತ್ರಂ ಆಳ್ವರನಿಂ ಕಲ್ಲ ಗೋವಿಂಗಂ ಚೈತನ್ಯವಿತ್ತುದೀ ಮಂತ್ರಂ ಸತ್ಯೇಂದ್ರಚೋಳನ ಮಂತ್ರಿ ಮಂತ್ರಲಕ್ಷ್ಮ ಸಂದಾಯಿ ತಿರುಕೊಳವಿನಾಚಿ ಶಂಕರ ಮಿತವಚನ ಸತ್ಯೇಂದ್ರಚೋಳರ ಶಿರಸ್ಸುಗಳೊಳ್ ಚೈತನ್ಯವಾಗಿ ವೇಧಿಸಿ ತನ್ನನಾಮ ವಂ ತಾನೆಯುಚ್ಚರಿಸಿತೀ ಮಂತ್ರಂ ಶಿವಯೆಂದು ಸ್ನಾನಂ ಗೈದನಳಕೂಬರನಂ ಶರಣ ಪದಕ್ಕೆ ತಂದುದೀ ಮತ್ರಂ

ಸಾಕ್ಷಿ: ಸರ್ವದಾ ಸರ್ವಕಾರ್ಯೇಷು ಕ್ಷುತಪ್ರಸ್ಖಲಿತೇಷು ಚಾ-
ಪಶ್ಯಂ ನಮಃಶಿವಾಯೇತಿ ಶಿವಮುಕ್ತ್ವಾ ಶಿವಂ ವ್ರಜೇತ್

ಎಂಬುಪರಿಂ ಸರ್ವಪ್ರಯತ್ನಂಗಳಲ್ಲಿ ನೆನೆದಾತನಂ ಶಿವನಂ ಮಾಡುವುದೀ ಮಂತ್ರಂ

ಸಾಕ್ಷಿ: ಓಂಕಾರಪೂರ್ವಮಂತ್ರೋಽಯಂ ಪಂಚಾಕ್ಷರಮಯಃಪರಃ
ಶಿವಾಗಮೇಷು ವೇದೇಷು ಷಡಕ್ಷರ ಇತಿ ಸ್ಮೃತಃ

ಎಂಬುದಾಗಿ ಓಂಕಾರಪೂರ್ವಕವಾದುದರಿಂ ಷಡಕ್ಷರವೆನಿಸುವುದೀ ಮಂತ್ರಂ ಅಜಗಣ್ಣನ ಮನೋಮೂರ್ತಿಯಾದುದೀ ಮಂತ್ರಂ ಮತ್ತಂ ಕಾಮವರದ ಸಿರಿಗಿರಿಭಕ್ತಂ ಪಂಚಾ

ಕ್ಷರಿಯ ಚಿಟ್ಟನುಂ ನಿಂದಕರಂ ತೂಗೆ ಗೆಲಿಸಿತೀ ಮಂತ್ರಂ ಕಂಚಿಯ ಲಿಂಗಣ್ಣಾಂ ಪಂಚಾಕ್ಷರಿಯ ಚಿಟ್ಟಂ ನಿಂದಕರಂ ತೂಗೆ ಗೆಲಿಸಿತೀ ಮಂತ್ರಂ ಸಪ್ತಕೋಟಿಮಂತ್ರಂಗಳ್ಗಂ ಅನೇಕಕೋಟಿ ಉಪಮಂತ್ರಂಗಳ್ಗಂ ಮಾತೃಸ್ಥಾನವಾದುದೀ ಮಂತ್ರಂ ೯೨

ಕಂ. ಪಂಚಕ ಜ್ಞಾನೇಂದ್ರಿಯಗಳ
ಪಂಚಕತನ್ಮಾತ್ರೆ ಪಂಚಕರ್ಮೇಂದ್ರಿಯದಿಂ
ಪಂಚಕಬುದ್ಧೀಂದ್ರಿಯಗಳ
ಪಂಚಾಕ್ಷರವ್ಯಾಪ್ತಿಯಿಂದಲಿಹುದೀ ಮಂತ್ರಂ ೯೩

ಷಡ್ವರ್ಗಂ ಷಡ್ಭ್ರಮೆಗಳು
ಷಡೂರ್ಮೆಗಳ್ಮುಖ್ಯವಾಗಿ ತೋರುವುವೆಲ್ಲಂ
ಷಡ್ವಿಧಮಂತ್ರಗಳಾಗಿಯೆ
ಷಡ್ವಿಧರೂಪಿಂದಲೀ ಷಡಕ್ಷರವೆಸೆಗುಂ ೯೪

ಶಾ. ವಿ. ವೃ.
ಓಂಕಾರಾಂಶವೆಪಂಚಭೂತದಶಸಂಖ್ಯೇಂದ್ರಿಯಂ ನಾಕ್ಷರಂ
ಮತ್ಕಾರಂಮನಪಂಚಕಂ ಮಿಸುಪ ಶೀಕಾರಾಂಶ ಜೀವೇಶ್ವರಂ
ವಾಕಾರಂ ದಶವಾಯುವಾಯುಕಾರಂತುತಾಂ ತ್ರೈಗುಣಂ
ಸಾಕಲ್ಯಾಂಶದ ಮಂತ್ರಮಿಂತು ದೇಹಾಂತರ್ಯದೊಳ್ ಇರ್ಕುಗುಂ* ೯೫

[1](ನಾ)[1]ವರ್ಣಂ ರುಧಿರಂ ಮಕಾರವದುಮಾಂಸಂ[2](ಶೀಕಾರ)[2][3](ಮೇಧಸ್ಸುವುಂ)[3]
ವಾವರ್ಣಂ ಮಿಸುಪಾಸ್ಥಿ ಸುಸ್ಥಿರಯಕಾರಂ ಮಜ್ಜೆ ಓಂಕಾರತಾಂ
ಸವ್ಯತ್ವಾಚಿಷಡಾತ್ಮಿಕಾಂಶಿಕವೆಯಾಗಿರ್ಪೀ ಷಡಕ್ಷರ್ಯವುಂ
ಭಾವಪ್ರೇಮದಿ ನೋಡಿ ಜಾನಿಸುವ ಮರ್ತ್ಯಂ ಮೋಕ್ಷಕಾಂತಾಧವಂ ೯೬

ವ॥ ರತ್ನಕಂಬಲದ ಗದ್ದುಗೆಯಿಂದೀಶಾನ್ಯಮುಖವಾಗಿ ಕುಳಿತುಂ ಭಸ್ಮವೆಂಬ ವಿಭೂತಿಯುಂ ಧರಿಸಿಕೊಂಡುಂ ಶಬಲವರ್ಣರುದ್ರಾಕ್ಷಂಗಳಂ ಧರಿಸಿ ಪಂಚವಿಂಶತಿ

---

* ಈ ಪದ್ಯ ಮೂಲದಲ್ಲಿ ಬಹಳ ತಪ್ಪಿನಿಂದ ಕೂಡಿ ಹೀಗಿದೆ.
ಓಂಕಾರಾಂಶವೆ ಪಂಚಭೂತ ದಶಸಿಂದ್ರ್ಯಂಗಸ್ನಕಾರಂ ವೃಥಂ ! ಮತ್ಕಾರಂ ಮನ
ಪಂಚಕಂ ಮಿಸುಪಶಿಕಾರಾಂ ಸ ಜೀವೇಶ್ವರಂ ।
ವಾಕಾರಂದಶವಾಯ್ಯುಕಾರ ತ್ರಿಗುಣಂ ಮತ್ತೀಷಡಕ್ಷರ್ಯವುಂ । ಸಾಕಲ್ಯಾಂಶವು
ನಿಷ್ಕಲಾಂಶ ಸಹದೇಹಾಂತರ್ಯದಿಂದಿರ್ಕುಗುಂ ॥

1. ನಾಂ (ಅಇ). 2. ಶೀಕ್ಯಾಂತಾಂ (ಅಇ). 3. ಮೇದಸ್ಸುಂ (ಅಇ).

ರುದ್ರಾಕ್ಷಮಾಲಿಕೆಯಿಂದೀಶಾನಮೂರ್ತಿಧ್ಯಾನದಿಂ ಸರ್ವಫಲಪದಕಾಮ್ಯದಿಂ ಅಂಗುಷ್ಠದಿಂ ಮಾಳ್ಪದಶಲಕ್ಷ ಜಪವಂ ಉಲ್ಲಂಘಿಸಿಯುಂ ಮತ್ತಂ ಶ್ವೇತಕಪ್ಪಡದ ಮೃದುಗದ್ದುಗೆಯಿಂ ಪಶ್ಚಿಮಮುಖವಾಗಿ ಕುಳಿತುಂ ರಕ್ಷೆಯೆಂಬ ವಿಭೂತಿಧಾರಕನಾಗಿ ಪವಿತ್ರಾಂಗುಲಿಯಿಂದಷ್ಟವಿಂಶತಿಜಪಮಾಲಿಕೆಯಿಂ ತ್ರಿಸಹಸ್ರಜಪವಂ ಸದ್ಯೋಜಾತಮೂರ್ತಿಧ್ಯಾನದಿಂ ಶಾಂತಿಯಂ ಕುರಿತುಮಾಳ್ಪ ಜಪವಂ ನಿರಾಕರಿಸಿ ಕೆಂಪಿನ ಸೀರೆಗದ್ದುಗೆಯಿಂ ತೆಂಕಮುಖವಾಗಿ ಕುಳಿತುಂ ವಿಭೂತಿಧಾರಕನಾಗಿ ರತ್ನವರ್ಣದ ರುದ್ರಾಕ್ಷೆಯಂ ಧರಿಸಿಕೊಂಡುಂ ತದ್ರುದ್ರಾಕ್ಷೆಯ ಸಪ್ತವಿಂಶತಿಮಣಿಸರಮಧ್ಯಾಂಗುಲಿಯಿಂ ಷಟ್ಸಹಸ್ರಜಪವಂ ಐಶ್ವರ್ಯಮಂ ಕುರಿತುಂ ತತ್ಪುರುಷಮೂರ್ತಿಧ್ಯಾನದಿಂ ಮಾಳ್ಪುದನಲ್ಲಿಂದುಂ ಕೃಷ್ಣವರ್ಣದವಸನಗದ್ದುಗೆಯಿಂದುತ್ತರಾನನವಾಗಿ ಕುಳಿತುಂ ಕ್ಷಾರವೆಂಬ ವಿಭೂತಿಯಂ ಧರಿಸಿ ಕೃಷ್ಣರುದ್ರಾಕ್ಷಧಾರಣನಾಗಿ ತದ್ರುದ್ರಾಕ್ಷಪಂಚಪಂಚದಶಮಣಿಯ ಜಪಮಾಲಿಕೆಯಂ ತರ್ಜನ್ಯಾಂಗುಲಿ[1](ಯಿಂ)[1] ಶತ್ರುನಿಬರ್ಹಣಂಮಾಳ್ಪ ಅಘೋರಮೂರ್ತಿ ಧ್ಯಾನದ ದಶಸಹಸ್ರದ ಜಪವಂಜರೆದುಂ ಪೀತವರ್ಣದ ರುದ್ರಾಕ್ಷಂಗಳಂತಾಳ್ದು ತದ್ರುದ್ರಾಕ್ಷದ್ವಾತ್ರಿಂಶನ್ಮಣಿಯಿಂ ಕನಿಷ್ಠಾಂಗುಲಿಯೊಳ್[2](ವಶ್ಯಮಂ)[2] ಕುರಿತುಂ ವಾಮದೇವಮೂರ್ತಿಧ್ಯಾನವಂ ಮಾಳ್ಪ ದ್ವಾದಶಸಹಸ್ರಜಪವಂ ಜರೆದುಂ ಮತ್ತಂ ಷಟ್ಕರ್ಮಸಿದ್ಧಿಗಳನೀವ ದಶಲಕ್ಷಜಪವಂ ತೃಣೀಕರಿಸಿ ದೀರ್ಘಾಯುವೀವ ವಿಂಶತಿಲಕ್ಷ ಜಪವಂ ಛಡ್ಡಿಗೊಳ್ಳದೆ ಬಹುಸಾಮರ್ಥ್ಯವೀವ ಚತುರ್ವಿಂಶತಿಲಕ್ಷಜಪವಂ ಹವಣಿಸದೆ ಕಾರಣೈಶ್ವರ್ಯವ ಐವತ್ತುಲಕ್ಷಜಪವಂ ಹಳಿದುಂ ಬ್ರಹ್ಮಪದವೀವ ಅರವತ್ತುಲಕ್ಷ ಜಪವಂ ಒಲ್ಲದೆ ವಿಷ್ಣುಪದವೀವಯೆಂಬತ್ತುಲಕ್ಷಜಪವಂ ಜಾನಿಸದೆ ರುದ್ರಪದವೀವ ದಶಲಕ್ಷಜಪವಂ ಬಯಸದೆ ವಿಶೇಷ ವೀರಂ ಮಾಳ್ಪ ಜಪವೆಂತೆಂದೊಡೆ ೯೭

ಕಂ. ಷಟ್‌ಸ್ಥಲಬ್ರಹ್ಮದ ರೂಪಿಣಿ
ಷಟ್‌ಸ್ಥಲಭಕ್ತಿಪ್ರಸಾದ ಪರಮಸುಖೈಕದ
ಷಟ್‌ಸ್ಥಲಮಂತ್ರದ ದೇವತೆ
ಷಟ್ಸ್‌ಸ್ಥಲರೂಪೇನ[3](ಮೋ)[3]ಸ್ತುತೆಂದು ಬಿನ್ನಪಗೈದುಂ ೯೮

ವದನೋಂಕಾರನಮಸ್ಕರ
ಮೊದವಿದ ಭುಜದ್ವಯೇ ಮಧ್ಯದೇಹಶಿಕಾರೇ
ಮುದವಯ[4](ಕಾರ)[4]ಪದದ್ವಯೆ
ಹುದುಗಿರು ಮಂತ್ರಾತ್ಮೆಯೆನ್ನದೇಹದೊಳೆಂದುಂ ೯೯

---

1. ಯಂ (ಅಇ). 2. ಪಶ್ಯಮಂ (ಅಇ). 3. ಮ (ಅಇ). 4. ಸ್ಕಾರ (ಅಇ).

ಮೃಡನೆಂಬ ವಹ್ನಿಯೊಳಗಂ
ಷಡಕ್ಷರನಾಮಾಹುತಿಷಟ್ಸಹಸ್ರವನುಂ
ಎಡೆವಿಡದೆ ಬೇಳುವೆನಗ-
ಜಡೆಪ್ರಸನ್ನಳಾಗೆಂದು ಬಿನ್ನಪಗೈದುಂ ೧೦೦

* ಪ್ರಾಣಾಯಾಮವನುಂ ತಾಂ
ಜ್ಞಾಣಿಂದಂ ಮಾಡಿ ಜಪವ ಮಾಳ್ಪುದು ಬಳಿಕಂ
ಸ್ಥಾಣುವ ಸ್ಮರಿಪ ಬಗೆ ತಾಂ
ವಾಣ್ಯೋಪಾಂ[1](ತಮಾನಸದೀ ತ್ರೈಭೇದಂ)[1] ೧೦೧

ಉ. ಮಾ. ವೃ.
ಅಕ್ಷರಪಂಜ್ತ್ತಿಯಿಂ [2](ನಿ)[2]ಕಟ ಮರ್ತ್ಯರು ಕೇಳುವ ಶಬ್ದವಾಚಕಂ
ಅಕ್ಷರವಂ ಸಮೀಪದರು ಕೇಳದೊಲುಚ್ಚರಿಸಲ್ಲುಪಾಂಶಿಕಂ
ಅಕ್ಷರವಾರುವಂ ರಸನೆಕಂಪನ ವಿಲ್ಲದೆಯಂತರಂಗದೊಳ್
ಲಕ್ಷಿಸಿ ಬುದ್ಧಿಯಿಂ ನೆನೆ[3](ಯಲಂತದು)[3]ಜಾಪ್ಯವಿದೆಂದನಾತನೊಳ್ ೧೦೨

ಯಾಗವು ಮುಖ್ಯವಾದ ಘನಕರ್ಮಗಳೆಲ್ಲ ವ್ರತಂಗಳೆಲ್ಲವುಂ
ಯೋಗವಿಧಾನಮುಖ್ಯಗಳು ವಾಚಕ ಜಾಪ್ಯದ ಷೋಡಶಾಂಶದೊ-
ಳ್ತಾಗಿದ[4](ಡಂತು)[4] ಹೋಲವವು ತಜ್ಜಪಕೋಟಿವುಪಾಸವೆಗ್ಗಳಂ
ಲಾಗಿನುಪಾಸಕೋಟಿಜಪಕಗ್ಗಳ ಮಾನಸಮಂತ್ರವೆಂದನುಂ ೧೦೩

ಸಂತಸಮಾಧಿಯಲ್ಲಿರುಹ ಜೀವನ ಘ್ರಾಣದಿ ಬಾಹ್ಯದೇಹದೊ-
ಳ್ತ್ರಾಂತಿದಯಿಂದ್ರಿಯಂಗಳೊಳು ತೋರದೆ ಶಾಂಭವ ಜಾಪ್ಯಕರ್ಮದೊಳ್
ಭಕ್ತಿತನಾ[5]ಗಿ(ತಾಂ)[5] ಚರಣ[6](ದಲ್ಲಿರೆ)[6]ಯಾತಗೆಯಾ ಚರಾಹ್ವಯಾ
ಖ್ಯಾತಿಯ ಲಿಂಗದಾದಿಜಪಭಕ್ತನದೆಂದನು ಸಿದ್ಧ ಶಿಷ್ಯನೊಳ್ ೧೦೪

ಅಕ್ಷರರೂಪವನ್ನಿಯತ ತನ್ನಯ ಸೃಷ್ಟಿಕೆಯಾದ ಭಕ್ತಿಯೊಳ್
ಲಕ್ಷಿಸಿ ತನ್ನ ಜಿಹ್ವೆಯೊಳು ಮಂತ್ರಿಸಿ ಗೌರವಲಿಂಗ[7](ಮಂ ಸದಾ)[7]
[8](ಅಕ್ಷಯ ಮಾಡುವಾ ದ್ವಿತಯ ಜಾಪ್ಯವೆ ತಾನದು ಶಿಷ್ಯವಾಗಿರಲ್)[8]
ಮೋಕ್ಷವಿಚಾರಪಾರ[9](ವು)[9] ಮಹೇಶನದೆಂದನೆತೀಶ ಭೃತ್ಯನೊಳ್ ೧೦೫

---

1. ಸಮ್ಯಾನಸಪಿತ್ರ್ಯಭೇದಂ (ಇ). * ಇಲ್ಲಿಗೆ 'ಅ' ಪ್ರತಿ ಲೋಪವಾಗಿದೆ. 2. ಗಿ (ಇ).
3. ಯೊಳೂನ (ಇ). 4. ಡೊಂದ (ಇ). 5. ಗಿ (ಇ). 6 ದೆಣ್ದರ್ದಣೆ (ಇ).
7. ವಂ (ಇ). 8. ಅಕ್ಷಯ ಮಾಡುವೆರಡ್ನೆಯ ಜಾಪ್ಯವದುಶಿಷ್ಯನಿ (ಇ). 9. ಮಾ (ಇ).

ಕಂ. ಅನುಮಿಷ ಚಕ್ಷುಗಳಿಂದಂ
ಘನಲಿಂಗವನವಧಾನಭಕ್ತಿಯಿಂ ನೋಡುವು
ದನು[1]ವಿಂ[1] ಶಿವಲಿಂಗದ ಮೂ-
ರನೆಯಜ[2](ಪಂ)[2] ಪ್ರಾಸಾದಿಯದೆಂದನೆಶೀಶಂ ೧೦೬

ಸಾರವಿರಾಜತ್ವಗಿಂದ್ರಿಯ
[3](ಸೇರಿದ)[3]ವಧಾನಭಕ್ತಿಯಿಂ ಸ್ಪರ್ಶಿಸುವ ವಿ-
ಚಾರವೆ ಜಂಗಮಲಿಂಗಾ
ಚಾರಿಯ ಜಪವಿದು ಪ್ರಾಣಲಿಂಗಿಯದೆಂದಂ ೧೦೭

ಶ್ರೋತ್ರೇಂದ್ರಿಯ ಮುಖದತ್ತಂ
ಮಂತ್ರೋಚ್ಚಾರಣದರ್ಪಿತದ ಪ್ರಾಸಾದ-
ಕ್ಕಂತೃಪ್ತಿಸಿದುದ್ದೈದನೆ ಜಪ
ತಾಂತ್ರಿಕ ಶಾರಣದೆಂದು ನುಡಿದಂ ಮುದದೊಳ್ ೧೦೮

ಸಮರಸದ್ಭಕ್ತಿಯೊಳುಂ
ಅಮರಿಸಿದ ಮನದೊಳಗೆ ನೆನೆವ ಮಂತ್ರಾರ್ಥವು ತಾಂ
ಅವುಮ ಮಹಾಲಿಂಗಕ್ಕಂ
ವಿಮುಳಿನದಿದಾರನೆಯು ಜಪವೈಕ್ಯನದೆಂದಂ ೧೦೯

ವ|| ಷಡಕ್ಷರಿಯೆ ಶಬ್ದಸ್ಪರ್ಶರೂಪುರಸಗಂಧತೃಪ್ತಿಸ್ವರೂಪಾಗಿ ಆಚಾರದಿ ಮಹಾಲಿಂಗಾಂತದೊಳ್ ವೇದಿಸಿಯೊಳಹೊರಗಭಿನ್ನತೆಯಿಂದಂ ಲಿಂಗಸಂಯೋಗವೇ ಮಂತ್ರ ಮಂತ್ರವೆ ಲಿಂಗಂ.

ಸಾಕ್ಷಿ: ಲಿಂಗಗರ್ಭೋದ್ಭವೇನ್ಮಂತ್ರಂ ಮಂತ್ರಗರ್ಭೋದ್ಭವೇಚ್ಛಿವಃ
ಲಿಂಗಮಂತ್ರ ತಯೋರೈಕ್ಯಂ ವೀರಶೈವಮಿತಿಸ್ಮೃತಃ

ವ|| ಎಂದುದಾಗಿ ಇಂತೊಂದರೊಳಗೊಂದುದ್ಭವವೊಂದರೊಳಗೊಂದೈಕ್ಯ ತಾವಪ್ಪುದೇ ಸಮಾಧಿಜಾಪ್ಯ ಇಂತೀಜಪವನಾರುಲಕ್ಷವನಾದಡುಂ ಅರವತ್ತು ಸಹಸ್ರವನಾದಡುಂ ಆರುಸಾವಿರವನಾದಡುಂ ಕ್ರಮತಪ್ಪದೆ ಮಾಡಿ ಮತ್ತಂ ಷಟ್‌ಸ್ಥಲಬ್ರಹ್ಮಿಗಳಂ ಆರುನೂರನಾದಡುಂ ಅರವತ್ತನಾದಡುಂ ಷಡ್ವಿಧವನಾದಡುಂ ಒರ್ವರನಾದಡುಂ

1. ವಿಂತಿ (ಇ). 2. ಸವದು (ಇ). 3. ಸರಿದ್ವ (ಇ).

ಸ್ವರ್ಣವಸ್ತ್ರಾಲಂಕಾರಮಾಲ್ಯಾನುಲೇಪನಂಗಳಿಂ ಪೂಜಿಸಿ ಭೋಜನವಂ ಮಾಡಿಸು
ವುದುಂ ಮತ್ತಂ ಶಕ್ತ್ಯನುಸಾರವಾಗಿ ನಿತ್ಯಕೃತ್ಯವನಾಚರಿಸುವುದುಂ ವಿಭೂತಿರುದ್ರಾಕ್ಷಿ
ಪಂಚಾಕ್ಷರಿಯುಂ ಅನವರತಂ ಬಿಡದಿರೆಂದು ಡಕ್ಕೆಯ ಬ್ರಹ್ಮದೇವಯ್ಯಂ ಶರಣರ್ಗಂ
ಸಾರುತಿರ್ಪಂ ೧೧೦

ಕಂ. ಅಳಿಕದೊಳಂ ತ್ರೈಪುಂಡ್ರಂ
ಗಳದೊಳು ರುದ್ರಾಕ್ಷೆ ವಕ್ತ್ರದೊಳು ಷಡಕ್ಷರ
ವಳಿಕಾಕ್ಷನ ಪೂಜೆಗೆ ತಾಂ
ನೆಳಸಿರ್ಪನೆ ಭಕ್ತನೆಂದನತಿ ಹರುಷದೊಳುಂ ೧೧೧

ಚಂ.
ಶಿವಕಥೆಕೇಳ್ವುದುಂ ಹರನಕೀರ್ತಿಪುದುಂ ಸ್ಮರಿ[1](ಸುತ್ತ)[1]ಮಂಘ್ರಿಯಂ
ಸವಿನಯದಿಂದೆ ಸೇವಿಪುದು ಪೂಜಿಪುದೊಂದಿಪುದಾತ್ಮ[2](ದರ್ಪಣಂ)[2]
ಅವಿರತಮಾಳ್ಪುದುಂ ಹಿತವನಪ್ಪುದು ಕಿಂಕರಭಾವದಿಂತಿಹಾ
ನವವಿಧಭಕ್ತಿಯೊ[3](ಳ್ ಶಕುತನಪ್ಪನೆ ಭಕ್ತ)[3] ವಿಮುಕ್ತನೆಂದನುಂ ೧೧೨

ಅಧಮನೊಳಾದಡುತ್ತಮನೊಳಾದಡು ಶಂಕರಭಕ್ತಿಯಿರ್ದಡಂ
ತೊದವಿದ ಭಕ್ತನಪ್ಪನವ ಮ್ಲೇಚ್ಛನೊಳಾದಡು ಲಿಂಗನೈಷ್ಠಿಕಾ
ಮುದವಹ ಭಕ್ತಿಯಿರ್ದಡವ ವಿಪ್ರನಿಗಿಂದ ವಿಶಿಷ್ಟನಪ್ಪನಂ
ತಿದು ಶಿವಭಕ್ತಿಯಿಲ್ಲದಿಹವಿಪ್ರನೆ ನೀಚನಿಗಿಂತ ಕಷ್ಟವುಂ ೧೧೩

ಅಶನ ಪಿಪಾಸೆ ಶೋಕ ಜನನಂ ಮರಣಂಗಳು ಮೋಹ[4](ವಿಂತಿವಂ)[4]
ಎನೆವತರಂಗಯೂಥಘನತಾಪಯುತತ್ರಯವೆಂಬ ಗ್ರಾಹಗ-
ಳ್ನಸರಿಸಿ ದಾಂಟಬಾರದಿ[5]ಹ[5] ಸಂಸೃತಿಸಿಂಧುವ ಭಕ್ತಿ ತೆಪ್ಪದಿಂ
ನಸಿನದಿ ದಾಂಟಲುಳ್ಳವನೆ ಭಕ್ತನು ಭಾವಜವೈರಿಯೆಂದನುಂ ೧೧೪

ಗುರುಚರನಾದಡುಂ ಪರಮಭಕ್ತಿಯೆ ಬೇಕು ಶಿವಂಗೆಯಾದೊಡುಂ
ಉರುತರ ಭಕ್ತಿಬೇಕು ಶಿವಭಕ್ತನಿಗಾದಡೆ ಭಕ್ತಿಮುಖ್ಯವುಂ
ಪುರಹರ ಭಕ್ತಿಯಿಲ್ಲವನ ಗೇಹದೊಳನ್ನ ಜಲಾದಿಯಾದವಂ
ಸರಿಸದಿ ಕೊಂಡೊಡಾತಗಹುದಕ್ಷಯನಾರಕವೆಂದ ಪುತ್ರನೊಳ್ ೧೧೫

---

1. ಸೂದು (ಇ). 2. ಪಾದರ್ಪಣವ (ಇ). 3. ಳು ಶಕ್ತನೆ ಭಕ್ತ (ಇ).
4. ಷಡೂರ್ಮಿಯಿಂ (ಇ). 5. ಹಂಸ (ಇ).

ಶಿವಶಿವ ಭಕ್ತಿಯಿಲ್ಲದನ ಗೇಹಸವಿಾಪದಿ ನಿಲ್ಲದಾಗದುಂ
ಅವನ ಸಪಂತಿಯುಲ್ಲುಣಲು ದೋಷಮದಾತನಕೂಡೆ ಮಾತಸುಂ
ಸವಿನಯದಿಂದಲಾಡುವ ಮಹಾದುರಿತಂಗಳು ಸೇರುಗಾಕ್ಷಣಂ
ಭವಹರಭಕ್ತಿಯೋಡುವುದುಮಾತನ ಸಂಗವ ಮಾಡಿದಾತಗಂ ೧೧೬

ಅಂಕುರದಿಂದೆ ಬೀಜವದು ಬೀಜದೊಳಂಕುರ ಪುಟ್ಟದಂತೆಯುಂ
ಶಂಕಿಸದಾ ಪ್ರಸಾದವದರಿಂ ಶಿವಭಕ್ತಿಸಭಕ್ತಿಯಲ್ಲಿಯೀ
ಶಾಂಕಪ್ರಸಾದಪುಟ್ಟತಿದುಮಾ ಶಿವಭಕ್ತಿ ಮನುಷ್ಯಯೂಥಕಂ
ಜೋಕೆಯು ಮುಕ್ತಿದಾಯಿಂಸುಹುದೆಂದನು ಸಿದ್ಧರದೇವನರ್ತಿಯಿಂ ೧೧೭

ಕಂ. ಬಹುಜ[1](ನ್ಮಂಗಳ)[1] ಶುದ್ಧತೆ
ಯಹುದೆನಿಸಿದ ಶ್ರೌತಸ್ಮಾರ್ತವನುವರ್ತಿಗಳಾ
ಗಿಹ ವಿರತಿ ವಿಧಾನ್ವಿತರಿಂ
ಗ[2](ಹಿ)[2]ಕಟಕಂ ಪ್ರಾಸನ್ನತೆಯಾಗುತ್ತಿಹನುಂ ೧೧೮

ಹರಪ್ರಾಸನ್ನತೆಯಾಗು-
ತ್ತಿರಲಾತಂ ಮುಕ್ತನೆಯಾದನು ಮತ್ತಮ ಶಶಿ
ಧರನ ಸಮವಾದಾತನಾ
ಗುರುತರದಿಂದಿರ್ಪನೆಂದೆತೀಶಂ ನುಡಿದಂ ೧೧೯

ಶಿವಭಾವದೊಳ್[3](ಪ್ಪ)[3] ಭಾವ
ದಿ ವಿಧಿಯಿಂದಿರಲವಗೆ ಜನ್ಮತ್ರಯದಿಂದತ್ತಂ
ಸವಿನಯಮುಕ್ತಿ[4]ಯ(ದ)[4]ಹುದುಂ
ಭವಬಾಧೆಯ ಯೋನಿಯಂತ್ರಪೀಡೆಗಳಿಲ್ಲಂ ೧೨೦

ವ || ಲಿಂಗ ಸಹ ಬಳಿವಿಡಿದ್ಯೈದುವ ಭಕ್ತಿಸೇವೆಯದುಂ ಆಸೇವೆ ಮನೋವಾಕ್ಕಾಯಗಳಿಂ ಮೂಡೆರನಾಗಿಹುದುಂ ಶಿವಮೂರ್ತಿಮುಖ್ಯವಾದಧ್ಯಾನಂ ಮಾನಸ ಸೇವೆಯಪ್ಪುದುಂ ಪೂಜೆಮುಂತಾದ ಕ್ರೀ ಕಾಯಕವೆನಿಸುವುದುಂ ಮತ್ತಂ ತಿಲಕುಸುಮ ಪೂಜೆಯಿಂ ಬ್ರಹ್ಮಹತ್ಯೆಯುಂ ದ್ರೋಣಪುಷ್ಪದಿಂ ಗೋವಧೆಯಂ ಆರಗ್ವಧೆಯಿಂ ಮಾತೃಹತ್ಯಮುಂ ದೂರ್ವೆಯಿಂ ಪಿತೃಹತ್ಯಮುಂ ಅರ್ಕಕುಸುಮದಿಂ ಪರದಾರಾಸಂಗ ದೋಷಮುಂ ಅಶೋಕೆಯಿಂ ಲಿಂಗಚ್ಛೇದದೋಷಮುಂ ಕೇತಕಿಯಿಂ ಅಪವಾದ

1. ಲ್ಮಂಗಳಿ (ಇ). 2. ಹು (ಇ). 3. ಪ್ಲ (ಇ). 4. ಯ (ಇ).

ದೋಷಮಂ ಕುಂಕುಮದಿಂ ಗ್ರಹಪೀಡಾಮೃಪಸ್ರವಮಂ ಕೆಡಿಸುವುದೀ ಶಿವಾರ್ಚನಂ ಶ್ವೇತಂಗಂ ಮಲೆಯ ರಾಜಂಗಂ ಗೆಲವಂ ಕೊಟ್ಟುದೀ ಶಿವಾರ್ಚನಂ ಮತ್ತಂ ಭೂತ ಕಾಯನಲ್ಲೆಂದು ಮಂತ್ರಕಾಯನೆನಿಸಿ ಪ್ರಸಾದವಂ ಸ್ವೀಕರಿಸಿ ವಾಯುಪ್ರಾಣಿ ಯೆಂಬುದ ತಿರಸ್ಕರಿಸಿ ಲಿಂಗಪ್ರಾಣಿಯೆನಿಸಿದ ಭಕ್ತಂ ಅಂಗನ್ಯಾಸವೆಂಬ ಭಿನ್ನದೃಷ್ಟಿ ಗಳಂ ಪರಿಹರಿಸಿ

ಸಾಕ್ಷಿ: ಕಾಯಶುದ್ಧಾತ್ಮಶುದ್ಧಿಶ್ಚ ಅಂಗನ್ಯಾಸಕರಸ್ಯಚ
ಸರ್ವಶುದ್ಧಿರ್ಭವೇನ್ನಿತ್ಯಂ ಲಿಂಗಧಾರಣಮೇವಚ

ಎಂದುದಾಗಿ ಮುನ್ನವೇಶುದ್ಧನಾದುದಂ ಅರಿತು ನ್ಯಾಸಂಗಳೆಂಬುವಂ ತಿರಸ್ಕರಿಸಿ ಮತ್ತಂ ಪುಷ್ಪನಕ್ಷತ್ರದ ಕಾಲದ ಪೂಜೆಯಿಂ ಪಡೆವ ಶಿವಸಾಲೋಕ್ಯ ಸಾಮೀಪ್ಯಂ ಅರುಣೋದಯ ವೇಳೆಯ ಪೂಜೆಯಿಂ ಪಡೆವ ಬ್ರಹ್ಮಪದವಂ ರವಿಯುದಯದ ನೇಮ ದಿಂ ಪಡೆವ ಸೂರ್ಯಪದಮಂ ಸೂರ್ಯೋದಯದ ಮೇಲಣ ಘಟಿಕಾತ್ರಯದ ಪೂಜೆಯಿಂ ಪಡೆವ ಕುಬೇರನ ಪದವಂ ನಾಲ್ಕೈದಾರೇಳ್ ಗಳಿಗೆಯ ಪೂಜೆಯಿಂ ಪಡೆವ ಶಿವ ಸಾಲೋಕ್ಯಪದಮಂ ಮಧ್ಯಾಹ್ನನೇಮದಿಂ ಪಡೆ[1](ದಮುಗ್ಧಘಟಪೂರಶತ)[1] ಸಾಹಸ್ರಪಶು ಗಳನಿತ್ತಫಲಮಂ ಅಸ್ತಮಯಕಾಲದ ಶಿವಪೂಜೆಯಿಂ ಪಡೆವ ಕೋಟಿಕನ್ನಿಕೆಯರ ನಿತ್ತಫಲಮಂ ಮತ್ತಂ ಕಾಮಿಸಿಮಾಡುವ ಫಲಪದಂಗಳಂ ಕಾಲನೇಮಂಗಳಂ ಬಯ ಸದೆ ಆವಾಗಂ ಲಿಂಗದೊಳು ಚಿತ್ತವನಚ್ಚೊತ್ತಿ ನಿತ್ಯತ್ರಿಕಾಲಾರ್ಚನೆಯಂ ಬಿಡದೆ ಮಾಡುವ ಕನ್ನದವೀರಬ್ರಹ್ಮಯ್ಯನಂತೆ ಸೋಮಧಾರಿಯ ನಿತ್ಯನೇಮಾರ್ಚನೆಯಂ ನಡೆಸುವುದು ಪಲ್ಲಿಕಾಮಯ್ಯನಂತೆ ಶಿವಾರ್ಚನೆಯಲ್ಲಿ ಪ್ರೀತಮತನಾದ ಸಕಲೇಶ್ವರ ಮಾದರಸರಂತೆ ಶಿವಪೂಜೆಯಿಂ ಜನ್ಮಜರಾಮರಣಮಂ ಗೆಲ್ದ ಶಿವಕುಮಾರಯ್ಯನಂತೆ ಶಿವಾರ್ಚನೆಯಂ ಗೆಯ್ವುದುಂ ಮತ್ತಂ ಸರ್ಪಂ ವೃಶ್ಚಿಕವ್ಯಾಘ್ರಕ್ರೂರಮೃಗತಸ್ಕರರಾಜಾದಿ ಭಯಂಗಳ್ ತೋರಿಪಡಂ ಹರಣಕ್ಕೆ ಭಯವಾದಡಂ ಶಿವಾರ್ಚನೆಯಿಂದಿರ್ದ ಗದ್ದುಗೆ ಯಿಂದೇಳಲ್ಲಾರದುಂ ಇಂತೀ ಶಿವಾರ್ಚನಾತಾತ್ಪರ್ಯವೇ ಭಕ್ತಿ ಮತ್ತಂ ತನ್ನೊಳಿಲ್ಲರ ನೆಲ್ಲರತನ್ನೊಳಂ ಭಿನ್ನವಿಲ್ಲದೆ ಕಂಡು ಜೀವರಂ ತನ್ನೊಳೀಕ್ಷಿಪ ದೃಷ್ಟಿ ತಾಂ ಭಕ್ತಿ ಯದುಂ ತನ್ನೊಳ್ ಶಿವನಂ ಶಿವನೊಳ್ತನ್ನಂ ಅಭಿನ್ನದಿಂ ಕಂಡೀಶಂಗಂ ತನ್ನನೊಪ್ಪಿಸಿ ತಾನಿಲ್ಲದ ನಿಜಸುಖ ತಾಂ ಶಾಂಭವಭಕ್ತಿಯದುಂ ಹೊಲ್ಲಹರೊಳ್ ಮೋಸಂಗಳಿರಲವ ರೊಳ್ಳುಗುಣವೊಂದಂ ನೋಡಿಯೆಲ್ಲರೊಳದನಾಡಿಯವಂಗಂ ಹಿತಂಗೈವುದೇಭಕ್ತಿಯದುಂ ಇಂತಪ್ಪ ಭಕ್ತಿಯನುಳ್ಳಾತಂ ಭಕ್ತಂ ಮತ್ತಂ ನುಡಿಶಿವತತ್ತ್ವ ನಡೆಸಿದ್ಧಾಂತವಾಗದೆ ನುಡಿಗಳೊಳೊಂದು ನಡೆಗಳೊಳೊಂದು ತೊಡರ್ದಿರೆ ವೀರಮಾಹೇಶ್ವರರೊಳ್ ದೂಷಣೆ

1. ದುಗ್ಧಘಟಪೂರಶತ (ಇ).

ಗೊಳಗಪ್ಪನಾ ಭಕ್ತಂ ಮನದೊಳೊಂದು ಮಾತಿನೊಳೊಂದು ತನುವಿನೊಳೊಂದಿರೆ ಬಿಸುಗೆಂಬರಾತಸಂ ಭಕ್ತರುಂ ನೆನೆದಂತೆ ನುಡಿವ ನುಡಿದಂತೆ ನಡೆವ ಭಕ್ತನಂ ಶಿವ ನೆಂಬರಾ ಭಕ್ತರುಂ ಅರಿವು ಮುಟ್ಟದ ಕ್ರೀಗಳನೇಕಕೋಟಿಗಳ ಮಾಡಿದಡಂ ಗುರಿಯ ತಾಗದ ಕೋಲನೆಷ್ಟನಾದಡೆಚ್ಚಂತಿಹುದುಂ ಪುತ್ರಂ ಧನವನಿತೆಸುತರಪ್ರೇಮಮಂ ಭಕ್ತಿಯನುಂ ನಡೆಸುವಾತಂ ಧನುಬಿಲ್ವಫಲಗಳನೊಕ್ಕೆಗೊಂಡು ಗುರಿಯನೆಸುವಂ ತಹಂ ಸಂಸಾರಮಂ ಪರಮಾರ್ಥಮಂ ಕೂಡಿನಡೆಸುವಭಕ್ತಂ ಊರಪಾರಿಯಂಗಳಾದ ಸೂಳಂ ಕೂಡಿನಡೆಸುವಾತನಂತಹಂ ಸ್ಮರಸುಖಮೋಹಮಂ ಶಿವಭಕ್ತಿಮೊದಲಾದ ಮೋಹಮಂ ಕೂಡಿನಡೆಸುವಾತಂ ಎರಡು ಗುರಿಯಂ ಸರಳೊಂದರೊಳೊಮ್ಮೆಯೆ ಸೆವನಂತಹಂ ಮತ್ತಮಿರುಳ್ಪಗಲ್‌ಗಿರಿಯುರಿ ಕರಿ ಹರಿ ಮಂಡೂಕ ಕುಂಡಲಿನಿರಯ ನಾಕಕಂ ಎರವೆಂಬಂದದಿ ಭಕ್ತಂಗಂ ಭವಿಗಂ ಸ್ನೇಹವಿಲ್ಲಂ. ೧೨೧

ಕಂ. ಭವಿಗಳು ಕಾಣದ ತೆರದಿಂ
ಶಿವನಂ ಪೂಜಿಪುದುಮುವರ ಕಂಡಡೆಯಾ ಫಲ
ಮುವರ್ಗಪ್ಪುದು ತನಗಾ ಕ್ಷಣ
ಭವಬಂಧನ[1](ಮಪ್ಪುದವಗೆ ತಪ್ಪದೆಂದಂ)[1] ೧೨೨

ಭವಿಯನೆರೆಮನೆಯಲಿರ್ದಡೆ
ಅವಿರತನಿರಯದೊಳಗಿರ್ದಸವವದು ಭಕ್ತಗೆ
ಭವಿಗೆ ಕರಾಬ್ಜವ ಮುಗಿದಡೆ
ಸವನಿಸುವರು ನರಕಕುಳಿಯನಾತಗೆ ದೂತರ್ ೧೨೩

ಭವಿಗಳ ಶಯನಂ ಯಾನವ
ಭವಿಗಳ ಸಂಪರ್ಕ ಸಹಭೋಜನವ್ರತಗಳ
ಅವಿರತಬಿಡದಾ ಭಕ್ತಂ
ಭವಿಯುದರದಿ ಪುಟ್ಟಿ ದುಃಖನರಕವ ತಿಂಬಂ ೧೨೪

ಕೋಟಿಜಪ ಕೋಟಿತಪಗಳ್
ಕೋಟಿಶಿವಾರ್ಚನೆಯು ಕೋಟಿಫಲಗಳ್ಕೆಟ್ಟುಂ
ಪಾಟಿಪುದು ನಿಂದೆಯಿಹದೊಳ್
ಮೀಟಹುದುಂ ಭವಿಸಂಗದಿ ನರಕಂ ಪರದೊಳ್ ೧೨೫

1. ವಪ್ಪುದರಸಿದ್ಧೀಸುಗಾಗಂ (ಇ).

ಸಾಲವಕೊಡುವಲಿ ಕೊಂಬಲಿ
ಶೂಲಿಯ ಭಕ್ತರ್ಗೆ ಕೊಡುವುದು ಕೊಂಬುದಲ್ಲದೆ
ಮೇಲೆ ಭವಿಗೀಯೆ ತೆಗೆಯ
ಕಾಲನವರ್ಗೆ ನರಕಕುಳಿಯ ಸವನಿಪನಾಗಂ ॥೨೬

ಭವಿಪಾಕನ ಕರ್ತವ್ಯಂ
ಭವನಿಗೆನ್ನೈವೇದ್ಯ ಕಿಲ್ಬಿಷವೆಂದುದು ಮತ್ತಾ
ಭವಿಪಾಕವನುಂಡಡೆಯಾ
ಭವಿಗರ್ಭದಿ ಪುಟ್ಟಿ ಬಳಿಕ ಜನಿಪಂ ಶುನಿಯೊಳ್ ॥೨೭

ಸತಿಸುತಪೌತ್ರಭ್ರಾತೃತ
ಪಿತಮಾತೃಭೃತ್ಯ ದಾಸಿ ಗೋಪಾಲಕರೆಲ್ಲ
ಹಿತವಹುದು ಲಿಂಗಧೃತಿಯಿಂ
[1](ಇ ?)[1]ತಿಲಿಂಗಂ ಹೀನಮಾಗಲದು ನೀಚಗೃಹಂ ॥೨೮

ಮನೆಯೊಳಗೊರ್ಬಂಗಾದಡು
ಘನಲಿಂಗಂ ಕಡಿಮೆಯಾದ ಗೃಹದೊಳಗುಂಡಾ
ಮನುಜಂ ಗೋಮಾಂಸವನುಂ
ಶುನಿರಕ್ತದೊಳದ್ದಿ ತಿಂದವಂ ತಾನಲ್ತೇ ॥೨೯

ಲಿಂಗಂವಿರಹಿತವಾದಾ
ಲಿಂಗನೆಯಾ ಪುತ್ರರನ್ನು ತನ್ನವರೆಂದಾ
ಲಿಂಗಿಸಿ ಚುಂಬಿಸಿದಾತಗೆ
ಸಂಗವಿಸುವುದು ನಿರಯ ಚಂದ್ರರವಿಯುಳ್ಳನೆಗಂ ॥೩೦

ವ॥ ಶಿವಭಕ್ತನ ಶಿಶು ಗರ್ಭದಲ್ಲಿ ಕಾಯಲಿಂಗವೆ ತನ್ನದಾಗಿರ್ದುದು ದೇಹವೊಂದಾದಕಾರಣ ಜನನವಪ್ಪಲ್ಲಿ ಭವಿಯಾಗಿ ಬೀಳಲ್ಬಾರದುಂ ಅದುಕಾರಣಂ ಅರ್ಥೋದಯದಲ್ಲಿ ಲಿಂಗವಂ ಧರಿಸುವುದುಂ ಆವಳಿಮುಕ್ತಳಾದಡಂ ಕಡೆಯಶಿಶುಲಿಂಗಬಹುದಕ್ಕಿಂತ ಮುನ್ನವೇ ಬಹುದಡಾ ಶಿಶುವಂ ಬಿಸುಡುವುದುಂ ಸೌಂದರನಾಚಯ್ಯಂ ಲಿಂಗವಂ ಧರಿಸುವುದಕ್ಕಿಂತ ಮುನ್ನವೆ ಜನನವಾದ ಶಿಶುವಂ ಬಿಸುಟುಂ ಲಿಂಗವ ನುಂಗಿ ಕೊಂಡಿರ್ದಡಂ ಹೇಳದಿರ್ದಜಗಣ್ಣನಂ ಹೊರಡಿಸಿವಡವರ ತಂದೆತಾಯಿಗಳುಂ ಮತ್ತಂ ಭವಿಗಳಿಕ್ಕಿದಭಕ್ತಂ ನರಕವೆಂಬುದಕ್ಕಂ

1. ಮಿ (ಇ).

ಸಾಕ್ಷಿ: ಚತುರ್ವೇದಧರೋವಿಪ್ರೋ ಶಿವಭಕ್ತಿ ವಿವರ್ಜಿತಃ
ತಸ್ಯಭೋಜನದಾನೇನ ದಾತಾರಂ ನರಕಂ ವ್ರಜೇತ್

ಎಂಬುದರಿಂ ಭವಿಗಿಕ್ಕಲ್ಪಾರದುಂ ಕುಲಚತ್ತಿಯೆಂಬಾತಂ ಭವಿಗಳ್ಗನ್ನವನಿ[1]ಕ್ಕೆ(ನೆಂ)[1]ಬ ಭಾಷೆಯಿಂ ಕೈಲಾಸಂ ಪೊಕ್ಕಂ ತಿಲ್ಲಿವಲ್ಲಿತನ್ನೊಡಹುಟ್ಟಿದನಂ ಭವಿಯೆಂದು ಮುಖ ನೋಡಿದುದಿಲ್ಲಂ ತಿಲಕವ್ವೆಹೇರೂರು ಹೆಣ್ಣುಗಳ್ ತಮ್ಮಯ ಗಂಡಂದಿರಂ ಭವಿಗಳೆಂದು ಬಿಟ್ಟರುಂ ಕಲಿಗಣನಾಥಂ ತಾನಾಳ್ವ ದೇಶದೊಳ್ ಭವಿಗಳಿಲ್ಲದಂತೆ ಮಾಡಿದಂ ಧೂರ್ಜಟಿ ಕೇಶಿಗಳ್ ಭವಿಗಂ ಮರೆದು ವಂದಿಸಿ ಶಿರಮಂ ಛೇದಿಸಿಕೊಂಡಂ ಹಾಯೇಕೇಶ್ವರದೇವಂ ಭಕ್ತರೆಂದು ಭವಿಗಳ ಕೂಡೆಸುಡಿದುದರಿಂ ಶಿರಛೇದನಂ ಮಾಡಿಕೊಂಡಂ ವೀರ ಶಂಕರಯ್ಯಂ ಸ್ವಪ್ನದಲ್ಲಿ ಭವಿಮುಟ್ಟಿದನೆಂದು ತನ್ನ ಶಿರಮಂ ದಿಗ್ಬಲಿಗೊಟ್ಟಂ ಶೀಲ ವಂತಗ್ಗಯ್ಯನಮನೆಗೆ ಹರಂ ಭಿಕ್ಷುಕನಾಗಿಬಂದು ಲಿಂಗಮಂ ಕಾಣಿಸದಿರೆ ತನ್ನ ಶಿರಸ್ಸಂ ಛೇದಿಸಿಕೊಂಡಂ ನಿಸ್ಸಂಗಿದೇವಂ ಶಿವಾರ್ಚನಂ ಗೆಯ್ವಕಾಲದೊಳಂ ಭವಿಯಿದಿರೊಳ್ನಿಲೆ ಕಂಡು ಶಿರಸ್ಸಂ ಕೊಯ್ದುಕೊಂಡಂ ಶ್ವಪಚಯ್ಯಂ ಭವಿಯ ನೆಳಲೋಗರಂ ಸೋಕಿ ತ್ತೆಂದು ತನ್ನ ಪಾದರಕ್ಷೆಯಂ ಮುಚ್ಚಿದಂ ಉಮಾದೇವಿ ಭಕ್ತನ ಮನೆಯೆಂದು ಭವಿಯ ಮನೆಗಂ ಹೋಗಿ ಕಾಯಕವಂ ತರಲು ಶರಣರ್ಕಂಡು ಹಾಸ್ಯವಾಡೆ ಶಿರವ ನರಿದುಕೊಂಡಳುಂ ಹಾವಿನಹಾಳಕಲ್ಲಯ್ಯಗಳ ಗೃಹದದಾಸಿ ವಿಪ್ರಮುಟ್ಟಿದ ಘಟವ ನೊಡೆದುದರಿಂ ಶ್ವಾನನಿಂ ವೇದವನೋದಿಸಿದರುಂ ಭವಿ ಮುಟ್ಟದಿರೆಂದ ಘಟದೊಳ್ ಘಟ್ಟಿಯಂ ತೋರಿದಂ ಬಸವಂ ಶಿವಭಕ್ತರ ಸೀರೆಗಳಂ ಮುಟ್ಟಬಂದ ಭವಿಯಂ ಕೊಂದನಾ ಮಾಚಯ್ಯಂ ಭವಿಗಳ್ ಮುಟ್ಟಿದ ಬೀಜವಂ ಹುರಿದು ಬಿತ್ತಿದನಾ ಇಳೆಹಾಳಬೊಮ್ಮಯ್ಯಂ ಇಂತು ಬಹಿರಂಗದ ಭವಿಯಂ ಕಳೆದುಂ ಅಂತರಂಗದ ಭವಿಯಂ ಕಳೆವುದುಂ

ಶ್ರುತಿ. ಅನೃತಂ ಅಸ್ಥಿರಂ ವಾಕ್ಯಂ ವಂಚನಂ ಪಙ್ತ್ತಿಭೇದನಂ
ಉದಾಸೀನಂ ನಿರ್ದಯತ್ವಂ ಷಡ್ವಿಧಂ ಭವಿಮಿಶ್ರಿತಂ

ಎಂದುದಾಗಿ ಅನೃತ ಅಸ್ಥಿರ ವಂಚನೆ ಪಂತಿಭೇದ ತ್ರಿಗುಣ ಇಂದ್ರಿಯಪಂಚಕ ವ್ಯಸನ ಸಪ್ತಕ ಮುಖ್ಯವಾದ ಅಂತರಂಗಭವಿಯುಂ ಕಳೆವುದುಂ ಮತ್ತಂ ಶುನಿಯಸಾಕಿದಭಕ್ತಂ ಶುನಿಯಗರ್ಭದಲ್ಲೇಬರ್ಪಂ ಗಿಳಿ ನವಿಲು ಪಿಣಿ ಪಾರಾವತ ಪಕ್ಷಿಗಳುಂ ಮೃಗ ಮಾರ್ಜಾಲ ಮುಖ್ಯವಂ ಸಲಹಿದಾತಂ ನರಕವನುಂಬಂ ನೆತ್ತ ಪಗಡೆ ಜೂಜು ಮುಖ್ಯ ವಾದವರೊಳಿರ್ಪ ಲಿಂಗವಂತಂ ಪರಿಹಾಸಕರೊಡನಾಡಿದ ಭಕ್ತನ ಭಕ್ತಿ ಕೆಡುಗುಂ ೧೩೧

1. ಕ್ಕೆಂ (ಇ).

ಉ. ಮಾ. ವೃ.

ಮಾಲಿಕ ಮುಖ್ಯಕಂದಕುಲರಂಜಿತ ಮಂಜುಲಚಕ್ರವರ್ತಿಯಾ
ಪಲ್ಲವ ಮುಖ್ಯವಾದ ಪಲಯೂಥರಸಾಲಫಲೇಕ್ಷುದಂಡಕಿ-
ತ್ರೀಳಿಫಲಾದಿಯಂ ವಸನ ಕಸ್ತುರಿ ಕರ್ಪುರ ಗಂಧ ಜಾತಿಯಾ
ದೆಲ್ಲವ ಭಕ್ತರಿಂ ತೆಗದುಕೊಂಬುದು ಭಕ್ತಗೆ ಶ್ರೇಷ್ಠವೆಂದನುಂ ೧೩೨

ಇಂಧನ ಭಾರತೃಣ್ಯಲತೆಗುಲ್ಮಕುಲಂ ನವಭಾಂಡದೌಘಗಳ್
ಬಂಧುರಧಾನ್ಯಯೂಥ ಸಲೆಚೂರ್ಣಶಿಲಂಗಳು ನಾಗವಲ್ಲಿ ಪೂ-
ಗಾದಿ ಸಮೂಹ ಭಕ್ತಕುಲವಲ್ಲಿಯೆ ಕೊಂಡು ವಿಭೂತಿಮಿಶ್ರವಂ
ಹೊಂದುಗೆಯಿಂದ ಮಾಡಲವು ದ್ರವ್ಯದ ಶುದ್ಧಿಗಳಪ್ಪುವೆಂದನುಂ ೧೩೩

ತೈಲವು ತಕ್ರ ಮಾಕ್ಷಿಕ ಪಯಂ ದಧಿ ಮುಖ್ಯದ ತುಪ್ಪವುಪ್ಪು ಶೇ-
ಲಾಲಗಳಾದಿಯಾದವನು ಭಕ್ತರೊಳಂ ಗ್ರಹಿಸೂದೆ ಭಕ್ತಗಂ
ಮೇಲೆನಿಸಿರ್ದ ಪೂತರಸ ಶುದ್ಧಿಗಳಪ್ಪುವು ನೂತ್ನಪಾತ್ರಸಂ
ಜಾಲಲವಂಗಮಾಂಘ್ರಿರಜದಿಂದಲು ಭಾವಿಸೆ ಪಾತ್ರಶುದ್ಧವುಂ ೧೩೪

ಭಕ್ತರ ಕಯ್ಯ ಗೇಹಗಳ ಕಟ್ಟಿಸಲುಂ ಗೃಹಶುದ್ಧಿಯಪ್ಪುದುಂ
ಭಕ್ತರೊಳಲ್ಲರನ್ಯರೊಳಗಾದಡಶುದ್ಧವ[1](ದಪ್ಪುದೆಂಬುತುಂ)[1]
ಭಕ್ತರ ಕಯ್ಯೊ ಪೂಗಿಡುವ ರಕ್ಷಣೆಮಾಡಿಸೆ ತೋಂಟಶುದ್ಧಿ[2](ಯುಂ)[2]
ಭಕ್ತರಕಯ್ಯೊ ಮಾಡಿಸಿದುವೆಲ್ಲವು ಶುದ್ಧಗಳಪ್ಪುವೆಂದನುಂ ೧೩೫

ಭಕ್ತನ ನೋಂಟಸೋಂಕಿ[3](ದುದು)[3] ಪುಟ್ಟಿದುದುಂ ವರಘಾತವಾದುದುಂ
ಭಕ್ತರ ಜಿಹ್ವೆ ಸೋಂಕಿದುದು ಕೇಳಿದುದುಂ ಪರಿಶುದ್ಧವಪ್ಪುದುಂ
ಭಕ್ತರೊಳಲ್ಲದನ್ಯರೊಳಗಾದಡಶುದ್ಧಗಳಪ್ಪುದೆಂಬುವಾ
ಉಕ್ತಿಯು ಕಂಡು ತಾಂ ಬಿಡದಿರಲ್ಪನದೋಷವನಂಟನಾತನುಂ ೧೩೬

ತೈಲಜಲಂಘೃತಾದಿಗಳು ಚರ್ಮದ ಪಾತ್ರಯೊಳಿರ್ದಡಂತವಂ
ಶೂಲಿಯ ಭಕ್ತ ಭುಂಜಿಸಿದಡಂ ಶುಸಿರಕ್ತವ ಪಾನಗೈದವೊಲ್
ಬಾಲಶಶಾಂಕಧಾರಕನ ಭಕ್ತರ ಗೇಹದೊಳನ್ನಪಾನವಂ
ಲಾಲನೆಯಿಂದಲುಂಬುದವರಾಕುಲಪೀಕುಲವೆನ್ನದಾ ಕ್ಷಣಂ ೧೩೭

1. ಪ್ಪುದುಂ (ಇ). 2. ಯಿಂ (ಇ). 3. ದ (ಇ).

ಭಕ್ತರ ಕಾಣುತೆಮ್ಮ ಶಿವನೆಂಬುತೆ ಭಾವಿಸಿ ವಂದಿಸೂದು ತಾಂ
[1](ಯುಕ್ತವದಲ್ಲದನ್ಯರನು ಸತ್ಕುಲ)[1]ರೆಂಬುತ ಮಾನ್ಯಮಾಡಲುಂ
ಮುಕ್ತಿವಿಹೀನನಾಗಿ ನರಕಾಂಬುಧಿಯುಲ್ಲಿಯೆ ಬೀಳ್ವನೆಂದು ಶಾ-
ಸ್ತ್ರೋಕ್ತಿಯದೆಂದ [2]ಸಿದ್ಧ(ಗುರು)[2] ಶಾಂಭವಭಕ್ತಿವಿಧಾನ್ವಿತಂಗೆಯುಂ ೧೩೮

ಮಸ್ತಕವಿಪ್ರಲೋಚನವು ಬಾಹುಜವಾನನವೈಶ್ಯಬಾಹುತಾಂ
ಸ್ವಸ್ತದ ಪಂಚವುನ್ನಖವು ನಾವಿದನೂರ್ಯಗವಂತ್ಯಜಂ ಪ್ರ-
ಕೋಷ್ಠವು ಜಾಲಗಾರನದು ಹೆದ್ದೊಡೆ ಮೇದನು ತನ್ನ ದೇಹದೊಳ್
ವಿಸ್ತರದಿಂದಲೀ ತೆರದೊಳಿರ್ಪವು ಜಾತಿಯು ಭಿನ್ನವಾವುದೋ* ೧೩೯

ವ|| ಅಂತು ಚತುರ್ಜಾತಿಯೊಳಂ ಶೂದ್ರಸ್ತ್ರೀಗಂ ವೈಶ್ಯಪುರುಷಂಗಾದ ಮಗಂ ಕರಣನೆಂಬವಂ ಆಯವ್ಯಯಾದಿ ಲೇಖನೋಪಜೀವಿಯುವಂ ವೈಶ್ಯಸ್ತ್ರೀಗಂ ಬ್ರಾಹ್ಮಣಪುರುಷಂಗಾದಮಗಂ ಅಂಬಷ್ಠಂ ಚಿಕಿತ್ಸೋಪಜೀವಿಯುವಂ ಶೂದ್ರಸ್ತ್ರೀಗಂ ಕ್ಷತ್ರಿಯಪುರುಷಂಗಾದಮಗಂ ಉಗ್ರನೆಂಬವಂ ಕೋಶದುರ್ಗರಕ್ಷಣೋಪಜೀವಿಯುವಂ ಕ್ಷತ್ರಿಯಸ್ತ್ರೀಗಂ ವೈಶ್ಯಪುರುಷಂಗಾದ ಮಗಂ ಮಾಗಧನೆಂಬವಂ ವೀರ್ಯಾದಿ ಸ್ತುತ್ಯೋಪಜೀವಿಯವಂ ಶೂದ್ರಸ್ತ್ರೀಗಂ ಬ್ರಾಹ್ಮಣಪುರುಷಂಗಾದಮಗಂ ಪಾರವಸನೆಂಬಂ ಕಾಳಿಕಾಪೂಜಾದ್ಯುಪಜೀವಿಯವಂ ಕ್ಷತ್ರಿಯಸ್ತ್ರೀಗಂ ಬ್ರಾಹ್ಮಣಪುರುಷಂಗಾದಮಗಂ ಮೂರ್ಧಾವಶಿಕ್ತನೆಂಬಂ ಧನುರ್ವೇದೋಪಜೀವಿಯುವಂ ಕ್ಷತ್ರಿಯಸ್ತ್ರೀಗಂ ಶೂದ್ರಪುರುಷಂಗಾದ ಮಗಂ ಪಾರಧೇನುಕನೆಂಬವಂ ಮೃಗಪಕ್ಷಿಬಂಧನೋಪಜೀವಿಯುವಂ ವೈಶ್ಯಸ್ತ್ರೀಗಂ ಕ್ಷತ್ರಿಯಪುರುಷಂಗಾದ ಮಗಂ ಮಾಹಿಷ್ಯನೆಂಬಂ ಭರತಶಾಸ್ತ್ರೋಪಜೀವಿಯುವಂ ವೈಶ್ಯಸ್ತ್ರೀಗಂ ಶೂದ್ರಪುರುಷಂಗಾದ ಮಗಂ ಕ್ಷತ್ರುವೆಂಬುವಂ ದೌತ್ಯೋದ್ಧಾರಪಾಲ್ಯೋಪಜೀವಿಯುವಂ ಬ್ರಾಹ್ಮಣಸ್ತ್ರೀಗಂ ಕ್ಷತ್ರಿಯಪುರುಷಂಗಾದ ಮಗಂ ಸೂತನೆಂಬಂ ಇಂತೀಹಾಸಕ[3](ದು)[3]ಪಜೀವಿಯುವಂ ಬ್ರಾಹ್ಮಣಸ್ತ್ರೀಗಂ ವೈಶ್ಯಪುರುಷಂಗಾದ ಮಗಂ ವೈದೇಹಿಕನೆಂಬುವಂ ಅಂತಃಪುರರಕ್ಷಣೋಪಜೀವಿಯುವಂ ಬ್ರಾಹ್ಮಣಸ್ತ್ರೀಗಂ ಶೂದ್ರಪುರುಷಂಗಾದ ಮಗಂ ಚಾಂಡಾಲನೆಂಬಂ ವೀಥಿಮಲೋತ್ಸಾರಣೋಪಜೀವಿಯುವಂ ಕರಣಜಾತಿಸ್ತ್ರೀಗಂ ಮಾಹಿಷ್ಯಂಗಾದ ಮಗಂ ರಥಕಾರನೆಂಬಂ ಕಾಷ್ಠತಪೋಪಜೀವಿಯುವಂ ಇಂತೀ ನಾಲ್ಕು ಜಾತಿಯ ಭಿನ್ನಪುರುಷಸಂಗದಿಂ ಹಲವು ತೆರನಾಯಿತುಂ ಜಾತಿಯಿಾ ನಾಲ್ಕು ಜಾತಿಗೆ ಕರ್ತೃಗಳಾದ ರುದ್ರನಾರಾಯಣವಿಧಿವಿಷ್ಣುಗಳೀಶನ ವದನ ಭುಜ ನಾಭಿ ಪದಂಗಳಲ್ಲಿ ಪುಟ್ಟಿಪರುಂ ಅವರ ಭವಂಗಂ ಸರಿಯಲ್ಲವೆಂದು ಜಾತಿಯುಂ ಕಲ್ಪಿಸಿದುದ್ಭೈಸಲ್ಲದೆ ಓರ್ವನಿಂ ಪುಟ್ಟಿದ ಸುತರ್ಗೆ ಜಾತಿ ಹಲವುಂಟೆ ಮತ್ತಂ ಪ್ರಾಣಿಗಳು

1. ವಕ್ತ್ರವದ ಅದಲ್ಲದನ್ಯರಕ್ಕುಲ (ಇ). 2. ಸಿದ್ಧ (ಇ). 3. ದೋ (ಇ).
* ಈ ಪದ್ಯ ದೋಷದಿಂದ ಕೂಡಿದೆಯೆನ್ನಿಸುತ್ತದೆ.

ಪುಟ್ಟುವಲ್ಲಿಯುಂ ಹೊಂದುವಲ್ಲಿಯುಂ ಹೊಲೆಯಾದ ಬಳಿಕ್ಕ ಸತ್ಕುಲಂ ಬಂದ ಪರಿಯಿನ್ನೆಂತುಂ

ಸಾಕ್ಷಿ: ಸಪ್ತಧಾತುಸಮಂ ಪಿಂಡಂ ಸಮಯೋನಿ ಸಮುದ್ಭವಂ
ಆತ್ಮಜೀವ ಸಮಾಯುಕ್ತಂ ವರ್ಣಾನಾಂ ಕಿಂ ಪ್ರಯೋಜನಂ

ಎಂದುದರಿಂದ ಕುಲವಿಲ್ಲಂ ಆದಿಶಿವಾಂಶಿಕನೆಂದರಿದು ಭಕ್ತನಾದಲ್ಲಿ ಸತ್ಕುಲ ಅಲ್ಲದುದಕ್ಕುಲಂ

ಸಾಕ್ಷಿ: ತೈಲಯುಕ್ತಸ್ಯಕಾಪಾಸೋ ಜ್ಯೋತಿಸ್ಪರ್ಶನ ಜ್ಯೋತಿಚ
ಸ್ನೇಹಯುಕ್ತಸ್ಯಮದ್ಭಕ್ತೋ ಲಿಂಗಸ್ಪರ್ಶನ ಲಿಂಗಿಚ

ಎಂದುದಾಗಿ ಗುರುಕರಜಾತನಾಗಿ ಲಿಂಗವಂ ಸೋಂಕಿ ಲಿಂಗಸ್ವರೂಪಾದವನಂ ಕುಲದೊಳಗೆಂದು ವರ್ಣಿಸಲಹುದೇ.

ಸಾಕ್ಷಿ: ಇಂಧನಂ ವಹ್ನಿಸಂಪರ್ಕಂ ವೃಕ್ಷನಾಮಂ ನ ವಿದ್ಯತೇ
ಶಿವಸಂಸ್ಕಾರಸಂಪನ್ನೋ ಜಾತಿರ್ಭೇದೋ ನಕಾರಯೇತ್

ಎಂದುದರಿಂ ಭೇದವಂ ಕಲ್ಪಿಸಲಹುದೇ

ಸಾಕ್ಷಿ: ಮಾತಾಗೌರೀ ಪಿತಾರುದ್ರೋ ಈಶ್ವರಃ ಕುಲಮೇವಚ
ಬಾಂಧವಾ ಶಿವಭಕ್ತಾಶ್ಚ ಸ್ವದೇಶಂ ಭುವನತ್ರಯಂ

ಎಂದುದಾಗಿ ಶಿವಭಕ್ತರೆ ಬಂಧುಗಳೆಂದುಂ ಹರಳಯ್ಯಮಧುವಯ್ಯಗಳ್ವಿವಾಹದ ಸಂಟಂಬೆರಸಿದರುಂ ಕುಲಹೀನೆಯೆಂದು ಗುಡ್ಡಮ್ಮನಂ ಜರೆದ ನಾಪಟಿಗೆಯ ವಿಪ್ರರು ಕುಷ್ಠರಾದರುಂ ಶಿವಚಿತ್ರಯ್ಯನೊಳ್ವಾದಿಸಿ ಕುಲಕೆ ಹೋರಿದ ವಿಪ್ರರು ಭಕ್ತರ ಪಾದರಕ್ಷೆಯ ಸರಿಗೆ ತೂಗದಾದರುಂ ಸಾಮವೇದಿ ಬಸವಣ್ಣ ಭೋಗಣ್ಣ ಸೂರಸಾನಂಬೆ ಸೋಮಾಸೀಮಾರ ಸಿರಿಯಾಳ ಮುಖ್ಯವಾದವರು ಕುಲವಂ ನೋಡಿ ಭಜಿಸಿದುದುಂಟೆ ಜಂಗಮ ಜಾತಿಯಂ ನಿಂದಿಸಿದ ವಿಪ್ರರಂ ಕೊಂದನಾ ವೀರಗುಡ್ಡಯ್ಯಂ ಮತ್ತಂ ಜಂಗಮವಂ ದಾಸಿಸುತನೆಂದ ನಾರಿಯಂ ಕೊಂದ ಕರಿಕಂಪಂ ಮತ್ತಂ ಶ್ರೀಗುರುವಿನಸಹಸ್ತಮಸ್ತಕ ಕೂಟದಿಂ ಶಿವಮಂತ್ರದಿಂ ಮಾಂಸಪಿಂಡವಳಿದು ಮಂತ್ರಪಿಂಡವಾದ ಶಿವಭಕ್ತನಾರಿಯರ್ಗಂ ರಜಸ್ಸೂತಕವೆಂದು ಕಲ್ಪಿಸಿದೊಡನೇಕ ನರಕಂ

ಸಾಕ್ಷಿ: ಲಿಂಗಾರ್ಚನಾರತಾನಾರೀ ಸೂತಕಾನರಜಸ್ವಲಾ
ರವಿರಗ್ನಿರ್ಯಥಾವಾಯುಃ ತತ್ರತ್ಕೋಟಿಗುಣಃ ಶುಚಿಃ

ಎಂದುದಾಗಿ ಲಿಂಗಮುಂ ಅಂಗದೊಳ್ತಾಳ್ದ ವನಿತೆಯರ್ಗಂ ರಜಸ್ಸೂತಕವೆಂದು ಕಲ್ಪಿಸಿದ ಭಕ್ತಂಗಂ ನಾಯಕನರಕಂ ಮತ್ತಮಾ ನಾರಿಯರ್ಗಂ ಪ್ರಸೂತಿಸೂತಕವಿಲ್ಲಂ

ಸಾಕ್ಷಿ: ಗೃಹೇಯಸ್ಮಿನ್ ಪ್ರಸೂತೋಸ್ತ್ರೀ ಸೂತಕಂ ನಾತ್ರವಿದ್ಯತೇ
ಶಿವಪಾದಾಂಬು ಸಂಸ್ಪರ್ಶೇತ್ ಸರ್ವಪಾಪಪ್ರಣಶ್ಯತಿ

ಎಂದುದಾಗಿ ಗುರುವಿನ ಹಸ್ತದಿಂದ ಲಿಂಗಕಂ ಮಜ್ಜನಕೆರಸಿ ತಂದು ಲಿಂಗವಂ ಸೂಲಗಿತ್ತಿಯ ಕಯ್ಯೊಳ್‌ಕೊಟ್ಟು ಶಿಶುವಿನ ಅರ್ಧೋದಯದಲ್ಲಿ ಆ ಶಿವಪಾದೋದಕ ವಂ ಶಿಶುವಿನ ಮೇಲೆ ತಳಿಸಿ ಲಿಂಗವಂ ಧರಿಸುವುದುಂ ಗುರುವಿಲ್ಲದಿರ್ದಡಂ ಜಂಗಮದಲ್ಲಿ ಈಸಿ ತಹುದಾ ಲಿಂಗಮುಂ ಜಂಗಮವಿಲ್ಲದಿರ್ದೊಡಂ ಓರ್ವಲಿಂಗವಂತನಿಂ ತರುವುದುಂ ಆವನಿಲ್ಲದಿರ್ದಡಂ ತಾನಾವಡಂ ಕೊಡುವುದುಂ ಲಿಂಗವಿರ್ದಲ್ಲಿ ಸೂತಕಾದಿಗಳಿಲ್ಲಂ ಲಿಂಗಾಂಗಿಗೆ ಜನನಸೂತಕಮೃತಸೂತಕಾದಿಗಳಿಲ್ಲಂ ಲಿಂಗದೊಳೈಕ್ಯವಾದ ಭಕ್ತಂಗಂ ಲೌಕಿಕರು ಸತ್ತಡಂ ಮಾಡುವಂತೆ ಶ್ರಾದ್ಧಕರ್ಮಾದಿಗಳಂ ಮಾಡಬಾರದುಂ ಮಾಡುವ ಪಾಪಿಷ್ಠನ ಮನೆಯಲ್ಲುಣಬಾರದುಂ ಮೀರಿವುಂಡವಂ ಸುರೆಮಾಂಸಾದಿಗಳಂ ತಿಂದವಂ ಮೃತಸೂತಕವಂ ಬಗೆಯದೆ ನಿಂಬಿಯಕ್ಕನ ಮನೆಯಲುಂಡ ಹರನಂ ಭಜಿಪ ಭಕ್ತಂ ಗೆಲ್ಲಿಯ ಮೃತಸೂತಕಂ ಚೆನ್ನನೊಡನುಂಡ ಹರನಂ ಭಜಿಪ ಭಕ್ತಂಗೆಲ್ಲಿಯ ಎಂಜಲು ಸೂತಕಂ ಇಂತೀ ಪಂಚಸೂತಕಂಗಳಂ ಕಳಿವ ಭಕ್ತಂ ಭಕ್ತಿಕುಲದಲ್ಲಿರ್ದಂಗಂ ಅಲಂಕಾರ ಸಹಿತೆಯಪ್ಪ ಸ್ವಕನ್ನಿಕೆಯುಂ ವಿವಾಹಂಗೆಯ್ವುದುಂ ಕೆಲವು ಹಸೆ ಮುಂತಾದನ್ಯದೈವಂ ಗಳಂ ಪೂಜಿಸಬಾರದುಂ ೧೪೦

ಉ. ಮಾ. ವೃ.

ದಾನವ ಮಾರಿ ಜಕ್ಕಿ ಜಲದೇವತೆ ಬೀರುಗ ಬೊಮ್ಮ ಶಂಕರೋ
ತ್ತುನ್ನತನಾಗರುಂ ಮಸಣಿ ಕಾಟುಗ ಕಾಳುಗನೇಕನಾಥಿಯಾ
ದನ್ಯತರನ್ಯದೈವಗಳ ಪೂಜಿಪ ಭಕ್ತನು ಕೋಟಿವತ್ಸರಂ
ಮನ್ನಣೆಯಿಂದ ನಾರಕವ ತಿಂಬನು ತಿಮ್ಮನದಿಂದಲಾತನುಂ ೧೪೧

ಹೆಂಡಿರು ಮಕ್ಕಳಿಂಗೆ ಮನೆದೈವವನಲ್ಲದೆ ನಾನು ಪೂಜೆಯಂ
ಮಾಡಲಿಕಿಲ್ಲವೆಂಬುವನು ತನ್ನಯ ಕಾಮಿನಿಯನ್ಯಕಾಂತನೋ-
ಳ್ಕೂಡಿರೆ ಕಂಡು ತನ್ನ ಮನಸೆಂಬುತಲಿರ್ದಡೆಯನ್ಯದೈವವಂ
ಮಾಡಿದಡಂತೆ ಸೈರಿಪುದು ಭಕ್ತನು ಭಕ್ತಿವಿಚಾರಿಗೆಂದನುಂ ೧೪೨

ಕಂ. ಸೋಮನ ದಿನ ವ್ಯತಿಪಾತಂ
ಆ ಮಹಶಿವರಾತ್ರೆ ಶಂಕರಾತ್ರಿಗಳೆಂಬವ
ಕಾಮಹರಾರ್ಚಕ ಕುರಿತುಂ
ಈ ಮಹಿಯೊಳುಪಾಸವಿರಲುಮಕ್ಷಯನರಕಂ ೧೪೩

ಶಿರ ವದನ ದಂತಧಾವನ
ಪರಿಶುದ್ಧಸ್ನಾನ ಧೋತ್ರ ಛಾದನೋಪಾಸಂ
ಪರಣತೆ ಪಾರಣೆಯೆಂಬುವ
ಪರಿಹರಿಪುದು ಭಕ್ತನಾದವಂ ಸಂತಸದೊಳ್ ೧೪೪

ಅರಿಸಿನ ಗಂಧಂ ಚಂದ್ರಕ
ವರಚಿತ್ರಾಂಬರಮನಲಂಕಾರಾದಿಗಳಂ
ಪುರುಷನಿಹ ನಾರಿಗಿಪ್ಪೊ-
ಳ್ಪರಿಕರ್ಮಂಗಳ್ ಭಕ್ತರ್ಗಲ್ಲದುಳಿದರಿಗುಂಟೇ ೧೪೫

ಶಿವಲಿಂಗಭಜಕನವಿರತ
ನವವಿಧಸುಖಸೌಖ್ಯದಿಂದಲಿಹುದಂತಲ್ಲದೆ
ಯವಿತತದೀ ಕ್ಷೇತ್ರಂಗಳ
ಹವಣಿನ ಶುಚಿವ್ರತಸುಖಂಗಳಾವಡೆ ನರಕಂ ೧೪೬

ಇಷ್ಟದೊಳಪನಂಬುಗೆಯಿಂ
ಕಷ್ಟನು ಮತ್ತೊಂದು ಲಿಂಗದೆಡೆಗಂ ಪೋಗ
ಲ್ಕಿಷ್ಟಂಬಿಡುಗಾತನನುಂ
ಶ್ರೇಷ್ಠಮದಾಗಿರ್ಪ ನರಕಕುಳಿಯಹುದವಗಂ ೧೪೭

ಗಿರಿವಾರಣಾಸಿಗಳಿಗಂ
ಪರಿದೆಯ್ದಿಯೆ ಸುಕೃತದಾಪೇಕ್ಷತೆಯಿಂದಂ
ಭರದಿಂ ತೀರ್ಥದಿ ಮುಳುಗಿಯು
ನರರಾ ತೀರ್ಥವನಪೂತವಂ ಮಾಡುವರುಂ ೧೪೮

ಎಲ್ಲಾ ಜಲದೊಳ್ ಮಾಳ್ಪೊಲ್
ಬಲ್ಲಿದ ತೀರ್ಥಂಗಳಲ್ಲಿ ಮಲಮೂತ್ರಗಳಂ
ನಿಲ್ಲದೆ ಬಿಟ್ಟ ಪವಿತ್ರಂ
ಕಲ್ಲೆರ್ದೆಯುರು ಮಾಡುತಿಹರಘವಂ ಬಗೆಯದೆ ೧೪೯

ಗುದಗುಹ್ಯಂಗಳ ತೊಳೆದುಂ
ಪದದಿಂದೊದೆವುತ್ತಂ ಪೊಕ್ಕು ತೀರ್ಥದಿ ಮರೆಯು
ಪದದಿಂ ಗಂಡೂಷಿಸುತಂ
ಅದರೊಳು ಮುಳುಗಲ್ಕೆ ಪುಣ್ಯ ತಾನೆಂತಹುದೊ ೧೫೦

ಗುರುದೈವತೀರ್ಥಕ್ಷೇತ್ರಂ
ಸರಿ ಗಡ ಗುರುದೈವವ ಕಾಲ್ಮರೆದುಂ ಸೋಂಕಲ್
ದುರಿತಂಗಳು ಬರ್ಕು ಗುರುವಿಗೆ
ಸರಿಯುಹ ಗಿರಿಯಂ ತುಳಿದರ್ಗೆಲ್ಲಿಯ ಮೋಕ್ಷಂ ೧೫೧

ಲಿಂಗವನೀಕ್ಷಿಪ ಭರದಿಂ
ಲಿಂಗ ವಧರಿಸಿರ್ದ ಗಿರಿಯ ಲಿಂಗಾಂಗಿಯನುಂ
ಪೊಂಗಿ ಬಂದಡರಿ ನೋಡಲ್
ಹಿಂಗುವುದೆ ಭಕ್ತಿರಹಿತಂಗಘಸಮುದಯವುಂ ೧೫೨

ಶಿವಲಿಂಗವ ಧರಿಸಿದನಂ
ಶಿವಲಿಂಗೇಕ್ಷಣಾರ್ಥದಿ ಮೆಟ್ಟೀಕ್ಷಿಪರುಂಟೆ
ಶಿವಭಕ್ತನೆ ಶಿವನೆಂದುಂ
ಸವಿನಯದಿಂ ನೆನೆದು ನಮಿಸರೀ ಮೂಢರ್ಕಳ್ ೧೫೩

ಶರಣಂ ನೆಲಸಿಹ ನೆಲವುಂ
ವರಪುಣ್ಯಕ್ಷೇತ್ರವಿರ್ದ ನಗಂ ಶ್ರೀಶೈಲಂ
ಭರದಿಂ ಕ್ರೀಡೆಗೆ ಪೊಕ್ಕಾ
ಸರಸಿಯ ಜಲಪುಣ್ಯತೀರ್ಥವದು ತಾನಲ್ತೇ ೧೫೪

ಶಿವಭಕ್ತ ಹಂಪೆ ಮೊದಲಾ-
ದವ ನೆನೆಯಂ ಆಲಿಸನುತ್ಸವದಿಂ ನೋಡಂ
ನೆವದಿಂದಿಷ್ಟವ ಬೇಡಂ
ಅವತಾನಕೃತ್ಯಾಕೃತ್ಯವನೇನಂ ಮಾಡಂ ೧೫೫

ಜಲಮುಂ ತೀರ್ಥಂ ಪುಣ್ಯಂ
ನೆಲನುಂ ಕಾಡ್ನೆಲನು ಗಿರಿಯು ಮೊರಡಿಯು ದೈವವು
ಶಿಲೆಯುಂ ಭಕ್ತನ ದೃಷ್ಟಿಗೆ
ಸಲೆ ಸತಿಯಾಗಿಪ್ಪುವಲ್ಲದನ್ಯಮದಿಲ್ಲಂ ೧೫೬

ಶಿವಲಿಂಗಂ ಪತಿಯಾಗಿ-
ರ್ದವ ಪತಿವ್ರತೈಕನಿಯಮತೆಯಿಂ ತೀರ್ಥಕ್ಷೇ-
ತ್ರವ ಬಗೆಗೊಳ್ಳನು ಮನದೊಳ
ಗವ ಹರಸಿ ಹರಕೆದೆಗೆಯಂ ಭಕುತಂ ಮುಕುತಂ ೧೫೭

ಸಲೆ ನೀರ್ ಮೀನುಗಳಿಲ್ಲದ
ವಿಲಸದ ತೀರ್ಥಂ ಗುಳಿ ತೆವರಿಲ್ಲದ ಕ್ಷೇತ್ರಂ
ಕಲುಮರಮಟ್ಟೆಗಳಿಲ್ಲದ
ಕುಲಶೈಲಂ ಶಿವಯೋಗಿಯ ದೇಹಮದಲ್ತೇ ೧೫೮

ಕಿವಿ ಗವಿ ನಾಸಿಕರಂಧ್ರವೆ
ವಿವರದ್ವಾರಂ ರೋಮಕುಲಂ ವೃಕ್ಷಂಗಳು
ನವಜಡೆ[1](ಗಳೆ ತಾಂ)[1] ಲತೆಗಳ್
ಭವಹರ ನೆಲಸಿದ ಗಿರಿ ತಾಂ ಶಿವಯೋಗಿಯ ದೇಹಂ ೧೫೯

ಪುರುಷಾಕಾರ ಸಮತ್ವದಿ
ಪುರುಷರನುಂ ತನ್ನ ಪುರುಷಗಂ ಪತಿವ್ರತೆ ತಾಂ
ಸರಿಗಾಣ್ಬಳೆಯಾ ಪರಿ [2](ತಾಂ)[2]
ಗುರುಲಿಂಗಕೆಯುಳಿದವ ಸರಿಗಾಣ್ಬನೆ ಭಕುತಂ ೧೬೦

ವ|| ಧರೆಯೊಳ್ ಜನಿಸಿದ ಸ್ವಯಂಭುಲಿಂಗವಂ ದೇವತೆಗಳ್ ನಿರ್ಮಿಸಿದ ಬಾಣಲಿಂಗಮಂ ಸಿದ್ಧರಾಕ್ಷಸಮನುಮುನಿನಿರ್ಮಿತವಾದ ಇತರ ಕ್ಷೇತ್ರಲಿಂಗಂಗಳಂ ಶರೀರದಲ್ಲಿರ್ಪ ಪ್ರಾಣನಿಜಲಿಂಗಮಂ ಎಲ್ಲೆಲ್ಲಿದ್ದರ್ಗಲ್ಲಲ್ಲಿಗೆ ತಂದಿರ್ಚಿಪ ಚರಲಿಂಗಮಂ ಇಂತೀ ಬಾಹ್ಯದ ಪಂಚವಿಧಲಿಂಗಮಂ ತನ್ನಿಷ್ಟಲಿಂಗದಲ್ಲುಂಟೆಂದರಿದು ಆ ಇಷ್ಟಲಿಂಗಂ ಶರೀರದೊಳಹೊರಗೆ ಭಿನ್ನವಿಲ್ಲದಿರ್ಪಲ್ಲಿ ಆ ಭಕುತನ ಸ್ವಭಾವನೆ ಸ್ವಯಂಭುಲಿಂಗಂ ಅಭಿನ್ನತ್ವವೇ ಬಾಣಲಿಂಗಂ ಇಂದ್ರಿಯಂಗಳೊಳಗಿರ್ಪಾಚಾರದಿ ಲಿಂಗಂಗಳೇ ಇತರ ಕ್ಷೇತ್ರಾದಿಲಿಂಗಂಗಳುಂ ಚಂದ್ರಾದಿತ್ಯರುಂ ಮಂತ್ರಸ್ವರೂಪದಿಂ ಪ್ರಾಣದೊಳ್ ವೇಧಿಸಿವ ಗುಣವೇ ಪ್ರಾಣಲಿಂಗಂ ಲಿಂಗಧ್ಯಾನದಿಂದಂತಃಕರಣಂಗಳೊಳ್ ಚರಿಸುವ ಮನವೇ ಚರಲಿಂಗಂ ಮತ್ತಂ ಉತ್ತಮಾಂಗಶ್ರೀಶೈಲದೊಳ್ ಬ್ರಹ್ಮರಂಧ್ರಚಿತ್ಕಳೆ ತಾಂ ಮಲ್ಲಿಕಾರ್ಜುನಂ ವಪು ಕಾಶಿ ಸುಜ್ಞಾನ ಭಾಗೀರಥಿ ಅಸು ವಿಶ್ವೇಶ್ವರಂ ಇಂತು ತೀರ್ಥ ಕ್ಷೇತ್ರಾದಿ ಲಿಂಗಂಗಳ್ ತಂತಮ್ಮೊಳ್ ಇರಲ್ ಬೇರರಸಿಯನ್ಯಲಿಂಗದೊಳ್ ಪ್ರಸಾದಾದಿ ಗಳಂ ಕೊಂಡಡಂ ಪಾತಕಂ ೧೬೧

1. ವ್ರಜ (ಇ). 2 ತಂ ಮಂ (ಇ).

ಉ.ಮಾ.ವೃ.

ತೀರ್ಥವು ಪುಣ್ಯಭೂಮಿಗಿರಿಮುಖ್ಯದೊಳಾಸೆಯ ಮಾಡಬಾರದುಂ
ಸ್ವಾರ್ಥಮದಪ್ಪಲಿಂಗದೊಳಗನ್ಯದ ವಾರ್ತೆಯ ಕೇಳಬಾರದುಂ
ಅರ್ಥಿಯೊಳಾಗತೀರ್ಥದೊಳಗಾಡಿಪುದಲ್ಲಿಯ ಮೋಕ್ಷಕಾಂತೆಯಿಂ
ವ್ಯರ್ಥಮದಪ್ಪುದುಂ ನರಕವಾ ಕ್ಷಣಬಪ್ಪುದದೇನನೆಂದಪೆಂ ೧೬೨

ಸ್ಥಾವರಲಿಂಗ ಸಂಚಯಕುಪದ್ರಗಳುಂ ಬರಲಾಗ ತನ್ನಯಾ
ಜೀವವನಿಕ್ಕಿಯಾದಡೆಯು ತಾಂ ಪರಿಹಾರವ ಮಾಳ್ಪುದಾ ಕ್ಷಣಂ
ಸ್ಥಾವರಲಿಂಗಕಾದಡೆಯು ಭಕ್ತರಿಗಾದಡು ವಕ್ರವಾಗಿಹಾ
ಗಾವಿಲಯೂಥಮಂ ವಧಿಸೆ ಪಾತಕವಿಲ್ಲದು ಭಕ್ತಿಕಾರಣಂ ೧೬೩

ಸ್ಥಾವರಲಿಂಗಮಂ ಬಲುಹಿನಿಂದದ ಕಿತ್ತು ಮಲಪ್ರಹಾರಿಣೀ
ಪಾವನತೀರ್ಥದೊಳ್ ಕೆಡಹಿದಾ ಹರಿಭಕ್ತರ ಕೊಂದ ಗುಡ್ಡಿಯಾ
ದೇವಿಗೆ ಮೋಸವಾಯ್ತು ಶಿವಪೂಜಕನೋರ್ವನ ಕೊಂದ ಜೈನರಂ
ಸಾಯ್ವೊಲು ಕೊಂದ ಮಾರುಡಿಗೆ ನಾಚಗೆ ಮೋಕ್ಷಮದಾಯ್ತುಮಾಕ್ಷಣಂ
೧೬೪

ಭಕ್ತನನಾದಡುಂ ಹರನನಾದಡು ನಿಂದಿಪ ದುಷ್ಟಮರ್ತ್ಯನಂ
ವ್ಯರ್ಥದಿ ಕೊಲ್ವುದಾ ಕ್ಷಣವೆ ಕಕ್ಕಯನಂದದಿಯಲ್ಲದಿರ್ದಡಂ
ಶಕ್ತಿಗೆ ತಕ್ಕೊಲುಂ ಶಪಿಪುದುಂ ಅದಕಾರದೆಯಿರ್ದಡಾಗಲೇ
ಯುಕ್ತಿಯೊಳಲ್ಲಿ ಬಿಟ್ಟುಕಡೆಗೈದುವದೈದದಿರಲ್ಕೆ ಪಾತಕಂ ೧೬೫

ಉತ್ತಮವೃತ್ತಿಯಾತ್ರಿಕನು [1](ನೀಚರು)[1] ಮಾಡುವ ನೀಚವೃತ್ತಿಯಾ
ಮೊತ್ತಕೆ ಚಿತ್ತಗೊಟ್ಟಿರಲು ಭಕ್ತರ ತಾಮಸವೆಂಬರಂತದಂ
ಬಿತ್ತರದಿಂದೆ ಕೂಡಿರಲುಮಾತನ ಭಕ್ತಸಹಸ್ರಹೊನ್ನನುಂ
ತ್ರೈ[2](ತ್ರ)[2] ಹಸಾದಿಗಾಗ ಲವಮಾತ್ರದಿ ಪುಣ್ಯವ ಕೂಡಿದಂತೆಯುಂ ೧೬೬

ಸಾಸಿರನೊಪ್ಪಿಯೂಥವನು ಮಾಡಿದ ತತ್ಫಲ ಜಾರೆಗಾಕ್ಷಣಂ (?)
ನಾಶಮದೊಪ್ಪೊಲುಂ ಶರಣಸಂತತಿಯೊಳ್ ಘನಪ್ರೀತಿಯಿಲ್ಲದೇ
ಕ್ಲೇಶವು ತೋರಿದಾಗ ಶಿವಭಕ್ತನ ಭಕ್ತಿಯನೇಕಕೋಟಿಗ-
ಳ್ನಾಶಗಳಪ್ಪವೆಂದು ಗುರುಸಂಯಮಿವಲ್ಲಭ ಪೇಳ್ದನಕ್ಕರಿಂ ೧೬೭

---

1. ನಿಜರುಂ (ಇ). 2. ತ್ರಿ (ಇ).

ಕಂ. ಬೇಯದ ಕುಂಭದಿ ಜಲವಿರೆ
ವಾಯಮುದಪ್ಪೊಲ್ ಕಾಂಪುವಚಹೃದ್ಭೋಷಿಯು
ಪ್ರೀಯದ ವ್ರತಶೀಲಂಗಳ್
ವಾಯಮುದಪ್ಪುವಮಿತಭಕ್ತಿಸಮೇತಂ ೧೬೮

ಕಾಯದೊಳು ಹೊದ್ದಿಯಮೃತವ
ಪೇಯಮುದಾದೊಲ್ಪಾಪಾತ್ಮನ ಕಾಯ[1](ದಿ ತಾಂ)[1]
ಪ್ರೀಯದಿ ಕೂಡಿದ ವ್ರತಗಳ್
[2](ಹೇಯಗಳವುಅಪ್ಪುವೆಂದನಾಗಲತೀಶಂ)[2] ೧೬೯

ಜಂಗಮು[3](ದೊಳು)[3]ದಾಸೀನದಿ
ಲಿಂಗದ ಪೂಜೆಯನು ಮಾಡೆ ಫಲವಿಲ್ಲವಗಂ
ಅಂಗಿಯನು ಹೊದ್ದ ದೇಹದ
ಶೃಂಗಾರದ ಭಂಗಿಯಂತಹುದವಂಗಾಗಂ ೧೭೦

ವ॥ ಬಾಳೆಗಂ ಚೇಳಿಗಂ ಫಲಗರ್ಭಂಗಳೇ ಕಡೆಯಾದಂತೆ ಭಾಷೆಯೇ ಕಡೆಯಾಗಿರ್ಪನಾ ಭಕ್ತಂ ವೀರಶೈವಂಗಂ ಭಾಷೆ[4](ಯಂ ಮೀರಿ)[4]ದ ಚರಸೇವೆ ಸೇರಿರ್ದ ಡಂ ಪತಿಯೊಕ್ಕುದನುಂಬ ಜಾತಿಯಂತಹುದುಂ ಚರರಂ ನೋಯಿಸಿ ಚರಸೇವೆಯಿಂವದಂ ಹರಿವ ಭಕ್ತಂಗಂ ಗುರುರಾಣಿಗೆ ತಪ್ಪಿ[5](ದುವ)[5] ಗುರುಭಕ್ತಿಯಿಂದ ಹರಿವೆನೆಂಬ ಶಿಷ್ಯ ನಂತಕ್ಕುಂ ಗುರುಚರಶರಣರರಾಣಿಯುರ್ಗಳುಪಿದತಾಂ ಗುರುಚರಶರಣರ ಪಾದೋದಕವಂ ಕೊಳಲಾ ದೋಷಂ ಪೋಪುದೇ ಗುರುಚರಶರಣವರ್ಱನಿದೊಡೆ ಮುನಿಯಲಿ ಶಿವಂ ಬಲ್ಲ ನೆನ್ನ ಮನವೆಂದು ಗುರುಚರಶರಣರಂ ಶರಣುಪೋಗದವಂ ಮನುಜಗಾರ್ದಭಂ ಮತ್ತಂ ಶರಣರ ಮೇಲೆ ತಥ್ಯಮಿಥ್ಯಾರಾಗದ್ವೇಷದಿಂ ಅನ್ಯಭಕ್ತ್ಯಪವಾದಂಗಳನಿಕ್ಕಿನಿಂದಿಸಿದಾತಂ ಕಾಗೆಗೂಗೆಶುನಕನಾಗಿ ಪುಟ್ಟುವಂ ಶಿವಭಕ್ತನಾದಡುಂ ಶಿವನನಾಪಡುಂ ನಿಂದಿಸಿ ನರಕಕ್ಕೆ ಗುರಿಯಪ್ಪ ಕರ್ಮಿಯುಂ ಮತ್ತಂ ಶಿವನ ನಿಂದಿಸಿದಾತನಂ ಧವಳದೇವಂ ಕೊಂದಂತೆ ಮಾರಭೂಪನ ಚಾವಡಿಯಲ್ಲಿ ಸಬಳಿಗನಾಗಿರ್ದು ಶಿವನಿಂದಕನಂ [6](ತಿ)[6]ವಿದ ಪೋತಿದೇವನಂತೆ ಅಂಬುಧಾರಾರಾಮೇಶ್ವರನೋಲಗದಲ್ಲಿ ಶಿವನ ನಿಂದಿಸಿದ ಕ್ಷತ್ರಿಯನಂ ಕೊಂದ ದೇವರಸಯ್ಯನಂತೆ ಶಿವದೂಷಕರಂ ಕೊಲುವ ನೇಮದ ಚಿರುಪುಲಿಯುರಂತೆ ಶಿವದೂಷಕರಂ ಕೊಲ್ವುದುಂ ಮತ್ತಂ ಗೋಕಚಂಡಿಯೆಂಬ ವೈಷ್ಣವಂ ಹರನ ನಿಂದಿಸಿ ದೊಡವನಂ ಕೊಲ್ಲಲೊಸವಲ್ಲದಿರ್ದಡಂ ತನ್ನಕೊರಲ್ಗೊಯ್ದು ಕೊಂಡ ದೇವದಂಡಿಯ

1. ವ (ಇ). 2. ಹೇಯಗಳಪ್ಪವೆಂದನಿತೀಶಂ (ಇ). 3. ಮ (ಇ). 4. ಯೆಮಿಮ್ಮಾರ (ಇ).
5. ದ (ಇ). 6. ತೀ (ಇ).

ಕಾಯಿದೇವನಂತೆ ಶಿವದೂಷಣೆಯಂ ಕೇಳಲಾರದೆ ಕೊರಲ್ಗೊಯ್ದುಕೊಂಡ ಮಹಬಲ ದೇವಸಂತೆ ಶಿವಭಕ್ತರ ಹೆಮ್ಮೆಯು ಕೊಂಡಾಡುತ್ತಿರೆ ದೂಷಕರ್ನಿಂದಿಸೆ ಕೊರಲ್ಗೊಯ್ದು ಕೊಂಡ ಸಂಗಯ್ಯನಂತೆ ನಿಂದಕರಂ ಕೊಲಲಾರದಿರ್ದಡಂ ಕೊರಲ್ಗೊಯ್ದುಕೊಂಬು ದುಂ ಅವಕ್ಕಾರದಿರ್ದಡಂ ಶಾಪೋದಕವಂ ಪಿಡಿದು ಸಮಸ್ತರ್ಕೇಳುವಂತೆ ಕಾಲಸಂಹಾರ ರುದ್ರೋಗ್ರವಿರೂಪಾಕ್ಷವಿಷಾನನಯೆಂದು ಯ ದು ವ ಂ ಶ ಂ ಕ್ಷಯವಾಗಲೆಂದು ದೂರ್ವಾಸಂ ಶಪಿಸಿದಂತೆ ದಕ್ಷಾಧ್ವರ ಕೆಡಲೆಂದು ಅಕ್ಷಪಾದಂ ಶಪಿಸಿದಂತೆ......... ಮಹೇಂದ್ರನಗರವ............ಕೆಡಲೆಂದು ಅರ್ಯಮಂ ಶಪಿಸಿದಂತೆ ಜಿನಬುಧರ್ಕೆಡ ಲೆಂದು ಪಿಳ್ಳೆನಾರ್ ಶಪಿಸಿದಂತೆ ಬಿಜ್ಜಳನ ಕುಲಕ್ಷಯ.........ಶಪಿಸಿದಂತೆ ದೂಷಕರಂ ಶಪಿಸುವುದುಂ ॥೬೧

ಕಂ. ಆವಾವ ಕೃತ್ಯವಾದಡು
ಭಾವಜಹರಗೆಂದು ಭಾವವಿರೆ ಸತ್ಕೃತ್ಯಂ
ಭಾವಜಹರಗಲ್ಲದಸ-
ದ್ಭಾವದಿ ಸತ್ಕೃತ್ಯವಾ[1](ದಡದು ತಾಂ ಹೊಲ್ಲಂ)[1] ॥೬೨

[2](ಹರವಿರ)[2]ಹಿತದಿಂದಕ್ಷಂ
ಹರುಷದಿ ಸತ್ಕೃತ್ಯವೆಸಗೆ ಶಿರ ತಾಂ ಪೋದುದು
ಹರಸ್ನೇಹದಿ ನಿಂಬ್ಯಕ್ಕಂ
ವಿರಸದಿ ದುಷ್ಕೃತ್ಯವೆಸಗೆ ಶಿವನೊಡವೆರೆದಳ್ ॥೬೩

ಜೂಜಿಂದೆ ಧರ್ಮ ಕೆಟ್ಟಂ
ಜೂಜಿಂದಚ್ಯೂತನು ಶಿವನ ಪದವಂ ಸಾರ್ದಂ
ಆಜಿಯಿಂ ಕೆಟ್ಟ ಕಾರ್ತಿ[3](ಕ)[3] (?)
ನಾಜಿಯಿಂ ಗಣಪದವ ಪಡೆದನಾದಿಗಣೇಶಂ ॥೬೪

ಹಾದರದ ಬೊಮ್ಮಿದೇವಂ
ಹಾದರದಿಂ[4](ದಸುವನೀಗೆಯಾಕ್ಷಣವದನುಂ)[4]
ಆದರದಿ ಪಡೆದ ಶಿವನಿಂ
ಹಾದರದಿಂ ಕೆಟ್ಟ ಕೀಚಕಂ ಶೀಘ್ರದೊಳುಂ ॥೬೫

---

1. x x (ಇ). 2. x x (ಇ). 3. ಕಾ (ಇ). 4. ದಾನವ್ಯ x x x x (ಇ).

ಬೇಂಟೆಯಿಂ ಕ್ಟೆಟೆ ರಾಮಂ
ಬೇಂಟೆಯೊಳಂ [1](ಜೊ)[1]ಮ್ಮದೇವ ಮುಕುತಿಯ ಪಡೆದಂ
ತುಂಟ ಸೂದ್ರಿಕನು ಕೆಟ್ಟಂ
ತುಂಟತ್ವದಿ ಕಲಿಯೆಂಬವ ಮೋಕ್ಷವ ಪಡೆದಂ ೧೭೬

ಹುಸಿದು ವಿಧಿ ಹುಟ್ಟುಗೆಟ್ಟಂ
ಹುಸಿದಾ ಚಿರುತೊಂಡ ಶಿವನ ಪಾದದೊಳ್ಬೆರೆದಂ
ಹುಸಿಯದ ಯತಿ[2](ಗ)[2]ಘವಾದುದು
ಹುಸಿದಾ ಹೊಲೆಯಂಗೆ ಮೋಕ್ಷಪದವಾಯ್ತಾಗಂ ೧೭೭

ಶಿವಸಹಿತ ಮಾಡಿದ ಕೃತ್ಯದ
ವಿವರವೆ ಸತ್ಕೃತ್ಯ[3](ವದು)[3] ಹರವಿರಹಿತವಾದ
ನವೀನದ ಸತ್ಕೃತ್ಯ[4]ವ(ದು)[4]
ಭವನ ಕುರಿತೇನನೊಡರ್ಚಲದು ಮೋಕ್ಷಕರಂ ೧೭೮

ವ ॥ ಉದಯಮರಸನಂತೆ [5](ನೇ)[5]ಮುವ ಹೇಳಿಯಾದಡುಂ ಜಕ್ಕಿಯರ ಬೊಮ್ಮಯ್ಯನಂತೆ ಬೊಂಬೆಯ ಕುಣಿಸಿಯಾದಡುಂ ಬಡಿಹೋರಿ ಬ್ರಹ್ಮಯ್ಯನಂತೆ ಮೂರುಸೂಳ್‌ಗುದ್ದಿಸಿಕೊಂಡಾದಡುಂ ಸಿಗುರಚಂದ್ರಯ್ಯನಂತೆ ಗಿರುಗಟಿಯುಂ ಬಾರಿಸಿಯಾದೊಡುಂ ಲೆಂಕದ ಬೊಮ್ಮಯ್ಯನಂತೆ ಲೆಂಕತ್ವದಿಂದಾದಡಂ ಶಿವಕಿಂಕರಯ್ಯನಂತೆ ರಜವಂಬೋಹರಸಿಯಾದಡಂ ಅಂಕದೇವನಂತೆ ಅಂಕವ ಕಾದಿಯಾದೊಡಂ ಗಣದಾಸಿ ಭೀಮಯ್ಯನಂತೆ ಚಕ್ರವಾದ್ಯವಂ ಬಾರಿಸಿಯಾದೊಡಂ ಗೆಲದುತ್ತಮದೇವನಂತೆ ಚೆಂಡಿಯಿಂದಾದಡಂ ಜಾಯಿದೇವನಂತೆ ಡಕ್ಕೆಯುಂ ಬಾರಿಸಿಯಾದೊಡಂ ಶಾಂತಿದೇವನಂತೆ ಮೂರುಸೂಳ್ ಬೈಸಿಕೊಂಡಾದಡಂ ಮುಂಡುಬ್ರಹ್ಮಯ್ಯನಂತೆ ಮುಂಡನಿಕ್ಕಿಯಾದಡಂ ಧರಣಿದೇವಯ್ಯನಂತೆ ಕೊಟ್ಟಗೆಯ ಹೇರಿಯಾದಡಂ ಮೌಳಿದೇವಯ್ಯನಂತೆ ಭಕ್ತರ ಪಾದರಕ್ಷೆಯಂ ಹೊತ್ತಾಡೆಯುಂ ಮೋಳಿಗಯ್ಯನಂತೆ ಕಟ್ಟಿಗೆಯ ಹೊತ್ತಾದಡೆಯುಂ ವೀರಸಂಗಯ್ಯನಂತೆ ಬಳೆಯಂ ಮಾರಿಯಾದಡಂ ರೇವಯ್ಯದೇವಯ್ಯನವರಂತೆ ಹೆಗಲು ಹಸುಬೆಯ ಕಾಯಕದಿಂದಾದಡೆಯುಂ ವೀರಬೊಮ್ಮಯ್ಯನಂತೆ ಕಾಯಕ ಹುಟ್ಟದಿರೆಪತ್ನಿಯಂ[6](ಅಡವನಿಕ್ಕೆ)[6] ಸಿಲಿಸಿಯಾದಡಂ ಆ[7](ಅ)[7]ಡವುಹುಟ್ಟದಿರ್ದಡಂ ಕನ್ನವನಿಕ್ಕಿಯಾದಡಂ ಪಲ್ಲೆಯದ ಚಿಪ್ಪಿದೇವನಂತೆ ಜಿರಕೆಸೊಪ್ಪಂ ತಂದಾದಡೆಯುಂ

1. ಬೊ (ಇ). 2. ಘ (ಇ). 3. ವಾದ (ಇ). 4. ವ (ಇ). 5. ನ್ಯಾ (ಇ).
6. ಹಡವು (ಅಇ). 7. ಹ (ಇ).

ಸತ್ಯಶುದ್ಧಕಾಯಕದಿಂ ತಂದು ಗುರುಚರಕೆ ಮಾಡುವುದೇ ವಿಶೇಷವೀರಂಗೆ ಮತ್ತಂ ಮತ್ತಾ ಗುರುವಿಂ ಜಂಗಮಮಂ ಕೊಂಡಾಡುವುದುಂ ೧೭೯

ಉ. ಮಾ. ವೃ.

ಮಲ್ಲಣ ಭಟ್ಟಬಾಣ ಹರಿದೇವನು ರಾಘವ ಕಾಳಿದಾಸಪ್ರಾ-
ಸೋಲ್ಲಸಿತುದ್ಭಟಂ ಮಲೆಯರಾಜ ಹಲಾಯುಧ ರಾಜರಾಜರಾ-
ದೆಲ್ಲ ಕವೀಶರಂತೆ ಶಿವನಂ ಪೊಗಳೊದುಮದಲ್ಲದಸ್ವರಂ
ನಿಲ್ಲದೆ ಕೀರ್ತಿಗೈದಡೆ ಮಹಾನರಕಾಲಯದಲ್ಲಿ ಬೀಳ್ವನುಂ ೧೮೦

ಹೊನ್ನನು ಹೆಣ್ಣನುಂ ಧರೆಯನುಂ ಗುರುಲಿಂಗ [1](ಸುಜಂಗಮಕ್ಕೆ ತಾಂ)[1]
ಉನ್ನತದಿಂದಲರ್ಚಿಸಿ ಮಲತ್ರಯವೆಂಬುದು ಕೆಟ್ಟು ತಾಂ ಪದಾ-
ರ್ಥೋನ್ನತನಾಮವಪ್ಪ[2]ವ(ವ)[2]ನೀಶನ ವಾರಕದೊಸ್ತುವೆಂಬ ಸ-
ನ್ಮಾನ[3](ಮದಿಲ್ಲ)[3]ದಿರ್ದೊಡದು ಮೋಕ್ಷಕೆ ಕಾರಣವಲ್ಲವಾತಗಂ ೧೮೧

ಮಾಡುವ ಬೋನಮಂ ಚರಕೆ ಲಿಂಗಕೆ ಮಾಡುವುದೆಂಬ ಭಾವದಿಂ
ಮಾಡಿಪುದಂತದಲ್ಲದೆಯು ತ[4]ನ್ನ(ಯ)[4] ಜೀವದ ಭಾವದಿಂದಲುಂ
ಮಾಡೆನಲಾತ ಸತ್ತು ಹುಳಿತೂದಿದ ಜಾಯಿಲ[5](ಮಾಂಸ)[5] ಮುದ್ದೆಯುಂ
ನೋಡಲದೆಂದ ಸಾದೃಶವದುಂ ಶಿವಭಕ್ತಗೆ ಸಲ್ಲದೆಂದನುಂ ೧೮೨

ಲಿಂಗವನಿತ್ತ ಶ್ರೀಗುರುವನುಂ ಹರನೆಂಬ ವಿಚಾರದಿಂದಲು-
ತ್ತುಂಗಮಹೇಶನಂ ಗುರುವು ತಾನೆಯದೆಂಬ ವಿಚಾರದಿಂದ ಸಾಂ-
ಗಾಂಗಿಕಮಾಗಿ ಷೋಡಶುಪಚಾರದಿ ಲಿಂಗವನರ್ಚಿಪೊಲ್[6](ಕರಂ)[6]
ಮಂಗಲಚಿತ್ತದಿಂದಲೆಜಿಸುತ್ತಿಹುದಾವಗ ಮೋಕ್ಷಕಾರಣಂ ೧೮೩

ಶ್ರೀಗುರುವಾಜ್ಞೆಮೀರಿದವ ಶಂಕರನಾಜ್ಞೆಯ ಮೀರಿದಂತವಂ
[7](ಶ್ರೀಗುರುಕಾಯದಿಂ ಬರೆ ಸುಚಿತ್ತಸುಭಿಕ್ಷವನೀವುದಲ್ಲದಾ-)[7]
ಶ್ರೀಗುರುಗಂಗಮಂ ಪರಮವಂದನೆಭಾವದೊಳೀವುದಾ ಕ್ಷಣಂ
ಶ್ರೀಗುರುತಾತಮಾತೆಪಿತಬಾಂಧವನೆಂಬ ವಿಚಾರವೊಳ್ಳಿತುಂ ೧೮೪

---

1. ಜಂಗಮಕ್ಕೆಂಬುತಂ (ಇ). 2. ವ (ಇ). 3. ಮುರಿಲ್ಲ (ಇ). 4. ನ್ನ (ಇ). 5. x (ಇ). 6. x (ಇ). 7. ಕಾಯರೂಪಿನಿಂದಿರೆ ಸುಚಿಸುತ್ತವ ಸುಭಿಕ್ಷದೊಳೀವು ದಲ್ಲದಿರ್ದಡಂ (ಇ).

ಕಂ. ತನ್ನಯ ಗುರು ತ್ರಿಜಗದ್ಗುರು
ತನ್ನಯ ಪತಿ ತ್ರಿಜಗತ್ಪತಿ ಸರ್ವಪ್ರಾಣಿಗ
ಳನ್ನುತಾಂತರಿಯಾಮಿಯೆಂ
ದುನ್ನಿಸಿ ಗುರುಪೂಜೆ ಮಾಡಲದು ಸೌಖ್ಯಕರಂ ೧೮೫

ಗುರು ಕಾಯರೂಪಿನಿಂದಿರೆ
ಗುರುವಂ ನರನೆಂಬ ಭಾವವಿಲ್ಲದೆ ದೃಢದಿಂ
ಹರನೆಂದರ್ಚಿಸಿದಾತಗೆ
ಪರಿಹರಿಸುಗು ಸಕಲದುರಿತವಾ ಕ್ಷಣದೊಳಗಂ ೧೮೬

ನಗುರೋರಧಿಕಂ ಮತ್ತಂ
ನಗುರೋರಧಿಕನ್ನಗುರೋರಧಿಕಂ ಎಂಬಾ
ಮಿಗೆ ಶ್ರುತ್ಯರ್ಥವ ಗ್ರಹಿ[1]ಸಿ(ಯೆ)[1]
ಸಗುಣದ ಸದ್ಭಕ್ತ ಮೋಕ್ಷದೂರಮದಹುದೇ ೧೮೭

ಅಂಗುಷ್ಠಾಗ್ರೇಷ್ಟುಷಷ್ಠಿ
ತ್ರ್ಯಂಗಮಹಾತೀರ್ಥಸಪ್ತಸಾಗರ[2](ದುದಕಂ)[2]
ಮುಂಗಡೆ ಕುಲಗಿರಿ ಗುಲ್ಫದಿ
ಸಂಗದೊಳುಡುವೃಂದ[3](ವಿರ್ಕುಗಾ)[3] ಪಾದದೊಳುಂ ೧೮೮

ಶರಧಿಸಪ್ತಕಗಳೊ[4](ಳಗಂ)[4]
ಉರವಣಿಸಿದ ತೀರ್ಥಸ್ನಾನಫಲಸಮುದಾ[5](ಯಂ
ಗು)[5]ರುಪದಜಲಬಿಂದುಸಹ
ಸ್ರರುಭಾಗೆಯೊಳೊಂದಕಂ ಸಮಾನತೆಯಿಲ್ಲಂ ೧೮೯

ಗುರುಪಾದೋದಕಗೊ[6](ಳದ)[6]
ಲ್ಪರ ಸಂಸಾರದ್ರುಮಗಳೆಲ್ಲ ನಾಶಮದಹು
ದುರುತರಶಿವ ತಾಂ ಗುರುವೆಂ-
ದೆರವಿಲ್ಲದ ಭಾವದಿಂ ಭಜಿಪ್ಪುದು ಗುರುವಂ ೧೯೦

1. ಸಿ (ಇ). 2. ಪಾದೋದಕದಿ (ಇ). 3. ವಿಕ್ರಾ (ಇ). 4. ಳು (ಅಇ).
5. ಯಗಳ್ಗು (ಇ). 6. ಳ್ದ (ಇ).

ಗುರುಸತ್ತನೆಂಬ ಭಾವದೊ
ಳುರುದುಃಖದಿ ತದ್ದಿನಂಗಳಂ ಮಾಡುವಗಂ
ಗುರುಲಿಂಗದ ಪ್ರಸಾದಂ
ಎರವಹುದಾತಂಗೆ ಬಳಿಕ ನರಕವನುಂಬಂ ೧೯೧

ಗುರುಸಾಹಿತ್ಯದ ಭಕ್ತಂ
ಗುರುತಾಂ ಲಿಂಗದಲಿ ಲೀಯ್ಯವೆಂಬೀ ಭಾವಂ
ಇರದಿರ್ದವ ಚಾಂಡಾಲಂ
ಗುರುಪಾತಕನವನೆ ನರಕಕಾರಣಪುರುಷಂ ೧೯೨

ಗುರುಲಿಂಗೋಭಯದೊಳು ತಾಂ
ಎರವಿಲ್ಲದ ಭಜನೆ ಮಾಡೆ ಫಲಿಸುವುದವಗಂ
ಕರಕಮಲದ ಲಿಂಗದೊಳುಂ
ಗುರುಕುಲಿ ತಾನಿಹುದೆಂದಿರದೆ ಭಜಿಸುವುದನಿಶಂ ೧೯೩

ಆ ಲಿಂಗವೆಯಂಗವದುಂ
ಆ ಲಿಂಗ[1](ವ ನೆನೆವ ನೆನಹೆ ಸುಜ್ಞಾನಪ್ರಾ-)[1]
[2](ಣಾಲಿಂಗಿತ ಲಿಂಗಾಂಗ-
ಸ್ಥಲದಾ ತುಂಗಗುಣಂ ಜಂಗಮಸಂಬಂಧಂ)[2] ೧೯೪

ಜಂಗಮಲಿಂಗವೆ ನಾದಂ
ಲಿಂಗವೆ ಬಿಂದುಮನಾದಿಯೆ ಭಕ್ತಿಸ್ಥಲಮು
ತ್ತುಂ[3](ಗ)[3]ನಾದಬಿಂದೆರ[4](ಡರ)[4]
ಸಂಗದಾದಿಯೆ ಉಭಯಸಂಬಂಧಮದಕ್ಕುಂ ೧೯೫

ವ॥ ಆ ಸಂಬಂಧಿಸಿದ ಭಾವವೆ ಜಂಗಮಂ ಆ ಜಂಗಮವೆ ಬಹಿಃಕರಿಸಿ ತೋರುತ್ತಿರಲದುಂ ಗುರುವನುಂ ಲಿಂಗವನುಂ ಹೇಂಗೆ ಪೂಜಿಸುತಿರ್ಪಂ ಹಾಂಗೆ ಪೂಜನಂಗೆಯ್ವುದುಂ ಮೃಚ್ಛಿಲಾದಿ ನಿರ್ಮಿತಂಗಳಿಂ ಲಿಂಗಂಗಳು ಹೇಂಗೆ ಹಾಂಗೆ ಜಂಗಮಂ ಶಿವಯೋಗಿಯೇ ಶ್ರೇಷ್ಠಂ ಸ್ಥಾವರಲಿಂಗದೊಳ್ ಮಂತ್ರಸಂಸ್ಕಾರದಿಂ ಶಿವನಿರ್ಪಂತೆ ಚರಲಿಂಗ ದೊಳವಿರತಂ ಹರನಿರ್ಪಂ.

1. ನೆನೆನವನೆನಹಿನ ಸುಜ್ಞಾನಪ್ರಾ (ಇ). 2. ಣಾ ಲಿಂಗಾಂಗಸ್ಥಲ ವೆಂದು ತುಂಗ ಗುಣಂ ಜಂಗಮಸಂಬಂಧಮುದಕ್ಕುಂ (ಇ). 3. x ದ (ಇ.) 4. ಡ್ಸಂಗದಾ (ಇ).

ಸಾಕ್ಷಿ: ಆಚಾರೇ ಮಂತ್ರಸಂಸ್ಕಾರೇ ಲಿಂಗೇ ವಸತಿ ಶಂಕರಃ
ಸದಾಕಾಲಂ ವಸತ್ಯೇವ ಚರಲಿಂಗೇ ಮಹೇಶ್ವರಃ

ಎಂದುದಾಗಿ ಚರಲಿಂಗದಲ್ಲಿ ಸದಾಸನ್ನಿಹಿತನಪ್ಪಂ ಶಿವಂ ತನುವಿನಾಚಾರಕ್ರಿಯಾ ಲಿಂಗಾವಸರದ ಲೋಲುಪತ್ವವೇ ಗುರು ಮತ್ತಾ ಪೂಜೆಯು ನೆನಹ ಮಾಡುವ [1](ನಿರ್ವಿಷತೆಯೆ?)[1] ಲಿಂಗಂ ಮತ್ತಾ ನೆನಹು ಪೂಜೆಗಳ ಒಳಹೊರಗೆನ್ನದರಿವಿನ ಕಳೆಯಂ ತನ್ನೊಳು ವೇಧಿಸಿದ ತಿಳುಹೆ ಜಂಗಮಂ ಇಂತೀ ತ್ರಿವಿಧದೊಳ್ ಕೂಡಿ ಭಿನ್ನವಿಲ್ಲದಾತನೆ ತ್ರಿವಿಧಸಂಪತ್ತೆನಿಸುವಂ ಈ ತ್ರಿವಿಧಸಂಪತ್ತಿನ ಭಿನ್ನದರಿವಿನ ಚಿದ್ರಸವೇ ಬಹಿಃಕರಿಸಿ ಆ ತ್ರಿವಿಧವಲ್ಲಿಯು ಪದಜಲವಾಗಿ ತೋರುತಿರ್ಕಾ ವಿಶೇಷ ವೀರಂಗಂ
೧೯೬

ಉ. ಮಾ. ವೃ.

ಲಿಂಗದ ತೀರ್ಥವಂ ಮನದಿ ಪ್ರೀತಿಯ ಭಾವದಿ ಪಾನಮಾಡುವೊಲ್
ಜಂಗಮತೀರ್ಥವಂ ಗುರುಪದೋದಕವಂ ಕೊಳವೇಳ್ಕು ಭಕ್ತಿಯಿಂ
ಮಂಗಲಕಾಗ ಮಂಗಲವ ಮಾಡುವ ಸಿದ್ಧಿಯನೀವುತಿರ್ಕುಗುಂ
ಹಿಂಗದೆ ಸರ್ವಪಾವನಕೆ ಪಾವನವಪ್ಪುದು ಪಾನಮಾಳ್ಪಗಂ ೧೯೭

ಶೂಲೆಯಪಸ್ಮರ ಜ್ವರ ಮಸೂರಿಕ ಕೋಷ್ಠ ಜಲೋದರ ಕ್ಷಯಾ
ಜಾಲಿಕ ಮಾಂದ್ಯ ಗುಲ್ಮ ಬಹುಮೂತ್ರ ಭಗಂಧರ ಕಂಡುಶೀರ್ಷದಾ
ಮಾಲೆ ವಿನೇತ್ರರೋಗ ರುಜಿ ಕಾಮಿಲ ಮಾರುತ ಶೀತ ಮುಖ್ಯರು-
ಗ್ಜಾಲಗಳಂ ವಿದಾರಿಸುಗು ಪಾದಜಲಂ ಭವರೋಗ [2](ಕೌ)[2]ಷಧಂ ೧೯೮

ಈಶಪದಾಂಬು ಸೋಂಕಿದ ಸದಾಗತಿಯಂ ಉರುಗೇಂದ್ರಭುಂಜಿಸ
ಲ್ಕೇಶವನೇತ್ರಪಾದನಿಗೆ ಮಂಡನವಾದನು ಕೇಳ್ಮನೋಹರಾ-
ಭ್ಯೈಶಪದಾಂಬುವಿಂ ರವಿಯು ಕೋಷ್ಠವ ನೀಗಿದ ದಂಡನಾಥಗಂ
ಮಿಾಸಲ ಪೌರುಷಾಯ್ತು ಚರಣಾಂಬು ಮಹತ್ವವದೇನನೆಂಪೆಪಂ ೧೯೯

ಗೋಮುಖನೆಂಬ ವೈಶ್ಯನನು ಸೋಂಕಿಹ ಜೀರ್ಣಮ[3](ದೋಡಿ)[3]ತಾ ಕ್ಷಣಂ
ಪಾಮರನೊರ್ವ ಜಂಗಮವ ಘಾತಿಪೆನೆಂದು ತಗುಳ್ದೋಡುವಂ
ಭೂಮಿಯೊಳೊಂದು ಸರ್ಪಚರಣಾಂಬುವ ಸೋಂಕಿದ ಜಿಹ್ವೆಯಿಂದಲಾ
ಗಾವಿಲನುಂಗುಟಾಗ್ರ[4](ವನು ಔ)[4]ಡೆ ಗಣತ್ವಮುದಾಯಿತಾತಗಂ ೨೦೦

1. ನಿಮಿಷತೆತ್ವ (ಇ). 2. ಮೌ (ಇ). 3. ನೋಡಿಸಿ (ಇ). 4. ವನೌ (ಇ).

ಲಿಂಗದ ತೀರ್ಥವಂ ಅಶುಚಿತಂಕೆಯೊಳಂ ಕುಡಿದಾತ ದ್ರೋಹಿ ತಾಂ
ಲಿಂಗದ ತೀರ್ಥವ ಪಿಡಿದ ಹಸ್ತದೊಳೆಂಜಲು ಶಂಕೆಗೈದು ತಾಂ
ಹಿಂಗದೆ ನೀರಿನಿಂ ತೊಳೆಯೆ ಕಾಮಿಸಿ ತನ್ನಯ ಮಾತೃಸಂಗದು-
ತ್ತುಂಗದೊಳಿರ್ದ ಸಾದೃಶವದೆಂದ ಚತುರ್ವಿಧಶಾರನಂಗವಂ ೨೦೧

ಜಂಗಮ (ಪಾದದಾಜಲವ ತನ್ನಯ ಲಿಂಗಕೆಯಿತ್ತು ಪ್ರೇಮದಿಂ)
ಹಿಂಗದೆ ಕೊಂಬುದುತ್ತಮ ಪದಾಂಬುವಿನಿಂದವಗಾಹಿಸೂದು ತ
ಲ್ಲಿಂಗಕೆ ಶೋಭನಂ ಮರಳಿಯಾ ಜಲವಂ ಘನಪ್ರೀತಿಯಿಂ ಕೊಳ-
ಲ್ಕಂಗಲಲಿಂಗರೂಪನಹನೆಂಬುದು ನಿಶ್ಚಯವಾಗಮಾರ್ಥದೊಳ್ ೨೦೨

ಶಾ. ವಿ. ವೃ.
ವಿರಜೆ ಸ್ವರ್ಣಕಿ ಕೃಷ್ಣವೇಣಿ ಯಮುನಾ ಪ್ರಾಯಾಗ ಸೌಗಂಧಿವಂ
ಜರಿಮ..................ತಮಸ ಪ್ರಭಾಸಿ ಭೋಗಾವತೀ
[2](ಸ)[2]ರಯೂ ಗೊಮತಿ ತುಂಗಭದ್ರೆ ವಿಮಲಾಭೀ ಶೋಣ ಕಾವೇರಿ ವೈ-
ತರಣೀಂ ಗೌತಮಿ ಮುಖ್ಯತೀರ್ಥ ಸರಿಯಲ್ಲಂ ಪಾದತೀರ್ಥಕ್ಕೆಯುಂ ೨೦೩

ಶಿವನಿರ್ಮಾಲ್ಯವ ಮಸ್ತಕಾಗ್ರದೊಳು ತಾಂ ಸತ್ಪ್ರೇಮದಿಂ ಧಾರಿಸಲ್
ಭವಬಂಧಗಳು ಬಿಟ್ಟು ನಿರ್ಮಳನಹಂ ಭಿರ್ತಾಪ ಸಂಗಿಷ್ಟಮಂ(?)
ಜವದಿಂದಿತ್ತ ಮಹೇಶಪ್ರೀತಿವಡುವಂ ನಿರ್ಮಾ.... ..............
...........ಅಪ್ಪುದು ದಾಂಟದಾ ಕುಸುಮದತ್ತಂ ಭೂಮಿಯೊಳ್ ಸಿಕ್ಕಿದಂ
೨೦೪

ವ || ಸೋಮಾಸೀಮಾರಂ ಬಿಸುಟ ನಿರ್ಮಾಲ್ಯಮಂ ದಾಂಟಲಂಜಿದಳಾ ಕಾವೇರಿಯೆಂಬ ನದಿ ತಾಂ ಶಿವನಿರ್ಮಾಲ್ಯವನುದಾಸೀವಂಗೈದ ದೇವೇಂದ್ರನೈಶ್ವರ್ಯ ಪೋದುದು ಇಂದುಮತಿಯ ಮಾನುಷ್ಯಜನ್ಮದ ಶಾಪಮಂ ಬಿಡಿಸಿತ್ತೀ ನಿರ್ಮಾಲ್ಯಂ ಓಹಿಲಯ್ಯನ ರಕ್ಷಿಸಿತೀ ನಿರ್ಮಾಲ್ಯಂ ಇಂತ...............ಳ್ ಧರಿಸುವುದುಂ ೨೦೫

ರುದ್ರ ಮುಡಿದುದ ಮುಡಿವವ
ರುದ್ರಂ ಘ್ರಾಣಿಸಿದುದನಾಘ್ರಾಣಿಸಿದವ
ರುದ್ರಂ ಉಂಡುದನುಂಡವ
ರುದ್ರಂ ತಾನಪ್ಪನೆಂಬುದಿದು ಶ್ರುತ್ಯರ್ಥಂ ೨೦೬

1. ವುರಪಜ್ವಲಪ್ರೇಮದಿ ತನ್ನಯ ಲಿಂಗಕಿತ್ತುಂ (ಇ). 2. ಸ್ಯ (ಇ).

ಪಾದಾಂಬುಗೆ ನಿರ್ಮಾಲ್ಯ
ಕ್ಕೀ ಧರೆಯೊಳ್ ಪ್ರತಿಯ ಕಾಣೆನೆಂದು ದ್ವಿಜರೊಳ್
ವಾದಿಸಿ ತೂಗಿಯೆ ಗೆದ್ದಂ
ಮಾದೇವನ ಭಕ್ತ ಕಾಚಿರಾಜಂ ಜಗದೊಳ್ ೨೦೭

ಗುರುಚರ[1](ನಿರ್ಮಾಲ್ಯಂಗಳ)[1]
[2](ನುರುಪರವೆಂದರಿದು ಘ್ರಾಣಗೆಯ್ಯುವ ಭಕ್ತಂ)[2]
ಗುರುಚರವಮುಡಿದುದ ಮುಡಿವವ
ಗುರುಚರರೂಪಪ್ಪನೆಂಬುದಿದು ಶ್ರುತ್ಯಾರ್ಥಂ ೨೦೮

ಗುರುಚರಣಪಯೋಜಕ್ಕಂ
ಹರುಷದಿ ಶರಿರಾರ್ಥ ಪ್ರಾಣಂಗಳ ದಯದಿಂ
ಕರಣಂಗಳ ಹರಕಲಿಸದೆ
ಪರಿಣಮಿಸುತ ಮಾಡಲ್ ಗುರುಭಕ್ತಿಯದಹುದುಂ ೨೦೯

ಶಿವಲಿಂಗವ ತನುವಿನೊಳುಂ
ಜವದೊಳ್ ಬೆರಸಿಮಾಳ್ಪ ನಿತ್ಯಕೃತ್ಯಗಳನುಂ
ಸ............
........ಶಿವಲಿಂಗಭಕ್ತಿಯಿಹುದಾತನೊಳುಂ ೨೧೦

ಹರವೇಷವೊಲಿದು ಧರಿಸಿದ
ಚರಕಂ ವಸ್ತ್ರಾನ್ನಪಾನಹೇಮಂಗಳನುಂ
ಭರದಿಂದಿತ್ತುಂ ಹರುಷವ
ಹರಕರಿಸಲ್ ಚರಭಕ್ತಿಯವ್ರತ ನೆಲೆಯುಹುದುಂ ೨೧೧

ಅಸಮವಿಲೋಚನಲಿಂಗಕೆ
ಸ್ವಶರೀರಂ ಪಿಡಿದು ನೆನೆದು ಬಂದ ಪದಾರ್ಥವ
ಸಸಿನದಿ ಯೋಚಿಸಿಯರ್ಪಿಸಿ
ಸುಸರದಿ ಭೋಗಿಸೆ ಪ್ರಸಾದ[8](ಕಾಯಮದೆನಿಕುಂ)[3] ೨೧೨

---

1. ಪೂ ಭಕ್ತಗಳ (ಇ). 2. ನಾಘ್ರಾಣಂಗೈದಪ (ಇ). 3. x x x (ಇ).

[1](ಅಂಗ)[1]ದೊಳು ಗುರುಭಕ್ತಿಯು
ಲಿಂಗದ ಭಕ್ತಿಯನು ಮನದಿ ಚರಭಕ್ತಿಯನರಿ-
[2](ಲಿಂಗರ್ಪಿಸುವಾ ಭಕ್ತಿಯು)[2]
ಹಿಂಗದಿರಲ್ ವಿಶೇಷ[3](ವಿರಗಿದು)[3] ಚತುಸ್ಸಾರಂ ೨೧೩

ಈ ಚತುರ್ವಿಧಸದ್ಭಕ್ತಿಯ
ಸೂಚನೆಯಂ ಬಲ್ಲಪಂಗವಾ ಗುರುಚರದೊಳ್
ಪ್ರಾಚುರವಿಶ್ವಾಸಂಗಳ
ನಾಚರಿಸುತ ದಾನಮಾಳ್ಪ ಬಗೆಯಂ ಕೇಳ್ವೈ ೨೧೪

[4](ಗುರುಭಕ್ತಂ ತಾಂ)[4] ಪ್ರೌಢೆಯು
ಕರಕರಿಸಲ್ ನಿನ್ನ ಗುರುವು ಮುಟ್ಟಿದನೆಂದೆನೆ
ಗಿರಿಜೆಗೆ ಸರಿಯೆನಗೆಂದನು
ಗುರುಲಿಂಗಿದು ಗುಣವೆನಲವಗೆಲ್ಲಿಯ ಮೋಕ್ಷಂ ೨೧೫

ದಸರಯ್ಯನ ಚರವೇಷವು
ಕಿಸುರುತ್ತೊದೆಯಲ್ ಮನದಿಂ ದುಗುಡಮದಾಗಲ್
ವಿಷಮಾಕ್ಷಭಕ್ತನೆನಿಪನೆ
ಪಸರಿಸುತಿಹ ಕ್ಷಮೆಯ ಕಂಡು ಪೊಗಳಿದರಾಗಳ್ ೨೧೬

ವ ॥ ಗಿರಿಜೆಗಂ ಭೃಂಗಿ ಚರ್ಮವನಿತ್ತಂತೆ ದುರ್ಜನರ್ಗಂ ಕಾರಿಕಾಲಮ್ಮೆ ಶರೀರಮಂ ಕೊಯ್ದಿತ್ತಂತೆ ಸಿರಿಯಾಳನೀಶಂಗೆ ಮಗನ ಕೊಯಿದಿತ್ತಂತೆ ಚರಲಿಂಗಂ ಶರೀರವನಿರಿದು ತರಿದಡಂ ಸಂತೋಷಿಸುತಿರ್ಪುದೇ ಭಕ್ತಿಮತಂ ಶೂಲವನೇರಿದ ಗುರು ಭಕ್ತಂಗಂ ಶೂಲಮನೇರೆಂಬುದು ಗುರುಲಿಂಗಂ ಸಲುವುದೆಯೆಂದನಾದಡೆ ತನುವುಂ ಕೊಟ್ಟುದು ಸಟೆಯಪ್ಪುದುಂ ಕೋಪತಾಪಕಾಮಲೋಭರೋಷರಾಗವಿವೇಕಜ್ಞಾನ ರೂಪುಕುರೂಪುವಂ ಚರಲಿಂಗದೊಳ್ ವಿವರಿಸಿದೊಡವಂಗೆಲ್ಲಿಯ ಭಕ್ತಿಯದುಂ ಕದ್ದ ಜಂಗಮವಂ ಕೊಡದೆ ಕೊರಲ್ಕೊಯಿದುಕೊಂಡ ಶರಣದೇವಯ್ಯನಂತೆಯುಂ ಗುಂಡ ಬ್ರಹ್ಮಿಗಳಂತೆ ವೀರಚೋಳಪಗಲ್ಕೊಳನವರಂತಿಪ್ಪುದೇ ಚರಲಿಂಗವಿಶ್ವಾಸಂ ತನ್ನ ರಾತ್ರಿಗೀತಂ ತಸ್ಕರಂ ಪಗಲ್ಗೀತಂ ಚರವೆಂದು ಪೂಜಿಸಿದಾತಂ ಅಷ್ಟವಿಂಶತಿಕೋಟಿ ನಿರವಯವನುಂಬಂ ಚರಲಿಂಗದ ಕೂಡುಂಬುದು ಭಕ್ತಂಗೆ ಸಂಬಂಧವಲ್ಲಂ ಚರವಾ

1. x x (ಇ) 2. ಲಿಂಗವಿಸೆ ಪ್ರಸಾದದ ಭಕ್ತಿ (ಇ). 3. ವಿರನಿದು (ಇ).
4. ಗುರುಭಕ್ತಾಂಡಾರಿ (ಇ).

ರೋಗಿಸಿದ ಶೇಷವನುಂಬುದು ಸಮ್ಮತಂ॥ಚರವಂ ನೋಯಿಸಿ ಪಾದಾಂಬುವಂ ಕೊಳಲ್ಗ
ರಳವದುಂ ಮಂಗಲೂರ ಸೋಮಣ್ಣಂಗಂ ಜಂಗಮದ ಮುಖವೆಯೆನ್ನಮುಖವೆಂದು
ಈಶ್ವರಂ ನುಡಿದುದಂ ಅರಿದುಂ ಜಂಗಮಕ್ಕೆ ಮಾಡುವುದು ಗುರುಲಿಂಗಚರವಂಚಕನಲ್ಲ
ದಂಗಂ ಶಿವಂ ರುಜೆಯಂ ತರುವನೆಂದರಿದು ಚಿಂತಿಸದುದೆ ಲಿಂಗವಿಶ್ವಾಸಂ ಚರಮಂ
ಹರನೆಂದರಿದು ನಿರ್ಭಯದಿಂದಿರೆ ಭಕ್ತಿ ಎಲ್ಲಿಯುದವಂಗಂ ದಕ್ಷಕಾಮಕಾಲಜಲಂಧರ
ವಿಷ್ವಕ್ಸೇನರೀಶನೊಳು ಗರ್ವಿಸಿ ಕೆಟ್ಟೊಲು ಚರಲಿಂಗದೊಳ್ ಗರ್ವಿಸಿದವಂ ಕೆಡುವುದು
ದಿಟಂ ಶಿವಂ ಭಕ್ತನಾಗಲಾದಯ್ಯಂ ಸೋಮೇಶನೆಂದರಿಯದಿರ್ದಂ ಸೋಮೇಶನಂ
ಕಂಡೀಶನೆಂದು ಚರ ಪ್ರೀತಿಗೆ ಚರವಿಶ್ವರೂಪಹಂ ಪಂಪಾಕ್ಷೇತ್ರದೊಳ್ ಗಿರಿಜೆ ಶಿವನಂ
ಪರವಸ್ತುವೆಂದುದು ಸಂದೇಹವಿಲ್ಲಂ ಚರಲಿಂಗವಂ ಶಿವನೆಂಬುದು ಭಕ್ತಂಗೆ ಸಂದೇಹ
ವಿಲ್ಲಂ ಸುವರ್ಣಮನೊರೆಯಲುಂ ಇಕ್ಷುದಂಡಮನರೆಯಲುಂ ಬಾವನ್ನಮಂ ಮಸೆ
ಯಲುಂ ಸೊಗಸನೀವಂತೆ ಭಕ್ತನಂ ಚರಲಿಂಗ ನೋಯಿಸೆ ಭಕ್ತಿ ಸಂದವರ್ಗೆ ಲೇಸಂ
ಮಾಡುವಂ ಮಿಸುನಿಯು ಕಾಸಲ್ಕೆಲಹವೊಲುಂ ಚರಂ ಭಕ್ತನಂ ಜರಿದು ಝಂಕಿಸಿ
ಝಾಡಿಸೆ ನಿರ್ಮಳನಹಂ ರೋಗಿಗೆ ವೈದ್ಯ ಮುನಿಯದೆಯವನ ರೋಗಕ್ಕಂ ಮುನಿವಂತೆ
ಭಕ್ತಂಗಂ ಮುನಿಯಂ ಅವನಂ ಪಿಡಿದ ಆಸೆರೋಷಕ್ಕಂ ಮುನಿವನಾ ಚರಲಿಂಗಂ ಪ್ರಭು
ಬಸವರಂ ಚರಹೊರಗೆನೆ ಅವರ್ ಕ್ಷಮೆಯಂ ಬಿಡದಿರ್ದಂತೆ ಅಸುಮನ ತನುವಂ ಚರ
ನೋಯಿಸೆ ಕ್ಷಮೆಯಂ ಬಿಡಂ ಶರಣರ್ಗೆರಗಲ್ ಶಿವಪೂಜೆಕೋಟಿಗಂ ಸರಿಮಿಗಿಲೆಂದು
ದೀಶನ ವಾಕ್ಯಂ ಚರವಂ ನೋಯಿಸಿ ಹರಂಗೆರಗೆ ಹರಂ ಮುನಿವನಾತಂಗಂ ಶರಣರಂ
ಕಂಡೀಶನ ಮರೆತು ಆದ್ಯರ ಪದಪದ್ಮಕ್ಕೆರಗಿದ ನಂಬಿ ಸೋಮೇಶ್ವರವಾಕ್ಯ ಸಾರುತಿರ್ಕುಂ
ಶರಣರಿಲ್ಲದ ವೇಳೆ ಹರಪೂಜೆಯ್ಯೆಸಲೆ ಶರಣರಿಗೆ ಹರಪೂಜೆ ಸಲ್ಲಂ ಪ್ರಭುಸಿದ್ಧರಾಮರ್
ಬರಲ್ ಬಸವ ತನ್ನ ಶಿವಾರ್ಚನೆಯ ಜರೆದು ಬಂದೆರಗಿದುದು ದಿಟಂ ಮತ್ತಂ ರಾಮಂಗಂ
ರಾವಣವಧೆ ಪರಶುರಾಮಂಗಂ ಕಾರ್ತವೀರ್ಯವಧೆ ಬಿಡದಂತೆ ವೀರಶೈವರ ವಧೆಮಾಡಿದವಂ
ಭೂಮಿ ಲಯವಪ್ಪನ್ನೆಗಂ ನಿರಯದ ಸೇವಿಪಂ ಕಪಿಲನಂ ನೋಯಿಸಿದ ಸಗರರುರಿದಂತೆ
ಚರರ ನೋಯಿಸಿದವಂ ನಿರಯದೊಳುರಿವಂ ಗೌತಮಂಗಂ ಗೋಹತ್ಯಮಂ ಹೊರಿಸಿ
ದರ್ಗಂ ಶಿವದ್ರೋಹವೆಡೆಗೊಂಡಂತೆ ಚರದ ಮೇಲೆ ಇಲ್ಲದ ನಿಂದೆಯಂ ಹೊರಿಸಿದವರ್ಗಂ
ಶಿವದ್ರೋಹವೆಡೆಗೊಂಬುದುಂ ಶಿವಚಿತ್ತಾನಂದನಂ ಗಂಧರ್ವರು ಹಾಸ್ಯವಾಡಿ ಮೃಗ
ವಾದೊಲುಂ ಚರಲಿಂಗದ ಹಾಸ್ಯದವರ್ ಚಾಂಡಾಲರಹರುಂ ಶ್ವೇತಸುಕುಮಾರವ್ಯಾಧರ
ಪಾತಕಂಗಳೊಳಗಣುಗುಣವಿರಲ್ ಪ್ರೀತನಾದ ಶಿವನಂತೆ ದುರ್ನೀತಭಕ್ತರಂ ಶಿವ
ನೆಂದು ಕಾಣ್ಬುದುಂ ಏಣಾದಿನಾಥ ಚೋಳ ದಸರಯ್ಯ ಬಸವೊರುಮುಕ್ಕಾಳ್ವರುಗ್ರಾ
ಕ್ಷನಲಾಥನರ್ಗೆರಗಿ ಭಕ್ತರಾದಂತಲ್ಲದಿರ್ದಡವರ್ಗೆಲ್ಲಿಯ ವಿಶ್ವಾಸಂ ಹಾದರ ಹುಸಿ
ಕಳವಿಂ ಚರವಿರೆ ಈಶನೆಂದು ಕಾಣ್ಬುದುಂ ಅಜನಿಗಾಗಿ ಕೇತಕಿ ಹುಸಿಯ ನುಡಿದು
ಹರಪ್ರೀತಿಗೆ ಹೊರಗಾದಂತೆ ಶರಣರೊಳು ಹುಸಿದವಂ ಶಶಿಧರಗೆ ದೂರನವಂ ಭಾಷೆ
ವಂತಲ್ಲಯ್ಯನಂತೆ ಹುಸಿ ಹೊದ್ದದಿರವೇಳ್ಕುಂ ಅಷ್ಟವಿಂಶತಿಪಾಪಂಗಳಂ ಹುಸಿಯೊಂದುವ

ತೂಗೆ ಹುಸಿ ಭೂಮಿಯುಂ ಬಿಡದಿರ್ದುದುಂ ಚರವಂ ಹರನೆಂಬುದು ಭಕ್ತಂಗಂ ಭಾಷೆಯಹುದುಂ ಶರಣರ ದುರ್ಗುಣಗಂಡು ನರನೆನೆ ಹುಸಿಹೊದ್ದಿದುದರಿಂ ಶರಣರ ಕವಳಿಗೆಗವ ಸಲ್ಲಂ ಲಿಂಗವುಳ್ಳ ತನುವಿನ ಬಾಧೆ ಲಿಂಗದ್ರೋಹಕ್ಕೆ ಸಮನದುಂ ಸತಿ ತೊತ್ತು ಶಿಷ್ಯಲೆಂಕಕರ್ತಂಗುತ್ತರ ಸಲ್ಲದುಂ ಪ್ರತ್ಯುತ್ತರಕಾವ ನರಕಂ ಶರಣರ್ಗೆರಗದ ನಂಬಿಯುಂ ಹೊರಗೆಂದನಾ ಮೆರೆಮಿಂಡಂಗರ್ವದಿ ಶರಣರ್ಗೆರಗದವಂ ಕಾಲಕಾಮರೊಲುರಿವಂ ವರುಷವುಂಡಗುಳಗುಳಿಗೆ ಕೋಟಿವರ್ಷಲೆಕ್ಕದೊಳುಂಬ ನರಕಂ ಸಿಕ್ಕದೆ ಶಿವಾರ್ಚನಂಗೈದು ಇಕ್ಷ್ವಾಕು ಪ್ರಮಥರೊಳ್‌ಸಲೆ ಸಂದಂ ಶಿವಲಿಂಗವ ಭಾವದಿಂ ಶಿಶ್ನವೆಂದುಇಕ್ಷ್ವಾಕುಶೂದ್ರಂ ಭಾವಿಸೆ ಶಿಶ್ನನೇತ್ರನಾದಂ ಭಾವಭೇದದಿಂ ಗುಪ್ತಗಣಂಗಂ ಬಹಿರಂಗದೊಳ್ ಲಿಂಗವಿಲ್ಲದಿರೆ ಮೋಸದಿಂ ಮಹದೇವಿ ಕವಿಯೆಂಮ ಇಳೆಯೊಳ್ ಜನಿಸಿದಳುಂ ಪರಮೇಶ್ವರನ ಸಮಯಮುಂ ದೂರ್ವಾಸಂ ಕೇಳಲ್ನಂದೀಶಂ ಹರಪರವಶದಿಂದರಿಯದೆ ಮರುಮಾತುಗೊಡದಪರಾಧದಿಂ ನರಜನ್ಮವಾದುದಾತಂಗಂ ಕೋಪದಿಂ ದೂರ್ವಾಸಂ ವ್ಯಾಘ್ರನಾದಂ ಸಕಲೇಶಮಾದರಸರ್ಗಂ ವಿಕರಿಸಿತ್ತೀ ಕೋಪಂ ವಿಶ್ವಾಮಿತ್ರನ ಕೋಪದಿಂ ಹೊಲತಿಯರ್ಪುಟ್ಟಿದುದರಿಂದಂ ಕೋಪವೆ ಹೊಲೆಯುಪ್ಪುದರಿಂಕೋಪವಿರ್ದ ವಿಪ್ರ ವ್ಯಾಘ್ರನಾದಂ ಅದರಿಂ ಕೋಪ ಸಲ್ಲದುಂ ಕಾರ್ತವೀರ್ಯಂ ಕೊಂದನೆಂದು ಜಮದಗ್ನಿಗೆ ಹುಟ್ಟಿತೆ ಕೋಪಂ ಚರರ್ ಕೊಲೆ ಘಟ್ಟಿವಾಳಂ ಮುನಿದನೆ ಚರಲಿಂಗಂಗಳ್ ಕೊಲಲು ಗಾಣದ ಕಣ್ಣಪ್ಪಯ್ಯಂ ಕೋಪಿಸಿದನೆ ಸಿದ್ಧರಾಮಂ ಕಿಡಿಗಣ್ಣಂ ಕೆದರೆ ಪ್ರಭುಗಂ ಕೋಪ ಪುಟ್ಟಿತೇ ಭೂತಂ ತಿನೆ ಸಿದ್ಧರಾಮಂ ನೊಂದರೆನೆ ಆರೌದಡಂ ನೋಯಿಸಿದೊಡಂ ಚಿತ್ತದೊಳ್‌ನೋಯದಿರ್ಪಾತನೆ ಭಕ್ತಂ ಇಂತಪ್ಪ ಶಾಂತಿಯನುಳ್ಳಾತನೆ ಆಗಿ ಪಾತ್ರಸತ್ಪಾತ್ರವರಿದು ದಾನಂಮಾಡುವುದುಂ.... ... ೨೧೭

**ಉ. ಮಾ. ವೃ.**

ಹಿಂಗಿ ಲಲಾಟಮಂ ತೊಡಗೆ ತಂಡುಲವಿಕ್ಕುವನಂತೆ ಮೂರ್ಧ್ನಿಗಂ
ಓಗರತುತ್ತುತುತ್ತುಗಳ ನೀಡುವನಂತೆ ಸಜೀವವಾಗಿಹಾ-
ನಾಗರ ಬಿಟ್ಟು ಹಾಲನು ಶಿಲಾಹಿಗೆ ನೀಡುವನಂತೆಯಪ್ಪುದುಂ
ಜಂಗಮಪೂಜೆಯಿಲ್ಲದೆ ಕರಸ್ಥಲಲಿಂಗದ ಪೂಜೆ ಮಾಳ್ಪಗಂ ೨೧೮

ಜಂಗಮಜಿಹ್ವೆ ಶಂಕರನ ಜಿಹ್ವೆ ಮಹೇಶನನೇತ್ರಜಂಗಮೋ
ತ್ತುಂಗವಿನೇತ್ರವೀಶನ ಮುಖಂ ಚರಲಿಂಗಮುಖಂ ಕಪರ್ದಿಯು
ತ್ತುಂಗಸುಶೀರ್ಷ ಜಂಗಮದಶೀರ್ಷವದುಂ ಶಿತಿಕಂಠನಂಗವೇ
ಜಂಗಮದಂಗವೆಂದು ಬಗೆವುತ್ತಿಹ ಭಕ್ತನೆ ಮೋಕ್ಷವಲ್ಲಭಂ ೨೧೯

ಪಾತ್ರವಪಾತ್ರವೆಂಬುವ ವಿಚಾರಿಸಿ ಭಕ್ತನು ತೀವ್ರಚಿತ್ರದಿಂ
ಪಾತ್ರವಿನೇತ್ರಲಾಂಛನರುಮಲ್ಲದ ಮಿಕ್ಕಿನ ಲಾಂಛನಾದಿಗಳ್
ಪಾತ್ರಿಗರಲ್ಲವೆಂದು ನೆನೆದುಂ ಶಿವವೇಷವ ಧಾರಿಸಿರ್ಪರಂ
ಪಾತ್ರಿಕರೆಂದು ದಾನವನು ಮಾಡುವ ಭಕ್ತನೆ ಮೋಕ್ಷಕಾಂತನುಂ ೨೨೦

ವಿಪ್ರರ ಪೂಜೆಯಿಂ ಪರಶುರಾಮನು ಸಾಗರದಲ್ಲಿ ಬಿದ್ದನುಂ
ವಿಪ್ರಗೆ ಕರ್ಣಕುಂಡಲವನಿತ್ತಿಹ ಕರ್ಣನ ಸೂನು ಸತ್ತನುಂ
ಅಪ್ರತಿಚಾರಪೂಜೆಯನು ನಂಬಿದ ಸಿಂದಮಲಿಂಗವಾದನುಂ
ವಿಪ್ರಗೆ ಭೂಮಿಯಿತ್ತ ಬಲಿಯಿತ್ತನಪಾತ್ರಕೆ ಮಾಡಲಕ್ಕುಮೇ ೨೨೧

ವಿಪ್ರಗೆ ಅರ್ಧದೇಹವನು ಕೊಟ್ಟ ಮಹಾಂಧನು ಕೆಟ್ಟ ಹೇರುರಾ-
ಸುಪ್ರಭು ನಾಗಯಂ ಚರಕೆ ದೇಹವನಿತ್ತು ಗಣೇಶನಾದನುಂ
ವಿಪ್ರಗೆ ದೇಶವಿತ್ತುರಗಕಂಚುಕದೊಟ್ಟ ಜೀಮೂತವಾಹನುಂ
ಕ್ಷಿಪ್ರದಿ ದೇಶವಿತ್ತು ಚರಕಂ ಮೊನೆದಾರನು ರುದ್ರನಾದನುಂ ೨೨೨

ಪಕ್ಷಿಯ ಮಾಂಸಕಂ ಸಿಬಿಯು ದೇಹದ ಮಾಂಸವನಿತ್ತು ಕೆಟ್ಟನುಂ
ಆ ಕ್ಷಣಚಾರಕಂ ಶರಣದೇವಯ ತನ್ನಯ ದೇಹಚರ್ಮವಂ
ಲಕ್ಷಿಸಿಕೊಟ್ಟು ತಾಂ ಪ್ರಮಥಪಟ್ಟದ ಗದ್ದುಗೆಗಾಗ ಕುಳ್ಳಿತುಂ
ಮೋಕ್ಷದಪೇಕ್ಷೆಯಾದವನ ಪಾತ್ರಸುಪಾತ್ರವ ಕಂಡು ಮಾಳ್ಪುದುಂ ೨೨೩

ಭಿಕ್ಷವನಿಕ್ಕಲಿಲ್ಲವೆನೆ ಶಾಪಿಸೆ ರಾಕ್ಷಸನಾಗಿ ಮತ್ತೆ ತಾಂ
ಭಕ್ಷಿಸುವನ್ನವಿಕ್ಕಿಯವನೊರ್ವನು ನಿರ್ಮಳನಾಥನಾ ಕ್ಷಣಂ
ಭಕ್ಷಕೆ ಗೋಮಯಂಗಳನುಯಿಕ್ಕಿ ವಿನಾಸತಿರಾಯ ಕೆಟ್ಟನುಂ
ಭಿಕ್ಷವನಿಕ್ಕಿ ಪ್ರೀತಿಯೊಳೆ ವಂದಿಸಿದಾತನೆ ಮೋಕ್ಷವಲ್ಲಭಂ ೨೨೪

..............................................ಂದಿಸಿದಾತ ರುದ್ರಸಾ
ದ್ರುಕ್ಷಗಣೇಶನಾದ ವೃಷನಾಮ[1](ದೊಳೀ)[1]ಶನು ಬಂದು ಬೇಗದಿಂ
ಭಿಕ್ಷವ ಬೇಡೆ ವಂದಿಸಿದ ಬ್ರಾಹ್ಮಣಗಂ ಶ್ವಪಚಾತ್ಮಜಾತೆಗಂ
ಮೋಕ್ಷಮದಾಯ್ತು ಭಕ್ತರಿಗೆ ವಂದಿಸಿದಾತನೆ ರುದ್ರನಪ್ಪನುಂ ೨೨೫

1. ಮಾಗೀ (ಇ).

ಜಂಗಮಪಾದಪದ್ಮದೊಳು ಬಿದ್ದನ ಪಾತಕ ಬಿದ್ದುಹೋಹುದುಂ
ಪೊಂಗುತಲೆದ್ದಡೇಳವವು ವಂದಿಸದಿಪ್ಪಡೆ ಮಾತೃಪಿತೃ....
............ವು ತನ್ನಯ ಧರ್ಮವೆಲ್ಲವುಂ......................
ಹಿಂಗುಗು ಭಕ್ತಿಯಿಂ ನಮಿಸಿದಾತ[1](ಗೆ)[1] ರುದ್ರನ ಪಟ್ಟವಪ್ಪುದುಂ ೨೨೬

............ಸೆಳನೀರಿನಿಂದ ಚರಲಿಗಂದ ಪಾದಕೆ ಮಜ್ಜನಂಗಳಂ
ಪ್ರೀತಿಯೊಳಾಗಮಾಡಿದೊಡೆ ನಾಲ್ಕು ಸಮುದ್ರಕಧೀಶನಪ್ಪನುಂ
ಸಾತಿಶಯೋಕ್ತಿಯಿಂ ಮೃದುಲಗದ್ದುಗೆಯಿತ್ತೊಡೆ ಸಪ್ತದೀಪಮಂ
ನೀತಿಯೊಳಾಳಿಕೊಂಡಿಹನುಪದ್ರವವಿಲ್ಲದೆ............... ೨೨೭

...............ಕ್ರ ಬೀಸಣಿಗೆ ಪಾದುಕೆ ಮುಖ್ಯವ ಚಾರಗಿತ್ತಡಂ
ಪ್ರೇಮದೊಳಿಂದ್ರಭೂತಿ ಶಿವಯೋಗಿಗೆಯನ್ನವನಿಕ್ಕಿದಾತನುಂ
ಈ ಮಣಿಯಲ್ಲಿ ಮಾಡಿದಘವೆಲ್ಲವು ತೀರಿ [2](ಪಿನಾಕಿ)[2]ಲೋಕದೊಳ್
ಕಾಮಿಸಿದೊಸ್ತುವುಂಬುತಿಹ ಸಿಕ್ತಕೆ (?) ಸಾವಿರವತ್ಸರನ್ನೆಗಂ ೨೨೮

ಕರ್ಪುರವಿಾಳೆ ತಾನು ಕುಸುಮಂಗಳ(?)ಲಿಂಗವ ಪೂಜಿಪರ್ಗೆ[3](ಯುಂ)[3]
[4](ಕೂ)[4]ರ್ಪಿನೊಳೀಯೆ ಸೋಮನಿಹಲೋಕದೊಳಿರ್ಪನನಂತ ಸೌಖ್ಯದಿಂ
ದರ್ಪಕವೈರಿಭಕ್ತರಿಗೆ ಹೇಮವನೀಯೆ ಕುಬೇರನಪ್ಪನುಂ
ಇಪ್ಪನು ಬ್ರಹ್ಮಲೋಕದೊಳು ಚಾರಗೆ ವಸ್ತ್ರವನಿತ್ತ ಭಕ್ತನುಂ ೨೨೯

ವತ್ಸಸಮೇತಧೇನುವನು ಭಕ್ತರಿಗಿತ್ತವ ರುದ್ರಲೋಕದೊಳ್
ಉತ್ಸವದಿಂದಲಿರ್ಪ ಶಿವಭಕ್ತಗೆ ಕನ್ನಿಕೆಯಿತ್ತಭಕ್ತ ತಾಂ
ತಚ್ಛಿವ ತಾನೆಯಾಗುವನು ಮಾತೆಯ ಸಂತತಿ ರೋಮಲೆಖ್ಖದಾ
ವತ್ಸರರುದ್ರಲೋಕದೊಳನೇಕಸುಖಂಗಳನುಂಬುತಿಪ್ಪನುಂ ೨೩೦

ಬೆಳೆದಿಹ ಇಳೆಯಂ ಇತ್ತವ
ಅಳಿಕಾಕ್ಷನ ಸಾಯುಜ್ಯಪದವನುಂ ಪಡೆವಂ
ಬೆಳೆದಾ ಧಾನ್ಯದಪ್ಪೊರುಷ
ವಳವಿಯೊಳ್ ಶಿವಲೋಕದಲ್ಲಿರುಹಂ ಮುದದಿಂ ೨೩೧

1. ನೆ (೯). 2. ಪೀಠ (ಇ). 3. x (ಇ). 4. x (ಇ).

ಶಿವಶಾಸ್ತ್ರಂಗಳನಿತ್ತವ
ಶಿವಜ್ಞಾನಿಯದಾಗಿಯಾ ಪುಸ್ತಕದಕ್ಷರ
ವಿವರಿಸಿ ಗಣನೆಯ ವತ್ಸರ
ಭವನೊತ್ತಿನೊಳಿಹನು ಶಿವನ ಸುಖಸಂಭ್ರಮದಿಂ ೨೩೨

ಸುಪ್ಪತ್ತಿಗೆಯಂ ಕೊಟ್ಟವ
ಇಪ್ಪಂ ಪಾವಕನ ಲೋಕದೊಳ್ ಸಂಪದದಿಂ
ಕಪ್ಪುಗೊರ[1](ಲರ್ಚಕರ್ಗಂ)[1]
[2](ತಪ್ಪದೆ ಕೊಡೆ ನೆನೆದ ಕಾರ್ಯಸಿದ್ಧಿಗಳಕ್ಕುಂ)[2] ೨೩೩

ಸತಿಯಂ ಅರ್ತಿಸಿ ಮಾಡಲ್
ಸತಿಯಪ್ಪಳು ಪುತ್ರರ ತಾನರ್ತಿಸಿ ಮಾಡಲ್
ಸುತರಪ್ಪರು ಸಿರಿಯಪ್ಪುದು
ಹಿತವಪ್ಪುದು ಬಯಸಿ ಮಾಡಲದು ತಾನಪ್ಪುದು ೨೩೪

ವ॥ ಬ್ರಹ್ಮವಿಷ್ಣುರುದ್ರಾದಿ ಪದಂಗಳಂ ಬಯಸಿ ಮಾಡಿದಡಪ್ಪವುಂ ನಿರಹಂಕಾರದಿಂ ಮಾಡವೇಳ್ಕುಂ ಒಡೆಯರ್ ಬಡವರಾಂ ದೊರೆಯೆಂಬ ಗರ್ವದಿಂ ಕೊಡಬಾರದುಂ ಬೇಡುವರಿಲ್ಲದೆ ಬಡವಾದೆನೆಂಬ ಬಸವನ ಮಾತಂ ಮಡಿವಳ ಬಿಡಿಸಿದಂ ನಾಂ ಸುತನ ಕೊಟ್ಟೆನೆಂಬ ಸಿರಿಯಾಳನಹಂಕಾರಮಂ ಹಲಾಯುಧಂ ನೀಗಿದಂ ಜೇಡರ ದಾಸಿಮಯ್ಯನಹಂಕರಿಸೆ ಶಂಕರದಾಸಿ ಬಿಡಿಸಿನಂ ಕಿನ್ನರನ ಕೀರ್ತಿಲಾಭದ ದಾನವಂ ಕಲಕೇತಬ್ರಹ್ಮಯ್ಯ ಬಿಡಿಸಿದಂ ಅದುಕಾರಣ ನಿರಹಂಭಾವದಿಂ ಜಂಗಮಕ್ಕೆ ಮಾರ ಗೌಡಂ ಪೊನ್ನಗಳ ರಾಶಿಯ ಬೇಡಿದಾ ಕ್ಷಣಂ ಕೊಟ್ಟಂತೆ ತನ್ನೆರಳ್ಸಾಹಸ್ರಜಂಗಮಕ್ಕಂ ಸಿದ್ಧರಾಮಂ ವಸ್ತ್ರಾಲಂಕಾರಗಳನಿತ್ತಂತೆ ಪನ್ನೆರಳ್ಸಾಹಸ್ರಹೊನ್ನಂ ವೀರಜಂಗಮಕ್ಕೆ ಸುಂಕದ ಬಂಕಯ್ಯನಿತ್ತಂತೆ ಕೊಡುವುದುಂ

ಸಾಕ್ಷಿ: ಫಲಾಭಿಸಂಧಿಸಂಯುಕ್ತಂ ದಾನಂ ತದ್ವಿಹಿತಂಭವೇತ್
ತತೋಽಪಾಧಿಕಮಾಖ್ಯಾತಂ ಮುಮುಕ್ಷುಭಿರಪ್ರಾಕೃತಂ

ಎಂದುದಾಗಿ ಫಲಾಭಿಸಂಧಿಯೊಡನೆ ಕೂಡಿದ ಉಪಾಧಿಮಾಟ ತಾಂ ಮೋಕ್ಷಕಾಂಕ್ಷಿಗಳಂ ತೊಲಗಸೂಂಕಿಸಿಕೊಂಬುದಾದ ಕಾರಣವದಂ ಹಳಿದುಂ ತನುಮನವೆಲ್ಲಂ ಶಿವನ ಸೊಮ್ಮೆಂದು ದಾಸಭಾವದಿಂದೊಡವೆಯಂ [3](ಒಡೆಯುಗೊಽಪ್ಪಿ)[3]ಸಿದಂತೆ ಹಮ್ಮು

1. ಲಾಚಕರ್ಗೀಯು (ಇ). 2. ಲಪ್ಪವು ತಾನೆ ನೆನದ ಸಕಲಕಾರ್ಯಗಳೆಲ್ಲಂ (ಇ).
3. ಗೊಡವೆಯನೋ (ಇ).

ಬಿಮ್ಮಳಿಮುಯೇನುಂಟಾದ ಪದಾರ್ಥವನಿತ್ತು ಖ್ಯಾತಿಲಾಭಪೂಜೆಯಂ ಪಳಿದು ಭಕ್ತಿ ರತಿಯಿಂ ಕಿಂಕಿಲತ್ವದಿನೀವುದುಂ

ಸಾಕ್ಷಿ: ಫಲಾಭಿಸಂಧಿನಿರ್ಮುತ್ತ್ರಂ ಈಶ್ವರಾರ್ಪಿತಕಾಂಕ್ಷಿಕಂ
ನಿರುಪಾಧಿಕಮಾಖ್ಯಾತಂ ದಾಸಂದಾನವಿಶಾರದೈ

ಎಂದುದಾಗಿ ಫಲದ ಬಯಕೆಯಿಲ್ಲದೆ ಭೃತ್ಯಭಾವದಿಂ ನಿರುಪಾಧಿಕನಾಗಿ ಮಾಡುವ ಮಾಡಿಸಿಕೊಂಬ ವಸ್ತುವಿನೊಳವಿನಾಭಾವ ನೆಲೆಗೊಂಡು ತನುಮನಧನವೆಲ್ಲಾ ಶಿವನ ದಾಗಿ ಮಾಡುವನುಂ ಮಾಡಿಸಿಕೊಂಬುವನುಂ ತಾನೆಯಾಗಿ ನಾನು ನೀನೆಂಬಭಿಮಾನ ದರಿವರತು ಮಾಡುವುದುಂ ಕೊಡುವ ಕೊಂಬ ಕೊಟ್ಟ ಫಲವೆಲ್ಲಂ ಶಿವನೆಂಬ ಭಾವವೆ ಸಹಜವಾಗಿ ದಾನಮಾಡುವಾತಂ ಮಾಹೇಶ್ವರನಪ್ಪಂ. ೨೨೫

ಮ. ವಿ. ವೃ.

ಪರಮೇಶಂ ಗಿರಿಶಂ ಸುಧಾಕರಧರಂ ಕಾಲಾಂತಕಂ ಶಂಕರಂ
ಉರಗೇಂದ್ರಾಭರಣಂ ವಿನಾಯಕಪಿತಂ ಗಂಗಾಧರಂ ಕಾಮಸಂ-
ಹರಸೌಖ್ಯಾಕರ ರಕ್ಷಿಕೆಮ್ಮವನು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮಜಟಾಧರಂ ಪುರಹರಂ ಭರ್ಗಂ ಶಿವಾವಲ್ಲಭಂ ೨೨೬

ಗದ್ಯ ಇದುಸಕಲಸುರಗಣಮಣಿಮಕುಟರಚಿತದ್ಯುತಿಮಣಿಪ್ರಭಾದಿಕ್ಯಮಾಣಿ ಕ್ಯದ್ಯುತಿಪುಂಜಮಂಜುಲರಂಜಿತ ಸಂಪಚ್ಚರಣವೆನಿಪ ಭೂತೇಶ್ವರಶ್ರೀಪಾದಪಯೋಜ ಮಕರಂದರೋಲಂಬಮಾನ ಚೆನ್ನವೀರೆಶ್ವರಾಭಿಧಾನ ವರಜಂಗಮದೇವಂ ವಿರಚಿತಮಪ್ಪ ಷಟಸ್ಥಲವಲ್ಲಭಮಹಾಪ್ರಬಂಧದೊಳ್ ಸಿದ್ಧಲಿಂಗೇಶ್ವರಂಜಗದ್ಧಿತಾರ್ಥವಾಗಿ ಸ್ವಶಿಷ್ಯ ಬೋಧಕಥನ ಭಕ್ತಸ್ಥಲಂ ಸಪ್ತಮಾಶ್ವಾಸಂ ಸಮಾಪ್ತಂ

# ಅಷ್ಟಮಾಶ್ವಾಸಂ

## ಸ್ವಶಿಷ್ಯಬೋಧ ಕಥನಂ - ೨

ಸ್ರ. ವೃ.

[1](ಶ್ರೀಸೋಮಾರ್ಕಾಗ್ನಿ)[1] ಗೋಗೋಶ್ರವಣವಲಯಗೋರಾ
[2](ಟ್ಟಿತಾಕಂ)[2] ಪ್ರಸೂ-
ನಾಸ್ತ್ರೈಶ್ವರ್ಯದಿಂವ್ರಗೋಗೋಪಶಿರಕರಸುನಾಸೀರವಂದ್ಯಂ ಕ್ರತು-
ಧ್ವಂಸಂ ಸಂಸಾರೇಭಪಂಚಾಸ್ಯಹರಹರವಿಲಾಸಾಸ್ಪದಂ ಗೋತ್ರಪುತ್ರೀ
ಯಾಸ್ಯಾಬ್ಜಾರ್ಕಂ ಸದಾಪ್ರೇಮದಿ ಸಲಹುಗೆ ಶಾಂತಾತ್ಮಭೂತೇಶಲಿಂಗಂ ೧

ಉ. ಮಾ. ವೃ.

ಶ್ರೀಗುರುಮೂರ್ತಿಷಟ್ಸ್ಥಲವಿಚಾರವಿಧಾನ್ವಿತಮೂರ್ತಿಕರ್ಮಕಾಂ-
ಡಾಗಮಶೂನ್ಯಮೂರ್ತಿ ಶಿವತಂತ್ರವಿಧಾನ ವಿಲಾಸಮೂರ್ತಿ ವೀ-
ರಾಗಮಸಾರತತ್ವವಿಧಮೂರ್ತಿ ಮಹೋಜ್ವಲಮೂರ್ತಿ ಸಿದ್ಧಲಿಂ-
ಗಾಂಗಿಯೆ ಭಕ್ತ ತಾಂ ಘನಮಹೇಶ್ವರನಾದುದ ಪೇಳ್ವುದಕ್ಕರಿಂ ೨

ಆದಡೆ ಕೇಳ್ವುದೈ ಸಹಜಮಾಟದ ಭಕ್ತ ವಿರಿಂಚಿ ವಿಷ್ಣುರು-
ದ್ರಾದಿಪದಂಗಳಂ ವಿರತಿಮಾಡಿದ ಯುಕ್ತಿಯೊಳಿರ್ದು ತನ್ನನುಂ
ಭೇದಿಪ ಶಬ್ದರೂಪುರಸಗಂಧಮು ಪರ್ಶನ ಮುಖ್ಯದಲ್ಲಿ ತಾ
ನಾದರಮಿಲ್ಲದಿರ್ದವನೆ ನೈಷ್ಠೆಯ ವೀರಮಹೇಶನಪ್ಪನುಂ ೩

ತನ್ನಯ ಪತ್ನಿಯಲ್ಲದುಳಿದನ್ಯರ ಸೌಂದರಹಾವಭಾವಸಂ-
ಪನ್ನತೆ ಲಲ್ಲೆವಾತು ಪರಿಹಾಸ್ಯ ಮುಗುಳ್ನಗೆ ಹಾಸನೋಡಿದಂ
ತುನ್ನತನೋಟದಾಸೆ ಕುಚದೋರಲು ತೋರುವ ಭಾವಗಾಣುತುಂ
ಕುನ್ನಿಯ ಕಂಡೊಲುಮ್ಮನದಿ ಹೇಸುವ ಭಕ್ತ ಮಹೇಶನಪ್ಪನುಂ ೪

---

1. ಶ್ರೀಸೋಮಾಗ್ನಿಕಾರ್ಗ್ನಿ (ಇ). 2. ಟ್ಟಿತಾಕ (ಇ). * ಈ ಪದ್ಯವು ಸ್ರಗ್ಧರೆಯಾಗಿದ್ದು ಛಂದಸ್ಸಿನ ಲಕ್ಷಣವಿಾರಿ ತಿದ್ದಲು ಸಾಧ್ಯವಿಲ್ಲದುದಾಗಿ ಕೆಲವು ಕಡೆ ಮಾತ್ರ ಹೊಂದಬಲ್ಲ ಪದವಿಟ್ಟು ಉಳಿದುದನ್ನು ಇದ್ದಹಾಗೆಯೆ ಕೊಟ್ಟಿದೆ. ಕೆಲವು ಕಡೆ ಸರಿಯಾಗಿ ಅರ್ಥವಾಗುತ್ತಿಲ್ಲ.

ಧೀಷನ(?)ಪತ್ನಿಗಾಗಿ ಸುರರಾಜಭಗಾಂಕಿತನಾದನಾತನಾ
ಯೋಷಿತೆಗಾಗಿ ತಾಂ ನಹುಷಪನ್ನಗರೂಪನು ತಾಳ್ದನಾ ಕ್ಷಣಂ
ಕಾಶಿಗೆ ಹೋದ ವಿಪ್ರಸತಿಗಾಗಿ ಶತದ್ಯುಮ ಕೆಟ್ಟನಾ ಕ್ಷಣಂ
ವೈಶ್ಯನ ಪತ್ನಿಗಾಗಿ ಬಲುವಿಪ್ರನಪಸ್ಮರನಾದನಾ ಕ್ಷಣಂ ೫

ಹಾದರದಿಂದೆ ಭಕ್ತಿ ಕೆಡುಗುಂ ಸಲೆದಾಸಿಯ ಸಂಗದಿಂದಲುಂ
ವೇದಿಸು[1](ವಾ)[1] ಅಘವಿಮ್ಮ್ರಸುವ ವೇಸಿಯ ಸಂಗದೊಳೆಂಜಲಾಶ್ರಯಂ
ಕಾದಿಹ ಕರ್ಬುನಾಶ್ರಯದ ಪುತ್ಥಳಿಯಪ್ಪುಗುಮಾತನಂಗವಂ
ಸಾಧಿಸಿ ಕೊಲ್ವರಾಖಲನ ದೂತರು ಚಾಟಿಯೊಳೇನನೆಂದಪೆಂ ೬

ಸಾಧಿಸಲಾಗದಾಗದು ಪರಾಂಗನೆಕೂಟವ ಭಕ್ತಿಮಾಳ್ಪಗಂ
ಸಾಧಿಸಲಾಗದಾಗದಮ ದಾಸಿಯ ಸಂಗದ ಭಕ್ತನಾದಗಂ
ಸಾಧಿಸಲಾಗದಾಗದದು ವೇಸಿಯ ಮೇಳದಶೀಲನಾದಗಂ
ಸಾಧಿಸಲಾಗದಾಗದೆನುತಂ ಶ್ರುತಿ ಪೇಳಿತು ಪಾಪಭೀತಗಂ ೭

ನಾರಿಯ ಸಂಗದಿಂದೆ ಹರಿ ಕೊಲ್ಲಿಸಿಕೊಂಡನು ಘಂಟಕರ್ಣ[2](ನಿಂ)[2]
ನಾರಿಯ ಸಂಗದಿಂದೆ ತಪ ಕೆಟ್ಟುದು ಕವುಸಿಕನೆಂಬಗಾ ಕ್ಷಣಂ
ನಾರಿಯ ನಾಮಕಾಗಿ ಮರ ಬಾಗಿತು ಮೆಲ್ಲನೆಯುಂದದಿನ್ನು ತಾಂ
ನಾರಿಯ ಸಂಗದಿಂದ ಲಘುವಾಗದ ಮಾನುಷರುಂಟೆ ಲೋಕದೊಳ್ ೮

ಕಾಮುಕಭಾವದಿಂದೆ ವಿಮಲಾಂಗಿಯ ಪುತ್ರನು ದೋಷಿಯಾದನುಂ
ಕಾಮಿನಿಯೋಗ ಮಾಳ್ಪ ಗೃಹದಲ್ಲಿಗೆ ಬಂದಿರಲಾಗ ಮಾರಿಚಾ-
ಭೂಮಿಪನಿಷ್ಠನಾದ ಗುರುಮಕ್ಕಳ ತೊಟ್ಟಿಲಹೊತ್ತನಾ ಕ್ಷಣಂ
ಕಾಮುಕಭಾವವುಳ್ಳವಗೆ ಮೋಕ್ಷದ ಲಕ್ಷಣವಾಗದಾತಗುಂ(?) ೯

ಪಾತಕವಾಸ ವಾರವನಿತರ್ಕಳು ನಿಷ್ಠುರದುಷ್ಟಜಾತಿಗಳ್
ಸೂತಕವೃಂದ ಮಾನಸೆಯುರಕ್ಕುಲಕಾಶ್ರಯುರ್ ಪಕ್ಷಪಾತಮು(?)
ನಿರ್ನೀತಿದುರಾಚರಾನ್ವಿತರು ಪಂಚಕಸಂಚಲಚಿತ್ತವುಳ್ಳ ದುಃ
ಖಾತುರಕಾತಿಯರ್ಕಳೊಳು ಕೂಡಿದ ಭಕ್ತನ ಭಕ್ತಿ ಹಾರುಗುಂ ೧೦

1. x (ಇ) 2. ದಿಂ (ಇ).

ಕಂ. ಕಾಮಾಂಧಕರೆಲ್ಲಂ ತಾಂ
ಕಾಮಿಸಿ ಎಡೆತಾಕುತಿಪ್ಪ ಪಥರಂಧ್ರಕ್ಕಂ
ಕಾಮಾರಿಭಜಕ ಸಿಕ್ಕಲ್
ಕಾಮಾರಿಯ ಭಜನೆ ಕೆಟ್ಟು ನರಕಕ್ಕಿಳಿವಂ ೧೧

ಪರರರ್ಥವ ಗ್ರಹಿಸಿದವಂ
ವರಬಿಲ್ಲೇಶ್ವರನ ಬೊಮ್ಮ ಕೆಟ್ಟೋಲ್ ಕೆಡುವಂ
ಉರಗನ ಕೊಲಲೆಂದೆಣಿಸಿದ
ವರಯುವತಿಯು ವಿಪ್ರಸುತನು ಕೆಟ್ಟೊಲ್ಕೆಡುವಂ ೧೨

ಪರರೊಡವೆ ಕೊಂಡು ಕೊಡದವ
ಪರರುಂ ಹೂಳಿರ್ದ ಒಡವೆಯ ತೆಗೆದಿಹೆನೆಂಬವ
ಪರರು ಮಡಗಿದುದ ಕೊಡದವ
ನರಕಾರ್ಣವದಲ್ಲಿ ಬೀಳ್ವನೆಂಬುದು ಪುಸಿಯೇ ೧೩

ವ॥ ಗಜಾಶ್ವನಾರಿಕೋಣಕಪಿಯಸಡ್ವ ಮುಂತಾಗಿ ಮಾನವಶಿಕ್ಷೆಗಂ ಬಹ ವವುಂ ಸುಜ್ಞಾನದಿಂ ಶಿಕ್ಷಿಸುತ್ತಿರೆ ಮನಸ್ಸು ನಿರ್ಮಳವಾಗದಿಪ್ಪುದೇ ವರನ ಕೂಡುತ ಜಾರೆ ಜಾರನ ನೆನೆವಂತೆ ಕೆಲದೊಳ್ ಮಾತನಾಡುತ್ತ ದಾಸಿ ತನ್ನಯ ಕೊಡನ ಮರೆಯದಂತೆ ಲಲನಾಸುತ ಸುಖವರ್ತಿಯೊಳಿರ್ಪ ಭಕ್ತಂ ಲಿಂಗವಂ ಮರೆಯಲರಿಯಂ ಕರದ ಠವಣೆ ಜೆನ್ನಹರಳು ಬಾಯ ಓದು ತಪ್ಪದ ಗಣಕ[1](ನಂ)[1]ತೆ ಹೊರಗ[2](ಣ)[2] ಸತ್ಯತ್ರವೊಳಗಣಸುಜ್ಞಾನವಂ ಮರೆಯನಾ ಭಕ್ತಂ ಸಮರದೊಳ್ ಕೈದುಮುರಿದ ಭಟಗಂ ತನ್ನಕೈಯೇ ಕೈದುವಪ್ಪಂತೆ ವೇದೋದಿತ ಸತ್ಕ್ರೀಗಳನುವಪ್ಪದಲ್ಲಿ ಪೂರ್ಣ ಬೋಧೆಯಿಂ ಮೋಕ್ಷವಪ್ಪುದಾತಂಗಂ ಗೆಲತಪ್ಪಿ ಧೈರ್ಯದೊಳ್ ಮೃತನಾದಂಗಂ ವೀರಲಕ್ಷ್ಮಿಯೊಲವಾಪಂತೆ ಜನ ಮೆಚ್ಚದಿರ್ದಡಂ ಮನಮೆಚ್ಚೆ ನಡೆದಾತಂಗಂ ಮೋಕ್ಷ ವಪ್ಪುದುಂ ಆಹರಹರಲಿಂಗಪೂಜಾಪ್ರೀತನಪ್ಪಾತಂಗಂ ಲಿಂಗವೊಂದಲ್ಲದೆ ಷಡ್ವಿಧಲಿಂಗ ವೆಂಬ ಮಾತೆಲ್ಲಿಯದುಂ ಬಹುಘಟಜಲರವಿಬಿಂಬಂಗಳಂ ಹಲವೆಂಬರೆ ಬಲ್ಲವರುಂ ಪಿಂಡಾಂಡಚಕ್ರದ ವರ್ಣಾಬ್ಜ ಲಿಂಗಕರಂಡವೆನಿಪ್ಪುದೀಯಿಷ್ಟಲಿಂಗಂ ವರನ ಹಸ್ತವಿಡಿ ಯದ ಮುನ್ನಲಾವ ಪುರುಷನಂ ಗಂಡನೆಂಬಳ್ನಾರಿ ಕೈವಿಡಿದ ಬಳಿಕ್ಕಂ ತನ್ನಪತಿ ಯೆಂದಾತನಂ ನೆನೆವಂತೆ ಗುರುವಿತ್ತಿಷ್ಟಮಂ ನೆನೆದು ಜಪಿಸಿ ಭಜಿಸಿ ಕರಣೇಂದ್ರಿಯಂಗ ಳೊಳಿಷ್ಟವಂ ತಾಳಿ ಭಾವಿಸುವಂ ಶರಧಿಯವಧಿ ಹೊಳೆಗಳ್ಗೆಂಬಂತಿರ್ದ ಅರಿ[3](ವಿ)[3]ಗವಧಿ

1. ದಂ (ಇ). 2. ಳ (ಇ). 3. ವಾ (ಇ).

ಯಾದಿಷ್ಟದೊಳ್ ಮನವಿಕ್ಕಿ ಚಿಕ್ಕಲೆಯಂ ಮರೆಯಲ್ ತಾನಾ ಕಲೆಯಪ್ಪಂ ಪಾಲೊಳ್ ಘೃತವಿರ್ದುಂ ಘೃತದೊಳ್ ಪಾಲಿಲ್ಲವೆಂಬಂತಿರ್ದಾಯಿಷ್ಟಲಿಂಗದೊಳ್ ಮೂಲಕಲೆಯಿಪ್ಪುದುಂ ಮತ್ತಾ ಮೂಲಕಲೆಯೊಳ್ ಇಷ್ಟಲಿಂಗವಿಲ್ಲಂ ಪರಿಮಳದೊಳ್ಕುಸುಮಂ [1](ಪ್ರಭೆಯೊಳ್ದೀಪಂ)[1] ಪರಮಾಣೊಳ್ ದೇಹಂ ಇರದೊ[2](ಲ್)[2] ಚಿತ್ಕಲೆಯೊಳಿಷ್ಟವಿಲ್ಲಂ ಮತ್ತಾ ಚಿತ್ಕಳೆ ಇಷ್ಟದೊಳುಂಟೆಂದು ನೀಲಲೋಚನೆಯಾನುಮಿಷಪ್ರಭುಗಳು ಸ್ಥೂಲಲಿಂಗವಂ ತಾಳಿ ಮೂಲಕಲೆಯೊಳ್ ಮನವಿಟ್ಟರೆಂಬ ಮಾತೆಲ್ಲಿಯದಾ ಸ್ಥೂಲಲಿಂಗದೊಳಪೆರಡಕ್ಕಂ ಸಚ್ಚಿದಾನಂದವಪ್ಪ ಲಿಂಗಂ ಸದ್ಭಕ್ತನ ಬಚ್ಚಬರಿಯರಿವಿನ ಪೂರ್ಣದರಿವಿಗೆ ಮೆಚ್ಚಿ ಕರಸ್ಥಲದೊಳ್ನಿಂದನೆಂದರಿದಾತನೆ ಲಿಂಗನೈಷ್ಠಿಕಂ ಕರದೊಳಗಿಷ್ಟವೇಕೆಂದ ಗೋರಕ್ಷಗಂ ಪ್ರಭು ಚಿತ್ಕಲೆಗಿಷ್ಟಲಿಂಗವೇ ಮೂಲವೆಂದುದಂ ಅರಿದು ಶರೀರದೊಳಹೊರಗೆ ಭಿನ್ನವಿಲ್ಲದೆ ಕರದೊಳ್ತಾಳ್ದಿಷ್ಟಲಿಂಗವೊಂದೆ ನವಚಕ್ರದೊಳ್ ತೋರುವುದುಂ ಶಿವೆಗೆ ಶಿವನೋರ್ವನೆ ಗಂಡನಾದಡುಂ ಹರ ನಾನಾರೂಪುತಾಳಲ್ಗಿರಿಜೆ ಹಲವಾಗಿ ಶಿವರೂಪುಗಳೊಳ್ಕೂಡಿ ಪತಿವ್ರತೆಯೆನಿಪ್ಪಂತೆ ಶರಣಲಿಂಗವೊಂದಾದಡುಂ ಶರಣನ ಕರಣ ಹಲವಾಗಲವರೊಳ್ಪುರಹರಂ ಪ್ರತಿಬಿಂಬಿಸಿ ಹಲವೆಂಬೊಲಿಪ್ಪಂ ತೊರೆಯೊಳ್ ಸರಿದ ಲಿಂಗಂ ಮರಳಿಬರೆ ಕೇಶಿರಾಜನೊಲ್ಧರಿಸಿದಪನಾ ಭಕ್ತಂ ಲಿಂಗವಗಲಿ ಬಾರದಿರಲ್ಮತ್ತೊಂದಂ ಧರಿಸಿಪ್ಪಾತಂ ಭಕ್ತರೊಳ್ಭಂಗಿಯರೆಂಬಹೊಲೆಯನವಂ ಹೋದ ಲಿಂಗಂ ಬಾರದಿರಲ್ ಅನ್ಯಲಿಂಗವಂ ತಂದಾಸೆಗೆ ಧರಿಸಿ ಮಾಡುವುದುಕ್ರಿಮಿರಾಶಿಯವಂ ಹಂದಿ ಕತ್ತೆ ನಾಯ್ಗೆಣೆಯಪ್ಪನವಂ ಆ ಹೋದ ಲಿಂಗದೊಳ್ ಸಂದರೆ ಪ್ರಮಥರೊಳಪ್ಪನವಂ ಲಿಂಗವಂತ ನಾರಿ ವರನಳಿಯಲ್ಮನ್ನ ಹರಣಮಂ ನೀಗದೆ ಗುರುಚರಸೇವೆಯಂ ಮಾಡುತ ಲಿಂಗಕ್ಕಂ ಹರಣಮನೀವುದೇ ಸನ್ಮಾರ್ಗಂ ಪತಿಯೇ ದೈವವೆಂದು ಲಿಂಗಹೋದ ಸತಿ ಪ್ರಾಣವ ಬಿಡಲ್ ಪಾತಕಿಯವಳುಂ ಭಕ್ತಂ ಕೈಲಾಸಕ್ಕೆ ಹೋಗಲವನ ಸತಿಯಂ ಪರಸತಿಯೆನ್ನದೆ ತರುವಂ ಗುರುರಾಣಿಮಾತೆಸಹೋದರಿಗೆ ತಪ್ಪಿದನಂತಕ್ಕಂ ವರನೊಳ್ ಸಾಯದೆಯುಂ ಪುರುಷರಂ ಗುರುತಾತಸಹೋದರರೆಂದರಿಯದೆ ಒರ್ವಂಗಂ ಸೆರಗಂ ಹಾಸದಾಕೆ ತಾಂ ಪತಿಪ್ರತೆಯಪ್ಪಳುಂ ಲಿಂಗಕೆ ಕೊಟ್ಟಪ್ರಾಣವಂ ವರನಿಗೆ ಕೊಡಲ್ ದ್ರೋಹಿಯಪ್ಪಳುಂ ಲಿಂಗವುಳ್ಳವಳಂ ಬಲುಹಿಂ ಪತಿಯೊಳ್ ಕೊಂದವರ್ಗಂ ಭಕ್ತವಧೆಯಹುದುಂ ಲೌಕಿಕಸತಿ ತಾಂ ವರನೊಳ್ ಸಾಯಲ್ಬೇಕು ಬೇಡೆಂಬುದಕ್ಕೆಮಗಂ ಸಂಬಂಧವಿಲ್ಲಂ ಲಿಂಗವಂತ ಸತಿ ಪತಿಯೋಳ್ ಸತ್ತಡೆ ಮಹಾದೋಷಂ ಅನ್ಯಪುರುಷನೊಳ್ಕೂಡಿದಡೆ ಅಕ್ಷಯನರಕಂ ಮತ್ತಂ ಗಂಡನೊಳ್ ಸಾಯದೆ ಪರರಂ ಕೂಡದೆ .... ರ ಮಲ್ಲಯ್ಯನಂತೆ ನೂತಾದಡಂ ಗಣದಾಸವ್ವೆಯಂತೆ ಭಕ್ತರ ಮನೆಗೆ ನೀರ ಹೊತ್ತಾದಡಂ ವೀರಾದೇವಿಯಂತೆ ಭಕ್ತರ್ಗೆ ದರ್ಪಣವ ತೋರಿಯಾದಡಂ ಚಾಕಲದೇವಿಯಂತೆ ಭಕ್ತರ ಸೀರೆಗಳ ತೊಳೆದಾದಡಂ ಕೇಳಿಕೆಯ ಮಹಾದೇವಿ

1. ಪಯೊಳ್ದಿಪಂ (ಇ). 2. ಳ್ (ಇ).

ಯಂತೆ ಭಕ್ತರ ಮುಂದೆ ನೃತ್ಯವನಾಡಿಯಾದಡಂ ಗಂ......ಭಕ್ತರ್ಗೆ ವೀಣೆಯಂ ಬಾರಿಸಿಯಾದಡಂ ಬೊಂತಾದೇವಿಯಂತೆ ಭಕ್ತರ್ಗೆ ದಂಡಿಗೆವಿಡಿದು ಹಾಡಿಯಾದಡಂ ವೀರಶೈವದೇವಿಯಂತೆ ಭಕ್ತರ ಮುಂದೆ ಉಪ್ಪಾಂಗವ ಮಾಡಿಯಾದಡಂ ಕೇತಲದೇವಿಯಂತೆ ಭಕ್ತರ್ಗೆ ಮುಖಪಾವಡಮುಂ ಸೇವಕದಗೌರವ್ವೆಯಂತೆ ಭಕ್ತರ ಕಟ್ಟಿಗೆಯ ಉಳಿಗದವಳಾಗಿಯಾದಡಂ ಹೂವಿನಲ್ಲಮದೇವಿಯಂತೆ ಭಕ್ತರ್ಗೆ ಪೂಚೆಂಡ ಕೊಟ್ಟಾದಡಂ ಹುಗ್ಗಿಯ ದುಗ್ಗವ್ವೆಯಂತೆ ಕೂಲಿಯ ನೀರ ಹೊತ್ತಾದಡಂ ಇವು ಮುಂತಾದ ಕಾಯಕವಂ ತಂದು ಗುರುಚರಸೇವೆಯಂ ಮಾಡಿಕೊಂಡಿಹುದೇ ಸನ್ಮಾರ್ಗಂ ಮತ್ತಾ ಭಕ್ತಿಯ ಚಿತ್ಕಲೆ ಶಿವಲಿಂಗವಾಗಿ ಕರಸ್ಥಲಕವತರಿಸಿತುಂ ದೀಪದಿಂ ಮುಟ್ಟಿಸಿದ ದೀಪಂ ಮೂಲದೀಪಕಂ ಸರಿಯೆನಿಪಂತೆ ತಿಳಿದುಪ್ಪ ಗಟ್ಟಿಯಾದಂತೆ ನಿಃಕಲಶಿವತತ್ತ್ವ ಗಟ್ಟಿಗೊಂಡಿಷ್ಟವಾಗಿಪ್ಪುದುಂ ಮುಟ್ಟಿ ಪೂಜಿಸಲಾ ಇಷ್ಟಂ ಗಟ್ಟಿದುಪ್ಪ ತಿಳಿದುಪ್ಪವಾದೊಲುಂ ಸಕಲ ನಿಃಕಲವಕ್ಕುಂ ಮತ್ತಂ ಅಗ್ನಿಯಿಂ ಮುಟ್ಟಿದ ದೀಪವಗ್ನಿ[1](ಯಿಂ)[1] ತೇಜ ಮಿಗಿಲಪ್ಪಂತೆ ಚಿತ್ಕಲೆಯಿಂ ಪುಟ್ಟಿದ ಲಿಂಗಂ ಚಿತ್ಕಲೆಗಿಂತ ಮಿಗಿಲಹುದುಂ ಕನ್ನಡಿವಿರಹಿತ ಮುಖ ಕಾಣಿಸದಂತೆ ಇಷ್ಟಲಿಂಗ ವಿರಹಿತ ಚಿತ್ಕಲೆ ಕಾಣಿಸಲಿಲ್ಲಂ ಇಷ್ಟಲಿಂಗ ತಾಂ ದೃಙ್ಮನಭಾವಕಂ ಬಂದು ಅಷ್ಟದಳಾಬ್ಜದೊಳ್ ಪಸರಿಸಿಕ್ಕುಂ ಮತ್ತಾ ಅಷ್ಟದಳಾಬ್ಜಮನಭಾವದೃಷ್ಟಿಯಿಂದಿಳಿದು ಕರಸ್ಥಳದೊಳ್ ತೋರುವುದಾ ಲಿಂಗಂ ಹಸ್ತಾಬ್ಜದೊಳನುಮಿಷಂ ತನ್ನ ಪ್ರಾಣವಿಕ್ಕೈಪ್ರಭು ಲಿಂಗವಂ ತೆಗೆಯಲಾ ಹರಣಂ ಕೂಡೆ ಬಂದಂತೆ ಒಂದಾದ ಬಳಿಕ್ಕಂ ತ್ರಿವಿಧವೆಂದು ಷಡ್ವಿಧವೆಂದು ವಿವರಿಸಲಪ್ಪುದೇ ತ್ರಿವಿಧ ದೇಹವಿಂದ್ರಿಯ ಷಟ್ಕರ್ಮದೊಳ್ ನವವಿಧಲಿಂಗವಾಗಿರ್ಪುದೊಂದೇ ಲಿಂಗವೆಂದು ಇಷ್ಟಲಿಂಗವಂ ಭಜಿಸುವುದುಂ ೧೮

ಉ. ಮಾ. ವೃ.

ಶಂಕರಪೂಜೆಗೊತ್ತಿಸುವ ಮಾತಿಪಿತಾದಿಯಪೂರ್ವಕರ್ಮವಮಂ
ಪಂಕಜಜಾತ ಪೇಳ್ದ ಬಹುಶಾಸ್ತ್ರದ ನೀತಿಯ ಧರ್ಮಮಾರ್ಗಮಂ
ಅಂಕಿಪ ಜಾತಿಸೂತಕವ ಸಾರಿದ ಧರ್ಮವ ಕರ್ಮಜಾಡ್ಯವಂ
ಸಂಕಿಸದೆಲ್ಲವಂ ನೀರಸಮಾಡುವ ಸದ್ಗುಣ ಬೇಕುಮಾತಗಂ ೧೫

ಕ್ಷೀರದೊಳಾದ ತುಪ್ಪ ಬಳಿಕಂ ಪಯವಪ್ಪುದೆ ಪೂರ್ವಕರ್ಮವಂ
ಓರೆಯ ಮಾಡಿದಾತನಿಗೆ ಜನ್ಮಗಳುಂಟೆ ಶಿವಾನುಭಾವದೊಳ್
ಸೇರಿದವಂ ಬಳಿಕ್ಕ ಕರಣಾದಿಯ ಧರ್ಮವನೆತ್ತ ಬಲ್ಲನಾ-
ಶಾರಣಸಂಗವಲ್ಲದುಳಿದನ್ಯವ ಕಾಣ್ಬನೆ ಭಕ್ತನಾದವಂ ೧೬

---

1. ಯ (ಇ).

ಪೂರ್ವನಿವೃತ್ತಿಯಾ ಹರನನುಂ ಪರಿಪೂರ್ಣದಿ ತಾಳ್ದ ಭಾವವಂ
ಸರ್ವರ ಕೂಡೆ ಪೇಳ್ದಿ[1](ದಿರನಿಟ್ಟಹ)[1]ರೆಂದದನಾರ ಕೂಡೆಯುಂ
ಪರ್ವಿಸದಿಷ್ಟಲಿಂಗಹಿತಕರ್ತರ ವಾಕಿನ ಭಿನ್ನಭಾವದಾ
ಗರ್ವವ ಕಂಡು ಸೈರಿಸದೆ ಝುಂಕಿಸುತಿರ್ಪ ಮಹೇಶನಾ ಕ್ಷಣಂ ೧೭

ಪೂಜಿಪ ಪೂಜೆಗೊಂಬುಭಯವಾತ್ಮಶಿವಂಗಳ ಭೇದವಿಟ್ಟು ತಾಂ
ಪೂಜಿಸದಿರ್ದೊಡಾ ಹರನ ನೈಷ್ಠಿಕಭಾವದ ಭಂಗವಪ್ಪುದುಂ
ಸಾಜದಿ ಬೊಮ್ಮಗಿಮ್ಮಗಳ ಹಮ್ಮುವ ಹೊದ್ದದೆ ಭೃತ್ಯನಪ್ಪುದುಂ
........................ ................................... ೧೮

ಕೇಶವ ಬ್ರಹ್ಮ ವಿಷ್ಣು ಸುರಮುಖ್ಯ ಪಿಪೀಲಿಕ ಅಂತ್ಯವಾಗಿಹಾ-
ವಿಶ್ವಗಳೆಲ್ಲವುಂ ಪಶುಗಳೀಶನೆ ಕರ್ತೃವು ಎಂಬ ಭಾವದಿಂ
ಆಸೆಯ ಮಾಡದಿರ್ದವನೆ ಪಾತಕ ಜೀವವೆ ಈಶನಾದೊಡಾ
ಈಶನೆ ಮರ್ತ್ಯನಪ್ಪ[2](ನವಗುಂ)[2] ಕಿವಿಯಿಂದ[3](ದ)[3] ಕೇಳೆ ನಾರಕಂ ೧೯

ಕಂ. ಪಶುಗಳ ಕೊರಳಿನ ಪಾಶದ
ಪಶುವಂ ಬಿಟ್ಟಲ್ಲದವರ ಪಾಶಂ ಬಿಡದುಂ
ಪಶುಜೀವಿ ಮಾಯೆಪಾಶಂ
ಪಶುಪಂ ಶಿವನೆಂದು ನೆನೆದ [4](ಮನುಜನೆ)[4] ಮುಕುತಂ ೨೦

ಪಶುಪಾಶಪತಿಜ್ಞಾನವೆ
ವಿಷಮದ ಸಂಸೃತಿಯ ಸಿಂಧು ಭೈತ್ರಮದೆಂಬಾ
ಪಸರಿಪ ಜ್ಞಾನವ ಬಿಟ್ಟುಂ
ಹೊಸಕರಭವಮದಾಗಿ ಕೆಟ್ಟ ಬ್ರಹ್ಮನ ಪುತ್ರಂ ೨೧

ಜ್ಞಾತೃ ಜ್ಞಾನಂ ಜ್ಞೇಯದ
ಸೂತ್ರವನರಿದೀಶನನ್ನು ನೆನೆವಾ ಭಕ್ತಂ
ಧಾತ್ರಿಯೊಳರಿವಿನ ತಿರುಳಿನ
ಗೋತ್ರವ ಬಲ್ಲಾತನೆಂದು ಪೇಳ್ವುದು ಶೈವಂ ೨೨

1. ರಿದಿರಿಟ್ಟಹಿ (ಇ). 2. ನೆಯದಂ (ಇ). 3. ದ (ಇ). 4. ವನೇ (ಇ).

ಅದ್ವೈತವನಾಶ್ರಯಿಸದೆ
ಬುದ್ಧಿಯೊಳುಂ ಶಿವಗೆ ಸಕಲ ಕ್ರಿಯೆಯುಂ ಮಾಡುವ
ಸಿದ್ಧಿಸುಗು ನೆನೆದ ಕಾರ್ಯಂ
ಹೊದ್ದಿಪ್ಪುದುಮಿಷ್ಟಲಿಂಗಮಾತನ ಮನದೊಳ್ ೨೩

ಗುರು ಕೊಟ್ಟಿಷ್ಟಲಿಂಗದಿ
ಹರನಿರ್ಪಂ ಸತತವದನು ಭಜಿಸುತ್ತಿಹುದುಂ
ಎರವಿಂ ಆಹ್ವಾನಿಸಲದು
ಮಿರದಾ ಶಿವಲಿಂಗದಲ್ಲಿ ಹರಕಲೆ ಸತತಂ ೨೪

ವ॥ ದೀಕ್ಷಾಜ್ಞಾನಕ್ಕೆ ನಿರೋಧನವಹುವವರದೆಸೆಯಿಂದಿಷ್ಟಲಿಂಗದಲ್ಲಿ ಆಹ್ವಾನವ ಮಾಡಲಾಗದುಂ ಸಾಕಾರನಿರಾಕಾರವೆಂಬುಭಯವು ತಾನೆಯಾಗಿ ಒಳಹೊರಗೆ ಭಿನ್ನವಿಲ್ಲದಿರ್ಪವನಾಹ್ವಾನಿಸಿಹೆನೆಂಬವಂ ಬಯಲನಳೆದು ಸುರಿವೆನೆಂಬ ಮರುಳನಂ ತಕ್ಕುಂ ಆಹ್ವಾನವಿಸರ್ಜನಕ್ಕೆ ಬಾರದ ಲಿಂಗಂ ಅಷ್ಟಮೂರ್ತಿಗಳೆ ಕರ್ತನಲ್ಲದೆಯುವರೊಳೇಕನಲ್ಲಂ ದೇಹಿಯಾ ಶಿವಲಿಂಗಕಂ ದೇಹವಾದಷ್ಟಮೂರ್ತಿಗಂ ಭೇದವುಂಟು ಭಾಂಡಂಗಳ ಮಾಡುವ ಕುಂಬಾರಂ ಭಾಂಡಂಗಳಿಗೆ ಕರ್ತನಾಗಿ ಬೇರಿಪ್ಪನಲ್ಲದೆ ಭಾಂಡಂಗಳೊಳಿರಂ ಹಾಂಗೆ ಶಿವಂ ಅಷ್ಟತನುವಂ ಸೃಜಿಸಿ ತಾಂ ಬೇರಾಗಿರ್ಪಂ ಭೂಜಲಾಗ್ನಿವಾತಾಕಾಶಾರ್ಕಂ ಸೋಮನ್ಮರು ಪ್ರಮಥರಿಂ ಲಯವನ್ನೈದುಗುಂ ಮತ್ತವರಿಂ ಪುಟ್ಟುತಿರ್ಪುವುಂ ಅಷ್ಟಮೂರ್ತಿನಿರಾಸಕ್ತನಾದ ಭಕ್ತಂ ಶರಣಭರಿತದಿಂ ಶಿವನಿರ್ಪನೆಂದರಿದು ಸರ್ವಗತನಿರಾಸಕ್ತನಾಗುತಿರ್ಪಂ ಶಿವಂ ಸರ್ವಗತನಾದಡುಂ ಇಷ್ಟಲಿಂಗ ನೈಷ್ಠಿಕಂಗೆ ಶಿವಸರ್ವಗತನೆಂದು ನೆನೆಯಲ್ಬಾರದುಂ ಸರ್ವವೃಕ್ಷಂಗಳಗ್ನಿಗಿಂ ಶಮೀ ವೃಕ್ಷಾಗ್ನಿ ಶ್ರೇಷ್ಠವೆಂಬಂತೆ ಶಿವಸರ್ವಗತನಾಗಿರ್ದಡುಂ ತನಗಾಧಾರವಾದ ಗುರುಚರಲಿಂಗದಲ್ಲಿ ಅಧಿಕವೆಂದೆಂಬ ಭಾವದಿಂ ಭಜಿಸುವುದುಂ ಮತ್ತಂ ಸರ್ವಸ್ಥಾನಪರಾಙ್ಮುಖನಾಗಿ ಚರಗೌರವಲಿಂಗ ತ್ರಿವಿಧವನೆ ಭಜಿಸುವುದುಂ ಸರ್ವಗತನಿರಾಸಕ್ತನಾದವಂ ತನ್ನಿಷ್ಟಲಿಂಗದಲ್ಲಿಯುಂ ಗುರುಚರಭಕ್ತರೊಳ್ ಶಿವನಿರ್ಪನಲ್ಲದೆ ಮತ್ತೆಲ್ಲಿಯುಮಿಲ್ಲವೆಂಬ ನಿಯಮದಿಂ ಪೂಜಿಸುತ್ತಲುಂ ಮತ್ತಾ ಶಿವವಿರಹಿತವಾಗಿ ಜಗತ್ತು ಹೊರದಾಗಿ (?) ಸರ್ವರಲ್ಲಿಯೂ ಶಿವನಿರ್ಪನೆಂದು ಭಾವಿಸುವುದುಂ.... ೨೫

ಕಂ. ಹರನು ಚರಾಚರದೊಳಗಂ
ವರಮೃಣ್ಮಯಘಟದ ತೆರದೊಳೆರವಿಲ್ಲದೆಯುಂ
ಇರುತಿಹ ಸತತಂ ಮುದದೊಳು
ಸ್ಮರರಿಪುವಿಂ ಜನಿತ ಜನತೆಯೆರವಾಪವುದೇ ೨೬

ನೆರೆ ತೆರೆ ಬುದ್ಬುದ ಕಣಗಳ್
ಶರಧಿಗೆ ತಾನೆರವೆ ಶಿವನಿಂದುದ್ಭವಿಸಿದರ್ಾ
ಧರೆಗಂ ಅವಿರತ[1](ದಿಂದಂ)[1]
ಎರವಿಲ್ಲದೆ ಯಿರ್ಪುದೆಂಬಾಗಮಮುಖ್ಯಂ ೨೭

ತಂತುಪಟವೃಕ್ಷಶಾಖೆಯೊ-
ಲಂತರಿಸದೆ ಕುಟಿಪಟವೆಂತಿಹುದಂತಾ
ಕಂತುಹರ ತನ್ನಶಕ್ತಿಯ
ಸಂತಸದಿಂ ವಿಶ್ವಭರಿತನಾಗಿರುತಿರ್ಪಂ ೨೮

ಸರವಿಯೊಳುರಗನ ತೆರದಿಂ
ಮರಿಚಿಯೊಳುಂ ಜಲದ ತೆರದಿ ತೋರುವ ಬಗೆಯಿಂ
ಹರ ತಾಂ ಜಗದೊಳಗಿರ್ದುಂ
ಎರವಾಗಿಯೆ ತೋರುತಿರ್ಪನಾ ಜಗಕೆಲ್ಲಂ ೨೯

ಘಟದೊಳಗಣ ರವಿಯಂದದಿ
ಪಟುತರದಿಂ ಜಗದೊಳಿರ್ಪ ಹರ ತಾ ತನ್ನಂ
ನಟಣಿಸಿ ಪೂಜಿಪ ಭಕ್ತರೊಳ್
ಸುಟಿಯಾಗಿಹನ್ಯೆಸೆ ಮಿಕ್ಕ ಜನದೊಳಗಿಲ್ಲಂ ೩೦

ರವಿಕಾಂತದಿ ರವಿತೇಜಂ
ಸವಿನಯದಿಂದಿರ್ಪ ತೆರದಿ ಕರ್ಗಲ್ಲುಗಳೊಳ್
ಸವನಿಸದೊಲ್ಪುರಹರ ತಾಂ
ಭವಭಾರಿಗಳೊಳಗಿರ್ಪನೆ ಭಕ್ತರೊಳಿಹವೊಲ್ ೩೧

ಕದಡಿದ ನೀರೊಳು ಚಂದ್ರಂ
ಸದಮಳದಿಂ ತೋರದಂತೆ ಕುಜನರ ಮನದೊಳ್
ಮದನರಿಪು ತೋರಲರಿಯಂ.
ಮದಡರಿಗಂ ಮೇಘಮರೆಯ ರವಿಯಂತಿರ್ಪಂ ೩೨

1. x (೩).

ಮಲಿನದ ಮುಕುರವ ನೋಡ-
ಲ್ಕಮಲಿನಛಾಯದಲಿ ರೂಪುದೋರುವ ತೆರದೊಲ್
ಮಲಿನಮನದರ್ಗೆ ಹರ ತಾಂ
ಮಲಿನದೊಳುಂ ತೋರ್ವನಲ್ಲದಮಳಿನನಾಗಂ ೩೩

ನಿರ್ಮಳಮನದೊಳ್ ಚಂದ್ರಂ
ನಿರ್ಮಳಮಯನಾಗಿ ತೋರುವೊಲ್ ಪುರಹರ ತಾಂ
ನಿರ್ಮಳಮನಸಿನ ಭಕ್ತಗೆ
ನಿರ್ಮಳರೂಪಾಗಿ ತೋರುತಿರ್ಪಂ ಮುದದೊಳ್ ೩೪

ವರಮೇರುಗಿರಿಯ ಶಿಖರದೊ-
ಳೆರವಿಲ್ಲದೆಯಿರ್ಪ ತೆರದಿ ಶರಣರ ಮನದೊಳ್
ಪರಮಪ್ರೀತಿಯೊಳಿರ್ಪಂ
ಹರನಿಲ್ಲಂ ತನ್ನ ಭಜನೆರಹಿತರ ಮನದೊಳ್ ೩೫

ಶರಣನೊಳಿರ್ಪ ಹರನೊಳು
[1](ಶರಣಂ ತಾನಿರ್ಪನೆಂಬುದಂ ಸಲೆಯರಿದುಂ)[1]
ಎರವಿಲ್ಲದೆ ಕೂಡಿ ಶಿವನೊಳ್
ಪರಿಣಮಿಸುತ ಪೂಜೆಮಾಡುತಿಹನೇ ಭಕುತಂ ೩೬

ಏನುಂಟಾಗಿಹ ದ್ರವ್ಯವ
ತಾನಾ ಲಿಂಗಕ್ಕೆ ಕೊಟ್ಟು ತತ್ಪ್ರಸಾದವಂ
ಮಾನಸಪ್ರೇಮದಿ ಪಡೆದುಂ
ಸಾನಂದದೊಳಿರ್ದಡಾತ ಪೂಜಕನಹನುಂ ೩೭

ಕುಸುಮೇಕ್ಷುದಂಡಫಲಗಳ
ಕುಶಮನ್ಔಷಧಿಪತ್ರಾನುಲೇಪನಗಳಂ
ಅಸಮಾಕ್ಷಗೆ ಕೊಡದೆ ಕೊಂಡ-
ಡೊಸವಹುದಾತಂಗೆ ನಿರಯ ರವಿಯುಳ್ಳನೆಗಂ ೩೮

1. ಶರಣನಿರ್ಪನೆಂಬುದ ನರಿದುಂ (ಇ).

ಈಶಂಗೆ ಕೊಡದೆಯುಂಡವ
ಬೇಸರದಘಮಲಕ್ರಿಮಿಮಾಂಸಂಗಳ ತಿಂಪವ
ಮಾಸಿನ ಕೂಸಿನ ಮಲವಂ
ಹೇಸದೆ ತಿಂದವನ ಮಲವ ತಿಂದವನಹನುಂ ೩೯

ಹರಗೀಯದೆ ಚಿಲುಪಾಲುವ
ಭರದಿಂ ತಾಂ ಕೊಂಡೆನೆಂಬ ಸ್ವಪ್ನವ ಕಂಡು
ದರವಂ ಸೀಳ್ದಿಡಿಕಿದನಾ
ಕರುಳಿನ ಕೇತಯ್ಯನೆಂಬವಂ ಮುದದಿಂದಂ ೪೦

ಕರತಳದ ಲಿಂಗಕೀಯದೆ
ಹರಗಂ ಭಾವದೊಳು ಕೊಡುವೆನೆಂಬಾ ನರಗುರಿ
ಇರದುಂಬುದೆಲ್ಲ ಕ್ರಿಮಿಗಳು
ಗುರುವಿನ ಕೃಪೆಗೊಳಗಾಗದೆ ನಿರಯದಿ ಬೀಳ್ವಂ ೪೧

ಸಕಲಪದಾರ್ಥಂಗಳನುಂ
ಅಕುಟಿಲದಿಂ ಹರಗೆ ದಾಸಭಾವದೊಳಿತ್ತಡೆ
ಪ್ರಕಟಿಸುವುದುಂ ಪ್ರಸಾದಂ
ಅಕಳಂಕಿತವಾಗಿ ತೋರುತಿಹುದದು ಬಳಿಕಂ ೪೨

ವ ॥ ಉಪಚಾರಾರ್ಥವಾಗಿಶಂಭುವಿಂಗೆ ಕೊಡುವ ದ್ರವ್ಯ ಪದಾರ್ಥವೆನಿಸಿತ್ತುಂ ಸಮರ್ಪಿಸಿ ಬಳಿಕ್ಕದೆ ಪ್ರಸಾದವೆನಿಸಿತ್ತು ಈ ಪ್ರಸಾಪಮಾದ್ಯಂತವರ್ಜಿತಸ್ವಯಮ ಖಂಡರೂಪಿಂದಿರ್ಪುದುಂ ಲಿಂಗವುಂ ತಾಂ ಆದ್ಯಂತವಿಕಲ್ಪವಿಹೀನಮಖಂಡರೂಪಿಂ ದಿರ್ಪುದುಂ ತತ್ಕಾರಣ ಪ್ರಸಾದಕ್ಕೆಯುಂ ಲಿಂಗಕ್ಕೆಯುಂ ಭಿನ್ನಮಿಲ್ಲಂ ಮತ್ತಾ ಅನಾದಿ ದ್ರವ್ಯ ಲಿಂಗದಲ್ಲಿ ಲೀಯವಹುದರಿಂ ಮತ್ತಾ ದ್ರವ್ಯದಲ್ಲಿಯೆ ಪುಟವಹುದರಿಂ ಪ್ರಸಾದ ವಹತನದಿಂ ಲಿಂಗವೆನಿಸಿತ್ತುಂ ಅದು ಕಾರಣಲಿಂಗವೆಯಾಗಿ ಪ್ರಸಾದವೆನಿಸಿತ್ತುಂ ಆ ಪ್ರಸಾದವೆ ಅರ್ಚನೆಯುಂ ಕುರಿತು ಲಿಂಗವಾಯಿತ್ತುಂ ಆ ಲಿಂಗವೆ ಅರ್ಪಣವಂ ಕುರಿತು ಪ್ರಸಾದವಾಯಿತ್ತುಂ ಅದರಿಂ ಪ್ರಸಾದಲಿಂಗವೆಂಬೆರಡೊಂದೆಯಾಯಿತ್ತುಂ ಮತ್ತಂ ................ ನುತಿಹುದುಂ ಮರಳಿ ವಿನಿಯೋಗದಲ್ಲಿ ಪ್ರಸಾದವೆನಿಸುತಿಹುದುಂ ಪ್ರಸಾದಂ ಮಧ್ಯದೊಳೊಂದು ಕ್ಷಣಂ ಅರ್ಪಣವಂ ಕುರಿತು ಪ್ರಸಾದವೆನಿಸುವುದದೆಂತೆ ನಲ್ ಸುವರ್ಣವಾಭರಣವನಾಗಿಮಾಡಲ್ ಸುವರ್ಣನಾಮುವಳಿದಂತೆ ಮತ್ತಾಭರಣವ ನಳಿದು ಸುವರ್ಣವಾದಂತೆ ತನ್ನ ಬುದ್ಧಿಯಿಂದೀ ಪ್ರಸಾದಂ ಪದಾರ್ಥಕ್ಕಾ[1](ದು)[1]ದೆ

1. x (ಇ).

ಮತ್ತೊಂದಿಲ್ಲಂ ಸುವರ್ಣವಂ ಶರೀರಕಾಂತಿಗೆ ಧರಿಸಲಾಭರಣವೆನಿಸಿದಂತೆ ಕ್ರಿಯಾ ಸಮೂಹಮುಪಚಾರಂಗಳಿಂದ ಪ್ರಸಾದದ ಸದ್ಭಾವವಂ ಅರಿವುದಕ್ಕಾಗಿ ಪ್ರಸಾದವಂ ಪದಾರ್ಥವೆಂಬ ಭಾವದಿಂ ಕಲ್ಪನೆಯಾಯಿತ್ತುಂ ಸತ್‌ಕ್ರಿಯಾರೂಪಾದ ಭಾವವೆ ಸದ್ಭಕ್ತಿ ಆಭಕ್ತಿ ಬಾಹ್ಯಾಂಭ್ಯಂತರವಾಗಿ ಶಿವಂಗೆ ಪದಾರ್ಥವಂ ನಿವೇದಿಸಿದ ಪ್ರಸಾದವಂ ಗ್ರಹಿಸುತಿರ್ಪಲ್ಲಿ ಮರಳಿಬಂದಪದಾರ್ಥವಂ ಎಂಜಲೆಂಬ ಶಂಕೆಯುಳಿದಾ ಶಂಕರಗರ್ಪಿಸಿ ತತ್ಪ್ರಸಾದವಂ ಗ್ರಹಿಸುತ್ತಂ ಸಚ್ಚಿದಾನಂದತ್ವವುಳ್ಳುದೇ ಭಕ್ತಿ ಇಂತಪ್ಪ ಭಕ್ತಿಯಿಂ ಶಿವಂಗೆ ಸಮರ್ಪಿಸಿದ ಲಿಂಗಭಾಜನದೊಳಗಿರ್ದ ತತ್ಪ್ರಸಾದಂ ಶಿವನ ಭಾಂಡದಲ್ಲಿರ್ದನ್ನ ವುಂ ಪ್ರಸಾದವಹುದೆಂತೆನಲ್‌ಸ್ವರೂಪಸಾಮರ್ಥ್ಯಗುಣಾದಿ ಸಾಮ್ಯವಾದುದರಿಂ ಒಂದು ವಸ್ತುವಿಂಗೆ ಬೇರೆಂಬುದಿಲ್ಲಂ ಬೇರಾಗಿರ್ದುದಾದಡಂ ಬೇರಾಮುದಲ್ಲಂ ಭಾಂಡದೊಳಿರ್ದ ಪದಾರ್ಥ ಕಾಣಬಾರಮುದಾದಡಂ ಲಿಂಗಭಾಜನವಿರ್ದುದರ ಮೇಲೆ ಪದಾರ್ಥರೂಪದಿ ಮರಸಿದುದರಿಂ ತದಂತರಸವಾದ ಪದಾರ್ಥ ರೂಪು ಕಾಣಬಾರದುದುಂಟಲಾ ಮತ್ತಂ ಕಂಡುದರ್ಪಿತ ಕಾಣದುದನರ್ಪಿತವಾದಡಂ ಭಾಂಡಭಾಜನವೆರಡರಲ್ಲಿಯೂ ಕಾಣಿಸ ಬಾರದದುಂಟುಂ ಭಾಂಡದಲ್ಲಿರ್ದುದನರ್ಪಿತವಾದಡುಂ ಭಾಂಡಭೋಜನೋಭಯ ದೊಳಿಡೆದೆರಹಿಲ್ಲದೆ ಪೊವಣಿಸಿರುತಿರ್ದ ಪ್ರಸಾದಭವಪ್ರಾಪ್ತಿಯಿಲ್ಲದಿಹುದರಿಂ ಸಮರ್ಪಿ ಸುವುದಾಯಿತ್ತಾದಡಂ ಅರ್ಪಿಸಿದುದಲ್ಲಂ ಮತ್ತಂ ಶಿವಾರ್ಪಿತವಹ ಪದಾರ್ಥಜಾತಕಂ ಹೊರಗಾದುವೆಲ್ಲಂ ಅನಾರ್ಪಿತವಹವುಂ ಭಾಂಡದೊಳಗಿರ್ದುದನರ್ಪಿತವಲ್ಲಂ ಭಾಜನ ದೊಳಗಿರ್ದುದನರ್ಪಿತವಲ್ಲಂ ಶಿವಾರ್ಪಿತದ್ರವ್ಯಕ್ಕಂ ಲಕ್ಷಣಹೀನವಾಗಿರ್ದುದು ಹೊರ ತಾಗಿ ಸಮಸ್ತವು ಶಿವನ ಭಕ್ತಿಯ ಪರಮಪ್ರಭಾವದಿಂದರ್ಪಿತವಾದುದೆಯುಹುದುಂ ನ್ಯತಾತ್ಮಕವಪ್ಪ ನವನೀತಂ ವಹ್ನಿಮುಖದಿಂ ಪ್ರತಾಪಿತವಾಗಿ ಘೃತವಾದಂತೆ ಪ್ರಸಾ ದಾತ್ಮಕ ಭಾವದನ್ನವು ಲಿಂಗಮುಖದಿಂದರ್ಪಿಸಿದುದಾಗಿ ಪ್ರಸಾದವೆಯುಹುದುಂ ಶುಕ್ತಿ ಬೆಳ್ಳಿಯ ಭಾವಂತಿಳಿದು ನೋಡಲ್ಕಾನ್ನ ಶುಕ್ತಿಯೇ ತೋರುವಂತೆ ಪ್ರಸಾದದ ಪದಾರ್ಥ ಭಾವಂ ಲುಪ್ತವಾಗಲ್ಕಾನ್ನಿನ ಪ್ರಸಾದವೆ ಉಳಿಯುತ್ತಿಹುದುಂ ಪದಾರ್ಥ ಪ್ರಸಾದ ವಾಗಲುಳ್ಳುದಾದಡಂ ಮೊದಲು ಪ್ರಸಾದಭಾವವಿಲ್ಲದಿರ್ದಡೆ ಸಿದ್ಧಿಸುತ್ತಿಹುದುಂ ಮೊದಲುಳ್ಳುದೇ ಮುಂದೆ ಸಿದ್ಧಿಯಪ್ಪುದುಂ ಪ್ರಸಾದಭಾವವಿಲ್ಲದಪ್ರಾಪ್ತಿ ಅನರ್ಪಿತ ದ್ರವ್ಯವದುಂ ದ್ರವ್ಯವಿಲೋಪದಿಂದುಳಿದುದೇ ಪ್ರಸಾದವದುಂ ಇಂತಪ್ಪ ಪ್ರಸಾದವುಳ್ಳ ಮಾಹೇಶ್ವರನು ಪ್ರಸಾದಿಯೆನಿಸುವಂ ಮತ್ತಾತಂ ಆರುಕರಂಗಳೊಳಾರು ವಸ್ತುವಂ ತಾಳಿ ಆರುಭಕ್ತಿಯಿಂ ಆರಿಂದ್ರಿಯ ಮುಖಂಗಳೊಳಿರ್ಪ ಆರುಲಿಂಗಕಂ ಕೊಟ್ಟುಂ ಆ ಆರು ಪ್ರಸಾದಮುಳ್ಳವನೆ ಪ್ರಸಾದಿ ಕೀಟಭೃಂಗನ್ಯಾಯದಂತೆ ಶರಧಿಯುಂ ಕೂಡಿದ ಹೊಳೆಯಂತೆ ತಾಂ ಹರನಾಗಿ ಹರಗೆಸದೃಶವೆನಿಸುವನಾ ಪ್ರಸಾದಿ ಹರಗೆರವಿಲ್ಲದಗಜೆ ಯಂತೆ ಕರಸ್ಥಳದಲ್ಲಿ ಲಿಂಗವ ತಾಳಿ ತಾಂ ಹರನಾಗಿ ಲಿಂಗಸೇವೆಯಂ ಮಾಡುತಿರ್ಪನಾ ಪ್ರಸಾದಿ ಮತ್ತಂ ಭೋಜ್ಯಪಾನಭಕ್ಷ್ಯಚೋಹ್ಯಲೇಹ್ಯಾದಿ ಪಂಚಕದರಿಕೆಯಂ ಮಹ ದಂತ್ಯಲಿಂಗಕರ್ಪಿಪ ಕಾರ್ಯಾರ್ಪಣವಂ ಬೇರ್‌ತಿಗುಳ್‌ಪತ್ರೆಪೂಫಲಗಂಧದರಿಕೆಯ

ಆಚಾರಾದಿ ಷಡುಲಿಂಗಾರ್ಪಣದ ಪ್ರಸಾದಲಿಂಗಮಿಶ್ರವಂ ಗಂಧರಸರೂಪುಸ್ಪರ್ಶಶಬ್ದ ತೃಪ್ತಿಗಳರಿಕೆಯು ಆಚಾರಾದಿ ಮಹಾಂತ್ಯದರ್ಪಣದ ಗುರುಲಿಂಗಮಿಶ್ರವಂ ಪೀತಶ್ವೇತ ಹರಿತಮಾಂಜಿಷ್ಠ ಕಪೋತವರಿಕೆಯು ಆಚಾರಾದಿ ಷಡುಲಿಂಗಾರ್ಪಣದ ಪ್ರಸಾದಲಿಂಗ ಮಿಶ್ರವಂ ಗಂಧರಸರೂಪುಸ್ಪರ್ಶಶಬ್ದತೃಪ್ತಿಗಳರಿಕೆಯು ಆಚಾರಾದಿ ಷಡ್ಲಿಂಗಾರ್ಪಣದ ಮಿಶ್ರವಂ ಇಂತೀಷಟ್ತ್ರಿಂಶತ್ ಕರಣಾರ್ಪಣವಂ ಮತ್ತಂ ಸೋಂಕು ಅರಿವು ನಿಶ್ಚಯ ಸುಖ ಪರಿಣಾಮುಮಂಕಿತತೃಪ್ತಿಗಳೆಂಬಾರಂ ಆಚಾರಾದಿಮಹಾಂತ್ಯಲಿಂಗಂಗಳಂಸೋಂಕಿಸುವ ಭಾವಾರ್ಪಣವಂ ಇಂತೀ ರೂಪುರುಚಿತೃಪ್ತಿಯುಂ ಅರಿದಿನ್ನೂರಹದಿನಾರರಾರ್ಪಣದಿರವಂ ಭಕ್ತಮಹೇಶಪ್ರಸಾದಿಪ್ರಾಣಲಿಂಗಿಶರಣಐಕ್ಯರೆಂಬ ಸ್ಥಲವಾರುಮಂ ಶ್ರದ್ಧೆನೈಷ್ಠೆಯು ಪಧಾನವನುಭವಾನಂದಸಮರಸವೆಂಬಾರುಭಕ್ತಿಗಳಂ ಸ್ಥಲವಂಗಸಾದಾಖ್ಯಶಕ್ತಿಲಿಂಗ ಕಲೆಮುಖಪ್ರವೃಭಕ್ತಿಗಳಂ ತಿಳಿದರ್ಪಿಸುವುದೇಪ್ರಸಾದಿಕ್ರಿಯೆಯಪ್ಪುದುಂ ಮತ್ತಂ ಅಗ್ನಿಯಿಂಕಾಯಿಸಿದಘೃತವಂ ವಿಪ್ರಂ ಮುಖಶಿಖಿಗಾಹುತಿಗೊಡುವಂತೆ ಮಾರ್ತಾಂಡ ಕಿರಣಸೋಂಕಿದುವಂ ಬಾಡಬಂ ರವಿಗರ್ಘ್ಯಂಗೊಡುವಂತೆ ಚೆಂಪ್ರಸಿಂದಾವ ಷೋಡಶ ಧ್ಯಾನಂಗಳಂ ಶಶಿಗಂ ಬ್ರಾಹ್ಮಣನಾಹುತಿಗೊಡುವಂತೆ ಶಿವನಿಂ ಬಂದ ಸಮಸ್ತ ವಸ್ತುಗಳಂ ಭಕ್ತಂ ಶಿವಂಗರ್ಪಿಸುತ್ತಿಹಂ ಪಂಚೇಂದ್ರಿಯಪಂಚವಿಷಯಸುಖಂಗಳಂ ಪಂಚಮುಖವಾಗಿಯೆ ಸಮರ್ಪಿಪಂ ಕಾಹೇರಿದ ಲೋಹದಲ್ಲಿ ನೀರೆರೆಯಲ್ ಶಿಖಿಯುಂ ಬೊಲುಂ ಶರಣನಿಂದ್ರಿಯಸೋಂಕಿದ ದ್ರವ್ಯಗಳಂ ಶಿವನುಂಬುವಕ್ಕೆ ಸಂದೇಹವಿಲ್ಲಂ ತಳಿಗೆಯೊಳಗಿರ್ದಯಸ್ಕಾಂತ ಹೊರಗಣಸೂಜಿಯುಂ ಪಿಡಿವಂತೆ ಮನದೊಳ್ ಸೋಂಕಿದ ವಸ್ತುವಂ ಚಿತ್ಕಲೆಯಉಂಬುತಿರ್ಪುದುಂ ಶರೀರದೊಳಿರ್ದ ರಸಘುಟಿಕೆ ತಾಗುವ[1](ಸ)[1]ರಳಿಂಗಿದಿರಾಗುವಂತೆ ಚಿತ್ಕಲೆಯರಿವಿನೊಳ್ತೀ[2](ವಿರ)[2]ಲ್ಬಂದ ವಸ್ತುವಂ ಅರಿವುತಿರ್ಪುದುಂ ಇಂತಪ್ಪ ಚಿತ್ಕಲಾರೂಪನಾದ ಪ್ರಸಾದಿ ತಾಂ ನಿಃಕಲನಾದ ಶಿವಂ ಸಾಕಾರಗುರುರೂಪಿಂ ಸರ್ವಾನುಗ್ರಾಹಕನೆಂಬ ಗುರುಮಾಹಾತ್ಮ್ಯಯಂ ಅರಿದುಂ ಲಿಂಗ ಪ್ರಸಾದದಂತೆ ಗುರುಪ್ರಸಾದದ ಸೇವಿಸುವುದುಂ ಆ ಗುರುವಿಂ ಬೋಧಿಸಿಕೊಳ್ಳಲ್ಪಟ್ಟ ಜ್ಞಾನಲಿಂಗ ತಾಂ ಸಮಸ್ತಕ್ಕೆ ಕಾರಣವೆಂಬ ಲಿಂಗಮಾಹಾತ್ಮ್ಯಯಂ ಅರಿದುಂ ಆ ಜ್ಯೋತಿರ್ಲಿಂಗದಲ್ಲಿ ಲೀಯವಪ್ಪ ಯೋಗೀಶ್ವರರುಗಳರಿವೆ ಜಂಗಮಾಧಿಕ್ಯವೆಂದುಂ ೪೩

ಉ. ಮಾ. ವೃ.

ಈಶನನುಂ ವಿಶೇಷನಹವಿಶ್ವಪ್ರಕಾಶನಹಾತನೆಂಬ ನಿ-
ರ್ದೋಷದ ಚಿತ್ತವುಳ್ಳವನೆ ಜಂಗಮವಿಷ್ಟವಸಂಚಯಂಗಳಂ
ಸೂಸದ ಚಿತ್ತರೂಪಿನೊಳು ಕಾಣುತಿಹಾತನೆ ಶ್ರೇಷ್ಠ ಜಂಗಮಂ
ಆಸೆಯ ಪಾಪವಿಲ್ಲದ ಗುಣಾಂಕಿತನೇ ಶಿವಯೋಗಿಯಪ್ಪನುಂ ೪೪

---

1. ಶ (ಇ). 2. ೨ರ (ಇ).

ಜಂಗಮದೇಹ ಸೋಂಕಿದ ಸದಾಗತಿಯಲ್ಲಿಗೆ ಪೋದುದಲ್ಲಿ ತಾಂ
ಅಂಗವ ಸೋಂಕಿದಾ ಮನುಜರೆಲ್ಲರು ಮುಕ್ತರು ಸತ್ಯವಿಂತಿದುಂ
ಜಂಗಮಲಿಂಗದರ್ಶನಗಳಂ ಸಲೆ ಮಾಡಿದ ಮಾತ್ರದಿಂದಲು
ತ್ತುಂಗವಿಹಂಗಗೋಮೃಗನರಾದಿಯು ಮೋಕ್ಷವನೈದುತಿರ್ಕುಗುಂ ೪೫

ಜಂಗಮಪಾದಸೋಂಕಿದ ರಜಂ ಮನುಜರ್ಕಳ ಮೇಲೆ ಬಿರ್ದಡಾ
ಅಂಗವೆ ಮುಕ್ತಿಗಾಶ್ರಯುವದಕ್ಕೆಯುಪೇಂಪ್ರನವಕ್ಷಿಸಾಕ್ಷಿ ತಾಂ
ಜಂಗಮದೇವ ತಾನೆ ನರರೂಪಿನ ರುದ್ರು ಚರಾಚರಂಗಳಂ
ಹಿಂಗದೆ ರಕ್ಷಿಪಾತ ಪರಬೊಮ್ಮಸಿರಾಪರಶಾನ್ವಿತಾಂಗನುಂ ೪೬

ಈಶನು ನೀಲಕಂಧರನು ಜಂಗಮದೇವನು ಭಸ್ಮಕಂಧರಂ
ಈಶನು ಶೂಲಪಾಣಿ ಚರಲಿಂಗವು ಮೇಲಹ ಭಕ್ತಪ್ರಾಣಿ ತಾಂ
ಈಶನು ಮಸ್ತ (?) ಪೂಜಿತನು ಜಂಗಮಲಿಂಗವು ಪಾದಪೂಜಿತಂ
ಈಶನಿಗಿಂತ ಜಂಗಮವೆ ಶ್ರೇಷ್ಠವದೆಂಬುವ ಭಕ್ತಿಭಾವಕಂ ೪೭

ಚಾರಮಹಾತ್ಮೆಯಂ ಅರಿದು ಜಂಗಮಶೇಷವ ಕೊಂಡ ಶೇಷಿಯಾ
ಚಾರದ ಮಾರ್ಗವರ್ತನೆಯು ಹಿಂಗದೆ ಕೂಡಿದ ಸಾವಧಾನದಾ-
ಪಾರಮ ಭಕ್ತಿಯುಳ್ಳವನೆ ಭಕ್ತನುಮಾತನ ದರ್ಶನಾರ್ಥದಿಂ
ಭೂರಿಭವಂಗಳಿಂ ಗಳಿಸಿಹಾ ದುರಿತಂಗಳು ಪೋಪುವಾ ಕ್ಷಣಂ ೪೮

ಮಾಡಲು ಬಾರದಿರ್ದ ಮಹಪಾತಕಯುಕ್ತರು ತಮ್ಮ ದೋಷಮಂ
ಓಡಿಪೆನೆಂಬ ಮಾನಸಗಳುಳ್ಳೊಡೆ ಭಕ್ತನ ಗೇಹದಲ್ಲಿಯೇ
ಮಾಡಿದ ಓದನಾದಿಗಳನುಂಬುದುಮಲ್ಲಿಯ ನೀರನಾದಡಂ
ಜೇಡಿಯದಂ ವಿಲಾಸದೊಳು ಪಾನವ ಮಾಡುವುದಾಗ ತೀಪ್ರದಿಂ ೪೯

ಭಕ್ತನಗೇಹ ಸುತ್ತ ಗಯೆ ಕಾಶಿಗೆ ಸಾದೃಶವೆಂದುಯಾಕ್ಸರಂ
ಮುಕ್ತಿಯಲಿಕ್ಕಿ ಪಿಂಡವನು ಪೈತೃಕಕಾರ್ಯವ ಮಾಡಿಯಾಕ್ಷಣಂ
ಮುಕ್ತಿಯನೈದಿದಂ ಭಕುತ ಮಜ್ಜನ ಮಾಡಿದ ನೀರಿನಲ್ಲಿ ಪೇ
ಜೋಕ್ತರು ಬೀಳೆ ಕೋಷ್ಮಗಳು ಪೋದುವು ಭಕ್ತಮಹಾತ್ಮೆಯೆಂತುಟೋ ೫೦

ಭಕ್ತನ ಮುಯ್ಯ ಸೋಂಕಿದ ಮಲೀನ[1](ವದೇಪರುಷಕ್ಕೆ ಪೋಲ್ವುದೆಂ)[1]
ಬುಕ್ತಿಯು ಕಾಲಕಂಧರನು ಚೇಟಲ[2](ವೆಂ)[2]ಮುಯ್ಯನಿಂಪ ಕಂಡನುಂ
ಭಕ್ತರ ಬಾಗಿಲಂ ಹರನು ಕಾದಿಹ ತನ್ನಯ ಚಿತ್ತವಿಷ್ಟಮಂ
ಭಕ್ತನ ಬೇಡಿದಲ್ಲದೆ ಶಿವಂಗಮ ಬಾರದು ಭಕ್ತಶ್ರೇಷ್ಠನುಂ ೫೧

ಕಂ. ಭಕ್ತನೆ ಸದ್ರೂಪಂ ಶಿವ
ಭಕ್ತನೆ ಚಿದ್ರೂಪಾನಂದವೆಂದು ನೆನೆವಾ
ಭಕ್ತನ ಪರಿಣಾಮವಸ-
ದ್ಭಕ್ತಗೆ ಶರಣುಂ ಮಹಾತ್ಮೆಯಾಗಿರುತಿಹುದುಂ ೫೨

ಮನ[3](ವಾಕ್ಕಾ)[3]ಯಂಗಳೊಳುಂ
ಮನುಮಥವೈರಿಯನು ಕೂಡಿದವಿರಳಬೆಳಗಿನ
ಘನಮಹಿಮ ಶರಣನೆಂದುಂ
ವಿನಯದಿ ಶರಣರ ಶರಣುವೊಗುವನೇ ಶರಣಂ ೫೩

ಪರಿಪರಿಯ ಜೀವಜಾಲವ
ಶರಣ್ಬೊಗಿಸಿಯುಕೊಳಲು ತಕ್ಕ ಶರಣಾಗತನಂ
ಶರಿರದೊಳಿರವಿಲ್ಲದೆ ತಾಂ
ಧರಿಸಿಹನೆ ಶರಣ್ಬೊಗುವನೆ ಶರಣಾಭರಣಂ ೫೪

ಶರಣನ ಮುಖದಿಂದುದ್ಭವಿ-
ಸಿರುತಿಹ ಪರಮಪ್ರಸಾದವೆಂತೆನೆ ಹರಿಯಜ
ಸುರಪಾದ್ಯರಿಗುಂ [1](ಎಂದಿಗು)[1]
ದೊರೆಕೊಳ್ಳದೆ ಗೋಪ್ಯವಾಗಿ ಪರಿರಂಜಿಸಗುಂ ೫೫

ವ॥ ಚೆನ್ನಬಸವೇಶ್ವರನ ಜನನಕ್ಕೆ ಕಾರಣವಾದುದೀ ಪ್ರಸಾದಂ ಮರುಳುಶಂಕರ ಯೋಗೀಶಂ ತನ್ನ ಸಮೀಪದಲ್ಲಿ ಕಾಯ್ದಿರಿಸಿಕೊಂಡಿರ್ದುದೀ ಪ್ರಸಾದಂ ವೇಮನಯೋಗಿಯುಂ ಶ್ವಾನರೂಪಂ ಧರಿಸಿ ಸೂರಸಾನಿಯುಂ ಮನೆಮನೆಯ ಬಾಗಿಲ ಕಾಯ್ದಿರಿಸಿತೀ ಪ್ರಸಾದಂ ಸ್ವಸರುಂಬುತಿರ್ದುದನುಂಡ ಶ್ವಾನಂಗೆ ರುದ್ರಪ್ರಸಾದಿಯೆಂಬ ಗಣೇಶ್ವರತ್ವವನಿತ್ತುದೀಪ್ರಸಾದಂ ಚರಲಿಂಗಶೇಷವಂ ಕೊಂಡ ಮೀನ್ಗಳಂ ತಿಂದ ವ್ಯಾಧಂಗಂ ಗಣೇಶ್ವರತ್ವವನಿತ್ತುದೀ ಪ್ರಸಾದಂ ಮನೋಹರ ಗಣೇಶ್ವರನ ಮುಕ್ಕುಳಿಸಿದ

---

1. ಪರುಷ ಸಮಾನವೆಂ (ಇ). 2. ವೆ (ಇ). 3. ವಕ್ಕಾ (ಇ). 4. x (ಇ).

ಉದಕಸೋಂಕಿದ ರವಿಯ ಶರೀರಕ್ಕಂ ದಿವ್ಯಪ್ರಕಾಶವನಿತ್ತುದೀ ಪ್ರಸಾದಂ ಕಟಕ
ಜಂಗಮಂ ಮುಕ್ಕುಳಿಸುಗುಳ್ದುದಕಂ ಸೋಂಕಿದ ವೇಸಿಯ ಕುಷ್ಟವ ಕೆಡಿಸಿತ್ತೀ
ಪ್ರಸಾದಂ ಮತ್ತಂ ಬಳ್ಳಿಗಾವೆಯ ಬ್ರಹ್ಮಚಾರಿಯೆಂಬಾತಂ ಪ್ರಸಾದವನುಂಡಂಗೆ
ದೋಷವಿಲ್ಲೆಂದು ವಿಪ್ರರೊಳ್ ನುಡಿಯೆ ಅದಂ ಕೇಳದಿರೆ ಕಾಗೆಯಿಂ ನುಡಿಯಿಸಿತೀ
ಪ್ರಸಾದಂ ಮತ್ತಂ ಜಂಗಮಶೇಷಮಂ ಲಿಂಗಕ್ಕೆ ಕೊಟ್ಟು ಕೊಳ್ಳಬಹುದೇ
ಯೆಂದ ಸಂದೇಹಿ ಸೂದ್ರಿಕಂಗೆ ಸೂಕರತ್ವವನಿತ್ತುದೀ ಪ್ರಸಾದಂ ಮಾರಗೌಡನ
ಹಂದಿಯ ಶರೀರಮಂ ಸ್ವರ್ಶಮಂ ಮಾಡಿತ್ತೀ ಪ್ರಸಾದಂ ದೂರ್ವಾಸನುಂಡುದನುಂಡ
ಪುಂಡರೀಕಾಕ್ಷಂಗಂ ವಜ್ರಾಂಗವಿತ್ತುದೀ ಪ್ರಸಾದಂ ಬಂಡಿಯಿಂ ತರುವ ಶೇಷವನೆಂಜ
ಲೆಂದು ಗೊಬ್ಬೂರ ಹೆಬ್ಬಾರುವರ ಗೃಹಂಗಳಂ ಸುಟ್ಟುದೀ ಪ್ರಸಾದಂ ತಿರುನೀಲನಕ್ಕನಮ್ಮ
ಯರುಗುಳ್ದಡೆ ಹರನ ಶರೀರದ ಪುಗುಳ್ಗಳಂ ಮಾಣಿಸಿತೀ ಪ್ರಸಾದಂ ವಾಗೀಶದೇವಂ
ಲೇಹ್ಯಂಗೆಯ್ಯೆ ಶಿವನ ದೇಹದ ಬಾವುಗಳಂ ಮಾಣಿಸಿತೀ ಪ್ರಸಾದಂ ವಾಗೀಶನ
ತಾಂಬೂಲಪ್ರಸಾದವ ಕೊಂಡ ಅಪ್ಪೂತಿಗಂ ಮಂತ್ರಗಾನವಿತ್ತುದೀ ಪ್ರಸಾದಂ ಬಿಲ್ಲಮ
ರಾಜಂಗಂ ಶರಣಪದವಿತ್ತುದೀ ಪ್ರಸಾದಂ ಚೆನ್ನಯ್ಯ ಚೋಳಿಯಕ್ಕಕಣ್ಣಪ್ಪಾದಿ
ಗಳುಂಡುದಂ ಹರನಿಂ ಉಣಿಸಿಕೊಂಡಿತೀ ಪ್ರಸಾದಂ ಉದಾಸೀನದಿಂದಗ್ನಿಗೋಜಲಾದಿ
ಗಳೊಳ್ ಬಿಸುಟಾತನಂ ನರಕದೊಳ್ ಬಿಸುಡುವುದೀ ಪ್ರಸಾದಂ ಸತ್ಪ್ರೀತಿ
ಯುಳ್ಳಾತಂಗಂ ಶಿವಪ್ರಸನ್ನತ್ವವೀವುದೀ ಪ್ರಸಾದಂ ಹೆಚ್ಚುತಿರಲನ್ಯಪ್ರಸಾದಿಗಳಿಗೆ
ಕೊಡಲ್ ಪರಿಣಮಿಸುವುದೀ ಪ್ರಸಾದಂ ಇಂತಪ್ಪ ಶುದ್ಧಸಿದ್ಧಪ್ರಸಿದ್ಧಪ್ರಸಾದದಲ್ಲಿ
ಸಮರಸ ಸದ್ಭಾವವನೆಯ್ದಿದ ಪ್ರಸಾದಿಯ ಗುರುವಿನ ನಿಃಕಲಪ್ರಸಾದ ಪ್ರಸಾದಿಯ
ಬ್ರಹ್ಮರಂಧ್ರದೊಳ್ ನಕ್ಷತ್ರಕಾಂತಿಯಿಂದಿಹುದುಂ ಚರಲಿಂಗ ನಿಃಕಲಪ್ರಸಾದ
ಹೃದಯದೊಳ್ ದೀಪಪ್ರಭೆಯಂತಿಹುದುಂ ಇಷ್ಟಲಿಂಗದ ನಿಃಕಲಪ್ರಸಾದ ಭ್ರೂಮಧ್ಯ
ದೊಳ್ ಮುಕ್ತಾಭದಿಂದಿಹುದುಂ ಮತ್ತಂ ಸೂರಸಾನಿಯುಂ ಮನೆಮನೆಯೊಳಾರೋಗಿ
ಸಿದ ಚರ ಬಂದುಲಾಗಿ ಜ್ಯೋತಿಃಪುಂಜಲಿಂಗ ತೋರಿದಂತೆ ಗುರುಚರಲಿಂಗದ ನಿಃಕಲ
ಕಲೆ ತೋರುತಿಹುದುಂ ಆ ಕಲೆಗಳಿಗಾಧಾರವಿಷ್ಟಲಿಂಗಂ ಆ ಇಷ್ಟಲಿಂಗದ ಪ್ರಭೆ
ಹೃದಯದಿ ಕಾಣಿಸಲದರೊಳ್ ಪ್ರಾಣವನಿಂಬಿಟ್ಟು ಪ್ರಾಣಹಂಸನ ಪಳಗತಿಯುಂ
ಗೆದ್ದಡದು ಪ್ರಾಣಲಿಂಗ ಇಂತಪ್ಪ ಪ್ರಾಣಲಿಂಗವುಳ್ಳ ಪ್ರಸಾದಿಯೇ ಪ್ರಾಣಲಿಂಗಿಯುಪ್ಪಂ
ಮತ್ತಂ ದೇಗುಲದೊಳ್ ಸೂರ್ಯನು ಪೂಜಿಸುತಿರ್ದಾ ದೇಗುಲವಂ ಹೊಗಟು
ಗಗನಾರ್ಕಂಗೆರಗುವ ವಿಪ್ರನಂತೆ ಪ್ರಾಣಲಿಂಗಿ ಕಣ್ಮುಚ್ಚಿದೆಡೆಯೊಳ್ ಪ್ರಾಣಲಿಂಗವಂ
ಕಾಣ್ಬಂ ಕಣ್ದೆರೆದೆಡೆಯೊಳ್ ಇಷ್ಟಲಿಂಗವಂ ಕಾಣ್ಬಂ ಭಾನುಮಂಡಲ ಭಾನುದೀಪ್ತಿ
ಭಾನುದೇಹ ವಿವರಿಸ[1](ಲಸಾಧ್ಯ)[1]ವಾಪಂತೆ ಶಿವನ ನಿಃಕಲಸಕಲವಂ ವಿವರಿಸಲಸಾಧ್ಯವಿಲ್ಲಂ
ಚಿಲ್ಲಿಂಗಸುಖವಂ ಅರಿಯದೆ ಬಹಿರ್ಲಿಂಗಮಂ ಪೂಜಿಪಾತಂ ಆರಮನೆಯುಂ ಕಂಡವಂ

1. ಲಾಸ್ಯ (ಇ).

ಅಂತಃಪುರವ ಸುಖವನರಿಯದನಂತಹನುಂ ಸುರತಲಂಪಟನಾದ ಪುರುಷಂಗಂ ಅಂಗನೆ
ಮೋಹಿಸುವವೋಲ್ ಪುರಹರಂ ಆಂತರ್ಯದ ಮೋಹಿಯೆಂದರಿದು ಮಂತ್ರಲಕ್ಷ್ಯ
ಯೋಗದೊಳಿರ್ಪನಾ ಪ್ರಾಣಲಿಂಗಿಯಾದಾತಂ ಅಂತರ್ದಂತ ಬಹಿರ್ದಂತ ದಂತಿಗಂ
ಅಂತರ್ದಂತದಿಂ ಸುಖಂ ತೋರುವಂತೆ ಅಂತರ್ಯೋಗ ಬಹಿರ್ಯೋಗದೊಳುಂ
ಅಂತರ್ಯೋಗವೇ ಲಿಂಗಕ್ಕೆ ಸುಖಂ ಅಂತರ್ಬಹಿರ್ಯೋಗಯುಗದೊಳೊಂದುಳ್ಳವಂ
ಶಿವಂಗಂ ಪ್ರೀತನಲ್ಲಂ ಅಂತರ್ಬಹಿರ್ಲಕ್ಷ್ಯ ಪ್ರೀತನಾದಾತನೆ ಹರಗಂ ಪ್ರೀತನೆಂದರಿದು
ಅಂತರ್ಬಹಿರ್ಯೋಗವೆಂಬೆರಡರಲ್ಲಿ ಶಿವನ ಅಖಂಡಿತ ಪರಿಪೂರ್ಣಬೆಳಗಂ ಸ್ವಾಂತ
ದೊಳ್ ಚಿಂತಿಸುತಿರ್ಪನಾ ಪ್ರಾಣಲಿಂಗಿಯಾದಾತಂ ಮತ್ತಂ ಅಂತರ್ಯೋಗಕಂ
ಬಹಿರ್ಯೋಗಕಮುತ್ತರ ಕಕ್ಷೆಯದುಂ ಬಹಿರ್ಯೋಗ ಅಂತರ್ಯೋಗವಗ್ರದೊಳ್ ಸಿದ್ಧ
ರಾಮೇಶ್ವರಂ ಲಿಂಗವಂ ಪಾಣಿತಳದೊಳಾಂತು ಪುರಾತನರ ಚಿತ್ತಕ್ಕೆ ಹರ್ಷವಂ
ಪುಟ್ಟಿಸಿದಂತೆ ಹೊರಗಿರ್ದಿಷ್ಟವಮಂ ಒಳಗಿರ್ದ ಚಿಲ್ಲಿಂಗವೆರಡೂ ಯೇಕವೆಂದು ತಿಳಿದು
ಭಾವದೊಳ್ ಚಿತ್ಕಲೆ ದೇಗುಲವಂ ಭಾವಿಸಿ ಬ್ರಹ್ಮರಂಧ್ರ ಸಹಸ್ರದಳಕಮಲದೊಳ್ಕೇವಲ
ಕಲೆಯಂ ಭಾವಿಸುವುದುಂ ಸಹಸ್ರದಳತಾಮರಸಗದ್ದುಗೆ ಭಾವಕ್ಕೆ ತೋರದಿರ್ದೊಡಂ
ಕೇವಲ ಕಲೆಯಂ ಭಾವಿಸುವುದುಂ ನಿರಾವರಣತಾರಗೆಗಳೊಳಾಧಾರವಿಲ್ಲದೆ ತೋರುವ
ಧ್ರುವದಂತೆ ತನಗೆ ತಾನಾಧಾರವಾಗಿ ಆಧಾರವುಂ ಪಿಂಗಿ ತೋರುವ ಕಲೆತಾಂ ತನ್ನಾ
ಧಾರವುಂ ತೋರದ ದೂರದ ದೀಪದಂತೆ ವಾರಿಜ ಕಾಣಿಸದೆ ಚಿತ್ಕಲೆತೋರುತಿರಲದಂ
ಧ್ಯಾನಿಸುವುದುಂ ಆ ಕಲೆ ತಾಂ ಭಾವಕ್ಕೆ ತೋರದಿರಲಿಷ್ಟಲಿಂಗಮುಂ ಸಾವಧಾನದ
ಕರದಿಂದೆ ತಂದು ಕೇವಲಕಲೆಯ ನೆಲೆಗೊಳಿಸಿ ಭಾವಿಸುವುದೆಂಬ ಭಾವಮುಂ ಅರಿದುಂ
ಧ್ಯಾನಿಸುವನಾ ಪ್ರಾಣಲಿಂಗಿಯಾದಾತಂ ಮತ್ತಂ ಇಮ್ಮೆಯ್ಯ ಪೂಜೆಯನಾಚರಿಸಿದಾತಂ
ಪರಬ್ರಹ್ಮವಪ್ಪ ಇಮ್ಮೆಯ್ಯ ಸಿರಿವಂತನೆನಿಸುವಂ ಇಮ್ಮೆಯ್ಯಯೊಳಗೊಂದು ಪೂಜೆ ಹಿಂಗಿ
ದಾಗಂ ಬೊಮ್ಮವಾಗಲರಿಯನವಂ ರತಿಕೂಟದಿಂದ ಸತಿಯಿಂ ಪತಿಗೆ ಪತಿಯಿಂ ಸತಿಗೆ
ಸಂತೋಷವಪ್ಪಂತೆ ಶಿವನಿಂ ಭಕ್ತಂಗೆ ಭಕ್ತನಿಂ ಶಿವಂಗೆ ಸಂತೋಷವಾಗಿ ಶಿವಭಕ್ತಿ
ಗಳೊಳೆರವಿಲ್ಲದೆ ಸೇವ್ಯಸೇವಕತ್ವದಿಂದಿರ್ಪನಾಪ್ರಾಣಲಿಂಗಿಯಾದಾತಂ ಮತ್ತಂ
ಒಡೆದರಸವೆರವಳಿಯದೆ ಕೂಡಿರ್ಪಂತೆ ಪ್ರಾಣಲಿಂಗದಿಷ್ಟಲಿಂಗದ ಬೆಸುಗೆಬಿಡದೆ ಎರವಳಿ
ದಿರ್ಪುದನರಿದುಂ ಮತ್ತಂ ಮೂರ್ತಿಲಿಂಗದ ಪೂಜೆ ಸ್ವಯಂಭುಲಿಂ[1](ಗಕ್ಕೆ ವೆಗ್ಗಳಂ)[1]
ಆ ಮೂರ್ತಿ ಗುಡಿಯುಂ ಹಿಂಗಿರಲು ಆ ಲಿಂಗಮೂರ್ತಿಗೆ ಪೂಜೆಯೆಲ್ಲಿಯದುಂ
ಮೂರ್ತಿಯತ್ತಲ್ಲಿಂಗವೆಂಬ ಭೇದವಂ ಅರಿದುಂ ಭಜಿಪೆನೆಂಬ ಪ್ರಾಣಲಿಂಗವೆಂಬ
ಭೇದವಂ ಅರಿದುಂ ಭಜಿಪೆನೆಂಬ ಪ್ರಾಣಲಿಂಗಿಯೆ ಪ್ರಾಣಲಿಂಗಾರ್ಚಕನೆನಿಸುವಂ
ಮತ್ತಂ ಗಗನಕ್ಕೆ ಪೋದವಂ ಮೇರುಗೆ ಮನೆಯಂ ರವಿಗೆ ಬೆಳಗಂ ಶರಧಿಗೆ ನೀರಿಂ

---

1. ಗೆಗ್ಗಳಂ (ಇ).

ತಣಿವಂ ಮಾಡಬಲ್ಲವರಿಲ್ಲದಂತೆ ಪರಿಪೂರ್ಣಚಿದ್ಘನಲಿಂಗಕ್ಕಂ ಪ್ರಾಣಲಿಂಗಿ ತಾನೇನ
ಮಾಡಬಲ್ಲಂ ಪ್ರಾಣಲಿಂಗಿಯ ಸದ್ಗುಣಂಗಳೆ ಪೂಜೆಯುಕ್ಕುಂ ೫೬

ಉ. ಮಾ. ವೃ.

ಅಂತರವಾಯುವಿಂದ ತೊಡವಂಬರದಲ್ಲಿಯ ಬ್ರಹ್ಮರಂಧ್ರದಾ
ಅಂತದನಾಡಿ ಚಂದ್ರವಿಡಳಾಮೃತಸೇಚದೆ ಶೈತ್ಯವಾಗಿಹಾ
ಸ್ವಾಂತದಿ ಕಟ್ಟಿದಿಂದ್ರನವನಾಳುವನುಳ್ಳ ಹೃದಾಲಯಾಂತದೊಳ್
ಕಾಂತಿಯ ಬೀರುತಿರ್ಪ ಸರಸೀರುಹ ಮಧ್ಯದೊಳಿರ್ಪ ಲಿಂಗಕಂ ೫೭

ಸ್ಫುರಣೆ[1](ಯೆಂಬ)[1] ನೀರೊಳಭಿ[2](ಷೇಕ)[2]ವಿವೇಕದ ವಸ್ತ್ರಸತ್ಯದಾ
ಭಾರಣ ಹರ್ಷ ಪುಷ್ಪಗಳು ಸಮಾಧಿಯ ಸಂಪದ ಗಂಧವಕ್ಷತಂ
ಕಾರುಣಶ್ರದ್ಧೆ ಧೂಪನಿರಂಹಕೃತಿ ದೀಪನಿವೇದ್ಯ ಸಂತತಾ-
ಪಾರ ನಿರಾಸೆ ತಾಂಬುಲಮದಾಗಿಯೇ ಪೂಜೆಯ ತೇಜವೊಪ್ಪುಗುಂ ೫೮

ಅಂತರಕ್ರಿಯನುಳ್ಳ ಘನ ಪ್ರಾಣದ ಲಿಂಗಿಯ ಜೀವನೀಶನಂ
ಸ್ವಾಂತದಿ ಜಾನಮಾಡಲದು ತಾನೆ ಸಮಾಧಿ ಮಹೇಶ ಜೀವರೇ
ಕಾಂತರವೆಂಬ ಭಾವನೆ ಸಮಾಧಿಪ್ರಪಂಚಿನ ಭಾವವಿಲ್ಲದಿ-
ದಾರ್ತನ ಚಿತ್ತಸಾಮ್ಯವು ಸಮಾಧಿಯೆನಿಪ್ಪುದು ಪ್ರಾಣಲಿಂಗಿಗಂ ೫೯

ಚಕ್ರಗಳಾರು[3](ವಾ)[3] ದಳಗಳುಂ ಅವರೊರ್ಣಗಳುಂ ಅಧೀಶ್ವರಂ
ವಕ್ರಮವಿಲ್ಲದಕ್ಷರಗಳಂ ಕಲೆಶಕ್ತಿಗಳಂ ಸದಾ ಸುಮೂ-
ರ್ತಿಕ್ರಮ ಯೂಥವುಂ ಕರಗಳಂ ಘನಭಕ್ತಿಗಳಂ ಸುನಾದದಾ-
ಪ್ರಕ್ರಿಯೊಳಂ ಸಮಾನತೆಯೆ ಯೋಗಸಮಾಧಿಯ ಭಾವವಪ್ಪುದುಂ ೬೦

ಮ. ವಿ. ವೃ.

ವರಸಾಹಸ್ರದಳಾಂಬುಜಾತದೊಳು ಸಕ್ತ[4](ಶ್ರೀಶ)[4]ನಂ ಭಾವಿಸೂ-
ದುರುತಾನ್ಮಂಡಲಮಧ್ಯಸೂಕ್ಷ್ಮಬಿಲತೋರೂಪಂತದೇ ಕೈಲಸೋ-
ತ್ತರಮಾರ್ಗಂ ಅವರಿಂದಲತ್ತ ಸಕಲಕ್ಕಂ ಕಾರಣಂ ಆದ ಶಂ-
ಕರನಂ ಭಾವಿಸುವುಂ ಅಭಿನ್ನ ಪರಮಾನಂದಕ್ಕೆ ಸಂತೋಷದಿಂ ೬೧

---

1. ಯೀ (ಅ). 2. ಸಕ್ಕ (ಇ). 3. ವರ (ಇ). 4. ಶ (ಇ)

ಪರಿತತ್ವಂಗಳಿಗೆಲ್ಲಕಂ ಉಪರಿ ತಾನೇ ಸಚ್ಚಿದಾನಂದಭಾ
ಸುರರೂಪಿಂದವೆ ತನ್ನ ತಾಸಿರುವ ನಿರ್ದೇಶಂ ಉಮಾನಾಮು[1](ಮ)[1]
ಧ್ವರಮಾಹಾಘನಶಕ್ತಿಯಿಂ ಜ್ವಲಿಪ ಹಂಸಸ್ವಾತ್ಮರೂಪಾಗಿ
ಪರಮಾತ್ಮಾನ್ವಿತದೇಕ ಸಿದ್ಧಿಯೊಳು ಸೋಹಂ ಭಾವದಿಂದರ್ಪನುಂ ೬೨

ಕಂ- ಮರುತಂ ಬಯಲೊಳ್ ಬೆರೆದಂ
ತುರಿಯುಂ ಕರ್ಪುರವು ಬೆರೆ[2](ದು ಎ)[2]ರವಿಲ್ಲದವೊ-
ಲ್ವರವುಂ ಶಬುದಂ ಬೆರೆದೊಲ್
ಹರನೊಳ್ ಜೆರೆದಿಹ[3](ನೆ ತಾಂ)[3] ಸಮಾಧಿಕನಹನುಂ ೬೩

ಶಶಿರವಿಶಿಖಿಗಳ್ ತಮ್ಮಿಂ
ದೆಸೆಗಳ ಬೆಳಗುತ್ತಿರ್ಪಂಗಗಳಂ ತಾ[4](ನುಂ)[4]
ಸಸಿನಸುಜ್ಞಾನಪೀಠದೊ-
ಳಸುಲಿಂಗಸಮೇತವಾಗಿ ಬೆಳಗುತ್ತಿಹನುಂ ೬೪

ಲಕ್ಷ್ಯಮದೆಂದುಂ ಲಕ್ಷಿಸು-
ವೇಕ್ಷಿಸಲಿಲ್ಲಂ ನಿರ್ಲಕ್ಷ್ಯದೊಳೂಣೆಸಲೀ-
ಲಕ್ಷ್ಯಾತೀತದ ಲಕ್ಷ್ಯದ
ಲಕ್ಷ್ಯದ ಲಕ್ಷಣವೆ ಲಕ್ಷ್ಯವಹುದಾತಂಗಂ ೬೫

ಕರೆಗೊರಲನರಿಯಬೇಕೆಂ-
ಬರಿವೆ ಹರನೆಂದಡವ ಮರೆಯದ[5](ಲರಿತೀವಿ)[5]
ರ್ಪರಿವಿನ ತುರಹಂ ಹರಿದಾ-
ಅರಿವಿನ ಮರಹಿನೊಳಿಹನೆ ಸಮಾಧಿಕನಹನುಂ ೬೬

ಘನತರ ಶಿವನೊಳ್ಕೂಡಿದ
ವಿನಯಸಮಾಧಿಕನ ಮನೋಮೂರ್ತಿಯದಾದಾ-
ಅನುಭವಲಿಂಗದ ಮೈಪ್ರಭೆ
ಇನಕೋಟಿದ್ಯುತಿಯ ಮೀರಿ ತೋರುತ್ತಿರ್ಕುಂ ೬೭

---

1. x (ಇ). 2. ದೆ (ಇ). 3. ನ (ಇ). 4. x (ಇ). 5. ರೀ ತೀವುತಿ (ಇ).

ಜ್ಞಾನಾನಂದದ ಯೂಥಂ
ತಾನಾಗೊಪ್ಪಿದ ನಿತ್ಯನಿರಂಜನರೂಪೇ
ನಾನಾಬೊಮ್ಮವ ಮೀರಿದ
ನೂನಾಂತರದಿಂದ ಲಿಂಗವಾಗಿರುತಿಹುದುಂ ೬೮

ವಿಧಿವಿಷ್ಣುಮುಖ್ಯರೆಲ್ಲರು
ಪದಪಿಂದಂ ಹುಟ್ಟಿಯಲ್ಲಿಯಡಗುತ್ತಿಹರಾ-
ಸದಮಳ ಬೊಮ್ಮದ ರೂಪಂ
ಹುದುಗಿರ್ಪುದೆ ಲಿಂಗವೆಂದು ನುಡಿವುತ್ತಿಹರುಂ ೬೯

ಸೂರ್ಯಚಂದ್ರಾಗ್ನಿವಿದ್ಯು-
ತ್ತಾರೆಗಳಂ ಬೆಳಗುತಿರವು ಬಳಿಕಂ ಬೆಳಗುವ
ಪಾರಮಲಿಂಗದೊಳಾ[1](ದಾ)[1]
ಪಾರಜಗತ್ತುಗಳು ಬೆಳಗುತಿರ್ಕುಂ ಸತತಂ ೭೦

ಜ್ಞಾತೃಜ್ಞಾನಂ ಜ್ಞೇಯದ
ಮಾತೃಕೆಯಂ ನುಂಗಿತೋರ್ಪ ಲಿಂಗವ ನಿಜವಂ
ಜ್ಞಾತೃಜ್ಞಾನಜ್ಞೇಯದ
ಸೂತ್ರವೆ ತಾನಂಗಲಿಂಗವಾಗಿರುತಿಹುದುಂ ೭೧

ಪರಬ್ರಹ್ಮವಿಶ್ವರೂಪಹ
ಪರಿಯಿಂದೈ[2](ದುವುದುವೆಂ)[2]ಬ ನಿಶ್ಚಯಲಿಂಗಂ
ವರಮಾಯೆಗೆ ಕಾರಣವಿದು
ಉರು ಜಗತ್ತಿಗೆ ಬೀಜವೆನ್ನದವನೇ ಮೂಢಂ ೭೨

ಜ್ಯೋತಿರ್ಮಯವೇ ಲಿಂಗಂ
ಸ್ವಾಂತದೊಳಾ ಲಿಂಗವಿಪ್ಪುದೆಂಬುದೆಯಂಗಂ
ಪ್ರೀತಿಯೊಳೀ ಎರಡುಳ್ಳವ
ನೀತಿಯೊಳವನಂಗಲಿಂಗಿಯೆಂಬುದು ಶಾಸ್ತ್ರಂ ೭೩

---

1. x (ಇ). 2. ದೂದೆಂ (ಇ).

ಲಿಂಗದೊಳಂಗಂ ಕೂಡಿಯು
ಮಂಗಳದೊಳು ಲಿಂಗಕೂಡಿಯೆರವಳಿದಿರ್ಪ‌ಮ
ನಂಗದ ಲಿಂಗಿಯುಮದ ತಾ
ಲಿಂಗಾರ್ಚನೆ ಮಾಳ್ಪ ಭಾವಮುಳ್ಳೊಡೆ ಶರಣಂ ೭೪

ಜ್ಞಾನಾಂಗಲಿಂಗಿಯಾದವ
ತಾನೆ ಸತಿ ಶಿವನೆ ಪತಿಯೆನಿಸಿಪ್ಪೀ ಭಾವದ
ಜ್ಞಾನಜ್ಞೇಯದೆ ಸತಿಪತಿ
ತಾನಾಗಿಹುದೆಂಬ ಸುಗುಣಮುಳ್ಳೊಡೆ ಶರಣಂ ೭೫

ವ॥ ಶಿವಜ್ಞಾನಸಮುತ್ಪತ್ತಿಯಿಂ ಪರಮಾನಂದ ದೊರೆಕೊಂಡ ಶರಣಂ ಅನ್ಯವಂ ಪ್ರೀತಿಮಾಡಲರಿಯಂ ಗಂಗಾಮೃತಂ ದೊರೆಕೊಂಡ ತೃಷಿತಂ ಮೃಗತೃಷ್ಣೆಯಂ ಜಲವೆಂದು ಭಾವಿಸದಂತೆ ಶಿವಾನಂದಂ ದೊರೆಕೊಂಡವನನ್ಯವನರಿಯಂ ತೃಷಿತ ಚಕೋರಂಗಂ ಚಂದ್ರನಿಂದಲ್ಲದೆ ನಕ್ಷತ್ರಗಳಿಂ ತೃಷೆಯಾರದೆಂಬಂತೆ ಸಂಸಾರಕ್ಲೇಶಿತನಾದಾತಂಗಂ ಶಿವನಂ ಬಿಟ್ಟು ಉಳಿದ ದೇವತಾಂತರಂಗಳಿಂದೇನು ಸುಖಂ ಅದು ಕಾರಣಂ ಸರ್ವಪ್ರಯತ್ನದಿಂ ಶಿವನಂ ಮರೆಹೊಕ್ಕು ಅನ್ಯಚಿಂತೆಯುಳಿದುಮನಂತಸುಖಮನೈದಿ ಶಿವಭಕ್ತಿರೂಪವಾದ ಪರಮಾನಂದದಲ್ಲಿ ಸಂತೋಷಿಸುತಿರ್ಪ ಜಗದ್ಧಿತಾರ್ಥಕಾರಣವಜ್ಞಾನಭಾವಮಂ ನಿರಸನಮಂ ಮಾಡುತಿರ್ಪ ಜ್ಞಾನಸ್ವರೂಪನಾದಾತನೇ ಗುರುವಪ್ಪಂ ಸಹಸ್ರಸೂರ್ಯಸದೃಶಜ್ಞಾನಮುಳ್ಳಾತಂಗಂ ಅಜ್ಞಾನತಮವೆಲ್ಲಿಯದುಂ ಅಜ್ಞಾನಮೂಲದ ರಾಗದ್ವೇಷಶಾಖೆಗಳ ಪಾದಪಂಗೆ ಶಿವಜ್ಞಾನವೇ ಕುಠಾರಂ ಶಮೆದಮೆವಿವೇಕವೈರಾಗ್ಯಕ್ಷಾಂತಿಕಾರುಣ್ಯಶ್ರದ್ಧೆ ಶಿವಭಕ್ತ್ಯುಯುಕ್ತಧರ್ಮಸತ್ಯಶಿವಜ್ಞಾನದೊಡನೆ ಕೂಡಿದ ಯೋಗಿ ಸಾತ್ವಿಕನೆನಿಸುವಂ ಕಾಮಕ್ರೋಧಲೋಭಮೋಹಮದಮತ್ಸರವೆಂಬಾನೆಗಳು ಶಿವಜ್ಞಾನವೆಂಬ ಸಿಂಹದೊತ್ತಿನೊತ್ತಿನೊಳೆಂತಿರ್ದಪುಂ ಸಂಸಾರಪ್ರವರ್ತಕಮಂ ನಿರಾಕರಿಸಿ ಮಹಾಜ್ಞಾನವ ನಿರ್ದೇಶಿಸುತಿರ್ಪನಾ ಶರಣಂ ಸೂರ್ಯನಿಂದಲ್ಲದೆ ತಮಕಪಲದಂತೆ ಗುರುವಿಂದಲ್ಲದಜ್ಞಾನ ಕಪಲಲರಿಯದುಂ ಅಜ್ಞಾನವೆಂಬ ಕಿಲುಬು ಹಿಡಿದ ಚಿತ್ತದರ್ಪಣವಂ ಜ್ಞಾನವಿಭೂತಿಯಿಂ ಬೆಳಗುವಾತನೆ ಗುರುವಪ್ಪಂ ಪ್ರತ್ಯಕ್ಷೀಕರಿಸಿವ ತತ್ತ್ವವನುಳ್ಳ ಜೀವನ್ಮುಕ್ತವಾದ ಗುರುಕಟಾಕ್ಷಸಿದ್ಧಿಗೆ ಲೋಕದೊಳ್ ಪಡೆಯುದುದೇನುಂಟುಂ ಉಪದೇಶವ ಕೂಟವಂ ಧರಿಸತಕ್ಕವಲಿಂಗಂ ಶಿವಜ್ಞಾನದೊಳ್ ಸ್ಥಿರೀಕರಿಸಿವ ಶಿವೈಕ್ಯಜ್ಞಾನವೇ ಶೀಲಂ ಶಿವತತ್ತ್ವಜ್ಞಾನವಲ್ಲದನ್ಯಜ್ಞಾನಕ್ಕೆ ಮುಖದಿರುಹಿ ಶಿವಪ್ರಾಪ್ತಿಯಲ್ಲಿ ಲವಲವಿಕೆಯಾದ ಶಿವಯೋಗಮುಳ್ಳಾತನೇ ಶೀಲವಂತನೆನಿಪಂ ಪತಿಪ್ರೇಮವುಳ್ಳಾಯುಕ್ತನೇ ಪತಿವ್ರತೆಯಾದಂತೆ ಶಿವನೊಳಾಸಕ್ತಿಯುಳ್ಳಾತನೇ ಶೀಲವಂತಂ ಮರೆಹೊಕ್ಕವರ ಕ್ಲೇಶವಂ ತೊಲಗಿಸಿ ಬೆಳಗುತ್ತಿರ್ದ ಪರಮಾತ್ಮನಾದ ಶಿವನೊಳ್ ಪ್ರೀತಿ

ಯುಳ್ಳಾತನೇ ಶೀಲವಂತಂ ಶಿವಜ್ಞಾನೈಕ ನಿಷ್ಠೆಯೊಂದರಲ್ಲಿ ಏಕೀಕರಿಸಿದ ಶೀಲವಂತನೇ ಐಕ್ಯನೆನಿಸುವಂ ೭೬

ಉ. ಮಾ. ವೃ.

ಭಾವದಿ ನಿಃಷ್ಕಲಂಕಗತಿಯುಳ್ಳವ ವಿಷ್ಟಪಜಾಲವೆಲ್ಲವಂ
ಭಾವದಿ ಮಾಯೆಯೆನ್ನದವ ಚಿತ್ತದ ಚಿತ್ತಿನ ಮಾರ್ಗದಲ್ಲಿಯೇ
ಭಾವದಿ ಲೀಯ್ಯ ಮಾಳ್ಪ ಜಗವುಳ್ಳವ ನಿಸ್ಪೃಹನಾಗಿ ಸಂಗಸ-
ದ್ಭಾವಸುಖಾಬ್ಧಿಯೊಳ್ಮುಳುಗಿ ಪ್ರೇಮದೊಳಿರ್ಪವನೈಕ್ಯನಪ್ಪನುಂ ೭೭

ಸಂಸೃತಿಸಿಂಧುವಂ ಸಮರಸಾನ್ವಿತಬುದ್ಧಿಯ ಪೋತದಿಂದ ಸಂ
ವಿಶ್ರುತವಾಗಿ ದಾಂಟುವವನಪ್ಪತಸುವ್ರಜಹಂಗು ಹೊದ್ದದಾ-
ಆಶ್ರಯದಲ್ಲಿ ನೆಪ್ಪಿನವ ಶಾಶ್ವತಶಂಕರಪೂಜೆ ಮಾಡುವಾ
ವಿಶ್ರಮಭಕ್ತಿಯುಳ್ಳವ ಚಿದಂಗವನುಳ್ಳವನೈಕ್ಯನಪ್ಪನುಂ ೭೮

ಶಂಕರನಿಂದ[1](ಲೈಕ್ಯ)[1]ವಹ ಭಾವದಿ ಕೂಡಿದ ಭಕ್ತ ಮಾಡಿದಾ-
[2](ಸಂಖ್ಯೆಯ)[2] ಕರ್ಮಯೂಥವನು ಮಾಡುವನಾದಡು ಹೊದ್ದವಾತ[3](ಗಾ)[3]
ಸೂಂಕಿಸಿ ಚಿತ್ತದಿಂ ನೆನೆವವಸ್ತುಗಳೆಲ್ಲವು ಶೂಲಿಜಾನತಾ-
ಸಂಕಿಸಿ ವಾಕ್ಯವಾಡಿದ ಸಮಸ್ತಗಳೆಲ್ಲ ಮಹೇಶಕೀರ್ತನಂ ೭೯

ಸರ್ವವನೆಲ್ಲವಂ ಹರನಿಗರ್ಪಿತ ಮಾಡಲು ಬಲ್ಲ ಭಾವಕಂ
ಸರ್ವವಿಚಾರಸಂಘಟನಹಂ ಅವನಾಗ ಮಾಳ್ಪಕ್ರೀಡೆ ತಾಂ
ಶರ್ವನ ಪೂಜೆಯಾಗಿಹುದು ಸಂತಸದಿಂ ನಲದಾವ ವಸ್ತುವಂ
ಸರ್ವದಿ ನೋಳ್ಪ ನೋಟ ಶಿವದರ್ಶನಸಂಪದವಪ್ಪುದಾತಗಂ ೮೦

ಕೇಳ್ವುದು ನೋಳ್ಪುದುಂಬುದು ಸುವಾಸಿಪುದೆಲ್ಲವ ಮುಟ್ಟುತಿರ್ಪುದುಂ
ಬಾಳ್ವುದು ಮುಖ್ಯವಾದ ಬಹುವಸ್ತುವನೆಲ್ಲವ ಭೋಗ ಮಾಳ್ಪುದುಂ
ಕೊಳ್ವುದು ಕೊಂಬುದೆಲ್ಲ ಶಿವನಲ್ಲದೆ ಅನ್ಯಗಳಿಲ್ಲವೆಂದು ಬಾ-
ಯಾಳ್ವನೆ ಸರ್ವಸಂಪದದೊಳೊಂದಿದ ಭಕ್ತಿವಿಚಾರದೈಕ್ಯನುಂ ೮೧

---

1. ಲೇಖ (ಇ). 2. ಶಂಕ್ಯದ (ಇ) 3. ಕಾ (ಇ).

ಮ. ವಿ. ವೃ.

ಹರಸರ್ವಾಂಗದಿ ಲೀಯವಾಗೆ ಹರನೊಳ್ತಾಂ ಲೀಯವಾಗಿರ್ದುವಾ-
ಹರತಾನೆಂಬುಭಯಂ ಅಡಂಗಿ ಬಳಿಕೇಕಜ್ಞಾನತೋರಿರ್ದೊಡಾ-
ಪರಭಾವಾನ್ವಿತಚಿತ್ತವರ್ತನೆಗೆ ಭೂತೇಶಾಂತರೂಪಾಗಿಹಾ-
ಪರಿಪೂರ್ಣಾತ್ಮಚಿದೇಕಭಾಜನವದೆಂದುಂ ಪೇಳ್ವರಾ ಐಕ್ಯಗಂ ೮೨

ಶರಿರಂ ಭಾಂಡಮದಾಗಿ ಜೀವವೆಯದನ್ನದ್ರವ್ಯ ತಾನಾಗಿಯುಂ
ಪರಮಿಥ್ಯಂಗಳು ಭಾಜನವ್ರಜಗಳೆಂದಾ ಅನ್ನರೂಪಾ[1](ಗಿಹಾ)[1]
ಪರಮಾತ್ಮನ್ನವನೀಶಗರ್ಪಿಸಿಯೆ ತತ್ಪ್ರಸಾದದಿಂದೇಕವಂ
ಬೆರೆಸಿರ್ದಾತನೆ ಏಕಭೋಜನಿಯಹಂ ತತ್ತ್ವಾರ್ಥಸಂವಿದ್ಗುಣಂ ೮೩

ಮನದೊಳ್ ಪೋಹಣಿಸಿರ್ದ ತತ್ತ್ವನೆನಹೆಂಬ ದ್ರವ್ಯಸಂಘಾತಮಂ
ಘನಲಿಂ[2](ಗಾರ್ಥ)[2]ವಿಚಾರಮೇಳನದ ಸಚ್ಚಿದ್ಭಾವವೆಂದೆಂಬ ಭಾ-
ಜನದಿಂದರ್ಪಿ[3](ಪನೇ)[3]ಕಭಾಜನಿಯಹಂ ಸುಜ್ಞಾನಪಾತ್ರಂಗಳಿಂ
ವಿನಯಾನಂದಪದಾರ್ಥಮಂ ಸಲಿಸುವೈಕ್ಯಂ ತಾಂಶಿ[4](ವಂ)[4]ಗಾಸ್ಪದಂ ೮೪

ಪರಮಾನಂದದ ಚಿತ್ರಭಾನುವಿನೊಳೇಕಾಕಾರವಾಗಿರ್ಪ ಭಾ-
ಸುರಗರ್ಭೀಕೃತದೇಕಭಾಜನಿಯೆ ತಾಂ ಭೂತೇಶ್ವರಂ ಭೋಗಿಪಾ-
ತುರದೊಳ್ ವಿಶ್ವಪದಾರ್ಥಯೂಥಗ[5](ಳೊಳ್)[5]ಲ್ಲಂ ಕೂಡೆ ಭೋಗಿಪ್ಪೊಡಾ
ಶರಣಂ ತತ್ಸಹಭೋಜಿಯೆಂದೆನಿಸುವಂ ಕೇಳೆಂದನಾ ಶಿಷ್ಯನೊಳ್ ೮೫

ಕಾಮವಿಕಾರಮತ್ಸರವಿಜೃಂಭಿತಕ್ರೋಧಮದಕ್ಷುದಂಗಳಾ
ಪ್ರೇಮವ ಬಿಟ್ಟು[6](ವಿಂದ್ರಿಯದ)[6] ದರ್ಪವ ನೂಂಕಿಸುವೇಂದ್ರಿಯಂಗಳಾ-
ಸೀಮೆಯ ಕಂಡು ಸಾಮರಸವಾಗಿಯೆ ಭೋಗಿಸುವೈಕ್ಯ ತಾನೆ ನಿ-
ಸ್ಸೀಮ ನಿರಾಳನಾದ ಸಹಭೋಜಿಕನಪ್ಪನು ತಪ್ಪದೆಂದನುಂ ೮೬

ಚಿತ್ತಿನ ರೂಪಿನಾತ್ಮನೊಳಗೀಶನನುಂ ಗುರುವಂ ಜಗತ್ತುವಂ-
ನಿತ್ತುವು ಕೂಡಿಯೇಕತೆಯೊಳೆಲ್ಲವ [7](ಕಾಣುತೆ ಭಾವಿಪಾತ ತಾ)[7]
ಉತ್ತಮಭಾವವುಳ್ಳವನೆ ತಾಂ ಸಹಭೋಜಿಕನೆಂದು [8](ಪೇಳ್ವವಂ)[8]
ಉತ್ತಮಭಕ್ತಿತಾತ್ಪರಿಯವೆಲ್ಲವ ಬಲ್ಲವ ಪೇಳ್ದನಕ್ಕರಿಂ ೮೭

---

1. ಪಾ (ಇ). 2. ಗೋರ್ಕ (ಇ). 3. ಪದೇ (ಇ). 4. ವಾ (ಇ). 5. ಳಲೆ (ಇ).
6. ವಿಂದ್ಯಗಳ (ಅಇ). 7. ಕಂಡುಗ್ರಾಹಿಪಿ (ಇ). 8. ದೇ (ಇ).

ಕಂ. ನಾನೇ ಗುರು ನಾನೇ ಶಿವನುಂ
ನಾನೇ ಚರಾಚರಾತ್ಮವಾದಿ ಜಗವೆಲ್ಲಂ
ನಾನೆಂಬಾ ಈ ಐಕ್ಯಂ
ತಾನೇ ಶಿವಸಹಭೋಜನದವನಾಗಿಹನುಂ ೮೮

ನಾನೇಭೃತ್ಯನುಮೀಶ್ವರ
ತಾನೇ ಪತಿ ನಾಸುಶಿಷ್ಯ ಗುರುವಿವರೆಂಬೀ
ಮಾನಸವಿಲ್ಲದಡಾತನ
ನೂನಶಿವಾದ್ವೈತಪದವನಾಶ್ರೈಸಿದಪಂ ೮೯

ವ|| ದೇಹವಂ ವಿಭಾಗಿಸಿ ನಿರ್ದೇಹಿಯಾಗಿ ಲೋಕಾಚಾರವರ್ತನೆಗಳಿಲ್ಲದಾತ್ಮನೇ ಭಕ್ತನೆನಿಸುವಂ ಆ ಭಕ್ತಿಯೇ ನೈಷ್ಠಿಕೆಯಿಂ ಶಿವನನಾಶ್ರಯಿಸಿ ಕಾಮಾಚಾರ ವಿಷಯಂಗಳಂ ಹಿಂಗಿ ನಿಶ್ಚಲನಾದುದರಿಂದೀ ಆತ್ಮನೇ ಮಾಹೇಶ್ವರನೆನಿಸುವಂ ವಾದಿಕ್ಲೇಶಂಗಳಿಂ ಚಿತ್ತಶುದ್ಧಿಯ ಪ್ರಸನ್ನತೆಯಿಂದೀಯಾತ್ಮ ಪ್ರಸಾದಿಯೆನಿಸುವಂ ಜೀವಭಾವವಿಲ್ಲದೆ ಮರಣವಂ ಗೆದ್ದು ಪ್ರಾಣವೇ ಲಿಂಗವೆಂಬ ಬುದ್ಧಿಯಿಂದೀ ಆತ್ಮ ಪ್ರಾಣಲಿಂಗಿಯೆನಿಸುವಂ ಪ್ರಾಣಾರ್ಪಣಕುಶಲದಿಂ ಶಿವತತ್ತ್ವವನ್ಯೆದಿ ತನ್ನಿಂದ ಮೇಲಾದ ವಸ್ತುವಿಲ್ಲವೆಂಬ ಬುದ್ಧಿಯಿಂದೀ ಆತ್ಮಂ ಶರಣನೆನಿಸುವಂ ತಾನು ಶಿವನೆಂಬುಭಯಭಾವವಿಲ್ಲದುದರಿಂದೀ ಆತ್ಮನೇ ಐಕ್ಯನೆನಿಸುವಂ ಷಡ್ರುಚಿಯುಂಟೆದ ಜಿಹ್ವೆ ಆ ಆರು ರುಚಿಗಳಚ್ಯೋತ್ತಿ ಆ ಆರು ರುಚಿಯಾಗಿ ತೋರುವಂತೆ ಭಕ್ತಾದ್ಯೈಕ್ಯಾಂತದೊಳಾತ್ಮನೋರ್ವನೆ ಆ ಆ ಆಚರಣೆಯಿಂ ಬೇರೆಬೇರೆ ಪೆಸರ್ವಡೆದಂ ಮತ್ತಾ ಚಿತ್ಸ್ವರೂಪಾದಾತ್ಮಂ ಕರುಣಾಸಮಾಧಿಯ ಕರಪೀಠದಿಂ ಪರಬ್ರೊಮ್ಮಲಿಂಗವಂ ಗ್ರಹಿಸುವುದೇ ಇಷ್ಟಲಿಂಗಂ ತ್ರಿಕರಣಶುದ್ಧಪೂಜೆಯುಂಗವೇ ಆಚಾರಲಿಂಗಂ ಅದಂ ಗ್ರಹಿಸುವುದೇ ಗುರುಲಿಂಗಂ ಅದಂ ಕಾಣ್ಬಾತನೆ ಚಿದಾತ್ಮಂ ಚಿತ್‌ದೃಷ್ಟಿಯೇ ಶಿವಲಿಂಗಂ ಚಿದ್ವ್ಯಕ್ತಿನ ನೋಟವೇ ಚರಲಿಂಗಂ ಕಾಣಿಸಿಕೊಂಬ ವಸ್ತುವೇ ಪ್ರಸಾದಲಿಂಗಂ ಪ್ರಸಾದತೃಪ್ತಿಯೇ ಮಹಾಲಿಂಗಂ ಮತ್ತಂ ಆಚಾರಲಿಂಗವೇ ದೇಹಂ ಗುರುಲಿಂಗವೆಯಾತ್ಮಂ ತಲ್ಲಿಂಗವೆ ಪ್ರಾಣಂ ಜಂಗಮಲಿಂಗವೆಯಿಂದ್ರಿಯಂ ಪ್ರಸಾದಲಿಂಗವೆ ವಿಷಯಂ ಮಹಾಲಿಂಗವೆ ತೃಪ್ತಿ ಇಂತಪ್ಪ ಷಟ್ಸ್ಥಲಮೂರ್ತಿಯಾದಾತನೆ ಭಕ್ತಂ ಆ ಭಕ್ತನ ಶರೀರವೆ ಆಚಾರಲಿಂಗಂ ಆತ್ಮನೆ ಗುರುಲಿಂಗಂ ಪ್ರಾಣವೆ ಶಿವಲಿಂಗಂ ಇಂದ್ರಿಯವೆ ಚರಲಿಂಗಂ ವಿಷಯವೆ ಪ್ರಸಾದಲಿಂಗಂ ತೃಪ್ತಿಯೆ ಮಹಾಲಿಂಗಂ ಇಂತೀ ಷಡ್ಲಿಂಗವನುಳ್ಳಾತ'(ನ)[1] ಭಕ್ತಿಯ ಸಹಜಮಾಟಾಂತ್ಯದಾಚರಣೆಯ ಮಾರ್ಗವೇ ಆಚಾರಲಿಂಗಂ ಅದು ನವವಿಧವಾಗಿ ತೋರಿ ಶ್ರೈಲಿಂಗವೊಂದಾಗಿ ಇಷ್ಟಲಿಂಗದೊಳ್ ಗುರುಲಿಂಗ ಜಂಗಮವಾಗಿ ಅಡಗಿಪ್ಪುದು

1. x (ಇ).

ಅದೆಂತೆಂದೊಡೆ ದೀಕ್ಷೆಶಿಕ್ಷೆಜ್ಞಾನವೆಂಬ ಗುರುತ್ರಯವುಂ ಭಕ್ತನಯಿಷ್ಟಲಿಂಗದವೃತ್ತ ದಲ್ಲಡಕ್ಕಂ ಅದೇ ಗುರುವೆನಿಸುವುದುಂ ಕ್ರಿಯಾಭಾವಜ್ಞಾನವೆಂಬ ಲಿಂಗತ್ರಯವಿಷ್ಟದ ಗೋಲಕದಲ್ಲಡಕ್ಕಂ ಅದೇ ಲಿಂಗಂ ಸ್ವಯಚರಪರವೆಂಬ ಚರತ್ರಯಂ ಇಷ್ಟಲಿಂಗದ ಗೋಮುಖದಲ್ಲಡಕ್ಕಂ ಅದೇಜಂಗಮಂ ಈ ಆಚಾರಲಿಂಗದಿಂ ಕಾಣ್ಬ ಗುರುಲಿಂಗಂ ಮತ್ತಾ ಭಕ್ತಿನೈಷ್ಠೆಯಿಂವೆಡೆಗೊಂಡ ಮಾಹೇಶ್ವರನ ಭಕ್ತದೇಹಿಕ ಭಕ್ತಸ್ಥಲಾಂತ್ಯವಾದ ನವವಿಧ ಸ್ಥಲವಾದಾಚರಣೆಯೊಳಿರ್ದು ತಾಂ ನವವಿಧವಾಗಿ ಪ್ರಕಟಿಸಿ ಮಾಹೇಶ್ವರನ ಇಷ್ಟಲಿಂಗ ದೊಳ್ ಗುರುಲಿಂಗಜಂಗಮವಾಗಿ ಅಡಗಿತ್ತದೆಂತೆಂದೊಡೆ ಕ್ರಿಯಭಾವಜ್ಞಾನವೆಂಬಾ ಗಮತ್ರಯಂ ಮಾಹೇಶ್ವರನ ಇಷ್ಟಲಿಂಗದ ಗೋಳಕದಲ್ಲಡಕ್ಕಂ ಅದೇ ಲಿಂಗಂ ಸಕಾಯ ಅಕಾಯ ಪರಕಾಯವೆಂಬೀ ಕಾಯತ್ರಯಂ ಇಷ್ಟಲಿಂಗದ ವೃತ್ತದಲ್ಲಡಕ್ಕಂ ಅದೇ ಗುರುವುಂ ಧರ್ಮಭಾವಜ್ಞಾನವೆಂಬಾಚಾರತ್ರಯಂ ಇಷ್ಟಲಿಂಗದ ಗೋಮುಖದಲ್ಲಡಕ್ಕಂ ಅದೇ ಜಂಗಮಂ ಇಂತೀ ಗುರುಲಿಂಗದಿಂ ಪಡೆವ ಶಿವಲಿಂಗಮಂ ಮತ್ತೀ ಮಾಹೇಶ್ವರಂ ಚತ್ತಪ್ರಸನ್ನತೆಯು ಕೂಟದಿಂ ಪ್ರಸಾದಿತ್ವವನೈದಿ ಪ್ರಸಾದಮಾಹಾತ್ಮ್ಯಾಂತವಾಗಿ ಆಚರಿಸುವ ಸಪ್ತಸ್ಥಲದಾಚರಣೆಯೊಳ್ ಬೆಡಂಗುವಡೆದು ತಾಂ ನವವಿಧವಾಗಿ ತ್ರೈತ್ರೈಲಿಂಗವೊಂದಾಗಿ ಇಷ್ಟಲಿಂಗದೊಳ್ ಗುರುಲಿಂಗಜಂಗಮವಾಗಿ ಅಡಗಿತ್ತು ಅದೆಂತೆಂದೊಡೆ ಕಾಯಇಂದ್ರಿಯಪ್ರಾಣವೆಂಬೀ ಅನುಗ್ರಹತ್ರಯಂ ಪ್ರಸಾದಿಯ ಇಷ್ಟ ಲಿಂಗದ ವೃತ್ತದಲ್ಲಿಯೆ ಅಡಕ್ಕಂ ಅದೇ ಗುರುಂ [1](ಕಾಯಾರ್ಪಣಂಕರಣಾರ್ಪಣ ಭಾವರ್ಪಣವೆಂಬೀ)[1] ಅರ್ಪಿತತ್ರಯಂ ಇಷ್ಟಲಿಂಗದ ಗೋಳಕದಡಕ್ಕಂ ಅದೇಲಿಂಗಂ ಶಿಷ್ಯಶುಶ್ರೂಷಸೇವ್ಯಸ್ಥಲತ್ರಯಂ ಇಷ್ಟಲಿಂಗದ ಗೋಮುಖದಲ್ಲಡಕ್ಕಂ ಅದೇಜಂಗಮಂ ಇಂತೀಶಿವಲಿಂಗದಿಂ ಪಡೆವ ಜಂಗಮಲಿಂಗಂ ಮತ್ತಾ ಪ್ರಸಾದಿ ಚಿದಾತ್ಮನೆ ಲಿಂಗವೆಂಬ ನಿಶ್ಚಲಬುದ್ಧಿಯ ಯೋಗದಿಂ ಪ್ರಾಣಲಿಂಗಿಯ [2]ಹಂತವನೈದಿ[2] ಲಿಂಗಸ್ಥಲಾಂತ್ಯವಾಗಿ ಆಚರಿಸಿದ ಪಂಚಮಸ್ಥಲದ ಯೋಗಾಚರಣೆಯೊಳ್ ಪ್ರಸಿದ್ಧವಾಗಿ ತನ್ನವವಿಧವಾಗಿ ತೋರಿ ತ್ರೈತ್ರೈಲಿಂಗವೊಂದಾಗಿ ತ್ರೈವಿಧವಾಗಿ ಪ್ರಾಣಲಿಂಗಂ ಇಷ್ಟಲಿಂಗದೊಳಡಗಿತ್ತ ದೆಂತೆದೊಡೆ ಜೀವಅಂತರಪರಮವೆಂಬೀ ಆತ್ಮತ್ರಯಂ ಪ್ರಾಣಲಿಂಗಿಯ ಇಷ್ಟಲಿಂಗದ ಗೋಳಕದಲ್ಲಡಕ್ಕಂ ಅದೇ ಲಿಂಗಂ ನಿರ್ದೇಹ ನಿರ್ಭಾವ ನಷ್ಟವೆಂಬೀ ಆಗಮತ್ರಯಂ ಇಷ್ಟಲಿಂಗದ ವೃತ್ತದಲ್ಲಡಕ್ಕಂ ಅದೇ ಗುರುವುಂ ಆದಿ ಅಂತ್ಯ ಸೇವ್ಯವೆಂಬ ಪ್ರಸಾದ ತ್ರಯಂ ಇಷ್ಟಲಿಂಗದ ಗೋಳಕದಲ್ಲಡಕ್ಕಂ ಅದೇ ಜಂಗಮಲಿಂಗಂ ಇಂತೀ ಜಂಗಮ ಲಿಂಗದಿಂ ಪಡೆಯಲ್ಪಟ್ಟ ಪ್ರಸಾದಲಿಂಗಂ ಮತ್ತಾ ಪ್ರಾಣಲಿಂಗಿ ಶರಣಸತಿಲಿಂಗಪತಿ ಯೆಂದಾವರ್ತಿಸಿದ ನಿಶ್ಚಯವಾಗಿ ತಾಂ ನವವಿಧವಾಗಿ ತೋರಿ ತ್ರೈಭೇದವಾಗಿ ಶರಣನ ಇಷ್ಟಲಿಂಗದೊಳಡಂಗಿತ್ತು ಅದೆಂತೆಂದೊಡೆ ದೀಕ್ಷಾಶಿಕ್ಷಾಜ್ಞಾನವೆಂಬ ಪಾದೋಕ ತ್ರಯಂ ಶರಣನ ಇಷ್ಟಲಿಂಗದ ಗೋಳಕದಲ್ಲಡಕ್ಕಂ ಅದೇ ಲಿಂಗಂ ಕ್ರಿಯೆಭಾವಜ್ಞಾನ

---

1. ಕಾರಣಭಾವನೆಂಬೀ (ಇ). 2. ಹಂತನವನೈದಿ (ಇ).

ವೆಂಬೀ ನಿಷ್ಪತ್ತಿತ್ರಯಂ ಇಷ್ಟಲಿಂಗದ ವೃತ್ತದಲ್ಲಡಕ್ಕಂ ಅದೇ ಗುರುವುಂ ಪಿಂಡ ಬಿಂದು ಮಹ[1](ತ್ರಿಂ)[1]ಬಾಕಾಶತ್ರಯಂ ಇಷ್ಟಲಿಂಗದ ಗೋಮುಖದಲ್ಲಡಕ್ಕಂ ಅದೇ ಜಂಗಮಂ ಇಂತೀ ಪ್ರಸಾದಲಿಂಗದಿಂ ಕಾಣ್ಬ ಮಹಾಲಿಂಗಂ ಮತ್ತಾ ಶರಣಂ ಶಿವಸಮರಸಸದ್ಭಾವದಿಂದೈಕ್ಯತ್ವವನೈದಿ ಸಹಭೋಜನಾಂತವಾಗಿ ಆಚರಿಸಿದ ಚತುಃಸ್ಥಲದೊಳುಂ ಸಂಭ್ರಮಂಬೆತು. ತಾ [2](ದ್ವಾ)[2]ದಶಭೇದನಾಗಿ ಅವರೊಳೊಂಬತ್ತು ಐಕ್ಯನ ಇಷ್ಟಲಿಂಗದೊಳಡಂಗಿದವವೆಂತೆಂದೊಡೆ ಕ್ರಿಯಾಭಾವಜ್ಞಾನವೆಂಬ ಪ್ರಕಾಶತ್ರಯಂ ಐಕ್ಯನ ಇಷ್ಟಲಿಂಗದ ಗೋಮುಖದಲ್ಲಡಕ್ಕಂ ಅದೇ ಜಂಗಮಂ ಕೊಂಡುದು ಪ್ರಸಾದ ನಿಂದುದೋಗರ ಚರಾಚರಾನಾಸ್ತಿಯೆಂಬ ತ್ರಯಂ ಇಷ್ಟಲಿಂಗದ ಗೋಮುಖದಲ್ಲಡಕ್ಕಂ ಅದೇಲಿಂಗಂ ಭಾಂಡಭಾಜನವಂಗಲೇಪವೆಂಬೀ ತ್ರಯಂ ಇಷ್ಟಲಿಂಗದ ವೃತ್ತದೊಳಡಕ್ಕಂ ಅದೇ ಗುರುವುಂ ಸ್ವಪರವರಿಯದ ಭಾವಾಭಾವನಷ್ಟಜ್ಞಾನಶೂನ್ಯವೆಂಬೀತ್ರಯಂ ಅತೀತಂ ಇಂತೀ ಲಿಂಗಸ್ಥಲವೆ ಇಷ್ಟಲಿಂಗಂ ಭಕ್ತಸ್ಥಲಾದಿಯೆ ಅಂಗಂ ಈ ಉಭಯಸಂಬಂಧವೇ ಯೋಗಂ ಈ ಲಿಂಗಾಂಗಸಂಯೋಗಿಯಾದ ಭಕ್ತನೆ ವಿಶೇಷ ವೀರಂ[3]. ೯೦

ಮ. ವಿ. ವೃ.

ಪರಮೇಶಂ ಗಿರಿಶಂ ಸುಧಾಕರಧರಂ ಕಲಾಂತಕಂ ಶಂಕರಂ
ಉರಗೇಂದ್ರಾಭರಣಂ ವಿನಾಯಕಪಿತಂ ಗಂಗಾಧರಂ ಕಾಮಸಂ
ಹರಸೌಖ್ಯಾಕರ ರಕ್ಷಿಕೆಮ್ಮವನು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮಜಟಾಧರಂ ಪುರಹರಂ ಭರ್ಗಂ ಶಿವಾವಲ್ಲಭಂ ೯೧

ಗದ್ಯ ॥ ಇದು ಸಕಲ ಸುರಗಣಮಣಿಮಕುಟ ರಚಿತಮಣಿಪ್ರಭಾಧಿಕ್ಯ ಮಾಣಿಕ್ಯ ದ್ಯುತಿಪುಂಜಮಂಜುಳರಂಜಿತಸಂಪಚ್ಚರಣನೆನಿಪ ಭೂತೇಶ್ವರಶ್ರೀಪಾದಪಯೋಜಮಕರಂದರೋಲಂಬಮಾನ ಚೆನ್ನವೀರೇಶ್ವರಜಂಗಮದೇವವಿರಚಿತಮಪ್ಪ ಷಟ್ಸ್ಥಲವಲ್ಲಭ ಮಹಾಪ್ರಬಂಧದೊಳ್ ಸಿದ್ಧೇಶ್ವರಜಗದ್ಧಿತಾರ್ಥಸ್ವಶಿಷ್ಯಬೋಧಕಥನಮಹೇಶ್ವರಾದಿ ಪಂಚಸ್ಥಲಲಿಂಗಸ್ಥಲಮಷ್ಟಮಾಶ್ವಾಸಂ ಸಮಾಪ್ತಂ

1. ಜಿಂ (ಇ). 2. ಷ್ವ (ಇ). 3. 'ಮತ್ತಂ ನಿರಾಧಾರವೆಂತೆಂನೊಡೆ' ಎಂಬ ವಾಕ್ಯ ಮುಂದೆ ಇದೆ. ಅದಕ್ಕೆ ವಿವರಣೆಯಿಲ್ಲ. ಇಲ್ಲಿಗೆ ಪ್ರಕರಣ ಮುಗಿದಿದೆ.

# ನವಮಾಶ್ವಾಸಂ

## ಸ್ವಶಿಷ್ಯಾವಬೋಧ ಕಥನಂ ಸಿದ್ಧಲಿಂಗೇಶ್ವರಂ ಲಿಂಗಸಂಗ ಸುಖದೊಳೊಪ್ಪಿರ್ದ ಕಥನಂ

ಪ್ರ. ವೃ.

ಶ್ರೀಗೌರೀನಾಯಕಂ ಲೋಕಸಿಚಯಪಿತಸರ್ವೇಶ್ವರಂ ಕಾಲಕಂಠಂ
ನಾಗಾಲಂಕಾರ ನಾಗಾಜಿನವಸನವಿಲಾಸಾಸ್ಪದಂ ಜ್ವಾಲಿಕಾಕ್ಷಂ
ನಾಗಾಸ್ಯಾಬ್ಜಾರ್ಕ ಕಾಲಾತಿಗಹರಿಸುರಪಾನಂದಪುಂಜಾಬ್ಧಿಚಂದ್ರಂ
ವಾಗದ್ವೈತಾತಿಗಂ ರಕ್ಷಿಕೆ ಸಕಲ ಸುಖಾಗಾರಭೂತೇಶ್ವರಾಂಕಂ ೧

ಉ. ಮಾ. ವೃ.

ಷಡ್ವಿ[1]ಧ(ದ)[1]ಂಗಮೂರ್ತಿ ಷಡುಲಿಂಗವಿಧಾನ್ವಿತಮೂರ್ತಿ ಶೀಲಸಂ
ಷಡ್ವಿಧಮೂರ್ತಿ ಷಡ್ವ್ರತಮೂರ್ತಿ ಷಡಕ್ಷರಮಂತ್ರಮೂರ್ತಿ ಸಾ-
ಷಡ್ವಿಧಬ್ರಹ್ಮಮೂರ್ತಿ ಷಡುಚಕ್ರದಳಾಂತವಿಮೂರ್ತಿಗೊಂಡಿಹಾ
ಷಡ್ವಿಧದಿವ್ಯಕಾಂತಿಗಳ ಮೀರಿದ ಸದ್ಗುರುಮೂರ್ತಿ ಸಿದ್ಧನೊಳ್ ೨

ಚಾರವಿಚಾರಸದ್ಗುಣಧಶಿಷ್ಯನು ವಂದಿಸುತಾ ಕ್ಷಣಂ ನಿರಾ-
ಭಾರದ ವೀರಶೈವವನು ಕೇಳಿದನೆಂತೆನೆ ದೇವದೇವಸಂ-
ಸಾರವಿದಾ[2]ವ(ನೇ)[2] ಗು[3]ರು(ವೆ)[3] ಸಿದ್ಧನೆ ಭಕ್ತಿಯ ವರ್ಮಮಾರ್ಗಮಂ
ಪೂರಿಸಿ ಪೇಳ್ದೆಯಿನ್ನದರ ಮುಂದಣ ಶೈವವ ಪೇಳ್ವುದೆಂದನುಂ ೩

ಧೀರಕುಮಾರ ಸದ್ಗುಣವಿಚಾರನೆ ಕೇಳು ನಿರಾಶ್ರ[4](ತಾಂ)[4]ನಿರಾ-
ಭಾರತೆಯಾದ ಶೈವವನು ನೆಮ್ಮುವ ಮಾನವತ್ರೈಮಲಂಗಳಂ
ಶಾರಿರಭಾವಭ್ರಾಂತಿಯನು ಬಾಹ್ಯದ ಕರ್ಮವು ದುಃಖಸೌಖ್ಯಸಂ
ಸಾರವಿವಲ್ಲವೆಂದು ಮನಸಂಸ್ಮೃತಿಯೆಂಬುತ ಗೆಲ್ದನಾತನುಂ ೪

---

1. ಧಂ (ಇ). 2. ವ (ಇ). 3. ರು (ಇ).

ಮಾನಸವೆಂಬ ಸಂಸ್ಕೃತಿಯು ಗೆದ್ದವ ಗೆದ್ದವ ತ್ರೈಮಲಂಗಳಂ
ಮಾನಸವೆಂಬ ಸಂಸ್ಕೃತಿಯು ಗೆದ್ದವ ಗೆದ್ದವ [1](ದುಷ್ಕೃ)[1]ತಂಗಳಂ
ಮಾನಸವೆಂಬ ಸಂಸ್ಕೃತಿಯು ಗೆದ್ದವ ಗೆದ್ದವ ನಾರಕಂಗಳಂ
ಮಾನಸವೆಂಬ ಸಂಸ್ಕೃತಿಯು ಗೆದ್ದವ ಗೆದ್ದವ ಸರ್ವವೆಲ್ಲವಂ ೫

ಮಸ್ತಕವಿತ್ತ[2](ವ)[2]ಂಗರಿಯು ಬಾಧೆಯು ಮಾತು[3](ಗಳು)[3]ಂಟೆ ಲೋಕದೊಳ್
ಚಿತ್ತವ ಗೆದ್ದವಂ[4](ಗಿಹದ)[4] ಸಂಸ್ಕೃತಿಬಾಧೆಯದೆಲ್ಲಿ ತೋರ್ಪುದೆಂ-
ಬುತ್ತಮಬುದ್ಧಿಯಿಂ ಗುರುಗೆ ವಂದಿಸಿ ಚಿತ್ತವ ಗೆಲ್ವೆನೆಂಬುತಂ
ಭಕ್ತಿತನಾಗಿ ನಿಂದು ಬಲುದೈನ್ಯದಿ ಬಿನ್ನಪಗೈದುಮಾತನಿಂ ೬

ದೀಕ್ಷೆಯ ಕೊಂಡು ಕಂಥೆಯು ಕಮಂಡಲು ದಂಡ ವಿಭೂತಿ ವಿವಾ-
ರಕ್ಷಹರಕ್ಷಿಮಾಲೆ ಮಣಿಕುಂಡಲ ಕರ್ಪರ ಮುಖ್ಯವಾದವಂ
ಆ ಕ್ಷಣ ತಾಳ್ದು ಸದ್ಗುರುವ ಸೋಂಕಿಯೆ ಸದ್ಗುರುವಾಗಿ ತನ್ನಯಾ-
ಮೋಕ್ಷವ ಕೂರ್ತು ಭೈಕ್ಷಗಳನಾಚರಿಪಾತ ನಿರಾಶಿಯಪ್ಪನುಂ ೭

ಜ್ಞಾನದ ವೃಷ್ಟಿಯುಳ್ಳವವಧೂತ[5](ತೆಯು)[5]ಳ್ಳವ ಶಾಂತಿಯುಳ್ಳವಂ
ಮಾನಿಸಗೋಷ್ಠಿಯೊಲ್ಲದವ ಸಾದರಭಕ್ತಿಯ ಯೋಗಮುಳ್ಳವಂ
ಹೀನದ ಜೀವಭಾವಪರಿಗರ್ವಗಳಿಲ್ಲದೆ ಸತ್ವವುಳ್ಳವಂ
ಧ್ಯಾನಜಪಾದಿಯುಳ್ಳವನು ಮೋಕ್ಷಕಧೀಶ ನಿರಾಶಿಯಪ್ಪನುಂ ೮

ಭೂತವಪಸ್ಮರಾದಿಗಳು ಮರ್ತ್ಯರ ಕಾಡಿಸಿಯನ್ನಪಾನವಾ-
ವ್ರಾತವ ತಿಂಬೊಲುಂ ಹರನ ಭಕ್ತರ ನೋಯಿಸಿ ತಿಂಬುತಿರ್ಪ ದು-
ರ್ನೀತಿಯ ಬಿಟ್ಟು ತುಂಬಿ ಕುಸುಮಂಗಳನುಂಬೊಲು ಭಕ್ತಗೇಹದೊಳ್
ಪ್ರೀತಿಯೊಳುಂಡು ಮುಟ್ಟಿಹ ನಿರಾಶಿಯೆ ಭಕ್ತರ ಪ್ರಾಣನಾಯಕಂ ೯

ಕಂ. ಇಂಬರಿಯದೆ ತಾಂ ಬಂದುದ
ತಾನುಂಬುದು ನಿರ್ವಾಣವಲ್ಲ ಕರತಳಲಿಂಗವ
ನಂಬದೆ ಕೀಟಕ ನರರಂ
ನಂಬಿದೆನೆಂದೊಡಲ ಹೊರೆವಗೆಲ್ಲಿಯ ಮೋಕ್ಷಂ ೧೦

1. ದುಃಕೃ (ಇ). 2. ದ (ಇ). 3. ಗು (ಇ). 4. ಗಹ (ಇ). 5. ಮ (ಇ).

ಜಲಬೊಬ್ಬುಳಿ[1](ಕೆಗೆ ಮಿಂ)[1]
[2](ಚಲನೆಗೆ ಕರಿಕರ್ಣದ ಮುಂಜಿಗೆ ಮೇಘಕ್ಕಂ)[2]
ಲಲನೆಯ ಮೋಹಕೆ ಸರಿಯಹ
ಕಲೆವರವ[3](ರ)[3] ಸಲಹುವವಂಗೆಲ್ಲಿಯು ಮೋಕ್ಷಂ ೧೧

ಗಿರಿವಾರಣಾಸಿಮುಖ್ಯದ
ವರತೀರ್ಥಂಗಳೊಳು ಚರಿಪೆನೆಂಬಾಗಮುಮಂ
ಪರಿಹರಿಸಿ ಶರಣದರ್ಶನ
ಗುರುದರ್ಶನವಂ ಮಾಳ್ಪನೆ ಜಂಗಮನೆನಿಪಂ ೧೨

ಅರಸಿಂಗಂ ದಂಡ[4]ವ (ತ)[4]
ಸ್ಮರರಿಂಗಂ ಸುಲಿಗೆಗೊಟ್ಟು ಸರ ಮರುಗುವ ವೊಲ್
ಮರುಗದೆ ಹಿಡಿದು[5](ದನು ಬಿಟ್ಟೊ)[5]
ಗುರುತರ ನಿರಾಳಪದವಹುದಾ ಜಂಗಮಕಂ ೧೩

ಉಟ್ಟುದನುಂ ಕೊಡುವುದು ತಾಂ
ಕೊಟ್ಟುದನುಂ ಮರೆದು ಬಿಟ್ಟಗರ ಹಾರದೆಯುಂ
[6](ಕೊಟ್ಟಳ್ಕದ)[6] ಫಲ[7](ದೆ)[7]ಮೋಹಂ
ಬಿಟ್ಟಾತನೆ ಮೋಕ್ಷಗಟ್ಟೆಯಂ ಪಡೆದವನುಂ ೧೪

ಜಲಸೀರೆಯ ನೀಗಿ ಕೊಂಡಕೆ
ಗೆಲದಿಂ ಹೋಹಾಕೆಯಂತೆ ಎಸೆದಿಹುದಾವಗ (?)
ಬಲು ತಾಪತ್ರಯರೋಗ[8](ವ)[8]
ಗೆಲುವೊಡೆ ನಿರಾಸೆಯೆಂಬೌಷಧ (ತಾಂ) ಬೇಕುಂ ೧೫

ಶಿರವರಿಸಿಕೊಂಬ ಭಟನಿಗೆ
[9](ಪಿ)[9]ರಿದಹ ಸುಖದುಃಖವೆರಡ ಚಿಂತಿಸಲುಂಟೆ
ಉರುತರಪರನಿರ್ವಾಣದಿ
ಚರಿಪಗೆ ಸುಖದುಃಖವೆಂಬ ತನು ಮುನ್ನುಂಟೇ ೧೬

---

1. ಗೆರೆಯೊಳ (ಇ). 2. ಕರಿಕರ್ನದ ಚಲನೆಗ ಮುಂಜಿಗೆ ಕನಸಗೆ ಮೇಘಅ (ಇ). 3. ರಿ (ಇ). 4. ಪ (ಇ). 5. ದಲಿಟ್ಟವ (ಇ) 6. ತೊಟ್ಟಾಳದ (ಇ). 7 ದೊಳ್ (ಇ). 8. ದ (ಇ). 9. ಪ (ಇ).

ಬಿಟ್ಟರೆ ಮತ್ತೊರ್ವಂ ನೆರೆ
ಕೊಟ್ಟಪೆನೆಂದೆಂಬಷ್ಟಂ ಬಿಟ್ಟುಂ ಮತ್ತ
ನ್ನಿಷ್ಟವ ಶಿವಕೊಟ್ಟವನೆಂ
ಬಿಷ್ಟಾಸೆಯ ಬಿಟ್ಟೊಡವ ನಿರಾಭಾರಿಕನುಂ ೧೭

ವ || ಹೊನ್ನುಹೆಣ್ಣುಮಣ್ಣೆಂಬವಂ ಹಣ್ಣದಿರ್ಪಾತನೆ ನಿರಾಭಾರಿಕಂ ಮನೆ ಗೊರ್ವ ಭವಿಯಿರ್ದ ಭಕ್ತನ ಗೇಹದನ್ನಪಾನಂಗಳ ಶುನಕಮಲಕ್ಕೆಣೆಯೆನ್ನದವಂ ತಿಂಬ ಬಿನುಗುಬುದ್ಧಿಯಂ ಬಿಟ್ಟು ಭಕ್ತರಗೃಹದೊಳುಂಬಾತನಿರಾಭಾರಿಕಂ ಏನೊಂದು ವಸ್ತುವಂ [1](ಬೇ)[1]ಡದೆ ತಾನಾಗಿ ಬಂದುದಂ ಕೈಕೊಂಡು ಜ್ಞಾನಿಗಳೊಡನಾಡು ವಾತನೆ ನಿರಾಭಾರಿಕಂ ವಸ್ತುವಾಭರಣಂವಂ ದೇಹಿಗಳ್ಧರಿಸೆ ಮತ್ತೊರ್ವಂ ತೆಗೆಯೆ ನಿರ್ಮೋಹವಿರ್ದಾತನೆ ನಿರಾಭಾರಿಕಂ ಲಿಂಗಧಾರಣಮಾತ್ರದವರ್ಕಂಡು ವಿನಯದಿಂ ಕರೆಯೆ ಹೋಗಿಯವರ ಗುಣಾವಗುಣಂಗಳಂ ನೋಡದೆ ಬಂದುದಂ ಅನುಭವಿಸು ವಾತನೆ ನಿರಾಭಾರಿಕಂ ನಿರುಪಾಧಿಕಭಕ್ತರ ಗೇಹಂಗಳಂ ಕರೆಸಿಕೊಳ್ಳದೆ ಹೋಗಿ ಪರಮಾಮೃತವಂ ಯಾಚಿಸಿದಣಿಯಲುಂಬಾತನೇ ನಿರಾಭಾರಿಕಂ ವಿಶೇಷ ವೀರಶೈವರ ಭವನಂಗಳಂ ಶಿವಾಲಯವೆಂದು ಭಾವಿಸಿ ಪೊಕ್ಕು ಅವರು ಮಾಳ್ಪುಪಚಾರಂಗಳಂ ಕೈಕೊಂಬಾತನೆ ನಿರಾಭಾರಿಕಂ ಸಾಮಾನ್ಯವೀರಶೈವರಿಂ ಕರಸಿಕೊಳ್ಳದೆ ತನ್ನಭವನಂಗಳ್ಗೆ ಯ್ದುವುದನುಚಿತಂ ಪ್ರೇಮದಿಂ ಕರೆದೊಡಾರೋಗಿಸುವಾತನೇ ನಿರಾಭಾರಿಕಂ ಭವಿಬೆರಕೆ ಯಿಲ್ಲದ ಭಕ್ತರ ಮನೆಗಳೊಳ್ ಭಿಕ್ಷವಂ ಬೇಡಿ ಬಂದುದಂ ಹರಂಗರ್ಪಿಸಿಯುಂಬಾತನೆ ನಿರಾಭಾರಿಕಂ ಅರಿವು ಹಿಂಗಿದ ಕ್ರಿಯೆಯಿರಲಾ ಭಕ್ತರಂ ಜರೆಯದೆ ಪ್ರಿಯದಿಂ ಕರೆಯಲ್ ಹೋಗಿ ಮಾಡಿದುದಂ ಕೈಕೊಂಬಾತನೆ ನಿರಾಭಾರಿಕಂ ಆಸುವಿನೊಳಂ ಭಿಕ್ಷವಿದೆಂಬರವರನುವಿಂ ಕೈಕೊಂಬಾತನೆ ನಿರಾಭಾರಿಕಂ ಅದು ಬೇಕು ಇದು ಬೇಕೆಂಬ ಸಂದೇಹಮಂ ಬಿಟ್ಟು ಶಿವಯೋಗದೊಳಿರೆ ನಿಧಿನಿಕ್ಷೇಪವೊದಗುವುವೆಂದು ಸುಮ್ಮನಿರ್ಪನೆ ನಿರಾಭಾರಿಕಂ ಭೂತಿರುದ್ರಾಕ್ಷೆಯಂ ಪಂಚಾಕ್ಷರಿಯಂ ಹಿಂಗದಿರ್ಪಾತನೆ ನಿರಾಭಾರಿಕಂ ೧೮

ಕಂ. ಅಳುಪನ್ಯಾಯವಸತ್ಯಂ
ಕಳವುಂ ವಂಚನೆ ಬೆಗಡು ಹುರುಡು ಠಕ್ಕು ಠವಾ-
ಳ್ಕಳವಳ ನುಸುಳೆಳತಟಗಳ
ನೊಳಕೊಳ್ಳದ ನಿರ್ಮಳಮನಮುಳ್ಳೊಡೆ ಚಾರಂ ೧೯

1. ಬಿ (೯).

ಮಚ್ಚದೆ ಲೌಕಿಕಧರ್ಮಕೆ
ಯೆಚ್ಚರುಗುಂದಿರದೆ ತಾನು ಗುರುವಾಕ್ಯವನುಂ
ವೆಚ್ಚಿಸದನ್ಯರೊಳಾವಗ
ನಚ್ಚಿಯೆ ಶಿವಲಿಂಗದೊಳಚ್ಚೊತ್ತಿರೆ ಚಾರಂ ೨೦

ಉ. ಮಾ. ವೃ.

ಆವುದು ನಿಮ್ಮನೇಮಗುಣವಾವುದು ಸತ್ಕ್ರಿಯೆ ನೃಷ್ಠೆಯಾವುದುಂ
[1](ಆವುದು ನಿಮ್ಮನಾಮ ವರದೇವಕುರುಂಪದು ಬಂದುದಾವುದುಂ)[1]
ಆವ ಸುಶಾಸ್ತ್ರಪಾಠ ರಸವಾದವ ಬಲ್ಲಿರೆ ತತ್ತ್ವಭೇದಮುಂ
ಆವುದ ಬಲ್ಲಿರೆಂದೆಣೆವ ಠಕ್ಕರೊಳಾಡದಡಾತ ಯೋಗಿ ತಾಂ ೨೧

ಕಾರಿಂಪುವಂ ಮನುಷ್ಯರು ಕುರಿತ್ತು ಹಸಾದ ಪರಾಕು ಜೀಯ ಸಂ
ಸಾರಮದೇಭ[2](ಸಿಂಹ)[2] ಪರವಸ್ತುಮಹಾಮಹ[3](ದೇವ)[3]ಯೆಂಬುತಂ
ಪೂರಣಗಾಯಿ ಪಣ್ಣು ಪಯ ಪೂಸರ ಕಸ್ತುರಿ ಲೇಪನಾದಿಯಂ
ಪೇರಿಸುವಾಟಕಂ ಮನದಿ ಮೋಹಿಸದಾತನೆ ಚಾರನಪ್ಪನುಂ ೨೨

ಆರವೆ ಪುಣ್ಯಕ್ಷೇತ್ರ ಗಿರಿಗಹ್ವರ ದೇಗುಲ ಕಾನನಾಂತದೊಳ್
ಪಾರರಹಸ್ಯಠಾವುಗಳೊಳಾದಡು ಕುಳ್ಳಿತು ಪಾಡುತಾಡುತಂ
ಚಾರುಮಹೇಶನಂ ಕುರಿತು ಯೋಗವ ಮಾಡುವ [4](ನಾತನಾ ನಿರಾ-
ಭಾರಿಕ)[4] ವೀರಶೈವಶರಣಸ್ಥಲಿಯೆಂದನು ಸಿದ್ಧದೇಶಿಕಂ ೨೩

ಪೂರಕ ತಾರರೇಚಕವು ಪಂಚಕವರ್ಣಮದಾದ ಚಾರನಂ
ಮಾರುತಧಾತು ಜೀವಗುಣವಷ್ಟಮದಂಗಳು ದೇಹಭಾವಗಳ್
ತೋರುವ ಮಂತ್ರವಾ[5](ಕ್ಯಸರ)[5] ತೋರ್ಪುದರಿಂದೆನುವಾತ ತಾ[6]ನೆ(ಯುಂ)[6]
ತಾರಕರೂಪಜಂಗಮ ವಿಧಾನ್ವಿತನೆಂದನು ಸಿದ್ಧದೇಸಿಕಂ ೨೪

ಕಂ. ಅರೆ ಮುಗಿದ ಕಂಗಳಿಂದಂ
ಸ್ಥಿರಚಿತ್ತಂ ನಿಶ್ಚಲವವು ಪದ್ಮಾಸನದಿಂ
ವರಚಿತ್ಕಲೆ ಭಾವದೊಳಿಹ
ಚರಲಿಂಗದ ಇರವೆ ಯೋಗಮುದ್ರೆಯದೆಂಬರ್ ೨೫

---

1. ಅವುದು ನಿಮ್ಮನಾಮ ದೇವರ ಕುರುಂಪನು ಪೇಳ್ವುದು ಬಂದದಾವುದುಂ (ಇ).
2. ಸಿತಹಂ (ಇ). 3. ತ್ಮ (ಇ). 4. ಚಾರ ತಾಂ ನಿರಾಭಾರಿಕ (ಇ). 5. ಗುಶರ (ಇ).
6. ನೆ (ಇ).

ಆಸನದೊಳ್ ಬೇಸತ್ತು ಸು-
ಖಾಸನದೊಳಗಿರ್ದು ಹೃದಾಬ್ಜದ ಕಲೆಯಂ ತಾಂ
ಬೇಸರದೆ ನೆನೆವ ಚರನಿರೆ
ಮಾಸದ ಹರಯೋಗಮುದ್ರೆಯೆಂಬರು ಬಳಿಕಂ ೨೬

ತಲೆನೆಲೆ[1](ಯೊಳ್)[1] ಚಿದ್ರ[2](ತ್ನ)[2]ಮು-
ಜ್ವಲಿಸುತ್ತಿರಲದ ನೆನೆದು ಹೊರಬಳಿಕೆಗೆತ್ತಾ-
ನಲಸಿದ ಜಂಗಮದಿರವಂ
ನಲವಿಂ ಶಿವಯೋಗಮುದ್ರೆಯೆಂಬರು ಯತಿಗಳ್ ೨೭

ತನ್ನಂ ಇರಿದಾ ಪಾಂಡ್ಯರ
ತನ್ನೊಲು ಕಾಣುತ್ತ ಭೀಷ್ಟಮನ್ನಿಸಿದಂದಂ
ಬನ್ನಂಬಡಿಸಿದ ಮನುಜರ
ತನ್ನೊಲು ಮನ್ನಿಸಿದ ಚಾರನೇ ಜಗಭರಿತಂ ೨೮

ತನ್ನನೋಯಿಸಿದ ಕೌಶಿಕ
ಗುನ್ನತ ವಾಶಿಷ್ಠಕೋಪಮಂ ಬೀರದವೊಲ್
ತನ್ನ ನೋಯಿಸಿದ ಮರ್ತ್ಯರ
[3](ತನ್ನೊಲು)[3] ಮನ್ನಿಸಿದ ಚರನೆ ಹರನೆಂದೆನಿಪಂ ೨೯

ಇನನಿಂ ನೊಂದ ಸುಕೇಶಂ
ಇನಗಂ ತಾಂ ಮುನಿದು ಶಾಪಮೀಯದೊಲಿಹುದುಂ
ತನಗೆ ಮುನಿದಗೆ ಮುನಿಯದಿರೆ
ಘನತರ ಮುನಿವರ್ಗಕವನು ಸರಿಯಾಗಿಹನುಂ ೩೦

ಗೌಳತಾಪಸರು ಮಾಡಿದ
ಖೂಳತ್ವಕೆ ಕೇಡ ಬಗೆಯದೋಹಿಲನಂದದಿ
ಮೂಳಮಾನವರು ಮಾಡಿದ
ಖೂಳತ್ವಕೆ ಮನದಿ ತಾರದವನೇ ಚರನುಂ ೩೧

1. ದೊಳ್ (ಇ). 2. ತ್ರ (ಇ). 3. ತರನೊಲು (ಇ).

ಶಿವಮಂತ್ರದಿ ಪ್ರಾಣಾಯಾ-
ಮವ ಮಾಡಿಯೆ ತಾ ಸರ್ವೇಂದ್ರಿಯಗಳ ಜಯವಂ
ಅವಿರಳತೆ ತೋರುತಿಹ ಶಾಂ-
ಭವಯೋಗದೊಳಿರ್ಪಾತನೆ ಜಂಗಮಲಿಂಗಂ ೩೨

ಪಾವನ ಸಿದ್ಧಾಸನದಿಂ
ಕೇವಲ ಕುಂಭಕದಿ ಕೂಡಿ ಚಿದ್ಘನಲಿಂಗವ
ಭಾವಿಪ ಶಾಂಭವಯೋಗದೊ
ಳಾವರಿಸಿದ ಸುಖದಿಂದಲಿಹಾತನೆ ಚರನುಂ ೩೩

ವ॥ ಸಿದ್ಧಾಸನದಿ ಕುಳಿತು ಮೂಲಬೂದದ(?) ಸುನಿದ್ರಾ ಕರ್ನಿಕೆಯಲ್ಲಿ ದೀಪದೊಳ್ತೋರುವ ಕಲೆಯುಂ ಪೊರ್ದಿರ್ಪ ನಿದ್ರೆಯ ಶಾಂಭವಯೋಗಮುಳ್ಳ ಚರ ಲಿಂಗವೆ ಶಾಂಭವಯೋಗಿಯಪ್ಪಂ ಮರುತಮನಬಿಂದು ನಿಲ್ಲದೆ ಬರಿಯರಿವಿನ ಮಾತಿನ ಮಾಲೆಗರ್ಗಂ ಮಾಯೆ ಬಿಡದೆಂಬ ಮನಬಿಂದುವಾಯುಗಳಂ ಕಟ್ಟಿಹೆನೆಂಬ ಸಂಕಟ ಗೊಳ್ಳದೆ ಮನವಿಷ್ಟಲಿಂಗದೊಳ್ ಸಿಂದಡೆ ಮನಮಾರುತಬಿಂದುಗಳ್ ನಿಲುತಿರ್ಪವೆಂಬ ವಿವರವುಳ್ಳಾತನೆ ಶಾಂಭವಯೋಗಿಯಪ್ಪಂ ನೇತ್ರಂಗಳ್ ತೆರೆದಿರ್ದುಂ ಹೊರಗಂ ಕಾಣದೆ ಚಿನ್ನೇತ್ರಕಲೆಯೊಳ್ ಸಿಕ್ಕಿ ಚಿತ್ರಿತಪ್ರತುಮೆಯಂತಿರ್ದಾತನೆ ಶಾಂಭಯೋಗಿಯಪ್ಪಂ ಬಾಹ್ಯದೊಳ್ [1](ಭಕ್ತರಿಂ ಮೆಚ್ಚಿಸಿ)[1] ಒಳಗೆ ಲಿಂಗದ ಮೆಚ್ಚಂ ಪಡೆಯದಾತಂ ಭವಿಗೆ ಸಮಾನಂ ಆನೆಯು ಚೋಹಮಂ ತೊಟ್ಟು ಶ್ವಾನನಾಗೂಳುವವೊಲ್ ಜ್ಞಾನಭಾಗೆಯಂ ನೆಮ್ಮಿ ಹೀನಗತಿಯೊಳಾಡಲ್ ನಗೆಗೆಡೆಯಪ್ಪುದಾತಂಗಂ ಸೂಳೆಪತಿವ್ರತೆಯಾದಡಂ ಬಾಲೆ ಪತಿವ್ರತೆಯೆನಿಸಿದೊಲುಂ ಉತ್ತರಮಾರ್ಗದೊಳಡಿಯಿಟ್ಟು ಕೀಳೆನಿಸಿದಾತಂ ಮುಕ್ತನಾಗಂ ಮತ್ತಂ ಇಂದ್ರಿಯಕರಣಾದಿಗಳಂ ಶರಣನರಿದಡರ್ಪಣಸುಖಮುಂಟುಂ ಅವಂ ಮರೆದಡಂ ಪರಮಸಮಾಧಿಯಕ್ಕುಂ ಅರಿದಡರ್ಪಣಂ ಮರೆದಡೆ ಶಿವಯೋಗಂ ಕರಣೇಂದ್ರಿಯಂಗಳಂ ಅರಿದಡಂ ಶರಣಂಗೆ ಲೇಸು ವಿಷಯಂಗಳ ಗೆಲಲೇಂ ಕಾರಣಂ ತಮ್ಮ ಗುಣಂಗಳೊಳ್ ಬಂದ ಪದಾರ್ಥವಂ ಪಾತ್ರೆಯೊಳಿಟ್ಟು ಅರ್ಪಿಸುವಂತೆ ಕಲ್[2](ದೀ ?)[2]ವೃತ್ತಿರಲೆಲ್ಲಿಯು ನಿಗ್ರಹಂ ತತ್ಪುರುಷವಕ್ತ್ರಲಿಂಗಮಮೂರ್ತಿಸಾದಾಖ್ಯ ಜಂಗಮಲಿಂಗವಿಪರೀತಜಪವಾದುಸುರಂ ನಿಲಿಪೆನೆಂಬ ಕೋಟಲೆಯೆಲ್ಲಿಯದುಂ ಶಿವ ನೊಕ್ಕುದನಿಕ್ಕೆ ಕ್ಷುಧೆಯಂ ನಿಲಿಸಬಲ್ಲಾತನೆಯುಂ ಇತರ ಮತದಿಂ ಹಸಿವ ನಿಲಿಪೆನೆಂಬ ಕೋಟಲೆಯೆಲ್ಲಿಯದುಂ ಶಿವಪಾದೋದಕಮಂ ಕೊಂಡು ತೃಷೆಯ ನಿಲಿಪಾತಂಗಂ ಅನ್ಯ ಮತದಿಂ ತೃಷೆಯ ನಿಲ್ಲಿಪೆನೆಂಬುಪಮೆಯೆತ್ತಣದುಂ ಶರಣರ ಕರಣವಾಗಿ ಬಹಿರ್ವಿಷಯಂ ಗಳಂ ಇಂದ್ರಿಯಂಗಳ್ತಾಳಿಹರಂಗೀವೃತ್ತಿರಲ್ ಶರಣರ್ಗಿಂದ್ರಿಯನಿಗ್ರಹವೆಂಬ ಮಾತೆಲ್ಲಿ

1. ಭಕ್ತರ ಮೆಚ್ಚಿ (ಇ). 2. ನೀ (ಇ).

ಯುದುಂ ಪಿಂಡಾಂಡಂಗಳನೆಲ್ಲಮಂ ಶಿವನೆಂದು ಕಂಡು ಭಿನ್ನಭಾವಮಂ ಖಂಡಿಸಿ ಲಿಂಗ ನೆನಹೆಂಬ ನಿಜಸುಖವನ್ನುಂಡು ದಣಿವುತ್ತಿಹಾತನೆ ಯೋಗೀಶಂ ಅರಿವಂ ಮರಹಂ ಹರಿದರಿವಿಂ ನೋಡಿ ಶಿವನೆಂದರಿದರಿವಮ ತಾಂ ಮರೆಯದ ಘನತರದರಿವೆ ನಿರ್ಗುಣ ಯೋಗಂ ಲೋಕರೂಪೀ ಬ್ರಹ್ಮತೋರಿತೆಂಬ ನಿರ್ಗುಣಯೋಗಂ ಏಕಾಂತವೆಂಬ ಮಾತೆಲ್ಲಿಯದುಂ ಪಂಚಭೂತಂಗಳ್ ಪಂಚೇಂದ್ರಿಯಂಗಳ್ ಮೊದಲಾದುವೆಲ್ಲಂ ಪಂಚ ಬ್ರಹ್ಮರೂಪೆಂದು ಕಾಣ್ಬಾತಂಗೆಲ್ಲಿಯ ಪ್ರಾಪಂಚಿಕಂ ಚಿತ್ಕಲೆಯೊಳ್ ಮನವನಿಕ್ಕಿ ದಾತಂಗಂ ಬಂಧತ್ರಯದಿಂದ ಶ್ವಾಸಮಂ ಗೆಲಬೇಕೆಂಬ ಕೋಟಲೆಯೆಲ್ಲಿಯದುಂ ಕಲೆ ಯೊಳ್ ಮನಮಂ ನಿಲಿಸಿ ವಾಯುವಂ ಬಂಧಿಸಿ ಶಾಂಭವಮುದ್ರಿತನಾದಾತಂಗಂ ಉಸುರಂ ಕುಂಭಕಂಗಳಿಂ ಗೆಲುವೆನೆಂಬ ಕೋಟಲೆಯಿಲ್ಲಂ ಮತ್ತಂ ದೇಹೇಂದ್ರಿಯಮನ ಮೊದಲಾದುವಂ ಅರಿವಿನಕ್ಕರದೊಳ್ ತಂದು ಕಲೆಗಿತ್ತು ತಾನೆನ್ನದ ಶಾಂಭವ ಮುದ್ರೆಯಂ ಬಲ್ಲಾತನೆ ಜಂಗಮಂ ಮತ್ತಂ ಅರಿವಾತಂ ಅರಿವೆಂಬುಭಯಂ ಅರಿಯ ಲಕ್ಕ ಶಿವನೊಳುಂ ಅರಿತರಿಯಲಕ್ಕ ಶಿವತಾನೆಂಬರಿವುತಾಂ ಶಾಂಭವಮುದ್ರೆಯೆಂಪದ ರೊಳ್ ಬೆರದಾತನೆ ಜಂಗಮಂ ನೆನೆವಾತಂ ನೆನಹುಂ ನೆನಹಿಸಿಕೊಂಬ ಶಿವನೊಳ್ ನಿಂದರೆ ಶಾಂಭವಮುದ್ರೆಯೆಂದರಿದುಂ ಅದರೊಳ್ ನೆರೆದಾತನೆ ಜಂಗಮಂ ಸರ್ಪದಷ್ಟದಿ ಶರೀರದೊಳ್ ಜೀವಾನಿಲವಡಗಿರ್ಪಂತೆ ಇಷ್ಟಲಿಂಗದಿಷ್ಟದಿ ಪ್ರಾಣಾನಿಲಂ ಚರಿಸ ದೆಂಬುದೆ ಶಾಂಭವಮುದ್ರೆ ಅದರೊಳ್ ಮುದ್ರಿತನಾದಾತನೆ ಜಂಗಮಂ ನಿದ್ರಿತನು ಸುರೆಡೆಯಾಟಮನರಿಯದಂತೆ ಯೋಗನಿದ್ರೆಯೊಳ್ ಮುದ್ರಿತನಾದಮಂ ಉಸುರೆಡೆ ಯಾಟಂಗಳ ಗೆದ್ದನೆಂಬುದುಮೆ ಶಾಂಭವಮುದ್ರೆಯೆಂಪದರೊಳಿಪ್ಪಾತನೆ ಜಂಗಮಂ ಸಹನೇಶನಂತೆ ಶಿವಪೂಜೆಯುಂ ಬಿಡದೆ ಗಗನೇಶನಂತೆ ಶಿವಧ್ಯಾನಮುಂ ಬಿಡದಿಪ್ಪಾತನೆ ಜಂಗಮಂ ೩೪

ಕಂ. ಕಾಯ ಕರಸ್ಥಲವೆಂದುಂ
ಮಾಯಾವಿರಹಿತದ ಜೀವ ನಯನಸ್ಥಲವೆಂ-
ದಾಯದಿಯದ ಕೂಡಿದಭಿ-
ಪ್ರಾಯವೆ ಶಿವಲಿಂಗವದನು ಭಜಿಪನೆ ಚರನುಂ ೩೫

ಶರೀರದೇಗುಲ[1]ವಾತ್ಮನೆ[1]
ಹರನದಕಂ ಚಿತ್ಪ್ರಾಣನೆ ಪೂಜಾರಿಕನುಂ
ವರವಿಷಯಭೋಗರಚನೆಯು
ನಿರನುತಿನಡೆ ಪ್ರದಕ್ಷಿಣವಾಗಿರುತಿಹನುಂ ೩೬

---

1. ದೊಳಾತ್ಮನೆ (ಅ).

ಶಾಂತಿ ದಯೆ ಶೌಚಮಸ್ಪೃಹೆ
ಯಾಂತಮನಸೂಯವಕಾರ್ಪಣ್ಯಂ ವಚನು-
ಶ್ರಾಂತಮನಾಯಸವೇಳ
ನಾಂತಿಹ ಶೀಲಪ್ರವರ್ತಕನೆ ಚರಲಿಂಗಂ ೩೭

ಇಂತು ಶಿವಯೋಗದಿಂದಂ
ಅಂತಕಹರಪೂಜೆಯೋಜೆಯೊಳ್ ನೆರೆದಿರ್ದವ
ಕಂತುಪಿತಾದ್ವರ ಪದಮಂ
ಸ್ವಾಂತದಿ ತೃಣಕಿಂ ಕಡೆ ಮಾಡಿಕೊಂಡಿಹನುಂ ೩೮

ಇದು ನಿರಾಭಾರಶೈವದ
ಮುದವಿದು ಮದನಾರಿಯು ತದ್ರೂಪಿನ ಬಗೆಯಿದುಂ
ಒದವಿದ ಸುಗುಣದ ನೆಲೆಯಿದು
ಹದುಳದಿ ಚರಲಿಂಗವಿರ್ಪ ತೆರನಿದ ಕೇಳ್ವೈ ೩೯

ಈ ವೀರಶೈವತ್ರಯವನು
ಭಾವಿಸಿ ಪೇಳಿದೆವು ನಿನಗೆ ಇನ್ನೀ ಶೈವರೊ-
ಳಾವರಿಸಿದ ಷಟ್ಸ್ಥಲಮಂ
ಪಾವನಮನದಿಂದೆ ಕೇಳ್ವುದೆಂದಂ ಸಿದ್ಧಂ ೪೦

ಉ. ಮಾ. ವೃ.

* ಯಾತಕೆಯಾದ ಸರ್ವಭುವನಂಗಳಿಗಾಶ್ರಯವಾದ ಜೀವದಾ-
ಜಾತಿಗೆ ತಾಣಮಾಗಿಹ ನಿರಾಕುಲಚಿತ್ತರುಸತ್ತು ಚಿತ್ತುಗ-
ಳ್ಗೀತನೆ ಸರ್ವಶಕ್ತಿಗಳಿಗೀಶ್ವರನಾದ ಧರಾದಿಪಂಚಕಂ
ಭೂತಕೆ ಗೇಹಮಾದ ಶಿವತತ್ತ್ವವ ಸುಸ್ಥಲವೆಂಬರಂತದಂ ೪೧

ತತ್ತ್ವಗಳೆಲ್ಲಕಾಶ್ರಯಮುದಾ[1]ದು(ದ)[1]ರಿಂ [2](ಸ್ಥಕಾರವುಂ)[2]
ತತ್ತ್ವಗಳಿಂದಲೀಯುವಹುದಾಮುದರಿಂದ ಲಕಾರ ತಾಂ ಸ್ಥಲಂ
ತತ್ತ್ವವು ತನ್ನ ಶಕ್ತಿಚಲ[3](ಮ)[3]ನ್ನೆರೆ ತೋರಿ[4](ಯು)[4]ಗಂಗಳಾಗಿ ತಾ
ನುತ್ತಮಲಿಂಗವಾಯ್ತು ಬಳಿಕೊಂದುಮುದಂಗಮುದಾದುದೆಂದವನುಂ ೪೨

---

* ಈ ಪದ್ಯವು ಅನೇಕ ದೋಷಗಳಿಂದ ಕೂಡಿ ಈ ಕೆಳಗಿನಂತಿದೆ—ಯಾತಕೆಯಾದ ಸರ್ವಭುವನಂಗಳಗಾಶ್ರವಾದ ಜೀವಜ। ಲಕ್ಕೆಯು ಸುಸ್ಥಲಮುದಾದ ನಿರಾಕುಲವಾದ ಸಚ್ಚಿದಾನಂದ। ಕೀತ ಸರ್ವಶಕ್ತಿಗಳಿಗೀಶ್ವರನಾದ ಧರಾದಿಪಂಚಭೂತಕ್ಕೆಯು ಗೇಹವಾದ ಶಿವತತ್ತ್ವವ ಸುಸ್ಥಲವೆಂಬರಂತದಂ ॥ 1. ದು (ಇ). 2. ಸ್ವಾಕಾರ ತಾಂ (ಇ). 3. ನೆ (ಇ). 4. ಯುಂ (ಇ).

ಲಿಂಗಮದಾದ ಸುಸ್ಥಲದ ಶಕ್ತಿಕಲಾಮಯಮಾಯ್ತುದಾ ಕ್ಷಣಂ
ಅಂಗಮದಾದ ಸುಸ್ಥಲದ ಶಕ್ತಿಯು ಭಕ್ತಿ[1](ಯದಾ)[1]ದುದಾ ಕ್ಷಣಂ
ತುಂಗಘಟಪ್ರಭೇಪದ ವಿಹಾಯಸವಂತೆಯದೇಕತತ್ತ್ವ ತಾಂ
ಲಿಂಗಮುಮಂಗವೆಂ[2](ಬು)[2]ಭಯನಾಮವ ತಾಳ್ದಿಹುದೇನನೆಂದಪೆಂ ೪೩

ನಿತ್ಯನಿರೂಪವಾದ ಶಿವತತ್ತ್ವಮುಪಾಸ್ಯಮುಪಾಸಕತ್ವದಿಂ-
ದುತ್ತಮಸೇವ್ಯಸೇವಕಶಿವಾತ್ಮಕರೆಂಬುಭಯಂಗಳಾದುದೆಂ
ಬುಕ್ತಿಯ ಶಿಷ್ಯ ತಾನು ಶಿವನಾಗದವಂಗೆ ಶಿ[3](ವತ್ವ ಕೋ)[3]ಟಿಜ-
ನ್ಮಾಂತರದಲ್ಲಿ ಸಿದ್ಧಿಪಪವೆಂಬ ಶ್ರುತಂಗಳ ಕಾಣ್ಬುದಕ್ಕರಿಂ (?) ೪೪

ಜ್ಞಾನವದುಂ ಸ್ಥ[4](ಲಂ ಶಿವನ)[4]ತತ್ತ್ವವೆ ಲಿಂಗ ಚಿದಾತ್ಮಗಂಗ ತಾಂ
ನೂನನಿರಾಕುಳಸ್ಥಳವದುಂ ದ್ವಯವಾದೊಲು ಶಕ್ತಿ ತಾಂ ದಯಾ-
ದ್ಭಿನ್ನಮದಾಗಿ [5](ಶೈವವಲಿ ಅನ್ವಿತಗೊಂಡುರೆ ಸತ್ಯಶುದ್ಧಸಂ
ಪನ್ನದಿ ಸರ್ವಸಾಕ್ಷಿಣಿಯದಾಗಿ)[5]ಮಹೇಶ್ವರಿಯಾಗಿಯೊಪ್ಪುಗುಂ ೪೫

ಕಂ ಆ ಶಕ್ತಿದ್ವಯದೊಳಗಂ
ಈಶನನಾಶ್ರಯಿಸಿತೊಂದು ಬಳಿಕಂ ಗೆಲುವಿಂ
ಈಶನ ಭಕ್ತಿಯನಾಶ್ರಯ-
ಸಾಸುರದಿಂದಿಹುದೊಂದೆಂದ ಯತಿ ಮದದೊಳ್ ೪೬

ಲಿಂಗಸ್ಥಲವಾಶ್ರಯಿಸಿದ
ತುಂಗಮಹಾಶಕ್ತಿ ಕ[6]ಲಾ(ಸು)[6]ಮೂರ್ತಿಯಾದುದು
ಅಂಗಸ್ಥಲವಾಶ್ರಯಿಸಿದ
ತುಂಗಮಹಾಶಕ್ತಿ ಭಕ್ತಿರೂಪಮದಾಯ್ತುಂ ೪೭

ಅನಿಲಪ್ರಭೆಯಿಂದ ದೀಪಂ
ಘನತರದಿಂ ಬೆಳಗುವಂತೆ ಶಕ್ತಿಯ ಬಲಕಿಂ
ದನಘವಹ ಭಕ್ತಿ ಮಿಗಿಲೆಂ
ಬನುವಿಂದಲೆರಡು ಸರಿಯಾಗಿಹವನವರತಂ ೪೮

1. ಯಾ (ಇ). 2. ಬೀ (ಇ). 3. ವತತ್ವ (ಇ). 4. ಲಶಿವ (ಇ). 5. ಶಿವಾನ್ವಿತವಾಗಿ ಸತ್ಯಸಂಪನ್ನದಿ ಸರ್ವಸಾಕ್ಷಿಣಿಯದಾಗಿ (ಇ). 6 ಜಾ (ಇ).

ಶಕ್ತಿಯೆ ಭಕ್ತಿಯಹುದುಂ
ಭಕ್ತಿಯೆ ತಾಂ ಶಕ್ತಿಯಹುದು ಪರಮಾರ್ಥವಿದುಂ
ಶಕ್ತಿಗಳೊಳಭೇ[1]ದ(ಂಗಳ)[1]
ಯುಕ್ತಿಯ ಕಂಡಿಹುದು ಸತತ ನಿರ್ಮಳಮನದೊಳ್ ೪೯

ಶಕ್ತಿಪ್ರಪಂಚಂ ಸೃಜಿಪುದು
ಶಕ್ತಿಪ್ರಪಂಚ[2](ವನು ತಾನೆ ಲಯಗೈವುದು ಮಾ.)[2]
ಯುಕ್ತಿಸ್ವಭಾವಗಳವಕಂ
ಶಕ್ತಿಯಧೋಮುಖಿಯು ಭಕ್ತಿಯೂ[3](ರ್ಧ್ವ)[3]ಮದಹುದುಂ ೫೦

ಶಕ್ತಿಯು ಮಾಯಾಯುಕ್ತವು
ಭಕ್ತಿಯೆ ನಿರ್ಮಾಯಯುಕ್ತವ[4](ಮಾದು)[4]ದರಿಂದಂ
ಶಕ್ತ್ಯುಪಾಸ್ಯವದುಂ ನೆರೆ
ಭಕ್ತ್ಯುಪಾಸಕವು ಲಿಂಗ[5](ಪಂ)ಗ[5]ದೊಳಿಹವುಂ ೫೧

ಲಿಂಗವದುವಂಗದಾತ್ಮಂ
[6](ಲಿಂಗಾಂಗಸ್ಥಲದ್ವೈಕ್ಯವೆ ಶಿವಜೀವೈಕ್ಯಂ)[6]
ಲಿಂಗವೆನಲ್ ಪರಬೊಮ್ಮಂ
ಲಿಂಗವೆನಲ್ ಶಿವತತ್ತ್ವದ ನಿಜರೂಪೆನಿಕುಂ ೫೨

ಜಗವಖಿಳವ ಲಯ ಮಾಡಿಯೆ
ಜಗವಖಿಳವ ಸೃಷ್ಟಿಸುತಿಹ ವಸ್ತುವೆ ಲಿಂಗಂ
ಮಿಗೆ ಪರತತ್ತ್ವದ ರೂಪಿಂ
ಜಗದ ಚರಾಚರದ ಚೇತನಾತ್ಮವೆ ಲಿಂಗಂ ೫೩

ಲೀಯೆಂಬುದು ಪರಬೊಮ್ಮಂ
ಗಾಯೆಂಬುದು ತನ್ನ ನೆನಹು ಜ್ಞಾನಮದಕ್ಕುಂ
ಈ ಯೆರಡರ ಮಧ್ಯದ ಬಿಂ
ದೋಯಾರದ ಸಂಗಯೋಗ ತಾನದು ಲಿಂಗಂ ೫೪

---

1. ದ (ಇ). 2. ಲಯಂ ಗೈವುದುಮಾ (ಇ). 3. ರ್ದ್ವ (ಇ). 4. ಮ (ಇ).
5. ಗ (ಇ). 6. ಲಿಂಗಾಗಸ್ಥಲವೇಕವೆ ಶೀಲ ಜೀವೈಕ್ಯಂ (ಇ).

ಇದು ಮೂರುಂ ತೆರನಹುದುಂ
ಮೊದಲದು ತಾಂ ಭಾವಲಿಂಗ ದ್ವಿತಿಯದಿ ಪ್ರಾಣಂ
ಒದವಿದ ತೃತಿಯದೊಳಿಷ್ಟಂ
ಹುದುಗೊಳಿಸಿಹುದೀ ಕ್ರಮದಿಂದೊಂದೇ ಲಿಂಗಂ ೫೫

ಭಾವದಿಂ ಗ್ರಹಿಸತಕ್ಕುದು
ವ್ಯೋವಿದ ಪರತತ್ತ್ವಸದ್ರೂಪವನುಳ್ಳುದು
ತೀವಿ ನಿಷ್ಕಲವೆಯಾಗಿಹು
ದಾವಗ ಸನ್ಮಾತ್ರಭಾವಲಿಂಗಮದೆನಿಕುಂ ೫೬

ಮನಸಿಂದ ಗ್ರಹಿಸತಕ್ಕುದು
ವಿನಯದಿ ಚಿದ್ರೂಪು ಸಕಲ ನಿಷ್ಕಲವುಳ್ಳುದು
ಘನಸೂಕ್ಷ್ಮತತ್ತ್ವವುಳ್ಳುದು
[1](ಅ)[1]ನಘಂ ತತ್ಪ್ರಾಣಲಿಂಗನಾಮವನುಳ್ಳುದು ೫೭

ದೃಷ್ಟಿಯಿಂ ಗ್ರಹಿಸತಕ್ಕುದು
ಇಷ್ಟಂಗಳ ಕೊಡುವುದನಿಷ್ಟವ ಕೆಡಿಸುವುದುಂ
ಶ್ರೇಷ್ಠವಹ ತತ್ತ್ವಮುಳ್ಳುದು
ಇಷ್ಟವು ತಾಂ ಸಕಲರೂಪಾನಂದಮದಹುದುಂ ೫೮

ಒಂದೊಂದು ಲಿಂಗಗಳು ತಾಂ
ಚೆಂಪದೊಳೆ[2](ರಡೆ)[2]ರಡುಭೇದ[3](ಮು)[3]ಪ್ಪುದು[4](ಎ)[4]ಂತೆನೆ
ಒಂದಿದ ಭಾವಂ ದ್ವಿವಿಧಂ
ಮುಂದಣ ತತ್ಪ್ರಾಣಮಿಷ್ಟವೆರಡೆರಡಹವುಂ ೫೯

ಭಾವದಿ ಮಹಾಪ್ರಸಾದಂ
ತೀವಿದ ತತ್ಪ್ರಾಣದಲ್ಲಿ ಚರಶಿವಲಿಂಗಂ
ಈ ವಿಧದೊಳಿಷ್ಟಲಿಂಗದಿ
ಪಾವನತರ ಗುರು[5](ಲಿಂಗಗಳು)[5]ದ್ಭವಿಸಿದವುಂ ೬೦

---

1. ದ (ಇ). 2. ಡುಳ್ಳಿ (ಇ). 3. ವೊ (ಇ). 4. ವೆ (ಇ). 5. ಮು (ಇ).

ವರಚಿಚ್ಛಕ್ತಿ ಪರಾಶ
ಕ್ತ್ಯುತ್ತಮತರದಿ ಭಕ್ತಿಯಿಚ್ಛೆಜ್ಞಾನ ಕ್ರೀಗಳೊ
ಳೆರವಿಲ್ಲದೆ ಲಿಂಗಂಗಳು
ಪರಮಚಿದರ್ಕಪ್ರಭೆ ಮೀರಿ ತೋರುತಿರ್ಕುಂ ೬೧

ವ॥ ಶಿವತತ್ತ್ವಂ ಚಿಚ್ಛಕ್ತಿಪ್ರಭಾವದಿಂ ಮಹಾಲಿಂಗಸ್ಥಲವೆನಿಸಿತ್ತು ತದುಪಾಸಕ ರೂಪದಿಂದೈಕ್ಯಸ್ಥಲವಾದುದುಂ ತನ್ಮಹಾಲಿಂಗದೆಸೆಯಿಂದಲಾದ ಪರಶಕ್ತಿಯ ಸ್ಫುರಣದಿಂ ಪ್ರಸಾದಲಿಂಗ ಸಂಜ್ಞೆಯಾಯಿತ್ತುಂ ತದುಪಾಸಕತ್ವದಿಂದಾ ಐಕ್ಯಂಗಂ ಶರಣಸ್ಥಲವಾದುದುಂ ತತ್ಪ್ರಸಾದಲಿಂಗದ ದೆಸೆಯಿಂದಲಾದ ಇಚ್ಛಾಶಕ್ತಿಪ್ರಭಾವದಿಂ ಶಿವಲಿಂಗಸ್ಥಲವೆನಿಸಿತ್ತುಂ ತದುಪಾಸಕರೂಪದಿಂದ ಪ್ರಾಣಲಿಂಗಿಸ್ಥಲಕಂ ಪ್ರಸಾದಿಸ್ಥಲವಾಯಿತ್ತು ತಚ್ಛಿವಲಿಂಗದತ್ತಣಿಂದಾದ ಜ್ಞಾನಶಕ್ತಿಸ್ಫುರಣದಿಂದಂ ಗುರುಲಿಂಗಸ್ಥಲವಾದುದು ತದುಪಾಸಕರೂಪತ್ವದಿಂದ ಪ್ರಸಾದಿಸ್ಥಲಕಂ ಮಾಹೇಶ್ವರಸ್ಥಲಸಂಜ್ಞೆಯಾಯಿತ್ತು ತುದ್ಗುರುಲಿಂಗದ ದೆಸೆಯಿಂದಲಾದ ಕ್ರಿಯಾಶಕ್ತಿಸ್ಫುರಣಮಾತ್ರದಿಂದಾಚಾರಲಿಂಗವೆನಿಸಿತ್ತು ತದುಪಾಸಕತ್ವದಿಂ ಮಹೇಶ್ವರಸ್ಥಲಕಂ ಭಕ್ತಸ್ಥಲವಾದುದುಂ ೬೨

ಕಂ. ಆದ್ಯಂತರಹಿತಲಿಂಗದಿ
ವೇದ್ಯತ್ವವೆಯುಂಗವದುವೆ ಬ್ರಹ್ಮವಕಾರಂ
ವಿದ್ಯೆಯೊಳೆಯ್ದೆ ಗಕಾರಂ
ಸಾಧ್ಯವಸಂಯೋಗಬಿಂದುವದು ತಾನಂಗಂ ೬೩

ಅಂಗಸ್ಥಲವದು ಮೊದಲೊಳ್
ಯೋಗಾಂಗಂ ದ್ವಿತಿಯೊಳ್ ಭೋಗಂ ತೃತಿಯತ್ಯಾ-
ಗಾಂಗವೀ ಪರಿಯ ಮೂರುಂ-
ಸಾಂಗಮದಾಗಿರ್ಕುವಿದರ ಭೇದವನೊರೆವಂ ೬೪

ಶಿವಯೋಗಸುಖಾವಾಪ್ತಿಯ
ನವಗವಿಸಿದ ಕಾರಣದ ಸುಷುಪ್ತ್ಯಾವಸ್ಥೆಯ
ಸವಿನಯಪ್ರಾಜ್ಞಾಪುರುಷನ
ಹವಣಿಂದಿರುತಿಹುದುಂ ಭೋಗಾಂಗ [1]ಮೊದಲೊಳ್[1] ೬೫

1. ದ್ವಿತಿಯೊಳ್ (ಇ).

ಶಿವಸಹ ಭೋಗಂಗಳಿಂದ
ಲವತನುಸ್ವಪ್ನಾಭಿಧಾನ[1](ದಾವಸ್ಥೆಯೊಳುಂ)[1]
ಅವಿರಳತೈಜಸಪುರುಷನ
ಪವಣೊಳಗಿರುತಿಹುದುಂ ಭೋಗಾಂಗಂ ದ್ವಿತಿಯೊಳ್ ೬೬

ಸಂಸಾರವ ಕೆಡಿಸಿಯೆ ಶಿವ
ಸಂಸಾರದ ಸ್ಥೂಲಾಂಗ ಜಾಗ್ರವಸ್ಥೆಯಾ
ವಂಶದೊಳಿಹ ವಿಶ್ವಪುರುಷನು
ವಾಸಂ ತಾನಕ್ಕು ತ್ಯಾಗಾಂಗಂ [2](ತೃ)[2]ತಿಯೊಳ್ ೬೭

[3](ಯೋಗಾಂಗದೈಕ್ಯಶರಣರ)[3]
ಭೋಗಾಂಗದಿ ಪ್ರಾಣಲಿಂಗಿ ಪ್ರಾಸಾದಿಗಳಂ
ತ್ಯಾಗಾಂಗಕೀಶಭಕ್ತರ
ಸಾಂಗಾಂಗಮುದಾದ ಸ್ಥಳ ದೊಳೊತ್ತಿಸುತಿಹವು ೬೮

ಮಹದಾದ್ಯಾಚಾರಂತ್ಯದ
ಮಹಿಮೆಯು ಷಡ್ಲಿಂಗಗಳಲ್ಲಿಹುದಾ ಶಕ್ತಿಯ
ಮಹದೈಕ್ಯಾಂತದ ಷಡ್ವಿಧ
[4](ವಹ ಷಡ್ಲಿಂಗದ ಭಕ್ತಿಯು ಭಕ್ತರೊಳಿಹುದುಂ)[4] ೬೯

ಸಮರಸಾನಂದವನುಭವ
[5](ವಮುದರ್ವಧಾನ ನೈಷ್ಠೆ ಶ್ರದ್ಧೆಗಳೆಂಬಿವು)[5]
ಕ್ರಮದಿಂದೈಕ್ಯಂಗಳೊಳು
ಪ್ರಮುದಿತದಿಂದಿರ್ಪುದೆಂದನೆತಿಕುಲರಾಜಂ ೭೦

[6]ನಾನೆಂಬುದದಿಲ್ಲದ[6](ಸು
ಜ್ಞಾ)ನದಿ ದೇಹೇಂದ್ರಿಭೌತಿಕಂಗಳುಮೆಲ್ಲಂ
ನಾನೆಂಬುದರೊಳಗಿಲ್ಲದ
ನೂನದ ಸಮರಸದ ಭಕ್ತಿಯದು ತಾನೈಕ್ಯಂ ೭೧

---

1 ವಸಸ್ಥೆಯು ಬಗೆಯಿಂ (ಇ) 2. ಕೃ (ಇ). 3 ಯೋಗಾಂಗದೊಳೈಕ್ಯ ಶರಣರ (ಇ). 4. ಭಕ್ತರೊಳಿಹುದಾ ಭಕ್ತಿಯೂ (ಇ). 5. ಸುಸದಾರ್ವಧಾನ ನೈಷ್ಠಿಕೆ ಸದ್ಭಕ್ತಿಗಳೆಂಬಿವು (ಇ). 6. ಜಾ (ಇ).

ದೇಹೇಂದ್ರಿಯ ಮೊದಲಾದವ
ರೂಹಿಸಿ ಜ್ಞಾನಪ್ರಕಾಶಬಲದಿಂ ಲಿಂಗವು
ಕಾಹುರದಿ ತಾನೆಯೆಂಬೀ
ಯೂಹೆಯದಾನಂದಭಕ್ತಿಯದು ತಾಂ ಶರಣಂ ೭೨

ಪ್ರಾಣೇಂದ್ರಿಯ ಮೊದಲಾದವ
ರಾಣತಿ ನಾನಲ್ಲವೆಂದು ಕಳದುಂ ಬಳಿಕಂ
ಸ್ಥಾಣ[1](ದೆ)[1] ಸರ್ವೇಂದ್ರಿಯಗಳ
ಹೂಣಿಹುದನುಭೂತ ತಾನೇ ಸುಲಿಂಗೈಕ್ಯಂ ೭೩

ಸರ್ವೇಂದ್ರಿಯ ವಿಷಯಂಗಳ
ಸರ್ವಪದಾರ್ಥಂಗಳ ಲಿಂಗದೇವಗಿತ್ತುಂ
ಸರ್ವನ ಶೇಷ್ಕರಿಕೆ ಯು
ಪರ್ವಿರಲವಧಾನಭಕ್ತಿ ಪ್ರಾಸಾದಿಯು ತಾಂ ೭೪

ಗುರುದೈವ ಶ್ರೇಷ್ಠವೆಂಬೀ
ಪರಿ ಸದ್ವರ್ತನೆಯ ಧರ್ಮ ಶೌಚಿತ್ವ[2](ವು ಮೇಣ್)[2]
ಹರನಲ್ಲಿಯ ವಿಶ್ವಾಸಂ
ವರನೈಷ್ಠಿಕ ಭಕ್ತಿಯದುವೆ ಮಾಹೇಶ್ವರ ತಾಂ ೭೫

ಶರೀರ ಪ್ರಾಣಾರ್ಥಂಗಳ
ಪರಮಾರ್ಥಮಿವಲ್ಲವೆಂದು ಗುರುಚರಪೂಜೆಯು
ಹೊರುವುದೆ ಭಕ್ತಿಯದಹುದುಂ
ಹರಭಕ್ತನೆ ತಾನದೆಂದನೆತಿವರನಾಗಳ್ ೭೬

ಷಡ್ವಿಧ ಭಕ್ತ್ಯಾಚಾರದ
ಷಡ್ವಿಧ ವರ್ತನೆಯ ಕ್ರಮಗಳಂ ಪೇಳಿದೆವುಂ
ಷಡ್ವಿಧ ತಳದುತ್ಪತ್ತಿಯ
ಷಡ್ವಿಧಭೇದಗಳ ಪೇಳುವೆವು ಕೇಳೆಂದಂ ೭೭

---

1. ದೊಳು (ಇ). 2. ವು (ಇ).

[1](ಪರಮಾತ್ಮನೊಳುಂ ನಭವದ-)[1]
ದರೊಳ್ ಮರುತಂ ಸ್ವಸನಿಂದಲಗ್ನಿಯುದರಿಂ ಜಲವುಂ
ಉರುನೀರಿಂ ಧರೆ ಜನಿಸಿಯೆ
ನಿರುತಂ ಶರಣಂಗಿವೀಗ ಅಂಗಗಳಾದುವು ೭೮

ವರಚಿದಾತ್ಮಂಗವೈಕ್ಯಗೆ
ಶರಣಂಗಂ [2](ನ)[2]ಭಾಂಗ ವಾಯ್ವಂಗ ಸುಲಿಂಗಿಗೆ
ಉರುಶೇಷಿಗೆಯನಲಾಂಗ ಘ
ನರಸಾಂಗ ಮಹೇಶಗೆ ಧರಾಂಗಭಕ್ತಂ[3](ಗಂ)[3] ೭೯

ಹರನೈಕ್ಯಶರಣಲಿಂಗಿಯು
ಪರಮಜ್ಞಾನಸ್ವರೂಪಿನಿಂದಿರುತಿಹರುಂ
ವರಪ್ರಸಾದಿ ಮಹೇಶ್ವರ
ನುರುಭಕ್ತಾದಿ ಕ್ರಿಯಾತ್ಮಕನೆಂದಂ ಸಿದ್ಧಂ ೮೦

ವ॥ ಪರಶಿವನೆ ಲಿಂಗಂ ಪಂಚವಿಂಶತಿತತ್ವಯುಕ್ತಾತ್ಮನೆ ಅಂಗಂ ಶಾಂತ್ಯಾತೀತ ಶಾಂತಿವಿದ್ಯಾಕಲಾಪ್ರತಿಷ್ಠೆ ನಿವೃತ್ತಿ ಶಿವಸಾದಾಖ್ಯ ಅಮೂರ್ತಿಸಾದಾಖ್ಯ ಮೂರ್ತಿ ಸಾದಾಖ್ಯ ಕರ್ತೃಸಾದಾಖ್ಯ ಕರ್ಮಸಾದಾಖ್ಯವೆಂಬ ವಿದ್ಯಾತತ್ತ್ವ ಹತ್ತು ಸಂಯೋಗಂ ಮತ್ತಂ ಆತ್ಮ ಶಿವಾಶಿಕಂ ನಿರ್ಮಳನಿತ್ಯನಿರಂಜನನಿಃಪಾಪಶಾಂತಿಯುಕ್ತನಾದ ಜೀವ ತಾಂ ಶಿವಂ ಈ ಜೀವಂ ಶಿವನಿಂದಂಗೀಕರಿವುದರಿಂ ಶಿವಾಂಗಂ ಸರ್ವಜ್ಞತ್ವದಿಂ ತೃಪ್ತನಾಗಿಹುದರಿಂ ಆದಿಯಿಲ್ಲದ ಜ್ಞಾನಮುಳ್ಳುದರಿಂ ಸ್ವಾಧೀನತ್ವದಿಂ ಕೆಡೆವ ಸತ್ವದಿಂ ಕಡೆಯಿಲ್ಲದ ಶಕ್ತಿಯೆಂಬೀ ಷಡ್ಲಕ್ಷಣಂಗಳಿಂದೀಯಾತ್ಮಂ ಯುಕ್ತನಾದುದರಿಂದಂಗಸ್ಥಲವೆನಿಸಿದಂ ಪುರಹರಂ ಲಿಂಗಸ್ಥಲವೆನಿಸಿದಂ ಲಿಂಗಸ್ಥಲಂ ತನ್ನಶಕ್ತಿಯಿಂ ಹಲವು ಪ್ರಕಾರವಾದಂತೆ ಅಂಗಸ್ಥಲಂ ತನ್ನ ಸಂಬಂಧಿಯಾವಭಕ್ತಿಯಿಂ ಹಲವು ಪ್ರಕಾರವಾಯಿತ್ತುಂ ಅಂಗಸ್ಥಲ ಶಕ್ತಿಯಿಂ ಶಿವನಾಗುತ್ತಿಹುದುಂ ಭಕ್ತಿಯಿಂದಂಗಸ್ಥಲ ಆತ್ಮನಾಗುತ್ತಿಹುದುಂ ಶಕ್ತಿಮಾ[4](ನಾ)[4]ದಶಿವಂ ಸೇವ್ಯನಹುದರಿಂ ಆವಾವ ರೂಪವನ್ನೈದಿಹಂ ಭಕ್ತಿಮಾನ್ ಆದಾತ್ಮಂ ಸೇವಕನಹುದರಿಂ ಆಯಾ ರೂಪವನ್ನೈದುತಿಹಂ ಶಿವಂ ಪೂಜ್ಯನಹುದರಿಂ ಆಯಾ ರೂಪವನ್ನೈದುತಿಹಂ ಈ ಆತ್ಮನಾ ಶಿವಪೂಜಕನಪ್ಪುದರಿಂ ಆಯಾ ಸ್ವರೂಪವನ್ನೈದುತಿಹಂ ಶಿವಂ ಸಾಧ್ಯನಹುದರಿಂ ಆವಾವ ರೂಪವನ್ನೈದುತಿಹಂ ಈ ಜೀವತತ್ ಶಿವಸಾಧಕನಹುದರಿಂ ಆಯಾ ರೂಪವನ್ನೈದುತ್ತಿಹಂ ಶಿವಂ ಗುರುವಹುದರಿಂ ಆಯಾ ರೂಪಧರಿಸುತ್ತಿಹಂ ಆ ಈ ಆತ್ಮಂ ಶಿಷ್ಯತನದಿಂ ಆ ಈ ರೂಪನಾಶ್ರೈ

---

1. ಪರಮಾತ್ಮನೊಳ್ನಭವದ (ಇ). 2. ನ್ನ (ಇ). 3 ಗಹುದುಂ (ಇ). 4. ನ್ನಾ (ಇ).

ಸುವಂ ಅದು ಕಾರಣ ಶಿವಜೀವರಿಗೆ ಭೇದವಿಲ್ಲದುದರಿಂ ಸಂಯೋಗವೆ ಯೋಗಂ ಅದೆ ಲಿಂಗಸಾಯುಜ್ಯಂ ಶಿವಜೀವರುಗಳ ಸಾಯುಜ್ಯಕಿಂದ ಉತ್ಕೃಷ್ಟವಾದ ಮುಕ್ತಿಯಿಲ್ಲಂ ಯಾವ ಆತ್ಮಂ ತನ್ನ ಅಜ್ಞಾನ ತೊಲಗಲೋಸುಗಂ ಉಪದೇಶಸಿದ್ಧಿಗೋಸುಗಂ ಶಿವ ದೀಕ್ಷೆಯ ಜ್ಞಾನವನೀವಯಜ್ಞಾನಗ್ರಂಥಿಭೇದಕನಾದ ಶಿವಸಿದ್ಧಾಂತತಂತ್ರಪ್ರತಿಪಾದಿ ಸುವ ಮಂಗಲಲಿಂಗಾಂಗಸಂಯೋಗಪಾರಾಯಣನಾದ ವಾದಿಕ್ಲೇಶವಿಲ್ಲದಂತಹನಾದ ಸಂಸಾರಮಂ ದಾಂಟಿಸುವ ಅನುಗುಣವಾದಾಚಾರ್ಯತ್ವವನುಳ್ಳ ಶ್ರೀಗುರುವನಾಶ್ರೈಸು ತ್ತಿಹಂ ಆ ಪ್ರಸಿದ್ಧವಾದಿಂಯಾತ್ಮಂ ಪರಮಾರ್ಥದಿಂ ತಾಂ ಪ್ರತ್ಯಕ್ಷ ಶಿವನಂಶವಾಗಿರ್ದು ವ್ಯವಹಾರಾರ್ಥವಾದವಸ್ಥೆಯಲ್ಲಿ ಜೀವನಾಗಿ ಸಂಸಾರಿಯೆಂಬಂತೆ ಪ್ರಕಾಶಿಸುತ್ತಿಹಂ ಮತ್ತೀಯಾತ್ಮಂಗಂ ದೇಹೇಂದ್ರಿಯ ಮೊದಲಾದವರ ಸಮೂಹದಲ್ಲಿ ಅಹಂಮಮ ಭ್ರಾಂತಿರೂಪಾದ ಜ್ಞಾನದಿಂ ಸಂಸಾರಸತ್ಯವೆಂಬಂತೆ ಕಲ್ಪಿಸಲ್ಪಟ್ಟಿತ್ತುಂ ಮತ್ತೀಪುರುಷಂ ತನ್ನಲ್ಲಿರ್ದ ಅಜ್ಞಾನದಿಂ ಮೂಢನಾಗಿ ತನ್ನ ಶಿವತತ್ತ್ವಮಂ ಭಕ್ತಿಯೆಂಬ ತನ್ನಕರ್ಮ ದಿಂದರಿಯದೆ ನಾನಾರೆಂದು ಶ್ರೀಗುರುವಂ ಬೆಸಗೊಂಡಂ ಕರುಣಾಕರನಾದ ಶ್ರೀಗುರು ನೀಂ ಪರಬ್ರಹ್ಮವಾಗುತ್ತಿ[1](ಹೆ)[1]ಯೆಂದು ಯಥಾರ್ಥಮಂ ನುಡಿದಂ ಅಜ್ಞಾನಕೃತಕದ ಅಸತ್ಯದ ಮಿಥ್ಯಾಬುದ್ಧಿಯಿಂದಾದ ದೇಹೇಂದ್ರಿಯ ಮೊದಲಾದ ಪ್ರಪಂ[2](ಚೆ)[2]ಲ್ಲಂ ನಿನ್ನಲ್ಲಿ ಸತ್ಯವೆಂಬಂತೆ ವರ್ತಿಸುತ್ತಿಹುದುಂ ಆಶ್ಚರ್ಯವಾದ ನಿನ್ನ ಅಜ್ಞಾನಮಾಟದ ಭ್ರಾಂತಿಜ್ಞಾನವಿನಾಶಾರ್ಥವಾಗಿ ಲಿಂಗಾಂಗಸಂಯೋಗಜ್ಞಾನದಲ್ಲಿ ತಾತ್ಪರ್ಯವಂ ಮಾಡಿ ತತ್ತ್ವಮಸಿ ಎಂಬ ವಾಕ್ಯದ ತತ್-ತ್ವಂ-ಅಸಿ ಎಂಬ ಮೂರುಪದಂಗಳೊಳುಂ ತತ್ಪದಲಿಂಗಂ ಅಸಿಪದಮಂಗಲಿಂಗ ಸಂಯೋಗವೆಂದು ನುಡಿದು ಶ್ರೀಗುರುಕರುಣಬಲದಿಂ ಶಿಷ್ಯನ ಅಜ್ಞಾನಪಾಶವಂ ಭೇದಿಸುವ ಅಧಿಕಶಿವವಿಷಯವಾದ ದೀಕ್ಷೆಯಂ ಮಾಡಿದಂ ಅಂಗಕ್ಕೆ ಲಿಂಗದೊಡತಣಸಂಬಂಧ ದೀ ಎಂಬ ವರ್ಣವಹುದುಂ ಮಲತ್ರಯಂಗಳ [3](ಕ್ಷಯವ)[3]ನೈದಿಸುತ್ತಿಹುದು [4](ಕ್ಷಾ)[4] ಎಂಬ ವರ್ಣವದುಂ ಅದಾವುದಕ್ಕಂಟದೇ ದೀಕ್ಷೆ ಯೆನಿಸುಗುಂ ಮತ್ತಾ ದೀಕ್ಷೆ ತ್ರೈಭೇದವಾಮುದುಂ ವೇಧಾಮಂತ್ರಕ್ರಿಯಾ[5](ಎಂದು)[5] ಶ್ರೀಗುರು ಹಸ್ತಮಸ್ತಕಸಂಯೋಗದಿಂದಾದುದು ವೇಧಾ ದೀಕ್ಷೆಯೆಂದು ಗುರುವಿಂ ಶಿಷ್ಯನ ಕರ್ಣದಲ್ಲಿ ಹೇಳಲ್ಪಟ್ಟುದು ಮಂತ್ರದೀಕ್ಷೆಯೆಂದು ಶಿಷ್ಯನ ಕರಸ್ಥಲದಲ್ಲಿ ಕೊಡಲ್ಪಟ್ಟುದು ಕ್ರಿಯಾದೀಕ್ಷೆಯೆನಿಸುಗುಂ ಮತ್ತಂ ದೀಕ್ಷೆಯೆಂಬ ಕತ್ತರಿ ಯಿಂದ ಮಾಯಾಪಾಶಂಗಳಂ ಕತ್ತರಿಸುತ್ತಿಹಂ ದೀಕ್ಷೆಯಂ ಮಾಡಿ ಶಿವಜ್ಞಾನಮಂ ಕೊಟ್ಟು ಅಜ್ಞಾನಪಾಶವಂ ಕತ್ತರಿಸಿ ಕಲಾಮಾರ್ಗವಂ ಚಿಂತಿಸುವುದುಂ :

ಸ್ಮೃತಿ ॥ ಯಥಾಕಲಾಸ್ತಥಾಭಾವೋ ಯಥಾ ಭಾವಸ್ತಥಾಮನಃ
ಯಥಾಮನಸ್ತಥಾದೃಷ್ಟಿಃ ಯಥಾದೃಷ್ಟಿಸ್ತಥಾಸ್ಥಲಂ

1. ದೆ (ಇ). 2. ಚಿ (ಇ). 3. ಕ್ಷವ (ಇ). 4. ಕ್ಷಿ (ಇ). 5. ಮೂರು ತೆರನಾಗಿಹುದುಂ (ಇ).

ಎಂದುದಾಗಿ ಎಲ್ಲಕ್ಕಿಂತ ಮೇಲಣದಾಗಿಯುಂ ಮಂತ್ರಂಗಳನರುಹಿಸುವ ಮೂರ್ತಿಯಾದ ಕಲೆಯಂ ಸೆಳೆದು ಯಥೋಚಿತವಾಗಿ ಲಿಂಗದಲ್ಲಿ ಕುಳ್ಳಿರಿಸುವುದುಂ ಹೊರಗೊಳಗು ಸಹಿತವಾಗಿ ನಿಜಪರಂಜ್ಯೋತಿಯಾದ ಪ್ರತ್ಯಕ್ಷಲಿಂಗವು ತೈಲತಿಲದೊಳ್ ಪಾವಕನರಣಿಯೊಳ್ ಘೃತಕ್ಷೀರದೊಳ್ ತೊರೆಯೊಳುದಕಮಿರ್ಪಂತೆ ಆತ್ಮನಲ್ಲಿರ್ದುದಾಗಿ ಕಾಣಬಂದುದುಂ ಆ ಲಿಂಗದಂಶವಂ ತೋರುವ ಮಿಗೆ ಸೂಕ್ಷ್ಮವಾದೆಲ್ಲಕಂ ಮೇಲಣದಾದ ಭಕ್ತಿಯಂ ಶಿಷ್ಯನೇ ಗುರುವಾಗಿ ಶಿಷ್ಯಂಗೆ ತೋರಿದನುಂ ಮತ್ತಂ ಕಲಾತೀತವಾದುಪಾಧಿಯಿಲ್ಲದಪರವಾದಲಿಂಗ ಕಾಣಪಡುತ್ತಿರಲು ಈ ಜೀವನ ಸರ್ವಕರ್ಮಕ್ಷಯವನೈದುತ್ತಿಹವುಂ ಅವಿದ್ಯಾಗ್ರಂಥಿಗಳೊಡೆದುಂ ಬಹುಸಂಕಲ್ಪಗಳ್ ಭೇದನವಹವುಂ ಬಳಿಕಂ ರಜವಿಲ್ಲದ ನಿಷ್ಕಲನಿರವಯ ಶುಭ್ರೋಜ್ವಲ ಚಂದ್ರಾದಿತ್ಯಾದಿ ಜ್ಯೋತಿಪ್ರಕಾಶ ತಚ್ಚಬ್ದಬ್ರಹ್ಮವು ಹಿರಣ್ಮಯವಾದಪಾರವಾದ ಬ್ರಹ್ಮಾಂಡದಲ್ಲಿ ವರ್ತಿಸುತ್ತಿಹುದುಂ ಶ್ರೀಗುರುದೇವಂ ಹಿಂದೆ ಹೇಳಿದ ಮಾರ್ಗದಿಂದೀ ಶಿಷ್ಯನಂಗದಲ್ಲಿ ತಲ್ಲಿಂಗಮಂ ಕೂಡಿಸಿದಂ ತನುತ್ರಯಂ ಕೂಡಿದ ಮಲತ್ರಯಂಗಳಂ ದೀಕ್ಷಾತ್ರಯಂಗಳಿಂ ಸುಟ್ಟು ಲಿಂಗತ್ರಯವನುಪದೇಶಿಸಿದಂ ಪುರವೈರಿ ತ್ರಿಪುರವಸುಟ್ಟಂತೆ ಶ್ರೀಗುರುವಿಂ ಮಲತ್ರಯಂ ಸುಡಲ್ಪಟ್ಟತ್ತುಂ ದೀಕ್ಷಾತ್ರಯಂ ಶಿಖಿಯೆಂದೆನಿಸಿತ್ತುಂ ಲಿಂಗವು ಕರ್ಮಮಾಣುವಾಸನೆ[1](ಗೆ)[1] ಶಿಖಿಯೆನಿಸಿತ್ತುಂ ರೂಪೇಕರ್ಪುರಂ ಅಂಗವೇ ತದ್ಗಂಥಂ ಲಿಂಗಾಂಗಸಂಯೋಗವೇ ಶಿಖಿಕರ್ಪುರಯೋಗದಂಥಾದುಂ ಮತ್ತಂ ಈ ಶ್ರೀಗುರು ಈ ಶಿಷ್ಯನ ತ್ರಯಂಗದೊಳ್ ತ್ರೈಲಿಂಗಂಗಳಂ ತ್ರಿದೀಕ್ಷಾಬಲದಿಂ ಕೂಡಿಸಿದಂ ಕಾರಣಶರೀರದ ಆತ್ಮಸಂಗದ ಯೋಗಾಂಗದಲ್ಲಿ ಶ್ರೀಗುರುವೇಧಾದೀಕ್ಷೆಯಬಲದಿಂದಿತ್ತ ಭಾವಲಿಂಗವ ಭಾವಿಸಿ ಸುಷುಪ್ತಾವಸ್ಥೆಯಿಂ ಸೇವಿಸುತ್ತಿಹನಾ ಪ್ರಾಜ್ಞ ಪುರುಷಂ ಸೂಕ್ಷ್ಮತನುವಿನಾತ್ಮಸಂಗದಿಂದಾದ ಭೋಗಾಂಗಕಂ ಶ್ರೀಗುರುಮಂತ್ರದೀಕ್ಷೆಯಿಂದಿತ್ತ ಪ್ರಾಣಲಿಂಗವಂ ನೆನಹೆಂಬ ಸ್ವಪ್ನಾವಸ್ಥೆಯಿಂ ಸೇವಿಸುತ್ತಿಹನಾ ತೈಜಸಂ ಹೊರಗಣದಾದಂಗದ ಆತ್ಮಸಂಗದಿಂದಾತ್ಯಾಗಾಂಗಕಂ ಶ್ರೀಗುರು ಕ್ರಿಯಾದೀಕ್ಷೆಯ ಬಲದಿಂದಿತ್ತಯಿಷ್ಟಲಿಂಗವಂ ಜಾಗ್ರದಾವಸ್ಥೆಯಿಂದ ಅಷ್ಟವಿಧಾರ್ಚನೆಯಿಂ ಸೇವಿಸುವನಾ ವಿಶ್ವಂ ಆತ್ಮನೊಬ್ಬನೆ ಪುರುಷತ್ರಯರೂಪಿಂದ ಅಂಗತ್ರಯದೊಳ್ ಕೂಡಿವೊಂದೇ ಲಿಂಗವಂ ಸೇವಿಸುತ್ತಿಹಂ ಈ ಸೇವನೆ[2](ಯುಪಾಸನಾ)[2]ವಸ್ಥೆಯೆ ಸಂಯೋಗಂ ಈಸಂಯೋಗವೇ ದ್ವೈತಲಯ ದ್ವೈತಲಯವೇ ನಿವೃತ್ತಿ ನಿವೃತ್ತಿಯೇ ವಿಶ್ರಾಂತಿ ವಿಶ್ರಾಂತಿಯೇ ಪರಮಸುಖಂ ಸ್ಫಟಿಕರತ್ನನಿರ್ಮಲಂಗಳದೀಪಪ್ರಭೆಗಳ ಕರಕಾಂಭಸಗಳ ಕರ್ಪೂರಗಂಧಗಳ ವಾಯುನಭಂಗಳ ಶಂಕಗಳಕೂಟದಂತೆ ಬೀಜರೂಪವಾಗಿ ತನ್ನಲ್ಲಿರ್ದ ಭಕ್ತಿಲಿಂಗಾಂಗ ಸಂಯೋಗದಿಂದಂ ಕುರಿಸುತ್ತಿಹುದುಂ ಆತ್ಮ ಕ್ಷೇತ್ರವದುಂ ಭಕ್ತಿಬೀಜವುಳ್ಳಾತನೆಂಬರುಂ ತತ್ಕಾರಣಂ ಕ್ಷೇತ್ರಬೀಜಂಗಳ್ಗೆ ನಿಯೋಗವಿಲ್ಲಂ ಇಂತಪ್ಪ ಸಂಯೋಗದಿಂ ಭಕ್ತಿಯುತ್ಕೃಷ್ಟವಹುದುಂ

---

1. ಯಾದ (ಇ). 2. ಯಯೂಪಾ (ಇ).

ಇಂತಪ್ಪ ಭಕ್ತಿಸ್ವರೂಪೆ ಸದ್ಭಾವದಿಂ ಸದ್ಭಕ್ತಿಯೆನಿಸಿತ್ತುಂ ಈ ಭಕ್ತಿಯಿಂ ಭಕ್ತಿಸ್ಥಲ
ವೈದಿತ್ತುಂ ಅಧಿಕವಾದ ಭಕ್ತಸ್ಥಲವೆಂಬಂಗಂ ಆಚಾರಲಿಂಗದೊಳ್ ಕೂಡಿದುದಂ ಅಲ್ಲಿರ್ದ
ಭಕ್ತಿದೃಢವ್ರತಸಂಪೂರ್ಣವುಳ್ಳದಾದುದರಿಂ ನೈಷ್ಠಿಕಭಕ್ತಿಯೆಂಬ ಪೆಸರ್ವಡೆದಿತ್ತುಂ
ಆ ನೈಷ್ಠಿಕಭಕ್ತಿಯಿಂದೀತಂಗೆ ಮಾಹೇಶ್ವರನೆಂಬ ಸ್ಥಲಬಂದುದುಂ ಆ ಮಾಹೇಶ್ವರ
ನೆಂಬಂಗಂ ಗುರುಲಿಂಗದೊಡನೆ ಕೂಡಿದುದುಂ ಆ ಮಾಹೇಶ್ವರನ ನೈಷ್ಠಿಕಾಭಕ್ತಿ
ತನ್ನೆಚ್ಚರಿಕೆಯಿಂದ ಅವಧಾನಭಕ್ತಿಯೆನಿಸಿತ್ತುಂ ಆ ಅವಧಾನಭಕ್ತಿಯಿಂದೀ ಜೀವಂಗೆ
ಪ್ರಸಾದಿಸ್ಥಲವಭಿಮುಖವಾಯಿತ್ತುಂ ಪ್ರಸಾದಿಸ್ಥಲವೆಂಬಂಗಂ ಶಿವಲಿಂಗದೊಡನೆ
ಕೂಡಿತ್ತುಂ ಆ ಪ್ರಸಾದಿಯ ಅವಧಾನಭಕ್ತಿಸ್ವಾನುಭೂತಿನಿಬಂಧದಿಂದಂ ಅನುಭವ
ಭಕ್ತಿಯೆನಿಸಿತ್ತುಂ ಆ ಅನುಭವಭಕ್ತಿಯೊಡನೆ ಪ್ರಾಣಲಿಂಗಿಸ್ಥಲಂ ಕೂಡಿದುದುಂ
ಆ ಪ್ರಾಣಲಿಂಗಿಯ ಅಂಗಂ ಚರಲಿಂಗದೊಡನೆ ಕೂಡಿದುದಹುದುಂ ತಚ್ಚರಲಿಂಗಸಮೇತ
ವಾದ ಪ್ರಾಣಲಿಂಗಿಸ್ಥಲದಲ್ಲಿ ತನ್ನನುಭಾವಾಕಾರದ ಭಕ್ತಿಯಸಂತೋಷವೇ ಆನಂದ
ಭಕ್ತಿಯೆನಿಸಿತ್ತುಂ ಈ ಆನಂದಭಕ್ತಿಯಿಂದೀ ಜೀವಂಗೆ ಶರಣಸ್ಥಲಬಂಧವದಹುದುಂ ಆ
ಶರಣನೆಂಬಂಗಂ ಪ್ರಸಾದಲಿಂಗದೊಡನೆ ಕೂಡಿದುದಹುದುಂ ಆ ಶರಣಸ್ಥಲದಲ್ಲಿ ನೆಲೆ
ಗೊಂಡ ಆನಂದಭಕ್ತಿ ಸಮಾನಪ್ರೀತಿಯುಳ್ಳದರಿಂ ಸಮರಸಭಕ್ತಿಯೆನಿಸಿತ್ತುಂ ತತ್ಸಮ
ರಸಭಕ್ತಿಯಿಂ ಜೀವಂಗೆ ಐಕ್ಯಸ್ಥಲವಿದಿರಾಗಿ ಬಂದಿತ್ತುಂ ಈ ಐಕ್ಯಸ್ಥಲವೆಂದೆಂಬಂಗಂ
ಮಹಾಲಿಂಗದೊಡನೆ ಕೂಡಿದುದಹುದುಂ ಈ ಐಕ್ಯಸ್ಥಲದಲ್ಲಿರ್ದ ಸಮರಸಭಕ್ತಿ
ತನ್ನಲ್ಲಿಯೆಯಿರ್ದುದಹುದುಂ ಷಡಂಗಯೋಗ ಮಾರ್ಗದಿ ಶಿವನಂ ಈ ಜೀವಂ ಸಾಧಿಸು
ತ್ತಿಹಂ ಆಚಾರಲಿಂಗ ಮೊದಲಾದ ಷಡ್ಲಿಂಗ ಸ್ಥಲಸಾಧ್ಯನಾದ ಸದಾಶಿವಂ ಭಕ್ತ
ಮೊದಲಾದ ಷಡ್ವಿಧಾಂಗಸ್ಥಲಸಾಧಕನಾದಾತ್ಮಂ ಆಚಾರಾದಿ ಮಹಾಂತ್ಯವಾದಾರು
ಲಿಂಗಸ್ಥಲಂ ನಿವೃತ್ತಿ ಭಕ್ತಾದ್ಯೈಕ್ಯಾಂತಾದಾರು ಲಿಂಗಸ್ಥಲನಿವೃತ್ತಿಯೆಂದು ಲಯ
ಮಾರ್ಗಂ ಸಮಸ್ತ ಅಂಗಗಳಲ್ಲಿಯೆಲ್ಲಾ ಕಾಲಂಗಳಲ್ಲಿ ನಾನಾಮುಖವಾದ ಲಿಂಗಂ
ಗುರೂಪದೇಶದಿಂದ ಈ ಜೀವದಲ್ಲಿ ಪ್ರತಿಷ್ಠಿತವಾಗಿ ಪ್ರಕಾಶಿಸುತ್ತಿಹುದುಂ ಅದುಕಾರಣೀ
ಜೀವಂಗೆ ಸರ್ವಾಂಗಲಿಂಗ ಸಾಹಿತ್ಯವಹುದುಂ ಅದೆಂತೆಂದೊಡಂ ಬಾಹ್ಯಾಂಗದೊಳಿಷ್ಟ
ಲಿಂಗಂ ಅಂತರಂಗದೊಳ್ ಪ್ರಾಣಲಿಂಗಂ ಕಾರಣಾಂಗದೊಳ್ ಭಾವಲಿಂಗಂ
ಹೃದಯಾಂಗದೊಳ್ ಮಹಾಲಿಂಗಂ:ಶ್ರುತಾಂಗದೊಳ್ ಪ್ರಸಾದಲಿಂಗಂ ತ್ವಗಂಗದೊಳ್
ಚರಲಿಂಗಂ ದೃಗಂಗದೊಳ್ ಶಿವಲಿಂಗಂ ಜಿಹ್ವಾಂಗದೊಳ್ ಗುರುಲಿಂಗಂ ನಾಸಿಕಾಂಗ
ದೊಳ್ ಆಚಾರಲಿಂಗಂ ಪ್ರತಿಷ್ಠಿಸಲ್ಪಟ್ಟವುಂ ಜ್ಞಾನೇಂದ್ರಿಯ ಕರ್ಮೇಂದ್ರಿಯದಲ್ಲಿಯುಂ
ಪ್ರತಿಷ್ಠಿತವಾದುದುಂ ಶ್ರೋತ್ರೇಂದ್ರಿಯಂಗಳ್ಗೆ ಭೇದವಿಲ್ಲಂ ಶ್ರವಣೇಂದ್ರಿಯ ವಿಷಯ
ವಾಗಿಪ್ಪ ಶಬ್ದಕ್ಕಂ ವಾಗೀಂದ್ರಿಯವಚನಕ್ಕಂ ಭೇದವಿಲ್ಲಂ ತ್ವಗಿಂದ್ರಿಯಪಾಣೇಂದ್ರಿಯ
ವೆಂಬ ಜ್ಞಾನಕರ್ಮೇಂದ್ರಿಯವೆರಡಕ್ಕಂ ಆ ತ್ವಕ್‍ಪಾಣಿಗಳ ವಿಷಯವಪ್ಪ ಸ್ಪರ್ಶಾದಾ
ನಂಗಳಿಗಂ ಭೇದವಿಲ್ಲಂ ಜ್ಞಾನಕರ್ಮೇಂದ್ರಿಯಗಳಪ್ಪ ನೇತ್ರಪಾದವೆರಡಕ್ಕಂ
ತತ್ತದ್ವಿಷಯವಪ್ಪ ರೂಪಗಮನಕ್ಕೆಯುಂ ಭೇದವಿಲ್ಲಂ ಜಿಹ್ವೆಗುಹ್ಯೇಂದ್ರ

ಯಂಗಳ್ಗಂ ತತ್ತದ್ವಿಷಯವಪ್ಪ ರಸಾನಂದಂಗಳ್ಗಂ ಭೇದವಿಲ್ಲಂ ಘ್ರಾಣಗುದಂಗಳ್ಗಂ ತತ್ತದ್ವಿಷಯವಪ್ಪ ಗಂಧವಿಸರ್ಜನಗಳ್ಗಂ ಭೇದವಿಲ್ಲಂ ಮತ್ತಂ ಶ್ರೋತ್ರವಾಕ್ಶಬ್ದಾಕಾಶಂಗಳ್ಗಂ ಈಶಾನಮೂರ್ತಿಯೇ ಅಧಿಷ್ಠಾತೃವಹುದುಂ ತತ್ಪಾಣಿಸ್ಪರ್ಶವಾಯುಗಳ್ಗಂ ತತ್ಪುರುಷಮೂರ್ತಿಯೆ ಕರ್ತುಂ ಚಕ್ಷುಶ್ಚರಣರೂಪಾಗ್ನಿಗಳ್ಗಂ ಅಘೋರಮೂರ್ತಿಯೆ ಕರ್ತಂ ಜಿಹ್ವೆಯುಪಸ್ಥರಸಗುಣಜಲಂಗಳ್ಗಂ ವಾಮದೇವಮೂರ್ತಿಯೆ ಕರ್ತಂ ಘ್ರಾಣವಾಯುಗಂಧಗುಣಪೃಥ್ವಿಗಳ್ಗಂ ಸದ್ಯೋಜಾತಮೂರ್ತಿಯೆ ಕರ್ತಂ ಶ್ರೋತ್ರಾದಿವಾಗೇಂದ್ರಿಯಂಗಳ್ಗಾಶ್ರಯವಾದ ಹೃದಯಜ್ಞಾನಕರ್ಮೇಂದ್ರಿಯಂಗಳ್ಗಾಶ್ರಯವಪ್ಪುದರಿಂ ಜ್ಞಾನಕರ್ಮೋಭಯರೂಪವಾದ ಇಂದ್ರಿಯವೆಯಹುದುಂ ಹೃದಯಾಕಾಶದಲ್ಲಿ ಇಂದ್ರಿಯಂಗಳು ಸ್ಥೂಲಾಂಗದೊಳ್ ಸ್ಥೂಲರೂಪಿಂ ಸೂಕ್ಷ್ಮಾಂಗದೊಳ್ ಸೂಕ್ಷ್ಮರೂಪಿಂ ಕಾರಣಾಂಗದೊಳ್ ಕಾರಣರೂಪಿಂದಿಹುದುಂ ಮತ್ತಂ ಸತ್ಯಜ್ಞಾನಮನಂತ ಬ್ರಹ್ಮವೆಂಬ ವೇದೋಕ್ತವಾದ ಸತ್ಯಜ್ಞಾನಾದಿ ನಾಮಂಗಳುಳ್ಳ ಲಿಂಗವು ಈ ಹೇಳಿದಿಂದ್ರಿಯಂಗಳಲ್ಲಿ ಗುರೂಪದೇಶದಿಂ ಸರ್ವೇಂದ್ರಿಯಂಗಳಲ್ಲಿ ಮುಖವುಳ್ಳುದಾಗಿ ಪ್ರಕಾಶಿಸುತ್ತಿಹುದುಂ ಹೃದಯೇಂದ್ರಿಯಾನನಂ ಶೋತ್ರಂ ಶೋತ್ರೇಂದ್ರಿಯವದನಂ ಶಬ್ದೋಪಲಬ್ಧಿಸಾಧನಮಿಂದ್ರಿಯಶ್ರೋತ್ರಂಶಂ ಲ್ಯವೃತಿ( ? )ಯಾಗಿಕ್ಕುಂ ವಾಕ್ ವಾಗೇಂದ್ರಿಯಕ್ಕೆ ಮುಖಂ ತ್ವಕ್ ತ್ವಗಿಂದ್ರಿಯಲಪನಂ ಸ್ಪರ್ಶೋಪಲಬ್ಧಿಸಾಧನಮಿಂದ್ರಿಯಂ ತ್ವಕ್ ಸರ್ವಶರೀರವೃತ್ತಿಯಾಗಿರ್ಕುಂ ಪಾಣಿಪಾಣಿರಂದ್ರಿಯತುಂಡುಂನೇತ್ರ (?)ನೇತ್ರೇಂದ್ರಿಯ ಲಪನಂ ರೂಪೋಪಲಬ್ಧಿಸಾಧನಮಿಂದ್ರಿಯಂ ಚಕ್ಷುಕೃಷ್ಣಕಾರಾಗ್ರವರ್ತಿಯಾಗಿರ್ಕುಂ ಪಾದ ಪಾದೇಂದ್ರಿಯಮುಖಂ ಜಿಹ್ವೆಜಿಹ್ವೇಂದ್ರಿಯಾನನಂ ರಸೋಪಲಬ್ಧಿಸಾಧನಮಿಂದ್ರಿಯಂ ರಸನಂ ಜಿಹ್ವಾಗ್ರವರ್ತಿಯಾಗಿರ್ಕುಂ ಗುಹ್ಯ ಗುಹ್ಯೇಂದ್ರಿಯಸ್ಯಘ್ರಾಣಘಾಣೇಂದ್ರಿಯಮುಖಂ ಗಂಧೋಪಲಬ್ಧಿಸಾಧನಂ ಇಂದ್ರಿಯ ಘ್ರಾಣಂ ನಾಸಾಗ್ರವರ್ತಿಯಾಗಿರ್ಕುಂ ಪಾಯುಪಾಯೇಂದ್ರಿಮುಖಂ ಈ ಮುಖಂಗಳೆ ಲಿಂಗಗಳ ಮುಖಂಗಳಹವುಂ ಘಾಣೇಂದ್ರಿಯ ಮುಖವಾದ ಘ್ರಾಣವಾಚಾರಲಿಂಗಮುಖಂ ಜಿಪ್ಹೇಂದ್ರಿಯಮುಖವಾದಜಿಹ್ವೆಗುರುಲಿಂಗಮುಖಂ ನೇತ್ರೇಂದ್ರಿಯಕ್ಕಂ ಮುಖವಾದ ನೇತ್ರ ಶಿವಲಿಂಗಮುಖಂ ತ್ವಗೇಂದ್ರಿಯಕ್ಕಂ ಮುಖವಾದ [1](ತ್ವಕ್)[1]ಚರಲಿಂಗಮುಖಂ ಶ್ರೋತೇಂದ್ರಿಯಕ್ಕಂ ಮುಖವಾದ ಶ್ರೋತ್ರ ಪ್ರಸಾದಲಿಂಗಮುಖಂ ಹೃದಯೇಂದ್ರಿಯಕ್ಕಂ ಮುಖವಾದ ಹೃದಯಂ ಮಹಾಲಿಂಗಮುಖಂ ಇಂತೀ ಸರ್ವೇಂದ್ರಿಯಲಿಂಗವಾದ ಸರ್ವಾಂಗಲಿಂಗಿಯ ಗುರುಲಿಂಗಂ ದೀಕ್ಷೆಶಿಕ್ಷೆಯೆಂದು ಮೂದೆರನಕ್ಕುಂ ೮೧

---

1. ಅರ್ಥ (ಇ)

ಉತ್ಪಲ :

ಮಂಟಪಕುಂಡದಿಂವಲಭಿಷೇಕಷಡ್ವಿ[1](ಧಿ)[1] ಯುಕ್ತದಿಂದೆತಾ
ನಂಟಿದ ದೀಕ್ಷೆಯಿಂ ಚರಸಲಿಂಗವೆಯೆಂಬ ಸುಬೋಧಶಿಕ್ಷೆಯಿಂ
ವಿಹಟಹ(?)ಪೂರ್ವಸತ್ಕ್ರಿಯೆಯು ವಾಸನೆ ಪೂಜನೆ ಸ್ವಾನುಭಾವನಾ
ಗಂಟಿಹುದೀಗ ಸದ್ಗುರುವು ಲಿಂಗಮದೆಂವನು ಸಿದ್ಧದೇಶಿಕಂ ೮೨

ಆ ಗುರುಲಿಂಗಿ[2](ಯಾ)[2]ಚರಣೆಯಾ ಚರಣಲಿಂಗವದುಂ ಸದಾಚರಾ
ಆಗಮಸಿದ್ಧ ತಾಂ ನಿಯತತುಂಗಗಣಾ[3](ಚ)[3]ರಮೂರ್ತೆರಂತದುಂ
ಬೇಗದಿ ಭಕ್ತಿಮಾರ್ಗಿಗಳ ಸಂತಸ ಮಾಳ್ಪ ಸದಾಚರಂ ಅದಂ
ನೀಗದೆ ಯಿರ್ಪುದುಂ ನಿಯತನಿಂದಕಶಿಕ್ಷೆ ಗಣಾಚರಾನ್ವಿತಂ ೮೩

ತ್ರೈವಿಧವೇಕವೆಂದು ಗುರುಗಾ ಕ್ಷಣವಿತ್ತುದು ಶುದ್ಧನಾಮದಿಂ
ತ್ರೈವಿಧವೇಕವೆಂದು ಹರಸೀಯಲು ಮತ್ತದೆ ಸಿದ್ಧನಾಮದಿಂ
ತ್ರೈವಿಧವೇಕವೆಂದು ಚರಕೀರ್ತಿಪ್ರಸಿದ್ಧವಿಚಾರನಾಮದಿಂ
ತ್ರೈವಿಧಸುಪ್ರಸಾದವಹ ಲಿಂಗವಿರಾಜಿಸುಗೇನನೆಂದಪೆಂ ೮೪

ಲಿಂಗಮುದಾತ್ಮರೂಪಿನ ಸುಭಾವದ ಚೆ[4](ತ್ಸ್ವ)[4]ಯನಾಮದಿಂದಲುಂ
ಲಿಂಗದೊಳಾತ್ಮದಿಂದ್ರ್ಯಸುಖದುತ್ಸಹ ತಾಂ ಚರನಾಮವಾಗಿಯುಂ
ತುಂಗಸುತತ್ವಕಾಶ್ರಯಮದಾಗಿಯೆ ತತ್ಪರನಾಮದಿಂದಲುಂ
ಜಂಗಮಲಿಂಗರಾಜಿಸುಗುಮಾವಗಲೆಂದನು ಸಿದ್ಧ ಶಿಷ್ಯನೊಳ್ ೮೫

ಶ್ರೀಗುರುಹಸ್ತದಿಂದ ಕೊಡಲಿಷ್ಟಮದೆಂಬ ಸುನಾಮದಿಂದಲುಂ
ತಾಗಲದುಂ ಸುಚಿತ್ತದೊಳು ಜಾನಿಸೆ ಪ್ರಾ[5]ಣ(ದ)[5] ಲಿಂಗನಾಮದಿಂ
ಯೋಗದ ಭಾವದಿಂದಲದ ಭಾವಿಸೆ ಭಾವದಿ ಲಿಂಗನಾಮದಿಂ
ದಾಗ ವಿರಾಜಿಸಿತ್ತು ಶಿವಲಿಂಗವು ತ್ರೈವಿಧದಿಂದಲೆಂದನುಂ ೮೬

ಶಾರಿರದೇಗುಲಂತದರ ಜೀವವೆ ಪಿಂಡಜನಾಮ[6]ದಿಂ(ದೆ ತಾ)[6]
ಧಾರುಣಿ ಪೀಠವಂಬರವೆ ಲಿಂಗವದಂಡಜಲಿಂಗನಾಮದಿಂ
ಪಾರಮದಾತ್ಮನಾಗಸದ ಮಧ್ಯದಿಯಾಗಸದಲ್ಲಿಯಾತ್ಮನಂ
ಪೂರಿತಜಾನಬಿಂದುಜಮದಾಗಿ ಮಹಾಘನಲಿಂಗವೊಪ್ಪುಗುಂ ೮೭

---

1. ಲಿ (ಇ) (?) 2. ಯಸ್ನುದಾ (ಇ) 3. ಜಾ (ಇ) 4. ತ್ಸ (ಇ) 5. ದಿಂ((ಇ)
6. ....(ಇ).

ವ|| ಇಂತಪ್ಪ ಷಡ್ವಿಧಲಿಂಗಸಂಪನ್ನನಾದ ಭಕ್ತಂ ಪಿತಾದಿ ವ್ಯಾಮೋಹಮಂ ಬಿಟ್ಟು ಗುರುವಿನೊಳ್ ಪ್ರೀತಿ ನಟ್ಟಿರ್ದುದರಿಂ ಗುರುಲಿಂಗವೋಹಿಯೆನಿಸುವಂ ಬಂಧೂಪಚಾರಮುಳ್ಳುದರಿಂ ಗುರುಲಿಂಗಭಕ್ತನೆನಿಸುವಂ ಅನ್ಯಪೂಜೆಯನುಳಿದು ಗುರುವಂ ಪೂಜಿಸುವುದರಿಂದ ಗುರುಲಿಂಗಪೂಜಕನೆನಿಸುವಂ ಗುರುಭಕ್ತಮಾರ್ಗದಿಂ ಗುರುಲಿಂಗಾಚಾರವಂ ಮಾಡೆ ಗುರುಲಿಂಗವೀರನೆನಿಸುವಂ ಅನ್ಯಸೇವೆಯುಳಿದು ಗುರುಸೇವೆಯಂ ಮಾಡಿ ಗುರುವಾಜ್ಞೆಯಂ ಮೀರದಿಹುದರಿಂ ಗುರುಪ್ರಸಾದಿಯೆನಿಸುವಂ ಗುರುತಾತ್ಪರ್ಯಮುಳ್ಳುದರಿಂ ಗುರುಲಿಂಗ........ ನಿಸುವಂ ಇಂತೀ ಷಡ್ವಿಧವ್ರತಯುಕ್ತನಾದ ಭಕ್ತಂ ತದ್ಗುರುಲಿಂಗದಿಂ ಕಾಣ್ಬಾಚಾರಲಿಂಗವ್ರತಿಯೆನಿಪನೆಂತೆನೆ ಪುತ್ರಮಿತ್ರಕಳತ್ರಾದಿ ಮೋಹವಂ ತ್ಯಜಿಸಿ ಶಿವಾಚಾರದೋಳ್ಪ್ರೀತಿ ನಟ್ಟುದರಿಂ ಆಚಾರಲಿಂಗವೋಹಿಯೆನಿಸುವಂ ತನ್ನ ಪೂರ್ವಾಚಾರಮಂ ಶಿವಾಚಾರವಿರುದ್ಧವಾದನಾಚಾರವಂ ಬಿಟ್ಟುದರಿಂ ಆಚಾರಲಿಂಗಭಕ್ತನೆನಿಸುವಂ ಅನ್ಯಪೂಜೆಯಂ ಹಳಿದು [1](ಶಿವಲಿಂಗಪೂಜಾ)[1] ಚಾರವಿಶೇಷತ್ವದಿಂ ಶಿವಪೂಜಾಪರಾಯಣನಾದುದರಿಂ ಆಚಾರಲಿಂಗಪೂಜಕನೆನಿಸುವಂ ಒಂದು ವೇಳೆಯೂ ತನ್ನಾಚಾರವಂ ಬಿಡದಿಪ್ಪುದರಿಂ ಆಚಾರಲಿಂಗವೀರನೆನಿಸುವಂ ಸಂಕಲ್ಪವಿಕಲ್ಪವಳಿದುದರಿಂ ಆಚಾರಲಿಂಗಪ್ರಸಾದಿಯೆನಿಸುವಂ ತಾಂ ಶಿವನಿಂದ್ಯವ ಬಿಟ್ಟು ಪರರ ನಿಂದಿಪುದಂ ಕೇಳದಿಪ್ಪುದರಿಂ ಆಚಾರಲಿಂಗಪ್ರಾಣಿಯೆನಿಸುವಂ ಆಚಾರಲಿಂಗಷಡ್ವಿಧವ್ರತಯುಕ್ತಮಾಹೇಶ್ವರಂ ಪ್ರಸಾದವಲ್ಲದನ್ಯರುಚಿಯನರಿಯದುದರಿಂ ಪ್ರಸಾದಲಿಂಗವೋಹಿಯೆನಿಸುವಂ ಪೂರ್ವಾಹಾರ ವಿವರ್ಜಿತತ್ವದಿಂ ಪ್ರಸಾದಲಿಂಗಭಕ್ತನೆನಿಸುವಂ ಪ್ರಸಾದಸೇವನಾಕಾಲದಲ್ಲಿ ಅನ್ಯಜನಸಂಭಾಷಣೆಯಂ ಬಿಟ್ಟುದರಿಂ ಲಿಂಗಪೂಜಕನೆನಿಸುವಂ ಅನ್ಯರಿತ್ತ ಪದಾರ್ಥಾದಿಗಳಂ ತನ್ನ ಹಸ್ತಮುಟ್ಟಲೀಸದುದರಿಂ ಪ್ರಸಾದಲಿಂಗವೀರನೆನಿಸುವಂ ಜೀ (ವರುಗಳ) ಹಿಂಸೆಯ ಮಾಡದುದರಿ ಪ್ರಸಾದಲಿಂಗಪ್ರಸಾದಿಯೆನಿಸುವಂ ಆತ್ಮನಿಗ್ರಹ ವರ್ಜಿತತ್ವದಿಂ ಪ್ರಾಸಾದಲಿಂಗಪ್ರಾಣಿಯೆನಿಸುವಂ ಇಂತೀ ಪ್ರಸಾದಲಿಂಗದಲ್ಲಿ ಷಡ್ವ್ರತಯುಕ್ತಪ್ರಸಾದಿ ತಾಂ ಸ್ವಕುಲಾಚಾರನಿಯತಿ ಮಾರ್ಗನಂ ಬಿಟ್ಟುದರಿಂ ತಾನೇ ಜಂಗಮಲಿಂಗವೋಹಿಯೆನಿಸುವಂ ಅನ್ಯಪೂಜೆಯಂ ಬಿಟ್ಟು ಜಂಗಮಾರ್ಚಕನಾದುದರಿಂ ಜಂಗಮಭಕ್ತನೆನಿಸುವಂ ಅರ್ಥಪ್ರಾಣಾದಿಯಂ ಕೊಟ್ಟು ಕೊಟ್ಟೆನೆಂಬಹಂಮಮತೆಯಿಲ್ಲದುದರಿಂ ಜಂಗಮಲಿಂಗವೀರನೆನಿಸುವಂ ಜಂಗಮಪ್ರಸಾದವ ಭುಂಜಿಪುದರಿಂ ಜಂಗಮಲಿಂಗಪ್ರಸಾದಿಯೆನಿಸುವಂ ಜಂಗಮವಂ ಶಿವನೆಂದು ಕಾಣ್ಬುದರಿಂ ಜಂಗಮಲಿಂಗಪ್ರಾಣಿಯೇ ವೀರನೆನಿಸುವಂ ಇಂತೀ ಜಂಗಮಲಿಂಗದೊಳ್ ಷಡ್ವಿಧವ್ರತಯುಕ್ತನಾದ ಪ್ರಾಣಿಲಿಂಗಿ ತಾಂ ಶಿವಲಿಂಗವಲ್ಲದನ್ಯಮೋಹವಿಲ್ಲದುದರಿಂ ಶಿವಲಿಂಗವೋಹಿಯೆನಿಸುವಂ ಅನ್ಯದೈವವರ್ಜಿತತ್ವದಿxxxಶಿವಲಿಂಗಭಕ್ತನೆನಿಸುವಂ ಶಿವನಲ್ಲದನ್ಯಪೂಜಕನಲ್ಲದುದರಿಂ ಶಿವಲಿಂಗಪೂಜಕನೆನಿಸುವಂ ಪುಣ್ಯ

---

1. .... (ಇ).

ಕ್ಷೇತ್ರಗಳ ಬಯಸದುದರಿಂ ಶಿವಲಿಂಗವೀರನೆನಿಸುವಂ ಸುಖದುಃಖಗಳ ನೆನಪಿಲ್ಲದುದರಿಂ ಶಿವಲಿಂಗಪ್ರಸಾದಿಯೆನಿಸುವಂ ಆತ್ಮಸತಿತ್ವದಭಾವಂ ಘಟ್ಟಿಗೊಂಡು ಸಿದ್ಧರಾಮನಂತೆ ಸ್ತ್ರೀಸಂಭೋಗಾದಿಗಳಿಲ್ಲದುದರಿಂ ಶಿವಲಿಂಗಪ್ರಾಣಿಯೆನಿಸುವಂ ಇಂತೀ ಶಿವಲಿಂಗದೊಳ್ ಪ[1](ರಮಭಕ್ತಿ)[1] ಯುಕ್ತನಾದ ಶರಣಂ ಲೋಕವರ್ತನೆಯಂ ಮರೆದು ಲಿಂಗವರ್ತನೆಯೊಳಿಹುದರಿಂ ಮಹಾಲಿಂಗವೋಹಿಯೆನಿಸುವಂ ಪೂರ್ವದ ಭಕ್ತಸ್ಥಲವಿಲ್ಲದುದರಿಂ ಮಹಾಲಿಂಗಭಕ್ತನೆನಿಸುವಂ ಅಜ್ಞಾನಜನಸಂಗ ತದ್ಭಾಷಣೆಯಿಲ್ಲದುದರಿಂ ಮಹಾಲಿಂಗಪೂಜಕನೆನಿ[2]ಸುವಂ ಉತ್ಪತ್ತಿಸ್ಥಿತಿಲಯಂಗಳ ನೆನೆಯದುದರಿಂ ಮಹಾಲಿಂಗವೀರನೆನಿಸುವಂ ಪಙ್ತ್ತಿಭೋಜನವ ಬಿಟ್ಟುಂ ಸರ್ವೋಪಹಾರಮನಂತರಂಗದಲ್ಲಿಯರ್ಪಿಪುದರಿಂ ಮಹಾಲಿಂಗಪ್ರಸಾದಿಯೆನಿಸುವಂ ಮಹಾಲಿಂಗದೊಳ್ ಮನವನರ್ಪಿಸಿದುದರಿಂ ಮಹಾಲಿಂಗಪ್ರಾಣಿಯೆನಿಸುವಂ ಇಂತೀ ಗುರುಲಿಂಗಸ್ಥಲಾದಿಗಳೊಳೊಂದೊಂದಕಂ ಷಡ್ವಿಧರೂಪವನ್ನೈದಿಯದರಿಂ ಷಟ್ತ್ರಿಂಶತ್ಪ್ರತಿಯೆನಿಸಿದ ಭಕ್ತನ ಷಡ್ವಿಧಸಜ್ಜನದಾಸಿಭಾವವೆಂತೆಂದೊಡಂ. ೮೮

ಕಂ. ಗುರುಪದಯುಗಸರಸಿಜಮಂ
ಭರದಿಂ ಪೂಜಿಸುವ ನಿಯಮವದು ದಾಸತ್ವಂ
ಪರದೈವ ವಿವರ್ಜಿತದಿಂ
ಹರಶರಣರ ಭಜಿಸೆ ವೀರದಾಸತ್ವವದುಂ ೮೯

ಜಾತಿ ದುರ್ಜಾತಿಯೆನ್ನದೆ
ಪ್ರೀತಿಯೊಳುಂ ಚರರ ಶೇಷಗೊಂಬುದು ಭೃತ್ಯಂ
ಖ್ಯಾತಿಯ ಸಿದ್ಧಾಷ್ಟಕದಿಂ
ಆತುರದಿಂ ಮಾಡೆ ವೀರಭೃತ್ಯಕನಹನುಂ ೯೦

ತನ್ನ ತನುಧನಗಳೆಲ್ಲವ
ಉನ್ನತ ಜಂಗಮಕೆ ಮಾಡೆ ಸಮಯಾಚಾರಂ
ಮನ್ನಿಸಿದಣಿಮಾಸಿದ್ಧಿಯ
ಸನ್ನುತಮನಮಿರೆ ಸಕಲಾವಸ್ಥಕನಹನುಂ ೯೧

ದಾಸನೆರೆ ವೀರದಾಸಂ
ಮೊಸಲಭೃತ್ಯಂ ವೀರಭೃತ್ಯಂ ಸಮಯ[2](ಂನಿ)[2]
ರಾಸಕ ಸಕಲೀಷಡ್ವಿಧ
ದೀಶನ ಪೂಜಿಸುವ ಕ್ರಮವ ಕೇಳೈ ಕುವರಾ ೯೨

1. …(ಇ). 2. ದಿ (ಇ).

ಗುರುಲಿಂಗದಿ ದೃಢಭಕ್ತಿಯು
ಪರಮಜಿತೇಂದ್ರತ್ವ ದಾಸಾರ್ಚನಕ್ರಮವದು
ನಿರುತಂ ಲಿಂಗದ ಪೂಜೆಯು
ನಿರಲದು ತಾಂ ವೀರದಾಸನರ್ಚನೆಯಕ್ಕುಂ ೯೩

ಪುಷ್ಪಾನುಲೇಪನಾದಿಯೊ
ಳೊಪ್ಪುವ ಉಪಚಾರ ಭೃತ್ಯಾರಾಧನೆಯು ತಾ
ನಿರ್ಪವೃತ ಲುಪ್ತವಾದರೆ
ಯೊಪ್ಪಿಸುವುದು ತಾನೆ ವೀರಭೃತ್ಯಾರ್ಚನೆಯುಂ ೯೪

ತೈಲಾಭ್ಯಂಗ[1](ಂ ವಸನವ)[1]
ಮೇಲಣ ಚರಕೀಯೆ ಸಮ್ಮಾರ್ಜನಕ್ರಮವದು
ಶೂಲಿಯೊಳ್ ಸಮರಸಭಕ್ತಿಯು
ಕೀಲಿಸಲದು ತಾಂ ಶರ್ವವಸ್ತ್ರಾರ್ಚನೆಯುಂ ೯೫

ಉ. ಮಾ. ವೃ.

ಕುಕ್ಕುಟ ಕುಕ್ಕುರಂ ವಿಹಗ ಮರ್ಕಟ ಸೂಕರನಾದಿಯಾದವಂ
ಸಾಕುವ ಭಕ್ತರಲ್ಲಿ ಬಹುಸಾಧನದ್ರವ್ಯವನೇನುವೊಲ್ಲದಾ
ಅಕ್ಕರಗಿಂದಪಾರಜಲಶೇಷಗಳಲ್ಲದೆ ತಾನುವೊಲ್ಲದಾ
ಲೌಕಿಕವನ್ನು ಪೊರ್ದದಿಹ ಪಾಡನೆ ಬಾಹ್ಯದ ಶೀಲವೆಂದನುಂ ೯೬

ಕೀಟಕಪಕ್ಷಿಮುಖ್ಯಕುಲಮುಟ್ಟಿದ ಪಣ್ಣು ಫಲಂಗಳೇನುಮಂ
ಮುಟ್ಟದೆ ಶುದ್ಧನಾಗಿ ಪರಪಾಕವನೊಲ್ಲದೆ ಚಿತ್ತಸಂಶಯಂ
ಮುಟ್ಟಿದ ಠಾವಿನಲ್ಲಿ ತನಗೇನುವನೊಪ್ಪದೆ ತನ್ನ ಕೃತ್ಯವಂ
ಮುಟ್ಟಿಯೆ ಕೇಳದಾರನುಪೆಯಿರ್ಪುದು ಬಾಹ್ಯದ ಶೀಲವೆಂದನುಂ ೯೭

ತಪ್ಪಿದ ತಪ್ಪನೊಪ್ಪುಗೊಳವೇಳ್ಕುಮದೆಂಬುತ ಶೀಲರಾದವರ್-
ಕಪ್ಪುಗಳಾರ್ಚರಾದಚರಲಿಂಗದ ಬಾಗಿಲ ಕಾಯ್ದುದಾಕ್ಷಣಂ
ತಪ್ಪುಗಳಪ್ಪಿದಲ್ಲಿ ಧರೆ ಕಟ್ಟಳೆ ತೀರಿತುಯೆಂಬ ನೈಷ್ಠೆಯಿಂ
ದಿಪ್ಪರು ಭಾವ ತಾನೆ ಘನನಿಷ್ಠುರ ಗೊತ್ತಿನ ನೇಮವೆಂದನುಂ ೯೮

---

1. ವಸ್ತ್ರಾದಿಯ (ಅ).

[1](ಕಿತ್ತಿಹ)[1] ಕಣ್ಣಿಯಂ ಗ್ರಥಿತ ಮಾಡಲು ಮುನ್ನಿನ ದೀರ್ಘವಪ್ಪುದೇ
ಸತ್ಯದನೇಮತಪ್ಪಿದವ ಮುನ್ನಿನ ಭಕ್ತಿಯ ಕೂಡಬಲ್ಲನೇ
ಉತ್ತಮದಾಚರಕ್ಕೆಯುಮನಾಚರಮಾರ್ಗಕೆ ಕೂಟಮಪ್ಪುದೇ
ಸತ್ಯದ ನೇಮ ತಪ್ಪಿದರೆ ಜೀವನನೊಪ್ಪಿಸುವಾತ ಶೀಲನುಂ ೯೯

ಕಂ. ತನ್ನಯ ಕಾಮ್ಯಾರ್ಥತೆಯುಂ
ನನ್ನಿಯೊಳಂತೈದು ಹತ್ತು ಹದಿನೈದಕ್ಕಂ
ತನ್ನಯ ನೇಮಕೆ ನೀಡಿಯು
ಉನ್ನತವಾಗೈದೆ ನೀಡಿದಗೆಲ್ಲಿಯ ಶೀಲಂ ೧೦೦

ವ || ಪ್ರಸಾದವೀವ ಗುರುಚರವ ಕೈಯಿಂ ಕೆಲಸವಂ ಕೊಂಬಂಗೆಲ್ಲಿಯದುಂ ಶೀಲಂ

ಕಂ. ಅಕ್ಕಿ ಮೆಣಸಡಕೆ ಬೆಲ್ಲಂ
ಚೊಕ್ಕಟವಹ ಉಪ್ಪು ರಸದ್ರವ್ಯಕೆ ವ್ರತವೇ
ಅಕ್ಕರಿಂ ಬಾಹ್ಯದ ಸೌಕರಿ-
ಯಿಕ್ಕಲದೆ ಇವು ವ್ರತಗಳೆಲ್ಲಿಯವೆಂದಂ ೧೦೧

ವ್ರತವಾವುದೆನಲು ತನ್ನಯ
ಹಿತವಹ ಸ್ವಪ್ನದಿ ತಾಂ [2](ಕೊಳ್ಳದದಂ)[2] ಕೊಂಡಡೆ
ಮಿತಿಯಿಂದಾ ಸೂಕ್ಷ್ಮತನುವು
ಚತುರಿಕೆಯಿಂ ಬಿಟ್ಟಡದು ವ್ರತವೆಂದೆನಿಕ್ಕುಂ ೧೦೨

ಸ್ಥೂಲತನುವಿಂದ ಗ್ರಹಿಸಿದ
ಮೇಲಹ ವ್ರತಕ್ಕೆ ಕೇಡುಂ ಬಂದಾ ಕ್ಷಣದೊಳ್
ಸ್ಥೂಲಾಂಗವನೋಸರಿಸದೆ
ಲೀಲೆಯೊಳಂ ನಿಂದಡದುವೆ ವ್ರತವೆಂದೆನಿಕುಂ ೧೦೩

ಅಂತರಶರಿರದಿ ವ್ರತಮಂ
ಮುಂತಣ ತತ್ಸ್ಥೂಲಶರಿರದೊಳಗಾಚಾರಂ
ಇಂತೀ ಉಭಯಂ ಕೂಡಿಯೆ
ಸಂತತಲಾಚರಿಪ ಭಕ್ತನೇ [3](ಶೀಲಿಗನುಂ)[3] ೧೦೪

---

1. ಕೀತಿಹ (ಇ). 2. ಕೊಳ್ಳುದದುಂ (ಇ). 3. ಸಿರಿಗನುಂ (ಇ).

ಸತ್ಯ ಕ್ಷಮೆ ದಮೆ ಶೌಚಂ
ಕೃತ್ಯಮು ಮಾರ್ದವಂತ[1](ಪಸ್ತ್ಯಾಗಮುಚೌರ್ಯಂ)[1]
ಸಂತುಷ್ಟಿಯಾರ್ಜವ ತಾಂ
ಇಂತೇಕಾದಶಧರ್ಮಶೀಲನೇ ಮುಕುತಂ ೧೦೫

ವ|| ಭಕ್ತಿಯೊಳ್ಕಾಮುವಂ ಅಧರ್ಮದೊಳ್ ಕ್ರೋಧಮಂ ಪೂಜೆಯೊಳ್ ಲೋಭಮಂ ಭಕ್ತಜನದೊಳ್ ಮೋಹವಂ ಕರಣಂಗಳೊಳ್ ಮತ್ಸರವಂ ಮಾಯೆ xxxಳ್ ಮದವಂ ಹುದುಗೊಳಿಸಿ ಷಡ್ವರ್ಗಗಳಂ ಕೆಡಿಸುವಾತನೇ ಶೀಲಿಗಂ. ೧೦೬

ಕಂ. ಇದು ಷಡ್ವರ್ಗ್ಯಕ್ತ ಶೀಲ-
ವದರಿಂ ಕೇಳ್ಸತ್ಯವಚನ ಗುರುಶುಶ್ರೂಷಂ
ಒದಗಿ ವಿಭಾಗಂ ಕ್ಷಮೆ ದಮೆ
ಮುದದನುಗ್ರಹ ದಾನ ಶೀಲ ಸಪ್ತಕ ಕೇಳ್ಳೈ ೧೦೭

ಗುರುಶುಶ್ರೂಷಂ ಕ್ರೋಧಂ
ವರಶೌಚಾಹಾರಲಾಘವಂ ಪ್ರಾಮೋದಂ
ಉರು ಪಂಚನಿಯಮಾಚಾರೊ
[2](ಪ್ಪಿರೆಯದು)[2]ಶೀಲಂ ಇದರೊಳೊರ್ತಿಪನೆ ದೈವಂ ೧೦೮

ವ|| ಅತ್ಯಂತ ಮಹಿಮೆಯನುಳ್ಳ ಚಿತ್ಪರಮಾನಂದಜ್ಞಾನಸಂಗವನುಳ್ಳ ಸಕಲ ಸುಜನಸೇವ್ಯವಪ್ಪಮುಕ್ತಿದಾಯಿಯಾದ ಪ್ರಾಣಲಿಂಗೈಕ್ಯಧರ್ಮವಪ್ಪ ಶ್ರೀವೀರಶೈವಾಗಮೋಕ್ತವಪ್ಪ ಶಿವಯೋಗಿಯ ಧರ್ಮಮಂ ಸಕಲಜನಹಿತಾರ್ಥಮಾಗಿ ಪೇಳಿದೆವು ಈ ವೀರಶೈವಾಚಾರಧರ್ಮಕ್ಕಂ ಸಾದೃಶ್ಯವಾದ ಧರ್ಮವಿಲ್ಲಂ ಎಲೆ ಕುಮಾರ ನೀಂ ಪ್ರಾಜ್ಞವುಳ್ಳವನಾಗಿ ಶರಣಸತಿ ಲಿಂಗಪತಿಯೆಂಬ ವ್ರತವುಳ್ಳವನಾಗಿ ಲಿಂಗಾಂಗಸ್ಥಲದ ಸಂಬಂಧವನು ಬಲ್ಲ ಶಿವೈಕ್ಯನಾಗಿ ನಿನ್ನ ಶಿಷ್ಯಸಮೇತವಾಗಿ ಈ ವೀರಶೈವಧರ್ಮದೊಳ್ ನಡೆದು ನಿನ್ನ ಶಿಷ್ಯರ ಕೈಯಿಂದಲು ನಡೆಸಿ ತೋರಿ ಭೂಲೋಕವಲ್ಲಿ ಈ ವೀರಶೈವವಂ ಪ್ರತಿಷ್ಠೆಯಂ ಮಾಡುವುದುಂ ಇಂತೀ ವೀರಶೈವಾಚಾರಪ್ರತಿಷ್ಠೆಯುಂ ಸಕಲ[6](ಜಗತ್ತಿನೊಳು)[6] ಸ್ಥಿರವಾಪ ಪ್ರತಿಷ್ಠೆಯಹುದುಂ ಈ ವೀರಶೈವಾಗಮೋಕ್ತಶಿವಧರ್ಮಮಂ ವಿಶ್ವಾಸದಿಂ ಪ್ರತಿಷ್ಠೆಮಾಡುವವಂ ಮಾಹೇಶ್ವರ[4](ರಕ್ಷೆಗೆ)[4] ಪಾತ್ರಂ ಶ್ರೀಸದಾಶಿವನ ಪದವಂ ಪಡೆವಂ ಈ ವೀರಶೈವಧರ್ಮಪ್ರತಿಷ್ಠೆಗಾಗಿ ಪ್ರಾಣವ ಬಿಟ್ಟ ಭಕ್ತಂ ಶಿವ ಪ್ರಸಾದದಿಂ ಶಿವಗಣಂಗಳಿಗೊಡೆಯನಪ್ಪಂ ಈ ವೀರಶೈವಮಂ ಪ್ರಕಟಮಾಡಿದಾತನೆ ಲಿಂಗಾಂಗಧಾರಿಯೆನಿಸುವಂ ಈ ವೀರಶೈವಧರ್ಮಮಂ ಪ್ರಸಿದ್ಧಿಮಾಡುವಾತನೆ ಕೃತಾ

1. ಪಸ್ತ್ಯಾಗಜಚರ್ಯ (ಇ). 2. xxx (ಇ) 3. ಜಗತ್ತು (ಇ). 4. ರಕ್ಷೆ (ಇ).

ರ್ಥಂ ಸಕಲಪುರಾಣೋಕ್ತವಾದ ವೇದಸಮ್ಮತವಾದ ಆಗಮಾರ್ಥಾನ್ವಿತವಾದ ಈ ವೀರಶೈವಧರ್ಮಾರ್ಥಕಥೆಗಳ ಕೂಡಿಕೊಂಡಿರ್ದ ಈ ವೀರಶೈವಾಗಮೋಕ್ತ ಪ್ರಾಣ ಲಿಂಗಾಂಗಸಂಬಂಧಪ್ರಸಿದ್ಧವಾದ ಕಥೆಗಳ ರಕ್ಷಿಸುವಾತನಿಂದಂ ಮೂರುಲೋಕಂಗಳ್ ರಕ್ಷಿಸಲ್ಪಟ್ಟವಹವುಂ ಆತಂ ಶ್ರೀಸದಾಶಿವನೆಯಹಂ ಮತ್ತಂ ಸಮಸ್ತಮಪ್ಪ ಪ್ರಾಣಲಿಂಗ ಸಂಬಂಧಿಗಳಪ್ಪ ಸದ್ಭಕ್ತರ್ಗೆ ಸುಖಮಂ ಕೊಡುವಾತನಾಗಿ ಶ್ರೀನಂದಿಕೇಶ್ವರ ಮೊದಲಾದ ಗಣಂಗಳಿಗೆ ಪ್ರಿಯನಾಗಿ ಒಪ್ಪುತಿಹಂ ಮತ್ತಂ ಈ ಶಿವಧರ್ಮದ ಪ್ರತಿಷ್ಠೆಯ ಮಾಳ್ಪ ಸಾಮರ್ಥ್ಯವಾಗಿರ್ದುಂ ಪ್ರತಿಷ್ಠೆಯಮಾಡುವುದಕ್ಕುಪೇಕ್ಷೆಯಂ ಮಾಡಿದರೆ ಅಸಿಪತ್ರವನ ವೆಂಬ ಹೆಸರನುಳ್ಳ ನರಕವನೈದುವಂ ಅದುಕಾರಣಂ ಪ್ರಭುವಾಗಿರ್ದಾತಂ ಶಿವಕಥೆಗಳ ವಿಸ್ತರಿಸಲ್ಬಲ್ಲ ಮಹಾಪುರುಷರಂ ಸರ್ವಪ್ರಯತ್ನದಿಂ ರಕ್ಷಿಸುವುದುಂ ಆ ಮಹಾಪುರುಷರ ರಕ್ಷಿಸುವುದರಿಂದೆ ಮರ್ತ್ಯಲೋಕದವರೆಲ್ಲಂ ವೀರಶೈವಾಗಮೋಕ್ತವಾದ ಧರ್ಮತಾತ್ಪರ್ಯ ಮುಳ್ಳವರಹರುಂ ಅದುಕಾರಣಂ ಭಕ್ತಿವಿಶ್ವಾಸಮುಳ್ಳವರಾಗಿ ಸಮಸ್ತಭಾವದಿಂದಂ ಶ್ರೀವೀರಶೈವಾಗಮ ಬಲ್ಲವರಾಗಿಯುಂ ಶಿವಲಿಂಗಾರ್ಚನೆಯಲ್ಲಿ ತಾತ್ಪರ್ಯಮುಳ್ಳ ಮಾಹೇಶ್ವರರಂ ರಕ್ಷಿಸುವುದೆಂದು ಪೇಳ್ದು ಚಿತ್ಪರಮಲಿಂಗದ ಸಂಗದ ಪರಮಾನಂದ ಸುಖದೊಳ್ ಸಿದ್ಧಲಿಂಗೇಶ್ವರನೊಪ್ಪುತ್ತಿರಲ್ ಶಿಷ್ಯಂ ಹರ್ಷಾಬ್ಧಿಯೊಳ್ ಮುಳುಗಿ ಕೊಂಡಾಡುತ್ತಿರ್ದನದೆಂತೆಂದೊಡೆ- ೧೦೯

ಚ. ಮಾ. ವೃ.

ನಿರವಯ[1](ನಿಃ)[1]ಕಲಂಕ ನಿರಜಾನ್ವಿತ ನಿರ್ಮಳ ನಿರ್ವಿಕಾರನುಂ
ಉರುನಿರಹಂ ನಿರಾಕುಳ [2](ನಿರಾಗ)[2] ನಿಗರ್ವಿ ನಿರಾಶ್ರಯಾನಿತ್ಯಂ
ನಿರುಪಮ ನಿರ್ಗುಣಾಂಕ ನಿರವಂದ್ಯ ನಿರಾಧರ ನಿರ್ಮಯಾನ್ವಿತಂ
ನಿರಸ ನಿರೂಪ ಸಿದ್ಧ ಶಿವತತ್ತ್ವಸರೂಪನೆ ಪಾಲಿಸೆಂದನುಂ ೧೧೦

ಮುಕುರದ ಬಿಂಬದಂತೆ ಸುರಚಾಪತಟಿಲ್ಲತೆ ವಾರಿಕಲ್ಲಿನೊಳ್
ಪ್ರಕಟಿಪ ಭಾವದಂತೆ ಘನದೊಡ್ಡಣೆಯಂತೆ ಮರೀಚಿಯಂತೆಯುಂ
ಸಕಲವು ನಿಷ್ಕಲಾಂಶ ಪರಿಪೂರ್ಣ ಚಿದಾಮೃತ ಮಂತ್ರರೂಪದಿಂ
ಅಕುಟಿಲದಿಂ ಪ್ರಕಾಶಿಸುವ ಸಿದ್ಧಸದಾಶಿವರೂಪಪಾಹಿಮಾಂ ೧೧೧

ಮೌಕ್ತಿಕಗಂಧಕಸ್ತೂರಿಯು ಕರ್ಪೂರಮುಖ್ಯವು ತೋರುವಂತೆಯುಂ
ವ್ಯಕ್ತಮದಾಗಿ ಹಸ್ತದೊಳು ದೃಷ್ಟಿಗೆ ಕಾಣಿಪ ಯಿಷ್ಟಲಿಂಗಸು-
ವ್ಯಕ್ತಮದಾದ ಭಾಸುರ ಮಹೇಶ್ವರರೂಪಿನ ಸಿದ್ಧಲಿಂಗನೀಂ
ಭಕ್ತಿಯ ಮಾರ್ಗವಿತ್ತು ಪರಿರಕ್ಷಿಸಿದಾತನೆ ಎಂದು [3](ಬಾಗಿದಂ)[3] ೧೧೨

1. ದುಃ (ಇ). 2 ನಿರ್ಮ (ಇ) 3. ವಂದ್ಸಿದಂ (ಇ) * ಈ ಪದ್ಯವಾಗಲಿ ಕೊನೆಯ ಗದ್ಯವಾಗಲಿ 'ಇ' ಪ್ರತಿಯಲ್ಲಿಲ್ಲ

ಪರಮೇಶಂ ಗಿರಿಶಂ ಸುಧಾಕರಧರಂ ಕಾಲಕಂ ಠಂತಶಂಕರಂ
ಉರುಗೇಂದ್ರಾಭರಣಂ ವಿನಾಯಕಪಿತಂ ಗಂಗಾಧರಂ ಕಾಮಸಂ
ಹರಸೌಖ್ಯಾಕರರಕ್ಷಿಕೆಮ್ಮನಸು ಭೂತೇಶಂ ವಿಲಾಸಾಸ್ಪದಂ
ಶರಣಪ್ರೇಮಜಟಾಧರಂ ಪುರಹರಂ ಭರ್ಗಂ ಶಿವಾವಲ್ಲಭಂ ೧೧೩

ಗದ್ಯ : ಇದು ಸುರಗಣಮಣಿಮುಕಟರಚಿತದ್ಯುಮಣಿಪ್ರಭಾಧಿಕ್ಯಮಾಣಿಕ್ಯದ್ಯುತಿ ಪುಂಜಮಂಜುಲರಂಜಿತಸಂಪಚ್ಚರಣನೆನಿಪ ಭೂತೇಶ್ವರಶ್ರೀಪಾದಪಯೋಜಮಕರಂದ ರೋಲಂಬಮಾನ ಚಿನ್ನವೀರೇಶ್ವರವರಜಂಗಮದೇವ ವಿರಚಿತಮಪ್ಪ ಷಟ್ಸ್ಥಲವಲ್ಲಭ ಮಹಾಪ್ರಬಂಧದೊಳ್ ಸಿದ್ಧೇಶ್ವರಂ ಜಗದ್ಧಿತಾರ್ಥವಾಗಿ ಸ್ವಶಿಷ್ಯಬೋಧಕಥನ ನವ ಮಾಶ್ವಾಸಂ ಸಮಾಪ್ತಂ.

—ಸಮಾಪ್ತಂ—

# ಪದ್ಯಗಳ ಅಕಾರಾದಿ

# ಕಠಿಣ ಶಬ್ದಾರ್ಥಕೋಶ

## ಆಶ್ವಾಸ-೧

| | ಪದ್ಯಸಂಖ್ಯೆ |
|---|---|
| ಶೈಲೇಂದ್ರ ಪುತ್ರಿ—ಪಾರ್ವತಿ | ೧ |
| ಹೇರಂಬತಾತ—ಶಿವ | ೧ |
| ವಾಸಂತ—ವಸಂತ ಸಂಬಂಧಿ | ೧ |
| ಭೂತೇಶ—ಶಿವ | ೧ |
| ಹೈಮಾದ್ರಿಕನ್ಯಾ—ಪಾರ್ವತಿ | ೨ |
| ವಾರಾಶಿ—ಸಮುದ್ರ | ೨ |
| ಕ್ಷ್ಮಾ—ಭೂಮಿ | ೨ |
| ಗೌರ—ಬಿಳುಪು | ೩ |
| ಚಂದ್ರಾಂಕವಕ್ಷ—ಚಂದ್ರನ ಗುರುತುಳ್ಳ ಎದೆ | ೩ |
| ಬ್ರಧ್ನ—ಸೂರ್ಯ | ೫ |
| ಭರ್ಗ—ಶಿವ | ೫ |
| ಹೃದ್ರಂಧ್ರ—ಹೃದಯವೆಂಬ ರಂಧ್ರ | ೫ |
| ವಚ—ಮಾತು | ೬ |
| ಮಾಕಂದ—ಸಿಹಿಮಾತು | ೯ |
| ಜಸ—ಯಶಸ್ಸು | ೧೧ |
| ಜೂದು—ಜೂಜು | ೧೫ |
| ವಳಿ—ತೆರೆ, ತರಂಗ | ೧೬ |
| ಅಳಿಕಾಕ್ಷ—ಶಿವ | ೧೭ |
| ಷಟ್‌ಸ್ಥಲ—ಭಕ್ತಮಹೇಶಾದಿ ಆರುಸ್ಥಲ | ೧೮ |
| ಮೇಖಲೆ—ಡಾಬು | ೨೦ |
| ಪಾರಾವಾರ—ಸಮುದ್ರ | ೨೦ |
| ಅಪಾಂಪತಿ—ಸಮುದ್ರ | ೨೧ |
| ನೌಕುಲ—ನೌಕಾಸಮೂಹ (?) | ೨೧ |
| ಜಲಮರ್ತ್ಯರ್—ನೀರುಮನುಷ್ಯ | ೨೧ |
| ಭೂಜಬಿಳಿಲ್—ಗಿಡಗಳ ಬಿಳಿಲು | ೨೪ |
| ನೀಳರೆ—ನೀಳವಾದ ಬಂಡೆ | ೨೪ |
| ಪರುಷದರೆ—ಪರುಷದಕಲ್ಲು (ಸ್ಪರ್ಶಶಿಲೆ) | ೨೭ |
| ನಿಶೇಶಾಶ್ರಯ— | ೨೮ |
| ಅಭಯಫಲ—ಅಳಲೆಕಾಯಿ | ೩೯ |
| ಉನ್ನಿಸು—ಯೋಚಿಸು | ೪೨ |
| ಪಳದಿ—ಪಣತ(?) ಒಂದು ಬಗೆಯ ಕಣಜ | ೫೦ |
| ಕುತ್ತ—ರೋಗ, ತೊಂದರೆ, ವಿಪತ್ತು | ೫೧ |
| ಅರನೇರಿಲು—ರಾಜಮಾನ್ಯನೇರಿಳೆ ಜಂಬುನೇರಿಳೆ | ೬೦ |
| ಉದ್ಯಾವನ—ಉದ್ಯಾನವನ | ೬೭ |
| ಬತ್ತಳ—ಬತ್ತಳಿಕೆ | ೬೭ |
| ಕುಲಾಲ—ಕುಂಬಾರ | ೬೭ |
| ಅಮಳ್ವಕ್ಕಿ—ಚಕ್ರವಾಕ | ೬೯ |
| ಜೇವಡಿಸಿ—ಝೇಂಕಾರಮಾಡಿ | ೭೦ |
| ಮಲ್ಲಿಕಾಕ್ಷ—ಬಿಳಿಯ ಕಣ್ಣಿನ ಹಂಸ | ೭೩ |
| ಧೃತರಾಷ್ಟ್ರ—ಹಂಸದಲ್ಲಿ ಒಂದು ಜಾತಿ | ೭೩ |
| ಕಿರುದೊರೆ ಚಿಕ್ಕ ತೊರೆ | ೭೩ |
| ಸಂದಣಿ—ಸಮೂಹ | ೭೩ |
| ನಸುರ್—ಸೊನೆ | ೭೩ |
| ಹೊದ್ದದಿರ್—ಬರಬೇಡ | ೭೩ |
| ಕಳಮು—ಬತ್ತ | ೭೪ |
| ಉತ್ತಳಿಕೆ—ಮೇಲ್ಮುಖನಾದ ಹಂಬು(?) | ೭೪ |
| ಚೀರ—ರೇಶ್ಮೆಬಟ್ಟೆ | ೭೪ |
| ಉಚ್ಚಾವಚ—ಮೇಲುಕೀಳು | ೭೫ |
| ಪಾಮರಿ—ಹೊಲಕಾಯುವ ಹುಡುಗಿ | ೭೭ |
| ಪದ್ಮಾಕರ—ಸರೋವರ | ೭೮ |
| ತಣ್ಣದಿರ—ಚಂದ್ರ | ೭೯ |
| ಹಿಮಾಂಬು—ತಣ್ಣೀರು | ೭೯ |
| ಬಿಂಬ—ತೊಂಡೆಹಣ್ಣು | ೮೦ |
| ನಿಃಕಂಪನ—ಅಲ್ಲಾಡದೆ ಇರುವ | ೮೨ |
| ಎಳಗ—ಟಗರು | ೮೩ |
| ಆಳ್ವೇರಿ—ಕೋಟೆ ಗೋಡೆ | ೮೬ |
| ಸೌಧ— ಉಪ್ಪರಿಗೆಮನೆ | ೮೭ |
| ಛವಿ—ಕಾಂತಿ | ೮೮ |
| ಪುತ್ಸ್ನ—ರನ್ನದ ಅಂಗಡಿ (?) | ೮೮ |
| ಪಸರ—ಅಂಗಡಿ | ೮೯ |
| ಧನಪತಿ—ಕುಬೇರ | ೯೦ |

| | ಪದ್ಯಸಂಖ್ಯೆ |
|---|---|
| ಸುರಪ—ಇಂದ್ರ | ೯೨ |
| ಸುಧಾಕರ—ಚಂದ್ರ | ೯೭ |
| ವೀತಿಹೋತ್ರ—ಅಗ್ನಿ | ೯೮ |
| ಮಾಠರ—ಸೂರ್ಯನ ಸೇವಕ | ೯೮ |
| ಬಿಡೌಜ—ಇಂದ್ರ | ೧೦೦ |
| ತ್ರಿವಾರ—ಮೂರು ಸಲ | ೧೦೦ |
| ಲತಾಂತ—ಹೂವು | ೧೦೦ |
| ಎರೆಯ—ಒಡೆಯ | ೧೦೧ |
| ಮಗುಳ್ಚು—ತೇಯು | ೧೦೨ |
| ಗಟ್ಟಿವಳ್ತಿ—ಗಂಧ ತೇಯುವವಳು | ೧೦೩ |
| ವೀಧಿ—ಬೀದಿ | ೧೦೪ |
| ಮಂಜೀರ—ನೂಪುರ. ಪೈಜಣ | ೧೦೫ |
| ಕಾಂಚಿದಾಮ—ನಡುವಿನಪಟ್ಟಿ | ೧೦೬ |
| ಓಜೆ—ಕ್ರಮ | ೧೦೭ |
| ತಿಂತಿಣಿ—ಸಮೂಹ | ೧೦೮ |
| ರಜತಾದ್ರಿ—ಕೈಲಾಸಪರ್ವತ | ೧೦೮ |
| ಅರ್ಣವಭವ—ನೀರು | ೧೦೯ |
| ಅಂತರಾಳ—ಅಂತರಂಗ, ಒಳಭಾಗ | ೧೧೦ |
| ಅಂಬುಜಪತ್ರನೇತ್ರೆ—ಕಮಲದ ದಳದಂತೆ ಕಣ್ಣುಳ್ಳವಳು | ೧೧೧ |
| ಕಂಬು—ಶಂಖ | ೧೧೧ |
| ಸತ್ತಿಗೆ—ಛತ್ರಿ | ೧೧೧ |
| ಉರೋಜ—ಮೊಲೆ | ೧೧೨ |
| ವಂಗಡ—ಸಮೂಹ | ೧೧೨ |
| ಮದೇಭಗತಿ—ಮದ್ದಾನೆಯ ನಡಿಗೆ | ೧೧೩ |
| ಪೊಂದಾಳ—ಬಂಗಾರದ ತಾಳ | ೧೧೩ |
| ಚೆಳ್ವಾಳಿ—ಚೆಲುವಾದ ದಾಸಿ | ೧೧೩ |
| ಔಘ—ಸಮೂಹ | ೧೧೩ |
| ಮುರಜೆ—ವಾದ್ಯವಿಶೇಷ | ೧೧೪ |
| ಮೌರಿ—ವಾದ್ಯವಿಶೇಷ | ೧೧೪ |
| ನಿಸ್ಸಳ—ವಾದ್ಯವಿಶೇಷ | ೧೧೪ |
| ಕೆಂಬವಳ—ಕೆಂಪುಹವಳ | ೧೧೬ |
| ಕಟಿಸೂತ್ರ—ಉಡುದಾರ | ೧೧೭ |
| ಕಿಂಕಿಣಿ—ಗೆಜ್ಜೆ | ೧೧೭ |
| ಸುಲಿಪಲ್—ಬಿಳಿಹಲ್ಲು | ೧೧೮ |
| ಜಾನಿಸು—ಧ್ಯಾನಿಸು | ೧೧೮ |
| ವ್ರಜ—ಸಮೂಹ | ೧೧೮ |
| ಯೂಥ—ಸಮೂಹ | ೧೧೮ |
| ಕರುವಿಟ್ಟು—ಅಚ್ಚೊತ್ತು, ಎರಕಹೊಯ್ | ೧೧೮ |
| ಮಾನಖಂಡನ—ಇತರರ ತೇಜೋಭಂಗ ಮಾಡುವಿಕೆ | ೧೧೮ |
| ಅರ್ಥಖಂಡನ—ಇತರರ ಅರ್ಥವನ್ನು ನಿರಾಕರಿಸುವುದು | ೧೧೮ |
| ಜಕ್ಕವಕ್ಕಿ—ಚಕ್ರವಾಕಪಕ್ಷಿ | ೧೧೮ |
| ಕರಾಬ್ಜ—ಕಮಲದಂಥ ಕೈ | ೧೧೮ |
| ಚಾಮರಗ್ರಾಹಿಣಿ—ಚಾಮರ ಬೀಸುವವಳು | ೧೧೮ |
| ಅಗಿಲು—ಪರಿಮಳ | ೧೧೮ |
| ದೇವಾಂಗ—ರೇಷ್ಮೆಬಟ್ಟೆಯಲ್ಲಿ ಒಂದು ಬಗೆ | ೧೧೮ |
| ಸೀಸಕ—ಶೀರ್ಷಕ, ತಲೆಗೆ ಹಾಕುವ ಟೊಪ್ಪಿಗೆ | ೧೧೮ |
| ವೇತ್ರ—ಬೆತ್ತ | ೧೧೮ |
| ಜಸ—ಯಶ | ೧೧೮ |

## ಅಧ್ಯಾಯ—೨

| | |
|---|---|
| ಶರ್ವ—ಶಿವ | ೧ |
| ಭೂತೇಶ—ಶಿವ | ೧ |
| ಸ್ಕಂದ—ಷಣ್ಮುಖ | ೨ |
| ಚರಸದ್ಭಕ್ತ—ಜಂಗಮಭಕ್ತ | ೨ |
| ಷಡಂಗ—ಭಕ್ತಮಹೇಶಾದಿ ಆರು ಅಂಗಗಳು | ೪ |
| ಕೇತರ—ಕೇದಾರ | ೬ |
| ತುಂಗ—ಎತ್ತರದ | ೭ |
| ಮರ್ದಿಸು—ತೀಡು | ೭ |
| ಪಿನಾಕಪಾಣಿ—ಶಿವ | ೭ |
| ಕರಕಂಜಜ—ಶಿಷ್ಯ | ೮ |

| | ಪದ್ಯಸಂಖ್ಯೆ |
|---|---|
| ಕಾಲಕಂಧರ—ಶಿವ | ೧೩ |
| ಅರ್ಭಕ—ಶಿಶು, ಭ್ರೂಣ | ೧೩ |
| ತ್ರಿದಶಾನೀಕ—ದೇವತೆಗಳ ಸಮೂಹ | ೧೩ |
| ದುಗ್ಧ—ಹಾಲು, ಅಮೃತ | ೧೩ |
| ಹರನಕ್ಷಿ—ರುದ್ರಾಕ್ಷಿ | ೧೭ |
| ಬಹಿಷ್ಕರಿಸಿ—ಹೊರಗುಗೊಳಿಸಿ | ೧೮ |
| ಮುಕುಳಿತ—ಮುಗಿದ | ೧೮ |
| ವೇದಿಕೆ—ಜಗುಲಿ | ೧೮ |
| ವಿದ್ರುಮ—ಹವಳ | ೧೮ |
| ಪದ್ಮ—ಕಮಲ | ೧೮ |
| ಕುಶ—ದರ್ಭೆ | ೧೮ |
| ದುರ್ವೆ—ಗರಿಕೆ | ೧೮ |
| ಆಮ್ರ—ಮಾವು | ೧೮ |
| ಸುಮನ—ಹೂವು | ೧೯ |
| ರಜತಾದ್ರಿ—ಬೆಳ್ಳಿಬೆಟ್ಟ, ಕೈಲಾಸ | ೧೯ |
| ಜವ—ಶೀಘ್ರ, ತ್ವರಿತ | ೨೦ |
| ವಿಶ್ವಪದ—ಜಗದ್ರಕ್ಷಕಪದವಿ | ೨೦ |
| ಕರಣಗುಣ—ಇಂದ್ರಿಯಗುಣ | ೨೦ |
| ನಿಃಕಲ—ನಿಷ್ಕಲ, ಚಿಹ್ನೆಯಿಲ್ಲದ | ೨೨ |
| ಸತ್ಕಲ—ಕಲಾಸಮೇತವಾದ | ೨೨ |
| ವಿಧುಮಂಡಲ—ಚಂದ್ರಮಂಡಲ | ೨೩ |
| ಕಂಜ—ಕಮಲ | ೨೩ |
| ಸೂರ—ಸೂರ್ಯ | ೨೩ |
| ಸುಧಾಕರ—ಚಂದ್ರ | ೨೪ |
| ಓರೆಯುಪ್ಪ—ದೂರ ಸರಿಯುವ | ೨೫ |
| ಬೆಚ್ಚೊತ್ತು—ಅಚ್ಚೊತ್ತು | ೨೭ |
| ಕುಕ್ಕುಟ—ಕೋಳಿ | ೨೮ |
| ಸೆಜ್ಜೆ—ಬುಟ್ಟಿ | ೨೮ |
| ತಾರಕಾಳಿ—ನಕ್ಷತ್ರಸಮೂಹ | ೨೯ |
| ಪೊಣ್ಮು—ಹೊರಹೊಮ್ಮು | ೨೯ |
| ಲಾಗು—ಸೂಟಿ (?) | ೩೦ |
| ಪ್ರಭಾತ—ಬೆಳಗು | ೩೦ |
| ಪಡ್ಡಳಿ—ಕಣಗಿಲು | ೩೦ |
| ಜಾತಿ—ಜಾಜಿ | ೩೦ |
| ನಿವಹ—ಸಮೂಹ | ೩೦ |

| | ಪದ್ಯಸಂಖ್ಯೆ |
|---|---|
| ಮುಗುಳ್—ಮೊಗ್ಗು | ೧೩ |
| ಪ್ರಸೂನ—ಹೂವು | ೩೦ |
| ಪಾದರಿ—ಪಾದರಿಪುಷ್ಪ | ೩೦ |
| ಮೊಲ್ಲೆ—ಮಲ್ಲಿಗೆ | ೩೦ |
| ತಿಂತಿಣಿ—ಸಮೂಹ | ೩೦ |
| ಜಾಲ—ಸಮೂಹ | ೩೦ |
| ಸಂಚಯ—ಸಮೂಹ | ೩೦ |
| ದೂರ್ವಾಂಕುರ—ಗರಿಕೆ | ೩೦ |
| ತಿರಿ—ಸಂಗ್ರಹಿಸು | ೩೨ |
| ಅಳಿಮನ—ಕೆಟ್ಟಮನಸ್ಸು | ೩೭ |
| ಸುರಭಿ—ಸುಗಂಧ | ೩೭ |
| ತೊಂಗಲು—ಗೊಂಚಲು | ೩೮ |
| ಪ್ರಮುದಿತ—ಸಂತೋಷಗೊಂಡ | ೪೨ |
| ನಳಿನಗುಣ—ಕಮಲದ ದೇಟದನಾರು | ೪೩ |
| ಗೊಂದಣ—ಸಮೂಹ | ೪೩ |
| ದ್ವಿರದಾಜಿನ—ಆನೆಯ ಚರ್ಮ | ೪೭ |
| ಗುರುಕುಲಾಬ್ಧಿಚಂದ್ರ—ಗುರುಕುಲವೆಂಬ ಸಮುದ್ರಕ್ಕೆ ಚಂದ್ರ | ೫೪ |
| ನೀಲಕಂಧರ—ನೀಲಕಂಠ-ಶಿವ | ೫೫ |
| ಗರಟ್ಟ—ಪುಡಿಮಾಡುವವ, ನಾಶಮಾಡುವವ | ೫೬ |
| ಕಾಮಧುಗ—ಕಾಮಧೇನು | ೫೭ |
| ದ್ವೈತೇಭಪಂಚಾನನ—ದ್ವೈತವೆಂಬ ಆನೆಗೆ ಸಿಂಹದಂತಿರುವವ | ೫೯ |
| ಭಕ್ತ್ಯಬ್ಧಿಸುಧಾಮಯೂಖ—ಭಕ್ತಿಯೆಂಬ ಸಮುದ್ರಕ್ಕೆ ಚಂದ್ರನಂತಿರುವ | ೫೯ |
| ಶರಜನ್ಮ—ಷಣ್ಮುಖ | ೬೦ |
| ಅಗಜೇಶ—ಶಿವ | ೬೩ |
| ಲಾಂಛನ—ಚಿಹ್ನೆ | ೬೭ |
| ಬಿಣ್ಪು—ಭಾರ, ತೂಕ | ೬೮ |
| ಸಫರ—ಮೀನು | ೬೮ |
| ಬಲುಹು—ಸಾಮರ್ಥ್ಯ | ೬೯ |
| ಈಶಾನ—ಶಿವ | ೭೦ |
| ವಿಶ್ವಂಭರ—ಭೂಮಂಡಲ | ೭೦ |
| ಅರತು—ಬತ್ತಿ | ೭೦ |

| ಪದ್ಯಸಂಖ್ಯೆ | |
|---|---|
| ಮಕುಟ—ಕಿರೀಟ | ೭೨ |
| ಕೀಚಕ—ಬಿದಿರು | ೭೨ |
| ಕರ್ಪರ—ಕಪ್ಪರ, ಚಿಪ್ಪು, ತಲೆಬುರುಡೆ | ೭೨ |
| ಅಕ್ಷಮಾಲೆ—ರುದ್ರಾಕ್ಷಿ | ೭೨ |
| ನಾಗವೇತ್ರ—ಬಿದುರಿನ ಕೋಲು | ೭೩ |
| ರಜತ—ಬೆಳ್ಳಿ | ೭೪ |
| ವಿಧೂಳಿತ—ಉದ್ಧೂಳಿತ | ೭೫ |
| ಧಾಮು—ಸ್ಥಾನ | ೭೫ |
| ಭದ್ರು—ಮಂಗಳ | ೭೬ |
| ಖಡ್ವಾಂಗ—ಶಿವನ ಒಂದು ಆಯುಧ (ತುದಿಯಲ್ಲಿ ತಲೆಬುರಡೆಯುಳ್ಳದ್ದು) | ೭೬ |
| ಚೌಸೀತಿ—ಎಂಬತ್ತನಾಲ್ಕು | ೭೬ |
| ಪಟ್ಟುವಸ್ತ್ರ—ರೇಷ್ಮೆಜರಿಯುಬಟ್ಟೆ | ೭೬ |

| ಪದ್ಯಸಂಖ್ಯೆ | |
|---|---|
| ಸಿಂಗರಂಬೆತ್ತ—ಶೃಂಗಾರಗೊಂಡ | ೭೬ |
| ಹಟ್ಟಿಕೊಟ್ಟಂಗಳ್—ಹಳ್ಳಿಪಳ್ಳಿಗಳು | ೮೦ |
| ಬಟ್ಟಪಾವಡೆ—ದುಂಡಾಗಿಸುತ್ತಿದ ರುಮಾಲು | ೮೩ |
| ಪಾವಡೆ—ಕುಂಡಲ ? | ೮೫ |
| ಹದಹು—ವಿಸ್ತಾರ, ಹರಡು | ೮೭ |
| ಪಾಳಯು—ಬಿಡಾರ | ೯೪ |
| ಷಡ್ರಸಾನ್ನ—ಹುಳಿ, ಉಪ್ಪು, ಕಾರ ಒಗರು, ಸಿಹಿ, ಕಹಿ ಎಂಬ ಆರು ತರದ ರುಚಿಯ ಅನ್ನ | ೯೪ |
| ಜಟಾಪಟಲ—ಜಡೆ | ೯೬ |
| ನಿಚಯ—ಸಮೂಹ | ೯೬ |
| ಕಾಲಾಂತಕ—ಶಿವ | ೯೬ |

## ಅಧ್ಯಾಯ—೪

| | |
|---|---|
| ಶ್ರೀವರ—ವಿಷ್ಣು | ೧ |
| ಸಾವಿರದಲೆಗ—ಆದಿಶೇಷ | ೧ |
| ಕಟಕು—ಕರ್ಣಕುಂಡಲ | ೧ |
| ಗೇಹ—ಮನೆ | ೩ |
| ಗೋಪದೋಹಿಪ—ಆಕಳನ್ನು ಕರೆಯುವ | ೬ |
| ಕೇತನ—ಮನೆ | ೬ |
| ಗಾಡಿ—ಸಂಭ್ರಮ | ೮ |
| ಉಗ್ರಾಕ್ಷ—ಶಿವ | ೧೧ |
| ಉದಗ್ರ—ಎತ್ತರದ, ಶ್ರೇಷ್ಠ | ೧೨ |
| ಬಿಸಜಸಖ—ಸೂರ್ಯ | ೧೩ |
| ದಶದಿಸೆ—ಹತ್ತುದಿಕ್ಕು | ೧೩ |
| ಅತುಳಾಕಾಶ—ಅನುಪಮವಾದ ಆಕಾಶ | ೧೪ |
| ಶಶಿ—ಚಂದ್ರ | ೧೫ |
| ಕರ—ಹೆಚ್ಚಾಗಿ | ೨೦ |
| ಶಾಲ್ಯನ್ನ—ಬತ್ತದ ಅನ್ನ | ೨೫ |
| ಏಲ—ಏಲಕ್ಕಿ | ೨೬ |
| ಆರ್ದ್ರಕ—ಹಸಿ ಶುಂಠಿ | ೨೬ |
| ತಳುವು—ತಡ | ೨೭ |
| ವಿಧುಧರ—ಶಿವ | ೨೮ |

| | |
|---|---|
| ವಾಲ್ಯ—ದೇವಾಲಯ | ೨೮ |
| ಮಾರಾರಿ—ಶಿವ | ೩೨ |
| ಲಂಘಿಸು—ದಾಟು-ಹಾರು | ೩೪ |
| ಬಿಲಾಂತ—ಬಿಲದಕೊನೆ | ೩೪ |
| ಗಂಡೂಷಿಸು—ಬಾಯಿಮುಕ್ಕಳಿಸು | ೩೫ |
| ತಮ್ಮಡಿ—ಪೂಜಾರಿ | ೩೬ |
| ಪಂಚಗವ್ಯ—ಗೋಸಂಬಂಧದ ಐದು ದ್ರವ್ಯಗಳು | ೪೫ |
| ಅಪ್ರತಿಮ—ಅಸಮಾನ | ೪೮ |
| ಭಾವಜಹರ—ಶಿವ | ೪೯ |
| ದಿಷ್ಣ್ಯಪತಿಧರ—ಶಿವ | ೫೮ |
| ಪ್ರಾದೇಶಿ—ಪರದೇಶಿ | ೫೩ |
| ಎತಿ—ಯತಿ | ೫೬ |
| ವನಜಾಕ್ಷ—ವಿಷ್ಣು | ೫೭ |
| ಬಲೀಶ—ಬಲಿಚಕ್ರವರ್ತಿ | ೫೭ |
| ಬಾಳಂಬಕ—ಶಿವ | ೫೮ |
| ಕಾಳಾಹಿತಲ್ಪ—ವಿಷ್ಣು | ೫೮ |
| ವಿಯದ್ಗಂಗೆ—ಆಕಾಶಗಂಗೆ | ೫೮ |
| ಸ್ವರ್ನದಿ—ಗಂಗೆ | ೫೮ |

ಪದ್ಯಸಂಖ್ಯೆ

ಸುರದೀರ್ಘಿಕೆ—ಗಂಗಾನದಿ ೫೮
ಮಂಡೂಕ—ಕಪ್ಪೆ ೫೮
ಗಂಗಾಕ—ಶಿವ ೫೮
ಅಂಗುಲಿವಶಕ—ಹತ್ತುಬೆರಳುಗಳು ೬೦
ತೃಣಾಗ್ರಬಿಂದು—ಹುಲ್ಲುಗರಿಯ ಮೇಲಿನ ನೀರು ೬೨
ಶ್ರುತಿಮತ—ವೇದಮತ ೬೩
ತವ—ನಿನ್ನ ೬೩
ವರ್ಜಿತ—ಬಿಡಲ್ಪಟ್ಟ ೬೩
ಕಲತ್ರ—ಹೆಂಡತಿ ೬೩
ವಿಧಿ—ಬ್ರಹ್ಮ ೬೫
ಅಧೋಕ್ಷಜ—ಬ್ರಹ್ಮ ೬೫
ಅದಿತಿ—ಕಶ್ಯಪನ ಹೆಂಡತಿ, ದೇವತೆಗಳ ತಾಯಿ ೬೬
ಉಪಹತಿ—ನಾಶ ೬೬
ಮುಸಲ—ಒನಕೆ ೬೬
ಬಾಲಿ—ವಾಲಿ ೬೬
ತೊವಲ್—ಚರ್ಮ ೬೬
ವಿಷ್ವಕ್ಸೇನ—ವಿಷ್ಣು ೬೬
ಉರಿಲಿಂಗ—ಜ್ಯೋತಿರ್ಲಿಂಗ ೬೬
ದಾಮೋದರ—ವಿಷ್ಣು ೬೬
ಕವಾಟ—ಬಾಗಿಲು ೬೯
ಪರವಶ—ಎಚ್ಚರದಪ್ಪು ೭೦
ಹೆಮ್ಮಾರಿ—ದೊಡ್ಡಮಾರಿ ೭೧
ಕೆದರ್ದಲೆ—ಕೆದಕಿದತಲೆ ೭೪
ಕದಿರ್ಗಾಲ್—ಸೀರಾದಕಾಲು ೭೪
ಪೊದಮೈರ್—ಹೊದರು ಮೈ ೭೪
ಕೆಂಗದಿರ್—ಕೆಂಪಾದ ಕಿರಣ ೭೪
ರಿಂಗಣಗುಣಿ—ಸುತ್ತುವರಿದು ಕುಣಿ ೭೫
ಉರಗಾನೀಕ—ಹಾವುಗಳ ಸಮೂಹ ೭೬
ಮತ್ತೇಭ—ಮದ್ದಾನೆ ೭೬
ಗೇಹಸ್ತಂಭ—ಮನೆಯ ಕಂಬ ೭೬
ಭಲ್ಲೂಕ—ಕರಡಿ ೭೭

ಪದ್ಯಸಂಖ್ಯೆ

ಜವಳಿಗದ—ಪಡುಕಿನ ಕದ ೭೭
ಪಂಚಾಬ್ದ—ಐದುವರ್ಷ ೭೭
ಗುಣಾವಗುಣ—ಸುಗುಣ ದುರ್ಗುಣ ೭೭
ಸಿಂಗಿ—ಒಂದು ಘೋರವಿಷ ೭೮
ಜೋಗಿ—ಯೋಗಿ ೭೮
ವಚೋವಿಲಾಸ—ಮಾತಿನ ವೈಖರಿ ೭೯
ಬಾಳವಿಲೋಚನ—ಶಿವ ೭೯
ಗತಿಸ್ತಂಭ—ನಡಿಗೆಯಿಲ್ಲದಂತೆಮಾಡುವುದು ೭೯
ವಾಚ್ಯಸ್ತಂಭ—ಮಾತಿಲ್ಲದಂತೆ ಮಾಡುವಿಕೆ ೭೯
ದೃಷ್ಟಿಸ್ತಂಭ—ಕಣ್ಣು ಕಾಣದಂತೆ ಮಾಡುವಿಕೆ ೭೯
ದೈನ್ಯಂಬಡು—ದೈನ್ಯವನ್ನು ತೋರಿಸು ೮೫
ಉಜ್ಜುಗ—ಉದ್ಯೋಗ ೮೮
ನಗ—ಅರಣ್ಯ-ಬೆಟ್ಟ ೮೮
ಪಲ್ಲವ—ಚಿಗುರು ೯೨
ಮೂಲ—ಬೇರು ೯೨
ಬೋಳೈಸು—ಸಂತೈಸು ೯೬
ಪೊನ್ನಾಂಬಲ—ಚಿದಂಬರ ೯೭
ಕೇತಾರ—ಕೇದಾರ ೯೭
ತರಣಿ—ಸೂರ್ಯ ೯೮
ಪಂಕ—ಕೆಸರು ೯೮
ತೃಣ—ಹುಲ್ಲು ೯೮
ಮೇಘರವಾಳಿ—ಮೇಘ ಗರ್ಜನೆಗಳ ಸಮೂಹ ೯೯
ಚಾತಕ—ಚಾದಗೆಪಕ್ಷಿ ೯೯
ದರ್ವೀಕರಧರ—ಸರ್ಪಧರ, ಶಿವ ೧೦೦
ಗೋತ್ರ—ಪರ್ವತ ೧೦೧
ಕ್ಷ್ಮಾಭೃತ್—ಪರ್ವತ ೧೦೧
ಧರಣೀಧರ—ಪರ್ವತ ೧೦೧
ವಿಶ್ವಂಭರಾಭೃತ್—ಪರ್ವತ ೧೦೧
ರಾಚವೀಟಿ—ರಾಚೋಟಿ ೧೦೧
ವಿಷಯವ್ರಜ—ವಿಷಯಸುಖ ಸಮೂಹ ೧೦೧

## ಅಧ್ಯಾಯ—೪

ಪದ್ಯಸಂಖ್ಯೆ

ಗಂಗಾಸಂಗ—ಶಿವ ೧
ಉಮಾಂಗಾಲಿಂಗ—ಶಿವ ೧
ಸಗ್ಗಿಗರು—ದೇವತೆಗಳು ೧
ಬಗ್ಗದೋವಲ್—ಹುಲಿಚರ್ಮ ೨
ಯಮ—ಅಷ್ಟಾಂಗ ಯೋಗದಲ್ಲಿ ಮೊದಲ ಯೋಗ ೩
ಕುಕ್ಕುಟ—ಕೋಳಿ ೩
ಗರುತ್ಮ—ಗರುಡ ೩
ಪದ್ಮಗೋವು—ಒಂದು ಪಸು ಜಾತಿ ೫
ಪೂರಕ—ಪ್ರಾಣಾಯಾಮದಲ್ಲಿ ಉಸಿರು ತೆಗೆದುಕೊಳ್ಳುವುದು ೬
ರೇಚಕ—ಪ್ರಾಣಾಯಾಮದಲ್ಲಿ ಉಸಿರನ್ನು ಹೊರಗೆಬಿಡುವುದು ೬
ಕರಾಂಗುಲೀಸ್ಫುಟನ—ಬೆರಳಿನಿಂದ ಚಿಟಿಕೆ ಹೊಡೆಯುವುದು ೬
ಪ್ರತ್ಯದಹಾರ—ಪ್ರತ್ಯಾಹಾರ ೭
ಜಾನಿಪ—ಧ್ಯಾನಿಸುವ ೮
ಕುಯೋಗ—ಕೆಟ್ಟಯೋಗ ೯
ವಿರಿಂಚಿ—ಬ್ರಹ್ಮ ೯
ಸೃಷ್ಟನ—ಬ್ರಹ್ಮನ ೧೦
ಕಂಜಜ—ಬ್ರಹ್ಮ ೧೨
ಚಮರಿಕ—ಚಮರೀಮೃಗ ೧೨
ಕೌಶಿಕ—ಗೂಬೆ, ಗೂಗೆ ೧೩
ಶುಕ—ಗಿಳಿ ೧೩
ಭಾರದ್ವಾಜ—ಸಂಬಾರಗಾಗೆ ೧೩
ಅಗಸ್ತ್ಯ—ಪಕ್ಷಿವಿಶೇಷ ೧೩
ಕುಜ—ಗಿಡ ೧೪
ಮಾರಣಯಜ್ಞ—ವೈರಿಗಳ ನಾಶಕ್ಕಾಗಿ ಮಾಡುವ ಯಜ್ಞ ೧೬
ಪುಳಿನ—ಮಳಲು ೧೭
ಕಂತು—ಮನ್ಮಥ ೧೭
ನಾಸಿಕದೃಗು—ಮೂಗಿನ ತುದಿಯ ಮೇಲಿಟ್ಟ ದೃಷ್ಟಿ ೨೦

ಪದ್ಯಸಂಖ್ಯೆ

ಆಕುಂಚಿಸಿ—ಒತ್ತಿ ೨೩
ದಂಡವದೃಜು—ಕೋಲಿನಂತೆ ನೆಟ್ಟಗೆ ೨೩
ಕುಂಭಿಸಿ—ತುಂಬಿ ೨೩
ಅನಾರ್ಪಿತ—ಅನರ್ಪಿತ, ಅರ್ಪಣೆ ಮಾಡದ ೨೩
ಪುರ್ವ—ಹುಬ್ಬು ೨೬
ಲೈಂಗಿಕ—ಲಿಂಗ ಸಂಬಂಧದ ೨೬
ಕಣ್ಮಲರ್—ಹೂವಿನಂಥ ಕಣ್ಣು ೨೭
ಚಿದರ್ಕ—ಚಿತ್ತೆಂಬ ಸೂರ್ಯ ೨೭
ದೀಪ್ತಿ—ಪ್ರಕಾಶ ೨೯
ಬೀಸರ—ಅಂತ್ಯ, ಕೊನೆ, ನಾಶ ೨೮
ವಿವರ—ಬಿಲ, ತೂತು ೨೯
ಹೃದ್ಗುಹೆ—ಹೃದಯವೆಂಬ ಗುಹೆ ೩೦
ಪ್ರಥಮಾಹ್ನ—ಮೊದಲಜಾವ ೩೧
ಪಂಚವಿಂಶತಿ—ಇಪ್ಪತ್ತೈದು ೩೨
ದ್ರವಿಸು—ಜಿನುಗಿಸು ೩೩
ಹಿರಣ್ಯ—ಬಂಗಾರ ೩೪
ಅಣಿಮಾದಿ—ಅಣಿಮಾ ಮಹಿಮಾ ಮೊದಲಾದ ಅಷ್ಟ ಸಿದ್ಧಿಗಳು ೩೬
ಪವುರುಷ—ಪೌರುಷ ೪೦
ಕವುಟಿಲ್ಯ—ಕೌಟಿಲ್ಯ ೪೦
ಮಾರ್ಜಾಲ—ಬೆಕ್ಕು ೪೧
ಕಮಠ—ಆಮೆ ೪೧
ವಿಹಂಗ—ಹಕ್ಕಿ ೪೧
ಖಗ—ಹಕ್ಕಿ ೪೧
ವಿಧಿಗ್ರಂಥಿ—ಬ್ರಹ್ಮಗ್ರಂಥಿ ೪೭
ದ್ವಿಶತ—ಇನ್ನೂರು ೫೦
ಷೋಡಶ—ಹದಿನಾರು ೫೦
ಷಟ್‌ತ್ರಿಂಶತ್—ಮುವತ್ತಾರು ೫೦
ಪ್ರಣವೋಹಂ—ಓಂಕಾರವೇ ನಾನು ೫೨
ದೃಕ್—ದೃಷ್ಟಿ, ಕಣ್ಣು ೫೨
ಪೂರ್ಣೀಕರಿಸು—ಪೂರ್ಣ ತುಂಬು ೫೨
ಪಂತಿ—ಹಂತಿ—ಸಾಲು ೫೩

| | ಪದ್ಯಸಂಖ್ಯೆ |
|---|---|
| ಧಾರಣ—ಅಷ್ಟಾಂಗಯೋಗದಲ್ಲಿ ಐದನೆಯ ಯೋಗ, ಧರಿಸುವಿಕೆ | ೫೩ |
| ಚಕ್ರ—ದೇಹದಲ್ಲಿ ಮೂಲಾಧಾರ ಮೊದಲಾದ ನವಚಕ್ರ | ೫೪ |
| ಬೊಮ್ಮ—ಬ್ರಹ್ಮ | ೫೪ |
| ತನುತ್ರಯ—ಸ್ಥೂಲ, ಸೂಕ್ಷ್ಮ, ಕಾರಣವೆಂಬ ಮೂರುದೇಹ | ೫೬ |
| ಅಚಲ—ಅಲ್ಲಾಡದ | ೫೭ |
| ದೃಗು—ದೃಷ್ಟಿ | ೬೦ |
| ಕ್ಷುತ್‌ತೃಷೆ—ಹಸಿವು, ನೀರಡಿಕೆ | ೬೧ |
| ಕರಣ—ಇಂದ್ರಿಯ, ಮನಬುದ್ಧಿ ಚಿತ್ತಾಹಂಕಾರಾದಿ ನಾಲ್ಕು ಇಂದ್ರಿಯಗಳು | ೬೧ |
| ಇಂದ್ರಿಯ—ಜ್ಞಾನ ಮತ್ತು ಕರ್ಮಗಳಿಗೆ ಸಂಬಂಧಿಸಿದ ಹತ್ತು ಇಂದ್ರಿಯಗಳು | ೬೧ |
| ವಾಲ್ಮೀಕ—ಹುತ್ತ | ೬೪ |
| ಬೆನ್ನಡೆಯೆಡೆ—ಬೆನ್ನ ಕಡೆಯ ಭಾಗ | ೬೬ |
| ಹುಲ್ಲೆ—ಜಿಂಕೆ | ೬೭ |
| ಅಹಿ—ಹಾವು | ೬೭ |
| ಕಂಠೀರವ—ಸಿಂಹ | ೬೭ |
| ಬೋಸರಿಸು—ಗುಡಿಸು | ೬೮ |
| ಉನ್ನಿಸು—ಯೋಚಿಸು | ೭೫ |
| ಹಿಸ್ಸಿತು—ಬಾಯಿಬಿಟ್ಟಿತು | ೭೬ |
| ತೆಡದಲೆ—ಹಿಂದಲೆ | ೭೬ |
| ಪೋರ್ವ—ಹೋರಾಡುವ | ೭೮ |
| ಸಬಳಿಗ—ಭರ್ಜಿ ಹಿಡಿದವ | ೭೭ |
| ಕಬರ್ಜ—ಕಬ್ಬು | ೭೮ |
| ಮಂಕರಿ—ಬುಟ್ಟಿ | ೭೮ |
| ಕೊಪ್ಪು—ತುದಿ | ೭೮ |
| ಮೂಷಿಕ—ಇಲಿ | ೭೯ |
| ಚಿವರ್ಗಂಥೆ—ಉತ್ತರೀಯ | ೭೯ |
| ಉರ—ಎದೆ | ೮೦ |
| ಕಕ್ಷ—ಬಗಲು | ೮೦ |
| ಜಾನು—ಮೊಳಕಾಲು | ೮೦ |
| ಕುಂಡಲಿ—ಹಾವು | ೮೨ |
| ಕುಂಡಲ—ಕರ್ಣಾಭರಣ | ೮೨ |

| | ಪದ್ಯಸಂಖ್ಯೆ |
|---|---|
| ಖಂಡೇಂದು—ಅರ್ಧಚಂದ್ರ | ೮೨ |
| ಪದಪಿಂ—ಪ್ರೀತಿಯಿಂದ | ೮೪ |
| ಮಾಜಿ—ಮುಚ್ಚಿ | ೮೫ |
| ಉಜ್ಜುಗ—ಉದ್ಯೋಗ | ೮೫ |
| ಪಟುತರ—ಅಧಿಕವೇಗ | ೮೬ |
| ಖತಿ—ಕೋಪ | ೮೯ |
| ಹೆರೆಸಾರ್—ಹಿಂದಕ್ಕೆ ಸರಿ | ೮೯ |
| ಜತನ—ಯತ್ನ | ೮೯ |
| ಶೂಲಿ—ಶಿವ | ೯೦ |
| ಉರಗೇಂದ್ರ—ಸರ್ಪಶ್ರೇಷ್ಠ | ೯೧ |
| ತಾಟಿಸು—ಹೊಡೆ | ೯೧ |
| ನಿಶಾಟ—ರಾತ್ರಿ ತಿರುಗುವವ | ೯೨ |
| ಈಸದು—ಅವಕಾಶ ಕೊಡದು | ೯೩ |
| ಮರುಳಾಟ—ಹುಚ್ಚಾಟ | ೯೬ |
| ಅಹಿರೂಹು—ಹಾವಿನ ರೂಪ | ೯೯ |
| ಅಬಲಾನೀಕ—ಸ್ತ್ರೀಸಮೂಹ | ೧೦೨ |
| ಬಾಸಣಿಸು—ಮುಚ್ಚು | ೧೦೩ |
| ತಪ್ತಲೋಹ—ಕಾದಕಬ್ಬಿಣ | ೧೦೬ |
| ಪತಿತ—ಬಿದ್ದ | ೧೦೬ |
| ಉಗ್ರಾಕ್ಷ—ಶಿವ | ೧೦೮ |
| ಉಗ್ರಾಂಬಕ—ಶಿವ | ೧೦೮ |
| ಬಕ—ಬಕಪಕ್ಷಿ | ೧೧೧ |
| ಶರಣಕುಲಾಧೀಶ—ಶರಣಸಮೂಹಕ್ಕೆ ಒಡೆಯ | ೧೧೪ |
| ಅಕ್ಷಮಣಿ—ರುದ್ರಾಕ್ಷಿ | ೧೧೫ |
| ಭಾವಾಸ್ಯ—ಭಾವಮುಖ | ೧೧೬ |
| ದೋಷಶೋಷಣ—ದೋಷಗಳನ್ನು ಇಂಗಿಸಿಕೊಂಡವ | ೧೧೬ |
| ಚಿದ್ವಹ್ನಿ—ಚಿದಗ್ನಿ | ೧೧೬ |
| ಊರ್ಧ್ವಕಾಕರ್ಷಿಸಿ—ಮೇಲಕ್ಕೆಳೆದುಕೊಂಡು | ೧೧೬ |
| ಸ್ಮರ—ಮನ್ಮಥ | ೧೧೯ |
| ಧೂಮ್ನ—ಹೊಗೆ | ೧೨೧ |
| ನಿವೇದ್ಯ—ನೈವೇದ್ಯ | ೧೨೧ |
| ತ್ವಗೇಂದ್ರಿಯ—ಚರ್ಮೇಂದ್ರಿಯ | ೧೨೨ |

ಪದ್ಯಸಂಖ್ಯೆ

ಪಯೋಜ—ಕಮಲ ೧೨೨
ಗೌರಾಂಗನೆ—ಬಿಳಿಯ ಮೈಬಣ್ಣದ ಸ್ತ್ರೀ ೧೨೨
ಜತುಪುತ್ರಿಕೆ—ಅರಗಿನ ಗೊಂಬೆ ೧೨೩
ತಿಲಾಕ್ಷತಂ—ಎಳ್ಳು, ಅಕ್ಷತೆ ೧೨೪
ಪುಳಕ—ರೋಮಾಂಚ ೧೨೪
ಪೂರಿತ—ತುಂಬಿದ ೧೨೫
ಆಳ್ದಂ—ಮುಳುಗಿದನು ೧೨೬
ದ್ವಿರಸನೇಶ—ಆದಿಶೇಷ ೧೨೮
ಜಾಲ—ಸಮೂಹ ೧೨೮
ನಿರ್ಮೇಘಾಕಾಶ—ಮೇಘವಿಲ್ಲದ ಆಕಾಶ ೧೨೯

ಪದ್ಯಸಂಖ್ಯೆ

ನಿವಾತಜ್ಯೋತಿ—ಗಾಳಿಯಿಲ್ಲದ
ಪ್ರದೇಶದ ದೀಪ ೧೨೯
ತಸ್ಕರ—ಕಳ್ಳ ೧೨೯
ತಳುವು—ತಡ ೧೩೦
ತೂಷ್ಣ—ಸುಮ್ಮನಾಗುವಿಕೆ ೧೩೨
ನಿಶ್ಶಂಕ—ಸಂಶಯರಹಿತ ೧೩೬
ದ್ವಿತ್ರಿಂಶತ್—ಮೂವತ್ತೆರಡು ೧೪೬
ತಕ್ರಘಟ—ಮಜ್ಜಿಗೆಗಡಿಗೆ ೧೫೦
ಸಟೆ—ಸುಳ್ಳು ೧೫೦
ವಾರಕದಶ್ವ—ಲಾಯದ ಕುದುರೆ ೧೫೦

## ಅಧ್ಯಾಯ—೫

ಶ್ರೀಪತಿ—ವಿಷ್ಣು ೧
ಶಚೀಪತಿ—ಇಂದ್ರ ೧
ವಾಸಂತಕ—ವಸಂತಸಂಬಂಧದ ೨
ರಸೆ—ಭೂಮಿ ೩
ಕಾಹೇರಿಸು—ಕಾವು ಹೆಚ್ಚಿಸು ೩
ನಿದಾಘ—ಬೇಸಿಗೆ ೩
ಕಟ್ಟುಗ್ರ—ಮಹಾಉಗ್ರ ೪
ಮರೀಚಿಕೆ—ಬಿಸಿಲುಗುದುರೆ ೫
ತಟಾಕ—ಕೆರೆ ೭
ಸೀವು—ಬೆಯ್ ೭
ಬಾಹುಪೂರ—ಭುಜಕೀರ್ತಿ ೯
ಚೆಂಗಣಗಿಲು—ಕೆಂಪು ಕಣಗಿಲು ೯
ಧೌತ—ಶುಭ್ರ ೯
ಗೊಂದಣ—ಗೊಂಚಲು, ಸಮೂಹ ೯
ಪಣ್ಯಾಧಿಪರು—ವ್ಯಾಪಾರಶ್ರೇಷ್ಠರು ೧೩
ದಟ್ಟೈಸಿ—ಒತ್ತೊತ್ತಾಗಿ
ಕಾಲಕಾಮಾದಿಗಳು—ಮನ್ಮಥಯಮ ೧೪
ಮೊದಲಾದವರು ೧೪
ಭಂಜಿಸು—ನಾಶಗೊಳಿಸು ೧೪
ಭಾವಜ—ಮನ್ಮಥ ೧೫
ಗೇಹ—ಮನೆ ೨೦
ಕಾರ್ಮುಗಿಲ್—ಕಪ್ಪಾದ ಮೋಡ ೨೧

ವಾರಿಜನೇತ್ರ—ಕಮಲನೇತ್ರ ೨೨
ಪಯೋಧರ—ಮೋಡ ೨೨
ಕೀರ—ಗಿಳಿ ೨೨
ಆಸ್ಯ—ಮುಖ ೨೨
ರವಂಕಿ—ಕುಪ್ಪಸ ೨೩
ಕಂಕಣ—ಬಳೆ ೨೪
ನೂಪುರ—ಕಾಲಂದಿಗೆ ೨೪
ಕುಂಚ—ಚಾಮರ ೨೫
ಕುಳಾಂಜಿ—ಉಗುಳುವಪಾತ್ರೆ ೨೫
ಕಜ್ಜಳ—ಕಾಡಿಗೆ ೨೫
ಏಳಿದ—ತಿರಸ್ಕಾರ ೨೬
ಕರವಾಳು—ಖಡ್ಗ ೨೬
ರಕ್ತವಸನ—ಕೆಂಪುಬಟ್ಟೆ ೨೬
ಜ್ಯೋತ್ಸ್ನೆ—ಬೆಳದಿಂಗಳು ೨೭
ವಾಮ—ಎಡ ೨೭
ಸರಮಂಡಲ—ತಂತ್ರೀವಾದ್ಯ ೨೭
ನಾಗಾಜಿನಭಕ್ತ—ಶಿವಭಕ್ತ ೩೩
ಕುಂಭಿನಿ—ಭೂಮಿ ೩೫
ಕೆಂಜಾಜಿ—ಕೆಂಪುಜಾಜಿ ೩೫
ಜಾತಕ—ಜಾತಕಪಕ್ಷಿ ೩೬
ಭೂಜಾಗ್ರ—ಗಿಡದಮೇಲೆ ೩೬
ನಭ—ಆಕಾಶ ೩೭

| | ಪದ್ಯಸಂಖ್ಯೆ |
|---|---|
| ಶಿತ—ಬಿಳುಪು | ೩೮ |
| ಶೋಣ—ರಕ್ತವರ್ಣ | ೩೮ |
| ಪಿಂಗಳ—ಪಿಂಗಳವರ್ಣ | ೩೮ |
| ಬಲಾರಾತಿ—ದೇವೇಂದ್ರ | ೩೯ |
| ಧನದ—ಕುಬೇರ | ೩೯ |
| ಜಲಾಧಿಪ—ವರುಣ | ೩೯ |
| ಪರಿವ—ಹರಿಯುವ | ೪೦ |
| ಬಹಿರ್ವಳಯ—ಹೊರಭಾಗ | ೪೦ |
| ಕರುಬು— ಸಂಕಟಪಡು | ೪೯ |
| ಚೋದ್ಯ—ಆಶ್ಚರ್ಯ | ೫೦ |
| ಔಘ—ಸಮೂಹ | ೫೨ |
| ಬಿಂದು—ಹನಿ | ೫೨ |
| ಪಾರಾವಾರ—ಸಮುದ್ರ | ೫೭ |
| ಇಳಿದಂಗೆಯ್—ತಿರಸ್ಕರಿಸು | ೫೮ |
| ಪೆರ್ಮಳೆ—ದೊಡ್ಡಮಳೆ | ೬೦ |
| ಕಂತುಹರ—ಶಿವ | ೬೫ |
| ಬೆಸಲ್—ಹಡೆ | ೬೭ |
| ಸರಿಚ್ಛರಧಿ—ಸಮುದ್ರದಂಥ ನದಿ | ೬೮ |
| ಕುಜ—ಗಿಡ | ೬೯ |
| ನಿರ್ಮಾಲ್ಯ—ಅರ್ಪಿಸಿದ ಹೂವು | ೭೩ |
| ಹೆದ್ದೊರೆ—ದೊಡ್ಡ ಹಳ್ಳ | ೭೬ |
| ವೃಕ—ತೋಳ | ೮೧ |
| ಕಿಟಿ—ಹಂದಿ | ೮೩ |
| ನೀಲಕಂಠ—ನವಿಲು | ೮೪ |
| ತಾಮ್ರಚೂಡ—ಕೋಳಿ | ೮೪ |
| ಕೇಕಿಪಕ್ಷ—ನವಿಲುಗರಿ | ೮೬ |
| ಕೆಮ್ಮೀಸೆ—ಕೆಂಪುಮೀಸೆ | ೮೬ |
| ಗುಂಜಿ—ಗುರುಗಂಜಿ | ೯೧ |
| ತಳಿರ್—ಚಿಗುರು | ೯೧ |
| ಕಿರುಸುರಗಿ—ಚಿಕ್ಕಕತ್ತಿ | ೯೩ |
| ದೀಹಮೃಗ—ಪಳಗಿಸಿದ ಮೃಗ | ೯೪ |
| ಪುಳಿಂದಿ—ಬೇಡಿತಿ | ೯೪ |
| ಬೆಳ್ವಾರ್ಬಟ—ಹುಸಿಆರ್ಭಟ | ೫–೯೫ |
| ಸೊಕ್ಕಿನಧೂಪ—ವಾಸನೆಕುಡಿದು ಮೃಗಗಳು ಸೊಕ್ಕೇರುವ ಧೂಪ | ೯೫ |
| ಎಚ್ಚಂಬು—ಬಿಟ್ಟಬಾಣ | ೯೫ |
| ದಂಷ್ಟ್ರ—ದಾಡೆ | ೯೫ |
| ಡೆಂಡಣಿಸಿ—ಉತ್ಸಾಹಿಸಿ, ಹಿಗ್ಗಿ | ೯೫ |
| ಅಬುಜಭವಾಡ—ಬ್ರಹ್ಮಾಂಡ | ೯೬ |
| ವಂಗಡ—ಸಮೂಹ | ೯೭ |
| ಬೆಂಗಡೆ—ಹಿಂಭಾಗ | ೯೭ |
| ದಿಳಿಪ—ದಿಲೀಪಚಕ್ರವರ್ತಿ | ೧೦೨ |
| ಲುಬ್ಧ—ಬೇಡ | ೧೦೬ |
| ಭ್ರಮರಕುಂತಳ—ದುಂಬಿಗಳಂತಿರುವ ಮುಂಗುರುಳು | ೧೦೮ |
| ಊರು—ತೊಡೆ | ೧೦೮ |
| ಬಾದರಾಯಣ—ವ್ಯಾಸ | ೧೧೨ |
| ಭುಜಂಗ—ಹಾವು | ೧೧೮ |
| ನಾಗ—ಹಾವು | ೧೨೨ |
| ಸುರಪುರದೆಸೆ—ಇಂದ್ರದಿಕ್, ಪೂರ್ವ | ೧೨೩ |
| ಔಡಿ—ಕಚ್ಚಿ | ೧೨೫ |
| ಕುಂಭಿನೀಶ್ರವ—ಸತ್ತಹಾವು | ೧೨೫ |
| ದೇವಗಜ—ಐರಾವತ | ೧೨೬ |
| ತಾರ್ಕ್ಷ್ಯ—ಗರುಡ | ೧೨೬ |
| ಕಾಶ್ಯಪಪುತ್ರಲೋಕ—ದೇವಲೋಕ | ೧೨೭ |
| ಬೀಸದ—ಅಂತ್ಯ, ಕೊನೆ | ೧೨೭ |
| ಆನಕ—ಭೇರಿ | ೧೩೦ |
| ಜಿಹ್ವಾ—ನಾಲಗೆ | ೧೩೬ |
| ಕಲುರೂಹಿನ—ಕಲ್ಲಿನಲ್ಲಿ ಕಟೆದ | ೧೩೯ |
| ಕರ್ಪಣಿಕ್—ಸೆಳೆದುಕೊಳ್ಳು | ೧೩೯ |
| ಖಾಣ—ತಿಂಡಿ | ೧೪೧ |
| ರಜಬೋಹರಿ—ಕಸಹೊಡೆಯುವ | ೧೪೩ |
| ಕಳಸಜ—ಅಗಸ್ತ್ಯ | ೧೪೬ |
| ಕುರೀಪ—ಬೆರಣಿ, ಕುಳ್ಳು | ೧೪೮ |
| ದೀರ್ಘವೃಂತ—ಉದ್ದವಾದ ಬೀಸಣಿಗೆ | ೧೪೯ |
| ಬಾಣಸ—ಅಡಿಗೆ | ೧೫೮ |
| ಭಾಂಡಾಕಿಫಲ—ಬದನೆಕಾಯಿ | ೧೫೮ |
| ನಿಕೇತನ—ಮನೆ | ೧೬೦ |
| ಕಂತುಮದಾಪಹಾರ—ಶಿವ | ೧೬೨ |
| ಯೂಥ—ಸಮೂಹ | ೧೬೨ |

| | ಪದ್ಯಸಂಖ್ಯೆ | | ಪದ್ಯಸಂಖ್ಯೆ |
|---|---|---|---|
| ಪೊಸಿಕೊಂಡು—ಮುಚ್ಚಿಟ್ಟುಕೊಂಡು | ೧೬೪ | ಅರ್ಕಬಿಂಬ—ಸೂರ್ಯಬಿಂಬ | ೨೧೨ |
| ಕಚ್ಚುಟ—ಕೌಪೀನ | ೧೬೭ | ಅರೆಮ್ಯೆ—ಅರ್ಧಮೈ | ೨೧೩ |
| ಹುತವಹನೇತ್ರ—ಶಿವ | ೧೬೮ | ಕೋಕ—ಚಕ್ರವಾಕ | ೨೧೫ |
| ವಿಸ್ಮೃತಿ—ಮರೆವು | ೧೬೯ | ಲೋಕಾಕ್ಷ—ಸೂರ್ಯ | ೨೧೫ |
| ದಿವಸೇಶ್ವರ—ಸೂರ್ಯ | ೧೭೧ | ಪಗಲಾಣ್ಮ—ಸೂರ್ಯ | ೨೧೬ |
| ಕರ್ಚಿ—ತೊಳೆದು | ೧೭೧ | ತೋಣ್ಮು—ಹೊರಹೊಮ್ಮು | ೨೧೭ |
| ಕಾಂಬ—ಕಾಣುವ | ೧೭೧ | ಉಡುಗಣ—ನಕ್ಷತ್ರಗಣ | ೨೧೯ |
| ಕಾಸಾರ—ಸರೋವರ | ೧೮೦ | ದಿವಸೇಶ—ಸೂರ್ಯ | ೨೨೦ |
| ತೀವ್ರ—ತುಂಬು | ೧೮೨ | ಭಗಣ—ನಕ್ಷತ್ರ | ೨೨೦ |
| ವಿಷ್ಟರ—ಪೀಠ | ೧೮೩ | ಚೀರ—ನಾರುಮಡಿ | ೨೨೧ |
| ವಿಷ್ಟಪ—ಜಗತ್ತು | ೧೮೩ | ಅಮರ್ತ್ಯ—ದೇವತೆ | ೨೨೮ |
| ಸೂರ—ಸೂರ್ಯ | ೧೮೪ | ಅಂಬರಭ್ರೂಮ—ಆಕಾಶಭ್ರೂಮ | ೨೨೯ |
| ದುಬಾಲ—ರೇಸ್ಮೆವಸ್ತ್ರ | ೧೮೫ | ಸಾಂದ್ರ—ದಟ್ಟ | ೨೨೯ |
| ದರ್ವಿ—ಸಟ್ಟುಗ | ೧೮೫ | ವೀಚಿ—ಅಲೆ, ತೆರೆ | ೨೩೦ |
| ವೇಣುದಂಡ—ಬಿದಿರಕೋಲು | ೧೮೫ | ಜನ್ನ—ಯಜ್ಞ | ೨೩೧ |
| ಕೃಕಾಟಿಕ—ಕತ್ತಿನ ಹಿಂಬಾಗ | ೧೮೫ | ಮಥಿಪ—ಕಡೆಯುವ | ೨೩೧ |
| ಕುಮುದಾಕ್ಷಿ—ಕುಮುದದಂತೆ ಕಣ್ಣುಳ್ಳವಳು | ೧೮೬ | ಸಿಂಧು—ಸಮುದ್ರ | ೨೩೧ |
| | | ತಕ್ಷಕ—ಒಂದು ಹಾವು | ೨೩೧ |
| ತೆಂಕ—ದಕ್ಷಿಣ | ೧೮೯ | ಉತ್ತರಿಸು—ದಾಟು | ೨೩೨ |
| ಉಷ್ಣಾಂಬಕ—ಶಿವ | ೧೯೩ | ವ್ರಜ—ಸಮೂಹ | ೨೩೫ |
| ಸಂದಣಿ—ಸಮೂಹ | ೧೯೪ | ವ್ಯಜನ—ಬೀಸಣಿಕೆ | ೨೩೫ |
| ತಟಿತ್—ಮಿಂಚು | ೧೯೫ | ಕುಚ್ಚು—ಗೊಂಡೆ | ೨೩೫ |
| ಪಚನಿಸು—ಅಡಿಗೆಮಾಡು | ೨೦೨ | ಪೂತೋದಕ—ಪವಿತ್ರನೀರು | ೨೩೫ |
| ತಂಡುಲ—ಅಕ್ಕಿ | ೨೦೨ | ಚಷಕ—ಪಾನಪಾತ್ರೆ | ೨೩೫ |
| ಐದಲ್—ಬರಲು | ೨೦೩ | ದ್ರೋಣಕುಸುಮ—ತುಂಬೆಹೂವು | ೨೪೦ |
| ಮೂವಡಿ—ಮೂರುಪಟ್ಟು | ೨೦೪ | ವಿಲಸತ್—ಮನೋಹರ, ಪ್ರಕಾಶಮಾನ | ೨೪೩ |
| ಚೌಳ್ನೀರ್—ಸೌಳುನೀರು | ೨೦೫ | ಕುಕ್ಕುಟ—ಕೋಳಿ | ೨೪೩ |
| ಚಂದ್ರಾತಪ—ಬೆಳದಿಂಗಳು | ೨೦೬ | ರೋಲಂಬ—ದುಂಬಿ | ೨೪೩ |
| ತತ್ಸುಖ—ಆಸುಖ | ೨೦೬ | ಕುರುಂಬ—ಸಮೂಹ | ೨೪೩ |
| ರಥಾಂಗ—ಚಕ್ರವಾಕ | ೨೧೦ | ಉಡುನಾಥ—ಚಂದ್ರ | ೨೪೪ |
| ಕೊಟರ—ಪೊದರು | ೨೧೧ | ಸಹಸ್ರಾಂಶು—ಸೂರ್ಯ | ೨೪೪ |
| ಜವ—ತೀವ್ರ, ವೇಗ | ೨೧೧ | ನಿಶಾಚರ—ರಾಕ್ಷಸ, ಕಳ್ಳ | ೨೪೫ |
| ಹೆಜ್ಜೊಡರು—ದೊಡ್ಡಸೊಡರು ದೊಡ್ಡದೀಪ | ೨೧೨ | ಇನ—ಸೂರ್ಯ | ೨೪೬ |
| ಕಂದುಕ—ಚಂಡು | ೨೧೨ | ಭೂಪಾಳಿ—ಪ್ರಾತಃಕಾಲದಲ್ಲಿನ ಒಂದು ಸಂಗೀತದ ರಾಗ | ೨೪೮ |

ಪದ್ಯಸಂಖ್ಯೆ

ಕಾಪಾಲಿ—ಶಿವ ೨೪೮
ಭಂಗ—ತರಂಗ, ತೆರೆ ೨೫೨
ಅಂಗುಲಿ—ಬೆರಳು ೨೫೩
ರಾಜೀವಾಸ್ಯ—ಕಮಲಮುಖ ೨೬೮
ಪಂಗುಳ—ಕುಂಟ ೨೬೯
ಜಸ—ಯಶ ೨೬೯
ಮಸಗಿ—ತುಂಬಿ ೨೭೦
ಅನಡ್ವ—ಗೂಳಿ ೨೭೦
ಕಚ್ಚುಟ—ಕಾಚ ೨೭೧
ಕೋವಣ—ಕೌಪೀಟ ೨೭೨
ಒಡ್ಯಾಣ—ಡಾಬು ೨೭೩
ಪಟಿಕ—ಸ್ಫಟಿಕ ೨೭೮
ವಲಯಿತವೇತ್ರ—ಮುರಿಬೆತ್ತ ೨೭೯
ಕಂಬಲ—ಕಂಬಳಿ ೨೮೦
ವಿಶೀರ್ಣ—ಚದುರಿದ ೨೮೧
ಜಟಾವ್ರಜ—ಜಡೆಗಳ ಸಮೂಹ ೨೮೧
ಭುಜವಿನ್ಯಸ್ತ—ಭುಜದಮೇಲೆ ಇಟ್ಟಲ್ಪಟ್ಟ ೨೮೧
ತಿಲಕಾಂಜಿ—ಹಣೆಬೊಟ್ಟು(?) ೨೮೧
ತಾಳಿಕ—ಕೊರಳ ಪದಕ (?) ೨೮೧
ದಂತಕ್ಷತ—ಹಲ್ಲಿನಿಂದಾದ ಗಾಯ ೨೮೧
ನಖಕ್ಷತ—ಉಗುರಿನ ಗಾಯ ೨೮೧
ಧಮ್ಮಿಲ್ಲ—ಜಡೆ ೨೮೧
ಹ್ರೀವೇರ—ಸುಗಂಧ ೨೮೧
ಮಾಲ್ಯಾನುಲೇಪನ—ಹೂ, ಸುಗಂಧ ಲೇಪನ ೨೮೧

ಪದ್ಯಸಂಖ್ಯೆ

ಹೇಮಲೋಷ್ಟ—ಬಂಗಾರ ಮಣ್ಣು ಹೆಂಟೆ ೨೮೧
ಶ್ವೇದಬಿಂದು—ಬೆವರಿನ ಹನಿ ೨೮೧
ಶ್ಮಶ್ರು—ಮೀಸೆ ೨೮೧
ಬರ್ಹಿಪತ್ರ—ನವಿಲಗರಿ ೨೮೧
ಆತಪವಾರಣ—ಬೀಸಣಿಕೆ ೨೮೧
ಶನೈಃಶನೈಃ—ನಿಧಾನ ನಿಧಾನವಾಗಿ ೨೮೮
ಗಚ್ಛಾಮಃ—ಹೋಗುತ್ತೇವೆ ೨೮೮
ಹೃದ—ಮಡುವು ೨೮೮
ಭೂರುಹಚ್ಛಾಯಾ—ಗಿಡದ ನೆಳಲು ೨೮೮
ಕಾಂಸ್ಯಕಲಶ—ಕಂಚಿನಕಲಶ ೨೮೮
ವಾಪಿ—ಬಾವಿ ೨೮೮
ದೋಲಾಂದೋಲನ—ಜೋಕಾಲಿ ಆಡುವಿಕೆ ೨೮೮
ಜುಂಜುದಲೆ—ಹರಡಿದ ಕೂದಲಿನ ತಲೆ ೨೯೩
ಚಾರಿಪರಿ—ವೃತ್ತಾಕಾರವಾಗಿ ತಿರುಗಾಡು ೨೯೩
ಬೃಂಹಿತ—ಆನೆಯು ಕೂಗು ೨೯೩
ಸೋದಗ್ರ—ಅತ್ಯುನ್ನತ ೩೦೦
ಕೈಪರೆಗುಟ್ಟು—ಚಪ್ಪಾಳೆತಟ್ಟು ೩೦೨
ಪೂಗಪರ್ಣ—ಅಡಿಕೆಹಾಳೆ ೩೦೨
ಪಲಾಶ—ಮುತ್ತುಗ ೩೦೨
ವ್ರೀಹಿ—ಬತ್ತ ೩೦೨
ಗುಡ—ಬೆಲ್ಲ ೩೦೨
ಲಾಕ್ಷಾ—ಅರಗು ೩೦೨
ಕರ್ಬುರ—ಕಬ್ಬು ೩೦೪

## ಅಧ್ಯಾಯ—೬

ವೃಷಕೇತನ—ಶಿವ ೩
ವಚೋವ್ರಜ—ಮಾತಿನ ಸಮೂಹ ೭
ಕುರುಪು—ಚಿಹ್ನೆ ೧೧
ದ್ವಾಸ್ಥಾ—ಬಾಗಿಲಲ್ಲಿದ್ದ ೧೨
ವಿಭ್ರಮಾನ್ವಿತ—ಭ್ರಮೆಗೊಂಡ ೧೩
ಮಲತ್ರಯಬದ್ಧ—ಆಣವ, ಮಾಯಾ, ಕಾರ್ಮಿಕ ಮಲಗಳಿಂದ ಕೂಡಿದ ೧೩
ಮಣಿಗಂಕಣ—ರತ್ನ ಕೆಚ್ಚಿದ ಬಳೆ ೧೭
ವ್ಯಂಜನ—ನಂಜಿಕೆ ೧೮
ಪೀಯೂಷ—ಅಮೃತ ೧೮
ಪಿಚ್ಛಿಲ—ಅನ್ನ ೧೮
ಮರ್ದನ—ನಾದು ೧೯
ಪೂಗ—ಅಡಿಕೆ ೧೯
ಲಸುನ—ಬೆಳ್ಳುಳ್ಳಿ ೧೯
ಕರಪ್ರಕ್ಷಾಲನ—ಕೈತೊಳೆ ೨೦

| | ಪದ್ಯಸಂಖ್ಯೆ |
| --- | --- |
| ಆಳಂದಿಗೆ—ಹೆಡಿಗೆ | ೨೦ |
| ಜ್ವಲನಾಕ್ಷ—ಶಿವ | ೨೫ |
| ತೂರ್ಯತ್ರಯ—ಮೂರು ವಾದ್ಯ | ೨೬ |
| ತತ—ತಂತ್ರೀವಾದ್ಯ | ೨೭ |
| ವಿತತ—ಚರ್ಮವಾದ್ಯ | ೨೭ |
| ಕ್ವಣ—ಧ್ವನಿ | ೨೭ |
| ಆನದ್ಧ—ಚರ್ಮವಾದ್ಯ | ೨೭ |
| ಸುಷಿರ—ವೇಣುವಾದ್ಯ | ೨೭ |
| ಉಪ್ಪರದಿಂ—ವಿಶೇಷವಾಗಿ | ೩೨ |
| ಸಂಗಟ—ಸಂಕಟ | ೪೯ |
| ಉಣ್ಮು—ಹೆಚ್ಚಾಗು | ೫೧ |
| ಸಪ್ತಘಸ್ರ—ಸಪ್ತಮಾಮಸ್ಥೆ | ೫೧ |
| ಪಣ್ಣಗೆ—ಹಣ್ಣಗಾಗಿ | ೬೩ |
| ಮಹಿಷಿ—ಎಮ್ಮೆ | ೭೫ |
| ಘೋಟಕ—ಕುದುರೆ | ೯೦ |
| ಪದಪ್ರಕ್ಷಾಲ್ಯವ—ಪಾದತೊಳೆದ ನೀರನ್ನು | ೯೦ |
| ವಾಜಿ—ಕುದುರೆ | ೯೦ |
| ಹೀರ—ವಜ್ರ | ೯೭ |
| ಔಡಿತು—ಕಚ್ಚಿತು | ೧೦೧ |
| ಸೂನು—ಪುತ್ರ | ೧೦೭ |
| ಗಾರಾಗದೆ—ಆಯಾಸಗೊಳ್ಳದೆ | ೧೧೦ |
| ಮೂಗಂಡುಗ—ಮೂರು ಕಂಡುಗ | ೧೧೧ |
| ಶ್ರಾವಕಭಜಕ—ಜೈನ | ೧೧೪ |
| ಬೂತುತಿರಲ್—ತಿನ್ನುತಿರಲು (?) | ೧೨೬ |
| ವೃದ್ಧೋಕ್ಷಂ—ಮುದಿಗೂಳಿ | ೧೨೮ |
| ಪಾದಜ—ಶೂದ್ರ | ೧೩೨ |
| ಆರಿಜದಳ— | ೧೩೪ |
| ಏರಂಡ—ಔಡಲ | ೧೩೭ |
| ಪೀತ—ಹಸಿರು | ೧೩೮ |

## ಅಧ್ಯಾಯ—೭

| | |
| --- | --- |
| ಜಾತಿ—ಜಾಜಿ | ೩ |
| ಶೇಷಿ—ಶೇಷಪ್ರಸಾದಿ | ೪ |
| ಲಿಂಗಿ—ಪ್ರಾಣಲಿಂಗಿ | ೪ |
| ಶಾರಣ—ಶರಣ | ೪ |
| ಕರ್ಣಿಸು—ಕೇಳು | ೮ |
| ಮೂದೆರ—ಮೂರು ಬಗೆ | ೯ |
| ಶುನಿ—ನಾಯಿ | ೧೦ |
| ಭಸ್ಮಾಂಕಿತ—ಭಸ್ಮದಗುರುತುಳ್ಳ | ೧೦ |
| ಕುಕ್ಕುರ (ಟ)—ಕೋಳಿ | ೧೦ |
| ಅಪವರ್ಗ—ಮೋಕ್ಷ | ೧೦ |
| ಕಕುಚ್ಛೈಲ—ಶಿವಗಂಗಾಬೆಟ್ಟ | ೧೦ |
| ಗರುತ್ಮ—ಗರುಡ | ೧೦ |
| ದಾನವಾರಿಗಳು—ದೇವತೆಗಳು | ೧೧ |
| ಮಾಜದೆ—ತಪ್ಪದೆ | ೧೨ |
| ಪೂತ—ಪವಿತ್ರ | ೧೨ |
| ಮಳಲ್ಗುಪ್ಪೆ—ಮಳಲಿನಗುಡ್ಡೆ | ೧೪ |
| ತಂಡುಲ—ಅಕ್ಕಿ | ೧೬ |
| ಮೇಳೈಸಿ—ಕೂಡಿಸಿ | ೧೬ |
| ಆರವೆ—ಉದ್ಯಾನ | ೨೦ |
| ಕ್ಷುಧಿತ—ಹಸಿದವ | ೨೦ |
| ಹೊಲ್ಲಹವು—ಆಗವು | ೨೧ |
| ತಂಡಿಲೋಧೃತ—ಅಕ್ಕಿಯಿಂದ ಬರೆದ | ೨೬ |
| ನಿರ್ಜರ—ದೇವತೆ | ೨೭ |
| ಪಂಕ—ಕೆಸರು, ದೋಷ | ೨೫ |
| ಅರ್ಕ—ಸೂರ್ಯ | ೨೫ |
| ರಾತ್ರೀಕರ—ಚಂದ್ರ | ೨೮ |
| ಡಾಮರ—ಹಿಂಸೆ, ಗಲಭೆ, ಮುತ್ತಿಗೆ | ೨೯ |
| ಪರಾರ್ಥ—ಬೇರೆಯವರ ಪ್ರಯೋಜನ | ೨೯ |
| ಅಕ್ಷಿತ್ರಯಂ—ಶಿವ | ೩೩ |
| ಹರ್ಯಕ್ಷ—ಸಿಂಹ | ೩೩ |
| ಕೌಲೋಯಃ—ಬೇಟೆನಾಯಿ | ೩೮ |
| ರೌಪ್ಯ—ಬೆಳ್ಳಿ | ೩೫ |

| | ಪದ್ಯಸಂಖ್ಯೆ |
|---|---|
| ಪನ್ನಗ—ಹಾವು | ೩೮ |
| ಹಸ್ತಾಬ್ಜ—ಕರಕಮಲ | ೪೧ |
| ಕಕ್ಷೆ—ಬಗಲು | ೪೧ |
| ಭೂತೇಶ—ಶಿವ | ೪೧ |
| ಜವ—ಶೀಘ್ರ | ೪೩ |
| ಹೇಮ—ಬಂಗಾರ | ೪೩ |
| ವಸನ—ವಸ್ತ್ರ | ೪೩ |
| ಶರ್ವಾಣೀಶ—ಶಿವ | ೪೩ |
| ಮೀನಧ್ವಜ—ಮನ್ಮಥ | ೪೪ |
| ಕಾಂಚನ—ಬಂಗಾರ | ೫೦ |
| ಕುತರ್ಕ—ಕೆಟ್ಟತರ್ಕ | ೫೦ |
| ಜಿಹ್ವಾಲಂಪಟ—ನಾಲಗೆಚಾಪಲ್ಯ | ೫೦ |
| ಅಮಳೋಕ್ಯ—ಗಂಟಲು | ೫೦ |
| ವಾಯುಸಖ—ಅಗ್ನಿ | ೫೦ |
| ವಿಯತ್—ಆಕಾಶ | ೫೦ |
| ಅಪಾನ—ಅಧೋವಾಯು | ೫೦ |
| ಆಸ್ಯ—ಮುಖ | ೫೦ |
| ಅನಲ—ಬೆಂಕಿ | ೫೦ |
| ಮಿೂಹಲ್ಲಿ—ಸ್ನಾನಮಾಡುವಲ್ಲಿ | ೫೧ |
| ಕೂರ್ಮೆ—ಪ್ರೀತಿ | ೫೧ |
| ಬನ್ನ—ಭಂಗ | ೫೨ |
| ತೂಷ್ಣಿ—ಮೌನ | ೫೩ |
| ಹೊದ್ದು—ಹೊಂದು | ೫೪ |
| ಉಭಯ—ಎರಡು | ೫೪ |
| ಅಂಧಪಂಗು—ಕುರುಡಹೆಳವ | ೫೭ |
| ಕ್ರೀ—ಕ್ರಿಯೆ | ೫೮ |
| ಪುಟವಿಸುನಿ—ಪುಟಕ್ಕಿಟ್ಟ ಬಂಗಾರ | ೫೮ |
| ತಿತಿಕ್ಷೆ—ತಾಳ್ಮೆ | ೫೯ |
| ದಾಂತಿ—ಸಂಯಮ | ೫೯ |
| ದಂತಕಾಷ್ಠ—ಹಲ್ಲುಕಡ್ಡಿ | ೬೧ |
| ಗಂಡೂಷಿಸು—ಬಾಯಿಮುಕ್ಕಳಿಸು | ೬೨ |
| ವ್ರಜ—ಸಮೂಹ | ೬೩ |
| ಎಬ್ಬೆಟ್ಟು—ಮೂಲಸಮೇತ ಕೀಳು | ೬೪ |
| ಗುರುತಲ್ಪಗ—ಗುರುಪತ್ನೀಗಮನ ಮಾಡಿದವ | ೬೭ |
| ದುಶ್ಶೀಲ—ಕೆಟ್ಟಶೀಲವುಳ್ಳವ | ೬೯ |
| ಪಿಪೀಲಿಕ—ಇರುವೆ | ೬೯ |
| ಮಕ್ಷಿಕಾ—ನೊಣ | ೬೯ |
| ವಿಣ್ಮೂತ್ರ—ಮಲಮೂತ್ರ | ೬೯ |
| ಶೋಣಿತ—ರಕ್ತ | ೬೯ |
| ಕಲ್ಪೋಕ್ತ—ವಿಧಿಯಲ್ಲಿ ಹೇಳಿದ | ೬೯ |
| ಕರೀಷ—ಬೆರಣಿ-ಕುಳ್ಳು | ೬೯ |
| ಬಿದಿರ್ಚು—ಹರಡು, ವ್ಯಾಪಿಸು | ೭೨ |
| ಈಶಾನ—ಶಿವ | ೭೩ |
| ಮೂರ್ಧ್ನ—ಶಿರ | ೭೪ |
| ಆಸ್ಯ—ಮುಖ | ೭೪ |
| ಶಿಖಿ—ಶಿಖಾಸ್ಥಾನ ಹೊಂದಿಕೆ ಬೆಂಕಿ, ನವಿಲು | ೭೬ |
| ಲೋಮವಿಲೋಮ—ನೇರ-ವಿರುದ್ಧ | ೭೮ |
| ಪ್ರಕೋಷ್ಠ—ಮುಂಗೈ | ೮೦ |
| ಪೃಷ್ಠ—ಕುಂಡೆ | ೮೦ |
| ಕೃಪೀಟ—ನೀರು | ೮೨ |
| ಉರ್ವೀಜ—ಗಿಡ | ೮೩ |
| ಹೂತು—ಹೂಬಿಟ್ಟು | ೮೩ |
| ಕಾತು—ಕಾಯಿಬಿಟ್ಟು | ೮೩ |
| ಕೊರ್ವಿ—ಕೊಬ್ಬಿ | ೮೩ |
| ದಶಶತ—ಸಾವಿರ | ೮೫ |
| ಮೂವಡಿ—ಮೂರುಪಟ್ಟು | ೮೫ |
| ಅಚ್ಛಿದ್ರ—ತೂತುಬೀಳದ, ಒಡೆಯದ | ೮೭ |
| ಕಂಧರ—ಕೊರಳು | ೮೮ |
| ಗೋಪುಚ್ಛ—ಆಕಳಬಾಲ | ೮೮ |
| ಖಾದನ್—ತಿನ್ನಲು | ೮೮ |
| ಪಿಬೇತ್—ಕುಡಿಯಲು | ೮೮ |
| ಚಾರಿಸು—ಆರೆ, ತೀಡು | ೮೯ |
| ಮೃಣ್ಮಯ—ಮಣ್ಣಿನಿಂದಾದ | ೯೦ |
| ಪಂಚತನ್ಮಾತ್ರೆ—ಶಬ್ದ, ಸ್ಪರ್ಶ, ರೂಪ, ರಸ, ಗಂಧ | ೯೩ |
| ಷಡ್ವರ್ಗ—ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ | ೯೪ |
| ಷಡೂರ್ಮಿ—ಕ್ಷುತ್-ಪಿಪಾಸೆ, ಶೋಕ ಮೋಹ, ಜರಾ, ಮರಣ | ೯೪ |

| | ಪದ್ಯಸಂಖ್ಯೆ | | ಪದ್ಯಸಂಖ್ಯೆ |
|---|---|---|---|
| ನಿಬರ್ಹಣ—ಕೊಲ್ಲುವಿಕೆ | ೯೭ | ದೂರ್ವೆ—ಗರಿಕೆ | ೧೨೧ |
| ಸಂಸೃತಿ—ಸಂಸಾರ, ಭವ | ೧೧೪ | ಅರ್ಕ—ಎಕ್ಕ | ೧೨೧ |
| ತಿಲಕುಸುಮ—ಎಳ್ಳುಹೂವು | ೧೨೧ | ಹೊಲ್ಲದ—ಬೇಡವಾದ | ೧೨೧ |
| ದ್ರೋಣ—ತುಂಬೆಹೂವು | ೧೨೧ | ಪಾರಾವತ—ಪಾರಿವಾಳ | ೧೩೧ |

## ಅಧ್ಯಾಯ—೮

| | | | |
|---|---|---|---|
| ಗೋ—ಭೂಮಿ | ೮–೧ | ಸರವಿ—ಹಗ್ಗ | ೮–೬೩ |
| ಗೋರಾಟ್—ವೃಷಭ | ೮–೧ | ಷಟ್‌ತ್ರಿಂಶತ್—ಮುವತ್ತಾರು | ೮–೪೨ |
| ಕ್ರತುಧ್ವಂಸ—ಯಜ್ಞಧ್ವಂಸಕ | ೮–೧ | ಪೈತೃಕ—ಶ್ರಾದ್ಧ | ೮–೫೦ |
| ಮಾಟ—ಮಾಡುವಿಕೆ | ೮–೩ | ಸೇಚನ—ಸಿಂಪಡಿಸು | ೮–೫೭ |
| ಯೋಷಿತೆ—ಸ್ತ್ರೀ | ೮–೫ | ಪ್ರೋಹಣಿಸು—ಸರಗೊಳಿಸು, | |
| ಪಂಕಜಜಾತ—ಬ್ರಹ್ಮ | ೮–೧೫ | ಸೇರಿಕೊಳ್ಳು | ೨–೮೪ |
| ಭೈತ್ರ—ಹಡಗು | ೮–೨೦ | | |

## ಅಧ್ಯಾಯ—೯

| | | | |
|---|---|---|---|
| ನಾಗಾಲಂಕಾರ—ಸರ್ಪದಅಲಂಕಾರ | | ಚಾರ—ಚರಜಂಗಮ | ೯–೧೯ |
| ವುಳ್ಳವ, ಶಿವ | ೯–೧ | ಅರಿಯಲಕ್ಕ—ತಿಳಿಯಲಾಗುವ | ೯–೩೪ |
| ಮಾನಿಸ—ಮನುಷ್ಯ | ೯–೮ | ಹೂಣು—ಹೂಳು | ೯–೭೩ |
| ಬೊಬ್ಬುಳಿ—ಗುಳ್ಳೆ | ೯–೧೧ | ಕುಕ್ಕುಟ—ಕೋಳಿ | ೯–೯೬ |
| ಹಾರದೆ—ಎದುರುನೋಡದೆ | ೯–೧೪ | ದಮ—ಇಂದ್ರಿಯನಿಗ್ರಹ | ೯–೧೦೫ |
| ಹಣ್ಣದಿರ್ಪ—ಮಾಡದಿರುವ | ೯–೧೮ | ಕಾಲಾಂತಕ—ಶಿವ | ೯–೧೧೩ |
| ಅಳುಪು—ಆಸೆಪಡು | ೯–೧೯ | | |

# ಒಪ್ಪೋಲೆ

| ತಪ್ಪು | ಒಪ್ಪು | ಪುಟ | ಸಾಲು |
|---|---|---|---|
| ಪರ್ವಶೇಶ | ಪರ್ವತೇಶ | ೬ | ೬ |
| ಗಂಧವ | ಗಂಧವಹ | ೬ | ೧೭ |
| ಹೆತ್ತೈಣ್ಣಾಭಸಿರ | ಹತ್ತೈಣ್ಣಾಭಸಿರ | ೯ | ೯ |
| [2](ಲಂಗಳರ)[2] | [2](ಲಂಗಳುರ)[2] | ೧೩ | ೨೦ |
| ಪುಷ್ಪತೆ | ಪುಷ್ಪಿತೆ | ೩೯ | ೨೬ |
| ಚೆಂಗಣಗಿಲಲತಂ | ಚೆಂಗಣಗಿಲಲರಂ | ೪೫ | ೭ |
| ಹರಭಕ್ತಾ್ಯಬ್ಧಿ | ಹರಭಕ್ತ್ಯಬ್ಧಿ | ೪೮ | ೧೦ |
| ರಶಿ | ಶಶಿ | ೬೦ | ೪ |
| ತ್ರೀಕ್ಷೇಗಂಭಿನಿ | ತ್ರೀಗಂಭಿಕ್ಷೆಯನಿಲ್ಲಿಗೆ | ೬೦ | ೧೨ |
| ನೀಂ[3] | ನೀಂ | ೬೫ | ೧೦ |
| ಸ್ಪುರತ್ | ಸ್ಫುರತ್ | ೬೯ | ೧೬ |
| ಕೆದರ್ವಲೆ | ಕೆದರ್ತಲೆ | ೭೪ | ೨೨ |
| ನೀನಿರ್ಘುದ | ನೀನಿರ್ಪುದ | ೭೯ | ೨೪ |
| ಪದ್ಯಹಾರ | ಪ್ರತ್ಯಹಾರ | ೮೬ | ೭ |
| ಅರ್ಥ | ಅರ್ಥ | ೯೫ | ೭ |
| ಜೆಹ್ವೆ | ಜಿಹ್ವೆ | ೧೧೩ | ೫ |
| ತಿಲಾಕ್ಷಕಂ | ತಿಲಾಕ್ಷತಂ | ೧೧೩ | ೧೦ |
| ತಿವೆಯೆ | ತಿವಿಯೆ | ೧೨೧ | ೧೬ |
| ಬೆಜ್ಜಳ | ಬಿಜ್ಜಳ | ೧೨೧ | ೨೭ |
| ಮುತಿ | ಮುತ್ತಿ | ೧೫೯ | ೬ |
| ಭಕ್ತರಾಶರ್ಯ | ಭಕ್ತರಾಶ್ಚರ್ಯ | ೧೫೯ | ೮ |
| ಚಿಕ್ಕಲೆ | ಚಿತ್ಕಲೆ | ೧೬೧ | ೧೬ |
| ನಡೆಃದೆ | ನಡೆದೆ | ೧೮೧ | ೬ |
| ನೀರಹೋಕ್ಕೀಜಿ | ನೀರಹೊಕ್ಕೀಜಿ | ೧೮೯ | ೧೯ |
| ಪ್ರ.ವೃ. | ಸ್ರ.ವೃ. | ೧೯೧ | ೧ |
| ೨೯ | ೧೯ | ೧೦೭ | ೨೪ |

| ತಪ್ಪು | ಒಪ್ಪು | ಪುಟ | ಸಾಲು |
|---|---|---|---|
| [3](ಚಿಮುಕಿಸಲು)[3] | [1](ಚಿಮುಕಿಸಲು)[1] | ೨೦೯ | ೪ |
| [4]ಎಬ್ಬಿಸಿದುದಂ | [2]ಎಬ್ಬಿಸಿದುದಂ[2] | ೨೦೯ | ೧೧ |
| [5](ದ್ವ್ಯ)[5] | [3](ದ್ವ್ಯ)[3] | ೨೦೯ | ೨೧ |
| ಸೋವಣ್ಣನೆಂಬಾತಂ | ಸೋವಣ್ಣನೆಂಬಾತನಂ | ೨೧೪ | ೧೮ |
| [10](ಕ್ಯಾ)[10] | [1](ಕ್ಯಾ)[1] | ೨೨೪ | ೮ |
| [11](ಳ್ಗ)[11] | [2](ಳ್ಗ)[2] | ೨೨೪ | ೯ |
| ಮತದು | ಮತ್ತದು | ೨೨೪ | ೧೧ |
| ಪಂಜ್ತಿ | ಪಜ್ತಿ | ೨೪೭ | ೯ |
| [1](ಎಂದಿಗು)[1] | [4](ಎಂದಿಗು)[4] | ೨೯೨ | ೧೯ |
| ಕಾಲಕಂಠಾಂತ | ಕಾಲಾಂತಕಂ | ೩೩೧ | ೧ |

೬ನೆಯ ಆಶ್ವಾಸದ ಪದ್ಯ ೬೭ರ ನಂತರ ಮುಂದಿನ ಗದ್ಯ ಪದ್ಯ ಕ್ರಮಸಂಖ್ಯೆ ತಪ್ಪಾಗಿದೆ. ಆದರೆ ವಿಷಯಕ್ರಮ ಸರಿಯಾಗಿದೆ. ಪದ್ಯಗಳ ಅಕಾರಾದಿ ಮತ್ತು ಅರ್ಥಕೋಶಗಳು ಮುದ್ರಿತವಾದ ಕ್ರಮಾಂಕಗಳಿಗೆ ಅನುಗುಣವಾಗಿಯೇ ಇವೆ.

# ವೀರಶೈವ ಅಧ್ಯಯನ ಸಂಸ್ಥೆಯ ಪ್ರಕಟಣೆಗಳು

## ವೀರಶೈವ ಪುರಾತನ ಸಾಹಿತ್ಯ ರತ್ನಮಾಲೆ :

೧. ಕರ್ನಾಟಕ ಶಬ್ದಮಂಜರಿ (ವಿರಕ್ತ ತೋಂಟದಾರ್ಯ) ೪-೦೦, ೭-೦೦
ಸಂ : ವಿ. ಶಿವಾನಂದ

೨. ಷಟ್‌ಸ್ಥಲಜ್ಞಾನಸಾರಾಮೃತದ ಬೆಡಗಿನ ವಚನ ಟೀಕೆ (ಸೋಮಶೇಖರ ಶಿವಯೋಗಿ) ೬-೦೦, ೭-೦೦
ಸಂ : ಬಿ. ವಿ. ಶಿರವಾರ

೩. ತೋಂಟದ ಸಿದ್ಧೇಶ್ವರನ ಭಾವರತ್ನಾಭರಣ ಸ್ತೋತ್ರ ೩-೫೦
ಸಂ : ಎಂ. ಎಂ. ಕಲಬುರ್ಗಿ ಮತ್ತು ಬಿ. ಆರ್. ಹಿರೇಮಠ

೪. ಷಟ್‌ಸ್ಥಲ ವಲ್ಲಭ (ಚನ್ನವೀರ ಜಂಗಮದೇವ) ೩೫-೦೦
ಸಂ : ಎಚ್. ದೇವೀರಪ್ಪ ಮತ್ತು ವರೇಸೀಮೆ ಚನ್ನಪ್ಪ

## ವೀರಶೈವ ನೂತನ ಸಾಹಿತ್ಯರತ್ನಮಾಲೆ :

೧. ನಿರಂಜನ ಜಂಗಮವಂಶದರ್ಪಣ ೪-೦೦
ಬಸಪ್ಪ ವೀರಪ್ಪ ಕೋಟಿ

೨. ಶಾಸನಗಳಲ್ಲಿ ಶಿವಶರಣರು ೧೦-೦೦, ೧೨-೦೦
ಎಂ. ಎಂ. ಕಲಬುರ್ಗಿ

## ವೀರಶೈವ ಅನುವಾದ ಸಾಹಿತ್ಯರತ್ನಮಾಲೆ :

೧. ಜೇಡರ ದಾಸಿಮಯ್ಯ ಕೆ ವಚನ್ (ಹಿಂದಿ) ೬-೫೦
ಬಾಲಚಂದ್ರ ಜಯಶೆಟ್ಟಿ

## ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆ :

೧. ಡೆಪ್ಯೂಟಿ ಚೆನ್ನಬಸವಪ್ಪನವರು
೨. ಸಕ್ಕರಿ ಕರಡೆಪ್ಪನವರು
೩. ವಾರದ ಮಲ್ಲಪ್ಪನವರು
೪. ಸಿರಸಂಗಿ ಲಿಂಗರಾಜರು
೫. ಕೆ. ಪಿ. ಪುಟ್ಟಣ್ಣಶೆಟ್ಟರು
೬. ಹರ್ಡೇಕರ ಮಂಜಪ್ಪನವರು
೭. ಮಧುರ ಚೆನ್ನರು
೮. ಬಿ. ಶಿವಮೂರ್ತಿಶಾಸ್ತ್ರಿಗಳು
೯. ಭೂಮರಡ್ಡಿ ಬಸವಪ್ಪನವರು
೧೦. ಡಿ. ಸಿ. ಪಾವಟೆಯವರು
೧೧. ಚಂದ್ರಶೇಖರ ಪಾಟೀಲರು
೧೨. ಮೈಲಾರ ಮಹಾದೇವಪ್ಪನವರು
೧೩. ಗುಬ್ಬಿ ವೀರಣ್ಣನವರು
೧೪. ಜಸ್ಟಿಸ್ ಮಹದೇವಯ್ಯನವರು
೧೫. ಎಚ್. ಎಫ್. ಕಟ್ಟೀಮನಿಯವರು
೧೬. ಪಿ. ಆರ್. ಕರಿಬಸವಶಾಸ್ತ್ರಿಗಳು
೧೭. ಬಸಪ್ಪಶಾಸ್ತ್ರಿಗಳು
೧೮. ಸೊಲ್ಲಾಪುರದ ರುದ್ರಮ್ಮನವರು
೧೯. ವೈ. ನಾಗೇಶಶಾಸ್ತ್ರಿಗಳು
೨೦. ಡಿ. ಸಿ. ತಮ್ಮಣ್ಣಪ್ಪನವರು ಚಿಕೋಡಿ